**ವಿಷಯಾನುಕ್ರಮಣಿಕೆ**

ಶ್ರೀ [redacted]ಜೇಂದ್ರ ಗ್ರಂಥರತ್ನಮಾಲಾ

[redacted]

ಶ್ರೀ ವ್ಯಾಸ[redacted]ೀತಂ

# ಭವಿಷ್ಯಮಹ[redacted]ಾಣಂ

(ಸಂಸ್ಕೃತಮೂಲ, ಕನ್ನಡದ ಅರ್ಥಾನು[redacted]ಗಳೊಡನೆ)

## ಭಾಗ—೯

## ಪ್ರತಿಸರ್ಗಪರ್ವ—ಚತು[redacted]ಡ



ಅನುವಾದ[redacted]

ಪಂಡಿತ ಬಿ.[redacted]ಯ್ಯ

[redacted]

ಮೈಸೂರು

[redacted]ಶ್ರೀ ಬಸವೇಶ್ವರ ಎಲೆಕ್ಟ್ರಿಕ್ ಪ್ರೆಸ್

೧೯೪೯

ಶ್ರೀ ಗಣೇಶ ಶಾರದಾ ಗುರುಭ್ಯೋನಮಃ

# ಮುನ್ನುಡಿ

ಈ ಸಂಪುಟದೊಡನೆ ಭವಿಷ್ಯಮಹಾಪುರಾಣದ ಪ್ರತಿಸರ್ಗಪರ್ವವು ಪೂರ್ಣವಾಗುವುದು. ಈ ಭಾಗವು ಕೇವಲ ಐತಿಹಾಸಿಕ ಗ್ರಂಥದ ಮಾದರಿಯಲ್ಲಿದೆ. ಆಧುನಿಕ ಶೋಧಕರಿಗೆ ಇಂತಹ ಗ್ರಂಥಗಳ ಸಹಾಯ ಅಗತ್ಯವಾಗಿ ಬೇಕು ಶಕ ರಾಜರು, ಅವರ ಗುಣಗಾನ, ಅವರಿಂದ ಜನತೆಗೆ ಒದಗಿದ ಅನುಕೂಲ ಪ್ರತಿಕೂಲಗಳು, ಅವರ ಸಮಕಾಲೀನರು ಮುಂತಾದ ಅಂಶಗಳನ್ನು ಪ್ರತಿಯೊಬ್ಬರೂ ತಿಳಿಯಲೇಬೇಕು. ಇತಿಹಾಸ ಗ್ರಂಥವು ಕಾಲದೇಶವನ್ನನುಸರಿಸಿ ಬದಲಾವಣೆ ಹೊಂದುವುದುಂಟು. ಭಾರತೀಯರು ಶಾಂತಿಪ್ರಿಯರು. ಪ್ರಪಂಚ (ವಿಶ್ವ) ವೇ ಭಗವತ್ಸ್ವರೂಪವೆಂದು ಅವರ ಭಾವನೆ. ಪರಮಾತ್ಮನ ಒಂದು ವಿಲಕ್ಷಣ ಶರೀರವೆನಿಸಿದ ಈ ಪ್ರಪಂಚದಲ್ಲಿ ಒಳ್ಳೆಯದು ಕೆಟ್ಟದ್ದು, ಉಳಿಯುವುದು ಅಳಿಯುವುದು ಇವೆಲ್ಲವೂ ಇವೆ. ಕೆಟ್ಟವಸ್ತುವಿದ್ದರೇ ಒಳ್ಳೆಯದಕ್ಕೆ ಪ್ರಾಶಸ್ತ್ಯ. ದುಷ್ಟಪ್ರಾಣಿಗಳ ಉತ್ಪತ್ತಿಯನ್ನು ತಡೆಗಟ್ಟುವುದು ಅನಿವಾರ್ಯ. ಹಾಗೆಯೇ ಮಹಾತ್ಮರ ಅವತಾರವೂ ಮೇಲಿಂದ ಮೇಲೆ ಇದ್ದೇ ಇರುತ್ತದೆ. ಪ್ರಪಂಚ ನಡೆಯುವುದೇ ಹೀಗೆ. ಒಟ್ಟಿನಲ್ಲಿ ಎಲ್ಲವೂ ಭಗವಲ್ಲೀಲೆ. ಈ ತತ್ತ್ವಗಳು ಭಾರತದ ಪ್ರತಿಜನಾಂಗದಲ್ಲಿಯೂ ಮೂಡಿವೆ. ಭಾರತೀಯ ದಾರ್ಶನಿಕರೂ ಇದೇ ಅಭಿಪ್ರಾಯವನ್ನೇ ಪ್ರಚಾರಮಾಡಿರುವರು. ಇನ್ನು ಅವತಾರ ಪುರುಷರ ವಿಷಯವನ್ನು ಪರಿಗಣಿಸಿದರೆ ಆ ವಿಚಾರದಲ್ಲಿಯೂ ಬಹುಕಾಲದಿಂದ ಜಿಜ್ಞಾಸೆಗಳಿವೆ. ಪಾಶ್ಚಾತ್ಯರು ಕ್ರಿಸ್ತನು ದೇವರ ಮಗನೆಂಬುದನ್ನು ಮೊದಲು ನಂಬಲಿಲ್ಲ ಕ್ರಿಸ್ತನಾದರೋ ತಾನು ದೇವರ ಮಗ, "ದೇವರನ್ನು ನಾನು ತಂದೆಯಂತೆ ಕಾಣುತ್ತೇನೆ ನೀವೂ ದೇವರಲ್ಲಿ ತಂದೆಯಲ್ಲಿಡುವ ಭಕ್ತಿಯನ್ನಿಡಿ" ಎಂದು ಉಪದೇಶಿಸಿದನು. ಒಂದು ಕಾಲದಲ್ಲಿ ಅವನ ಆ ಸದುಪದೇಶವನ್ನು ಕ್ರೈಸ್ತರು ಒಪ್ಪದೆಹೋದರೂ ಉಳಿದ ಅವನ ಗುಣಗಳಿಗೆ ಮನಸೋತು ಈಗ ಕ್ರಿಸ್ತನೇ ಜಗನ್ನಿಯಾಮಕನೆಂದು ಒಪ್ಪಿ ಎಲ್ಲರೂ ಅವನನ್ನು ಅವತಾರ ಪುರುಷನೆಂದು ನಂಬಿರುವರು. ನಮ್ಮಲ್ಲಿ ಮಹಾತ್ಮನೊಬ್ಬನನ್ನು ಅವತಾರಪುರುಷನೆಂದು ಒಪ್ಪುವವರು ಇಷ್ಟು ಚರ್ಚೆಮಾಡುವುದಿಲ್ಲ. ಮಾನವರೆಲ್ಲರೂ ದೇವಾಂಶ ಸಂಭೂತರೇ ಆದರೂ, ಅವರ ನಡೆನುಡಿಗಳಲ್ಲಿ ಹೆಚ್ಚು ಕಡಮೆ ಇರುತ್ತದೆ. ಗಂಗಾನದಿಯು ಮೂಲಸ್ಥಾನದಿಂದ ಸಮುದ್ರಕ್ಕೆ ಸೇರುವವರೆಗೂ ಗಂಗಾನದಿಯೇ ಆದರೂ ಮಣಿಕರ್ಣಿಕೆ, ಪುಷ್ಕರ, ಪಾಪನಾಶಿನೀ ಮುಂತಾದ ಹೆಸರು ಗಂಗಾನದಿಗೆ ಒಂದೊಂದು

ಸ್ಥಳವಿಶೇಷದಲ್ಲಿ ಮಾತ್ರ. ಅದರಂತೆ ಮಾನವವರ್ಗದಲ್ಲಿ ಅಪರಿಮಿತ ಗುಣಗಳಿಗೆ ಆಶ್ರಯವಿತ್ತವನು ಅವತಾರ ಪುರುಷನೇ ನಿಜ. ಅಂತಹ ಮಹಾತ್ಮನನ್ನು ಮೊದಲು ನಾವು ಅವತಾರಪುರುಷನೆಂದು ಒಪ್ಪಲೇಬೇಕು. ಹಾಗೆ ನಿಶ್ಚಯ ಬುದ್ಧಿಯಿಂದ ಒಪ್ಪಿದವರಿಗೆ ಮಾತ್ರ ಅವನ ಸದುಪದೇಶವು ಫಲಕಾರಿಯಾಗುವುದು ಶ್ರೀರಾಮನು ಪಿತೃವಾಕ್ಯ ಪರಿಪಾಲನೆಗಾಗಿ ರಾಜ್ಯತ್ಯಾಗಮಾಡಿದನು. ಪರಶುರಾಮನು ಅದೇ ಪಿತೃವಾಕ್ಯದಂತೆ ಜನನಿಯನ್ನೇ ಕತ್ತರಿಸಿಹಾಕಿದನು ಇಂತಹ ಧೈರ್ಯ ಶೌರ್ಯಾದಿ ಗಳು ಉಳಿದ ಸಾಮಾನ್ಯ ಮಾನವರಿಗೆ ಹೇಗೆ ಲಭಿಸೀತು ? ದುಷ್ಟರಾಗಿ ಲೋಕ ಕಂಟಕರೆನಿಸಿಕೊಂಡವರೂ ದೇವರ ಅಂಶಪುರುಷರೇ ! ಬಲಿ, ಬಾಣಾಸುರ ಇವರು ಆ ವರ್ಗಕ್ಕೆ ಸೇರಿದವರು. ಅಂತಹ ವ್ಯಕ್ತಿಗಳನ್ನು ಧ್ವಂಸಮಾಡಿದವರೂ ಅವತಾರ ಪುರುಷರೇ ! ಇಂತಹ ಅಪೂರ್ವವಾದ ಲೀಲೆಗಳನ್ನು ನಡೆಯಿಸಿ, ದುಷ್ಕಾರ್ಯಪ್ರವರ್ತನೆ ಯಲ್ಲಿ ಮುಂದುವರಿದವರಿಗೆ ಶಿಕ್ಷೆ ಎಂದಿಗೂ ತಪ್ಪಿಮದಲ್ಲ ಎಂಬ ಮುಖ್ಯ ನೀತಿ ಯನ್ನು ವಿವರಿಸುವುದೇ ಭಗವಂತನ ಉದ್ದೇಶ. ಆ ಉದ್ದೇಶ ಸಾಧನೆಯೇ ಭಗವಲ್ಲೀಲೆ, ಇದರ ವಿವರಣೆಯೇ ಪುರಾಣ ಕಥಾವಸ್ತು.

ಪ್ರಕೃತ ಈ ಸಂಪುಟದಲ್ಲಿ ಭರತಖಂಡದ ಕೆಲವು ಪ್ರಸಿದ್ಧರಾಜರು, ವಿಖ್ಯಾತ ಗ್ರಂಥ ಕರ್ತೃಗಳು, ಸಮಾಜಸುಧಾರಕರಾದ ಪೂಜ್ಯವ್ಯಕ್ತಿಗಳು, ಇವರೆಲ್ಲರೂ ಅವತಾರ ಪುರುಷರೆಂದೇ ಉಪಪಾದಿಸಲಾಗಿದೆ. ತಿಮಿರಲಿಂಗ (ತೈಮೂರಲಂಗ) ಸಹೋದ್ದೀನ (ಷಹಾಬುದ್ದೀನ್) ಇಂತಹ ದುಷ್ಟರಾಜರೂ ತಮೋಗುಣ ಪ್ರಧಾನ ರಾಗಿ, ದೈವಪ್ರೇರಿತ ವ್ಯಕ್ತಿಗಳೆನಿಸಿರುವರು. ನಾನಕ, ಕಬೀರ, ಮಹಾಮದ ಮುಂತಾದ ಮತಸ್ಥಾಪಕರು ಋಷ್ಯಂಶದಿಂದ ಜನಿಸಿದವರು. ವರಾಹಮಿಹಿರ, ಭಟ್ಟೋಜಿ ದೀಕ್ಷಿತ ಇಂತಹ ಉದ್ದಾಮ ಪಂಡಿತರು ವಾಗ್ದೇವತಾಂಶ ಸಂಜಾತರು. ಹೀಗೆ ಎಲ್ಲ ಉದಾತ್ತವ್ಯಕ್ತಿಗಳೂ ಪರಮಾತ್ಮಸ್ವರೂಪರೇ! ಅವರ ಮಾತೆಲ್ಲಾ ಅಮರವಾಣಿ; ಅವರ ನಡೆವಳಿಕೆಯೆಲ್ಲಾ ಮುಕ್ತಿಮಾರ್ಗ, ಅದನ್ನನುಸರಿಸಿದವರೇ ಮುಮುಕ್ಷುಗಳು, ಅದರಲ್ಲಿ ಮುಂದುವರಿದವರೇ ಸಿದ್ಧಪುರುಷರು. ಈ ಅಂಶವನ್ನು ಈ ಪುರಾಣಭಾಗವು ವಿಸ್ತರಿಸುತ್ತ ಮುಂದುವರಿಯುವುದು. ಹಿಂದೆ ಹೇಳಿದಂತೆ ಇದು ಅಕ್ಬರ, ಸೇವಾಜಯ (ಶಿವಾಜಿ), ಅವರಂಗ (ಜೇಬ) ಮುಂತಾದವರ ಗುಣಾವಗುಣಗಳನ್ನು ನಿರೂಪಿಸಿ ಇತಿಹಾಸಕರಿಗೆ ಬೆಂಬಲ ಕೊಟ್ಟಿದ್ದರೂ ಪುರಾಣ ಕಥಾನುಗುಣವಾಗುವಂತೆ ಮಧ್ಯೆ ದ್ವಾದಶಾದಿತ್ಯರು, ಏಕಾದಶ ರುದ್ರರು, ವಸುಗಳು ಇವರುಗಳು ಅವತರಿಸಬೇಕಾದ ಸನ್ನಿವೇಶವನ್ನು ವ್ಯಕ್ತಪಡಿಸಿ, ಅವರು ನಾನಾ ಮಹಾತ್ಮರಾಗಿ ಜನಿಸಿದರೆಂದು ಹೇಳಿ ಪುರಾಣ ಸ್ವರೂಪವನ್ನು ಸಲಕ್ಷಣವಾಗಿ ರೂಪಿಸಿರುವರು.

ಯಾವ ಕಡೆಗೆ ಮನಸ್ಸು ಓಡಿದರೂ ಅದು ಭಕ್ತಿಮಾರ್ಗವನ್ನವಲಂಬಿಸಬೇಕು ಎಂಬುದೇ ಅವರ ಧ್ಯೇಯ. ದೇಹಕ್ಕೆ ಹಿತಕಾರಿಯಾದ ಔಷಧಿಯು ಕಹಿಯಾಗಿದ್ದಾಗ

ಆದಕ್ಕೆ ಸಕ್ಕರೆಯನ್ನು ಸೇರಿಸಿ ಕೊಡುವಂತೆ ನಾಸ್ತಿಕಭೂಯಿಷ್ಠವಾದ ಕಾಲದಲ್ಲಿ ನಿರರ್ಗಳವಾಗಿ ನಡೆದ ಇತಿಹಾಸವನ್ನು ದೈವಲೀಲೆ, ದೈವಪ್ರೇರಣೆಯೆಂಬ ಮಾರ್ಗಕ್ಕೆ ಪರಿಣಾಮಗೊಳಿಸಿ ಜನತೆಗೆ ಸದ್ಭಾವನೆಮೂಡುವಂತೆ ಮಾಡಿರುವರು. ಒಟ್ಟಿನಲ್ಲಿ ಅಪೂರ್ವವೂ ಅಸಾಧಾರಣವೂ ಆದ ರೀತಿಯಲ್ಲಿ ಆತ್ಮತತ್ತ್ವವನ್ನು ಸಾಧಿಸಿದ ಮಹಾ ಪುರುಷರ ಮೇಲ್ಪಙ್ಕ್ತಿಯನ್ನನುಸರಿಸಿ ಮಾನವನು ನಡೆಯಲೇಬೇಕು ಎಂಬ ಉದಾತ್ತ ತತ್ತ್ವವೊಂದನ್ನು ವಾಚಕರಿಗೆ ಉಪದೇಶಿಸುವುದೇ ನಮ್ಮ ಪುರಾಣಕಾರರ ಅಂತ ರಂಗಿಕವಾದ ಅಭಿಪ್ರಾಯ.

**ನಮ್ಮನ್ನಾಳುವ ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಜಿ. ಸಿ. ಬಿ, ಜಿ. ಸಿ. ಎಸ್. ಐ. ಮಹಾಪ್ರಭುಗಳವರು** ನೀತಿಯುತ ವಾದ ಇಂತಹ ಪುರಾಣ ಗ್ರಂಥಗಳ ಪರಿವರ್ತನೆಗೆ ಸರ್ವಾನುಕೂಲಗಳನ್ನೂ ಕಲ್ಪಿಸಿ ಇವು ಪ್ರಚಾರಕ್ಕೆ ಬರುವಂತೆ ಏರ್ಪಡಿಸಿರುವರು. ಇಂತಹ ಆದರ್ಶರಾಜಶಿರೋಮಣಿ ಗಳಾದ ಮಹಾಪ್ರಭುಗಳಿಗೂ ಅವರ ಕುಟುಂಬವರ್ಗಕ್ಕೂ ಲೋಕೇಶ್ವರನೂ ಚಾಮುಂಡೇಶ್ವರಿಯೂ ಸಮಸ್ತ ಸನ್ಮಂಗಳಗಳನ್ನೂ ಕರುಣಿಸಿ ರಕ್ಷಿಸಲಿ ಎಂದು ಭಕ್ತಿಯಿಂದ ಪರಮೇಶ್ವರನನ್ನು ಪ್ರಾರ್ಥಿಸುತ್ತೇನೆ.

ಶ್ರೀಮದ್ವಿರೋಧಿ ಸಂವತ್ಸರದ
ಚೈತ್ರ ಶುಕ್ಲ ಪೂರ್ಣಿಮಾ ಬುಧವಾರ,
೧೩—೪—೧೯೪೯.

ಇಂತು ಸಜ್ಜನ ವಿಧೇಯ,
**ಬಿ. ಚನ್ನಕೇಶವಯ್ಯ,**
ಆಸ್ಥಾನ ವಿದ್ವಾನ್, ಮೈಸೂರು.



## ಶ್ರೀ ಭವಿಷ್ಯಮಹಾಪುರಾಣದ ಪ್ರತಿಸರ್ಗಪರ್ವದ ಚತುರ್ಥಖಂಡದ

# ವಿಷಯಾನುಕ್ರಮಣಿಕೆ.



ಪುಟ ಸಂಖ್ಯೆ

ಪುಟ ಸಂಖ್ಯೆ

ಪುಟ ಸಂಖ್ಯೆ

**ಪುಟ ಸಂಖ್ಯೆ**

॥ ಶ್ರೀಃ ॥

---

ಶ್ರೀ ಗಣೇಶ ಶಾರದಾ ಗುರುಭ್ಯೋನಮಃ

# ಚತುರ್ಥಃ ಖಂಡಃ

## ಅಥ ಶ್ರೀ ಭವಿಷ್ಯೇ ಮಹಾಪುರಾಣೇ

### ಪ್ರತಿಸರ್ಗಪರ್ವಣಿ ಚತುರ್ಥಖಂಡೇ

## ಪ್ರಥಮೋಽಧ್ಯಾಯಃ

---

॥ ವೇದವ್ಯಾಸ ಉವಾಚ ॥

ಏವಂ ದ್ವಾಪರಸಂಧ್ಯಾಯಾ ಅಂತೇ ಸೂತೇನ ವರ್ಣಿತಂ ।
ಸೂರ್ಯಚಂದ್ರಾನ್ವಯಾಖ್ಯಾನಂ ತನ್ಮಯಾ ಕಥಿತಂ ತವ ॥ ೧ ॥

ವಿಶಾಲಾಯಾಂ ಪುನರ್ಗತ್ವಾ ವೈತಾಲೇನ ವಿನಿರ್ಮಿತಂ ।
ಕಥಯಿಷ್ಯತಿ ಸೂತಸ್ತಮಿತಿಹಾಸಸಮುಚ್ಚಯಂ ॥ ೨ ॥

---

ಶ್ರೀ ಗಣೇಶಾಯನಮಃ ಶ್ರೀ ಚಾಮುಂಡಾಂಬಾಯೈನಮಃ

### ಪ್ರತಿಸರ್ಗಪರ್ವದ ಚತುರ್ಥಖಂಡದಲ್ಲಿ ಒಂದನೆಯ ಅಧ್ಯಾಯ

೧. ವೇದವ್ಯಾಸನು ಹೇಳುತ್ತಾನೆ.—ದ್ವಾಪರದ ಸಂಧ್ಯೆಯ ಕೊನೆಯಲ್ಲಿ ಸೂತಪುರಾಣಿಕರು ಸೂರ್ಯವಂಶ ಚಂದ್ರವಂಶದವರ ವಿಚಾರವಾಗಿ ನಿರೂಪಿಸಿದ ಕಥೆಯನ್ನು ನಾನು ನಿನಗೆ ತಿಳಿಸಿದೆನು.

೨. ಸೂತನು ವಿಶಾಲಾನಗರಕ್ಕೆ ಮತ್ತೆ ಹೋದ ಮೇಲೆ ವೈತಾಲನಿಂದ ನಿರ್ಮಿತವಾದ ಆ ಇತಿಹಾಸವೃಂದವನ್ನು ನಿರೂಪಿಸಿದನಷ್ಟೆ.

ತನ್ಮಯಾ ಕಥಿತಂ ಸರ್ವಂ ಹೃಷೀಕೋತ್ತಮ ಪುಣ್ಯದಂ ।
ಪುನರ್ವಿಕ್ರಮಭೂಪೇನ ಭವಿಷ್ಯತಿ ಸಮಾಹ್ವಯಃ ॥ ೩ ॥

ನೈಮಿಷಾರಣ್ಯಮಾಸಾದ್ಯ ಶ್ರಾವಯಿಷ್ಯತಿ ವೈ ಕಥಾಂ ।
ಪುನರುಕ್ತಾನಿ ಯಾನ್ಯೇವ ಪುರಾಣಾಷ್ಟಾದಶಾನಿ ವೈ ॥ ೪ ॥

ತಾನಿ ಚೋಪಪುರಾಣಾನಿ ಭವಿಷ್ಯಂತಿ ಕಲೌ ಯುಗೇ ।
ತೇಷಾಂ ಚೋಪಪುರಾಣಾನಾಂ ದ್ವಾದಶಾಧ್ಯಾಯಮುತ್ತಮಂ ॥ ೫ ॥

ಸಾರಭೂತಶ್ಚ ಕಥಿತ ಇತಿಹಾಸಸಮುಚ್ಚಯಃ ।
ಯಸ್ತೇ ಮಯಾ ಚ ಕಥಿತೋ ಹೃಷೀಕೋತ್ತಮ ತೇ ಮುದಾ ॥ ೬ ॥

ವಿಕ್ರಮಾಖ್ಯಾನಕಾಲಾಂತೇಽವತಾರಃ ಕಲಯಾ ಹರೇಃ ।
ಸ ಚ ಶಕ್ತ್ಯಾವತಾರೋ ಹಿ ರಾಧಾಕೃಷ್ಣಸ್ಯ ಭೂತಲೇ ॥ ೭ ॥

---

೩. ಎಲೈ ಜಿತೇಂದ್ರಿಯನೇ! ಪುಣ್ಯಪ್ರದವಾದ ಅದೆಲ್ಲವನ್ನೂ ನಾನು ಈ ಹಿಂದೆಯೇ ತಿಳಿಸಿದೇನೆ. ವಿಕ್ರಮರಾಜನು ಪುನಃ ಈ ಲೋಕದಲ್ಲಿ ಜನ್ಮವೆತ್ತುವನು.

೪. ಆತನು ನೈಮಿಶಾರಣ್ಯಕ್ಕೆ ಬಂದು ಹಿಂದೆ ಹೇಳಿದ ಹದಿನೆಂಟು ಪುರಾಣಗಳನ್ನು ಮತ್ತೆ ಕಥಾರೂಪವಾಗಿ ಪುನರುಕ್ತಿಮಾಡಿ ವಾಚನಮಾಡಿಸುವನು.

೫. ಅವೇ ಕಲಿಯುಗದಲ್ಲಿ ಉಪಪುರಾಣಗಳೆನಿಸುವುವು. ಆ ಉಪಪುರಾಣಗಳಲ್ಲಿ ಹನ್ನೆರಡು ಅಧ್ಯಾಯಗಳು ಶ್ರೇಷ್ಠವಾದುವು.

೬. ಅವು ಎಲ್ಲ ಪುರಾಣಗಳ ಸಾರಭೂತವಾಗಿ, ಇತಿಹಾಸಸಮುಚ್ಚಯವೆಂಬದಾಗಿ ಹೆಸರಾಂತು ಶ್ರೇಷ್ಠವೆನಿಸಿವೆ. ಎಲೈ ಜಿತೇಂದ್ರಿಯನೇ! ನಾನು ನಿನಗೆ ಆ ಕಲಿಯುಗೀಯ ಇತಿಹಾಸಸಮುಚ್ಚಯವನ್ನು ಸಂತೋಷದಿಂದ ಹಿಂದೆಯೇ ಹೇಳಿದೇನೆ.

೭. ವಿಕ್ರಮನ ಕಾಲದ ಕಥೆಗಳು ನಡೆದ ಮೇಲೆ ವಿಷ್ಣುವು ತನ್ನ ಅಂಶದಿಂದ ಅವತಾರಮಾಡಿದನು. ಆ ರಾಧಾಕೃಷ್ಣ ಅವತಾರವು ಭೂಮಂಡಲದಲ್ಲಿ ಶಕ್ತಿಯ ಅವತಾರವೆನಿಸಿ ಪ್ರಸಿದ್ಧವಾಗಿದೆ.

**ತತ್ಕಥಾಂ ಭಗವಾನ್‌ಸೂತೋ ನೈಮಿಷಾರಣ್ಯಮಾಸ್ಥಿತಃ ।**
**ಅಷ್ಟಾಶೀತಿಸಹಸ್ರಾಣಿ ಶ್ರಾವಯಿಷ್ಯತಿ ವೈ ಮುನೀನ್ ॥ ೮ ॥**

**ಯತ್ತನ್ಮಯಾ ಚ ಕಥಿತಂ ಹೃಷೀಕೋತ್ತಮ ತೇ ಮುದಾ ।**
**ಪುನಸ್ತೇ ಶೌನಕಾದ್ಯಾಶ್ಚ ಕೃತ್ವಾ ಸ್ನಾನಾದಿಕಾಃ ಕ್ರಿಯಾಃ ॥ ೯ ॥**

**ಸೂತಪಾರ್ಶ್ವಂ ಗಮಿಷ್ಯಂತಿ ನೈಮಿಷಾರಣ್ಯವಾಸಿನಃ ।**
**ತತ್ಪೃಷ್ಟೇನೈವ ಸೂತೇನ ಯದುಕ್ತಂ ತಚ್ಛೃಣುಷ್ವ ಭೋಃ ॥ ೧೦ ॥**

**॥ ಋಷಯ ಊಚುಃ ॥**

**ಶ್ರುತಂ ಕೃಷ್ಣಸ್ಯ ಚರಿತಂ ಭಗವನ್‌ಭವತೋದಿತಂ ।**
**ಇದಾನೀಂ ಶ್ರೋತುಮಿಚ್ಛಾಮಿ ರಾಜ್ಞಾಂ ತೇಷಾಂ ಕ್ರಮಾತ್ಕುಲಂ ॥ ೧೧ ॥**

**ಚತುರ್ಣಾಂ ವಹ್ನಿಜಾತಾನಾಂ ಪರಂ ಕೌತೂಹಲಂ ಹಿ ನಃ ।**
**ಸ ಹರಿಸ್ತ್ರಿಯುಗೀ ಪ್ರೋಕ್ತಃ ಕಥಂ ಜಾತಃ ಕಲೌ ಯುಗೇ ॥ ೧೨ ॥**

---

೮. ಭಗವಂತನಾದ ಸೂತನು ನೈಮಿಶಾರಣ್ಯದಲ್ಲಿದ್ದುಕೊಂಡು ನಾನು ನಿನಗೆ ಹೇಳಿದ ವಿಚಾರಗಳನ್ನು ಎಂಬತ್ತೆಂಟುಸಾವಿರ ಆಖ್ಯಾನಗಳ ಮೂಲಕ ಋಷಿಗಳಿಗೆ ಸಂತೋಷದಿಂದ ವಾಚನಮಾಡಿಸುವನು.

೯. ನೈಮಿಶಾರಣ್ಯವಾಸಿಗಳಾದ ಶೌನಕಾದಿಗಳು ಸ್ನಾನಾದಿ ಕರ್ಮಗಳನ್ನು ಮಾಡಿಕೊಂಡು ಸೂತರ ಸಮೀಪಕ್ಕೆ ಬಂದು ಅವರನ್ನು ಕುರಿತು ಪ್ರಶ್ನೆಮಾಡಿದು ದನ್ನು ಆರೀತಿ ಆತನನ್ನು ಪ್ರಶ್ನಿಸಿದಾಗ ಸೂತನು ಏನು ಹೇಳಿದನೆಂಬುದನ್ನೂ ಹೇಳುತ್ತೇನೆ ಕೇಳು.

೧೦-೧೨. ಋಷಿಗಳು ಹೇಳುತ್ತಾರೆ —" ಪೂಜ್ಯನೇ ! ನಿನ್ನಿಂದ ಉಕ್ತವಾದ ಕೃಷ್ಣಾಂಶ ಚರಿತ್ರವನ್ನು ಕೇಳಿಯಾಯಿತು. ಈಗ ವಹ್ನಿಕುಲದ ನಾಲ್ಕುಮಂದಿ ಅರಸರ ವಂಶಾನುಕ್ರಮವನ್ನು ಕೇಳಬೇಕೆಂದು ಆಶಿಸುತ್ತೇವೆ. ಅವರ ಚರಿತ್ರವನ್ನು ಕೇಳಲು ಬಹಳ ಕುತೂಹಲವಾಗಿದೆ. ಆ ವಿಷ್ಣುವು ಮೂರು ಯುಗಗಳಲ್ಲಿ ಅವತರಿಸಿ ದುದನ್ನು ಕೇಳಿದುದಾಯಿತು ಈ ಕಲಿಯುಗದಲ್ಲಿ ಹೇಗೆ ಜನ್ಮವೆತ್ತಿದನು ? ಅದನ್ನು ಹೇಳು" ಎಂದರು.

॥ ಸೂತ ಉವಾಚ ॥

**ಕಥಯಾಮಿ ಮುನಿಶ್ರೇಷ್ಠಾ ಯುಷ್ಮಾಕಂ ಪ್ರಶ್ನಮುತ್ತಮಂ ।**
**ಅಗ್ನಿವಂಶನೃಪಾಣಾಂ ಚ ಚರಿತ್ರಂ ಶೃಣು ವಿಸ್ತರಾತ್ ॥ ೧೩ ॥**

**ಪ್ರಮರಶ್ಚ ಮಹೀಪಾಲೋ ದಕ್ಷಿಣಾಂ ದಿಶಮಾಸ್ಥಿತಃ ।**
**ಅಂಬಯಾ ರಚಿತಾಂ ದಿವ್ಯಾಂ ಪ್ರಮರಾಯ ಪುರೀಂ ಶುಭಾಂ ॥ ೧೪ ॥**

**ನಿವಾಸಂ ಕೃತವಾನ್‌ರಾಜಾ ಸಾಮವೇದಪರೋ ಬಲೀ ।**
**ಷಡ್ವರ್ಷಾಣಿ ಕೃತಂ ರಾಜ್ಯಂ ತಸ್ಮಾಜ್ಜಾತೋ ಮಹಾಮರಃ ॥ ೧೫ ॥**

**ತ್ರಿವರ್ಷಂ ಚ ಕೃತಂ ರಾಜ್ಯಂ ದೇವಾಪಿಸ್ತನಯೋಽಭವತ್ ।**
**ಪಿತುಸ್ತುಲ್ಯಂ ಕೃತಂ ರಾಜ್ಯಂ ದೇವದೂತಸ್ತತೋಽಭವತ್ ॥**
**ಪಿತುಸ್ತುಲ್ಯಂ ಕೃತಂ ರಾಜ್ಯಂ ಶೃಣು ತತ್ಕಾರಣಂ ಮುನೇ ॥ ೧೬ ॥**

---

೧೩. ಸೂತಮುನಿವರ್ಯನು ಹೇಳುತ್ತಾನೆ.—ಎಲೈ ಮುನಿಶ್ರೇಷ್ಠರೇ ! ನಿಮ್ಮ ಪ್ರಶ್ನೆ ಶ್ರೇಷ್ಠವಾದುದು. ಈಗ ನಾನು ವಹ್ನಿಕುಲದ ರಾಜರ ಚರಿತ್ರೆಯನ್ನು ನಿಮಗೆ ವಿಶದವಾಗಿ ಹೇಳುವೆನು ಕೇಳಿ.

೧೪. ಪ್ರಮರನೆಂಬ ರಾಜನು ದಕ್ಷಿಣಭಾಗದಲ್ಲಿ ಆಳುತ್ತಿದ್ದನು. ಲೋಕ ವಂದ್ಯೆಯಾದ ಅಂಬಾದೇವಿಯು ಆ ಪ್ರಮರ ರಾಜನಿಗೋಸ್ಕರ ಸುಂದರವಾದ ಪುರಿ ಎಂಬ ನಗರಿಯನ್ನು ರಚಿಸಿದಳು.

೧೫. ಸಾಮವೇದದಲ್ಲಿ ಆಸಕ್ತನೂ ಬಲಶಾಲಿಯೂ ಆದ ಆ ಪ್ರಮರರಾಜನು ಆ ಪಟ್ಟಣವನ್ನು ತನ್ನ ನಿವಾಸಸ್ಥಾನವಾಗಿ ಮಾಡಿಕೊಂಡು ಆರುವರುಷಗಳು ರಾಜ್ಯ ವಾಳಿದನು. ಅವನಿಗೆ ಮಹಾಮರನೆಂಬ ಒಬ್ಬ ಪುತ್ರನು ಜನಿಸಿದನು.

೧೬. ಅವನು ಮೂರುವರ್ಷಕಾಲ ರಾಜ್ಯಭಾರಮಾಡಿದನು. ಅವನಿಗೆ ದೇವಾಪಿಯೆಂಬ ಮಗನು ಜನಿಸಿದನು. ಅವನೂ ತಂದೆಯಷ್ಟೇ ಕಾಲ ರಾಜ್ಯವಾಳಿದನು. ಅವನ ಬಳಿಕ ದೇವದೂತನೆಂಬ ಅವನ ಪುತ್ರನು ಪಟ್ಟಕ್ಕೆ ಬಂದು ಅವನೂ ತಂದೆ ಯಷ್ಟೇ ವರ್ಷ ಆಳಿದನು. ಎಲೈ ಮುನಿಯೇ ! ಅದಕ್ಕೆ ಕಾರಣವನ್ನು ಹೇಳುವೆನು ಕೇಳು.

**ಅಶೋಕೇ ನಿಹತೇ ತಸ್ಮಿನ್ ಬೌದ್ಧಭೂಪೇ ಮಹಾಬಲೇ ।**
**ಕಲಿರ್ಭಾಸ್ಕರಮಾರಾಧ್ಯ ತಪಸಾ ಧ್ಯಾನತತ್ಪರಃ ॥ ೧೭ ॥**

**ಪಂಚವರ್ಷಾಂತರೇ ಸೂರ್ಯಸ್ತಸ್ಮೈ ಚ ಕಲಯೇ ಮುದಾ ।**
**ಶಕಾಖ್ಯಂ ನಾಮ ಪುರುಷಂ ದದೌ ತದ್ಭಕ್ತಿತೋಷಿತಃ ॥ ೧೮ ॥**

**ತದಾ ಪ್ರಸನ್ನಃ ಸ ಕಲಿಃ ಶಕಾಯ ಚ ಮಹಾತ್ಮನೇ ।**
**ತೈತ್ತಿರಂ ನಗರಂ ಪ್ರೇಮ್ಣಾ ದದೌ ಹರ್ಷಿತಮಾನಸಃ ॥ ೧೯ ॥**

**ತತ್ರ ಗೋಪಾನ್ ದಸ್ಯುಗಣಾನ್ ವಶೀಕೃತ್ಯ ಮಹಾಬಲೀ ।**
**ಆರ್ಯದೇಶವಿನಾಶಾಯ ಕೃತೋದ್ಯೋಗಂ ಪುನಃಪುನಃ ॥**
**ಹತವಾನ್ಭೂಪತೀನ್ ಬಾಣೈಸ್ತಸ್ಮಾತ್ತೇ ಸ್ವಲ್ಪಜೀವಿನಃ ॥ ೨೦ ॥**

---

೧೭. ಬೌದ್ಧರಾಜರಲ್ಲಿ ಮಹಾಬಲಶಾಲಿಯಾದ ಅಶೋಕರಾಜನು ಮೃತನಾದ ಮೇಲೆ ಕಲಿಯು ಸೂರ್ಯನನ್ನು ಮೆಚ್ಚಿಸುವುದಕ್ಕಾಗಿ ಧ್ಯಾನತತ್ಪರನಾಗಿ ತಪಸ್ಸಿಗೆ ಕುಳಿತನು.

೧೮. ಹೀಗೆ ಐದುವರ್ಷ ತಪಸ್ಸನ್ನಾಚರಿಸಿದ ಮೇಲೆ ಆ ಕಲಿಯ ಭಕ್ತಿಗೆ ಸಂತೋಷಪಟ್ಟು ಸೂರ್ಯನು ಶಕನೆಂಬ ಹೆಸರಿನ ಪುರುಷನೊಬ್ಬನನ್ನು ಆ ಕಲಿ ಪುರುಷನ ವಶಕ್ಕ ಕೊಟ್ಟನು.

೧೯. ಆಗ ಸಂತುಷ್ಟನಾದ ಕಲಿಪುರುಷನು ಮಹಾತ್ಮನಾದ ಆ ಶಕನಿಗೆ ಪ್ರೀತಿ ಪುರಸ್ಸರವಾಗಿ ಹರ್ಷಾತಿಶಯದಿಂದ ತೈತ್ತಿರವೆಂಬ ನಗರವನ್ನು ಕಲ್ಪಿಸಿಕೊಟ್ಟನು.

೨೦. ಮಹಾಬಲಶಾಲಿಯಾದ ಆ ಶಕನು ದಸ್ಯುಗಳನ್ನು ಜತೆಮಾಡಿಕೊಂಡು ಆರ್ಯದೇಶವನ್ನು ಧ್ವಂಸಮಾಡುವುದಕ್ಕೆ ಪದೇ ಪದೇ ಪ್ರಯತ್ನಮಾಡುತ್ತಿದ್ದನು. ಅವನು ಅನೇಕಸಲ ದಂಡೆತ್ತಿ ಬಂದು ಇಲ್ಲಿನ ರಾಜರುಗಳೊಡನೆ ಹೋರಾಡಿ ಅವರನ್ನು ತನ್ನ ಬಾಣಗಳಿಂದ ಹೊಡೆದು ಹಾಕುತ್ತಿದ್ದನು. ಈ ಕಾರಣದಿಂದ ಇಲ್ಲಿನ ರಾಜರು ಆರೀತಿ ಅಲ್ಪಾಯುಗಳಾಗಿ ಸ್ವಲ್ಪದಿನ ಮಾತ್ರ ರಾಜ್ಯವಾಳಿದರು.

ಗಂಧರ್ವಸೇನಶ್ಚ ನೃಪೋ ದೇವದೂತಾತ್ಮಜೋ ಬಲೀ ।
ಶತಾರ್ಧಾಬ್ದಂ ಪದಂ ಕೃತ್ವಾ ತಪಸೇ ಪುನರಾಗತಃ ॥ ೨೧ ॥

ಶಿವಾಜ್ಞಯಾ ಚ ನೃಪತಿರ್ವಿಕ್ರಮಸ್ತನಯಸ್ತತಃ ।
ಶತವರ್ಷಂ ಕೃತಂ ರಾಜ್ಯಂ ದೇವಭಕ್ತಸ್ತತೋಽಭವತ್ ॥ ೨೨ ॥

ದಶವರ್ಷಂ ಕೃತಂ ರಾಜ್ಯಂ ಶಕೈರ್ದುಷ್ಟೈರ್ಲಯಂ ಗತಃ ।
ಶಾಲಿವಾಹನ ಏವಾಪಿ ದೇವಭಕ್ತಸ್ಯ ಚಾತ್ಮಜಃ ॥
ಜಿತ್ವಾ ಶಕಾನ್ ಸ ಷಷ್ಟ್ಯಬ್ದಂ ರಾಜ್ಯಂ ಕೃತ್ವಾ ದಿವಂ ಗತಃ ॥ ೨೩ ॥

ಶಾಲಿಹೋತ್ರಸ್ತಸ್ಯ ಸುತೋ ರಾಜ್ಯಂ ಕೃತ್ವಾ ಶತಾರ್ಧಕಂ ।
ಸ್ವರ್ಗಲೋಕಂ ತತಃ ಪ್ರಾಪ್ತಸ್ತತ್ಸುತಃ ಶಾಲಿವರ್ಧನಃ ॥ ೨೪ ॥

ಪಿತುಸ್ತುಲ್ಯಂ ಕೃತಂ ರಾಜ್ಯಂ ಶಕಹಂತಾ ತತೋಽಭವತ್ ।
ಪಿತುಸ್ತುಲ್ಯಂ ಕೃತಂ ರಾಜ್ಯಂ ಸುಹೋತ್ರಸ್ತನಯೋಽಭವತ್ ॥ ೨೫ ॥

---

೨೧. ದೇವದೂತರಾಜನ ಕುಮಾರನೂ ಬಲಶಾಲಿಯೂ ಆದ ಗಂಧರ್ವಸೇನನೆಂಬವನು ಐವತ್ತು ವರ್ಷ ರಾಜ್ಯವನ್ನು ಆಳಿದ ಬಳಿಕ ತಪಸ್ಸುಮಾಡಲು ಹೋದನು.

೨೨. ಬಳಿಕ ಅವನ ಕುಮಾರನಾದ ವಿಕ್ರಮನು ಪರಮೇಶ್ವರನ ಅನುಗ್ರಹದಿಂದ ನೂರುವರ್ಷಕಾಲ ರಾಜ್ಯವಾಳಿದನು. ಅವನ ಅನಂತರ ಆತನ ಪುತ್ರನಾದ ದೇವಭಕ್ತನು ಹತ್ತುವರ್ಷ ರಾಜ್ಯವಾಳುವುದರಲ್ಲಿ ದುಷ್ಟರಾದ ಶಕರು ಅವನನ್ನು ನಾಶಮಾಡಿದರು.

೨೩. ದೇವಭಕ್ತನ ಮಗನಾದ ಶಾಲಿವಾಹನನು ಆ ಶಕರನ್ನು ಗೆದ್ದು ಅರವತ್ತುವರ್ಷ ರಾಜ್ಯವಾಳಿ ಸ್ವರ್ಗಸ್ಥನಾದನು.

೨೪ ಆ ಶಾಲಿವಾಹನನ ಪುತ್ರನಾದ ಶಾಲಿಹೋತ್ರನೆಂಬವನು ಐವತ್ತುವರ್ಷ ಕಾಲ ರಾಜ್ಯವಾಳಿ ಸ್ವರ್ಗಸ್ಥನಾದನು.

೨೫. ಅವನ ಮಗನಾದ ಶಾಲಿವರ್ಧನನೆಂಬವನು ತಂದೆ ಆಳಿದಷ್ಟು ವರ್ಷ ಕಾಲ ರಾಜ್ಯಭಾರಮಾಡಿದನು. ಬಳಿಕ ಆತನ ಮಗನಾದ ಶಕಹಂತನು ಪಟ್ಟಕ್ಕೆ ಬಂದು ತಂದೆ ಆಳಿದಷ್ಟು ವರ್ಷಕಾಲ ರಾಜ್ಯವಾಳಿದನು. ಆ ಶಕಹಂತನ ಮಗನಾದ ಸುಹೋತ್ರನು ತನ್ನ ತಂದೆ ರಾಜ್ಯಭಾರಮಾಡಿದಷ್ಟು ವರ್ಷವೇ ರಾಜ್ಯವಾಳಿದನು.

ಪಿತುಸ್ತುಲ್ಯಂ ಕೃತಂ ರಾಜ್ಯಂ ಹವಿರ್ಹೋತ್ರಸ್ತತೋಽಭವತ್ ।
ಪಿತುಸ್ತುಲ್ಯಂ ಕೃತಂ ರಾಜ್ಯಮಿಂದ್ರಪಾಲಸ್ತತೋಽಭವತ್ ॥ ೨೬ ॥

ಪುರೀಮಿಂದ್ರಾವತೀಂ ಕೃತ್ವಾ ತತ್ರ ರಾಜ್ಯಮಕಾರಯತ್ ।
ಪಿತುಸ್ತುಲ್ಯಂ ಕೃತಂ ರಾಜ್ಯಂ ಮಾಲ್ಯವಾನ್ನಾಮ ತತ್ಸುತಃ ॥
ಪುರೀಂ ಮಾಲ್ಯವತೀಂ ಕೃತ್ವಾ ಪಿತುಸ್ತುಲ್ಯಂ ಕೃತಂ ಪದಂ ॥ ೨೭ ॥

ಅನಾವೃಷ್ಟಿಸ್ತತಶ್ಚಾಸೀನ್ಮಹತೀ ಚತುರಬ್ದಿಕಾ ।
ತತಃ ಕ್ಷುಧಾತುರೋ ರಾಜಾ ಶ್ವವಿಷ್ಠಾ ಧಾನ್ಯಗರ್ಹಿತಂ ॥ ೨೮ ॥

ಸಂಸ್ಕೃತ್ಯ ಮಂದಿರೇ ರಾಜಾ ಶಾಲಗ್ರಾಮಾಯ ಚಾರ್ಪಯತ್ ।
ತದಾ ಪ್ರಸನ್ನೋ ಭಗವಾನ್ವಚನಂ ನಭಸೇರಿತಂ ॥ ೨೯ ॥

---

೨೬. ಅನಂತರ ಅವನ ಮಗನಾದ ಹವಿರ್ಹೋತ್ರನೆಂಬವನು ಪಟ್ಟಕ್ಕೆ ಬಂದು ತಂದೆ ಆಳಿದಷ್ಟು ಕಾಲ ರಾಜ್ಯವಾಳಿದನು. ಅನಂತರ ಅವನ ಮಗ ಇಂದ್ರಪಾಲನು ಪಟ್ಟಕ್ಕೆ ಬಂದನು.

೨೭ ಆತನು ಇಂದ್ರಾವತಿಯೆಂಬ ಪಟ್ಟಣವನ್ನು ನಿರ್ಮಿಸಿ, ಅಲ್ಲಿ ತನ್ನ ತಂದೆ ಆಳಿದಷ್ಟು ವರ್ಷಕಾಲ ರಾಜ್ಯಭಾರಮಾಡಿದನು. ಬಳಿಕ ಅವನ ಮಗನಾದ ಮಾಲ್ಯವಂತನೆಂಬ ರಾಜನು ಮಾಲ್ಯವತೀ ಎಂಬ ಪಟ್ಟಣವನ್ನು ಕಟ್ಟಿಕೊಂಡು ಅಲ್ಲಿ ತಂದೆಯು ಆಳಿದಷ್ಟೇ ವರ್ಷ ರಾಜ್ಯವಾಳಿದನು.

೨೮. ಇವನ ಕಾಲದಲ್ಲಿ ನಾಲ್ಕುವರ್ಷಕಾಲ ಅನಾವೃಷ್ಟಿಯೊದಗಿ ವೀರಕ್ಷಾಮ ಪ್ರಾಪ್ತಿಯಾಯಿತು. ಆಗ ರಾಜನು ತುಂಬಾ ಹಸಿವಿನಿಂದ ಪೀಡಿತನಾದನು.

೨೯. ಆಗ ಅವನು ನಾಯಿಯ ಅಮೇಧ್ಯದಿಂದ ಬೆಳೆದ ನಿಷಿದ್ಧವಾದ ಧಾನ್ಯದಿಂದ ಸಿದ್ಧಮಾಡಿದ ಅನ್ನವನ್ನು ತಾನು ಅರ್ಚಿಸುತ್ತಿದ್ದ ಸಾಲಿಗ್ರಾಮಮೂರ್ತಿಗೆ ನಿವೇದಿಸಿದನು. ಆಗ ಪರಮಾತ್ಮನು ಪ್ರಸನ್ನನಾಗಿ ಅಶರೀರವಾಣಿಯಿಂದ ಮಾತನಾಡುವವನಾಗಿ,

ಕೃತ್ವಾ ದದೌ ವರಂ ತಸ್ಮೈ ಶೃಣು ತನ್ಮುನಿಸತ್ತಮ ।
ಕುಲೇ ಯಾವನ್ನೃಪಾ ಭವ್ಯಾಸ್ತಾವ ಭೂಪತಿಸತ್ತಮ ॥
ಅನಾವೃಷ್ಟಿರ್ನ ಭವಿತಾ ತಾವತ್ತೇ ರಾಷ್ಟ್ರ ಉತ್ತಮೇ ॥ ೩೦ ॥

ಸುತೋ ಮಾಲ್ಯವತಶ್ಚಾಸೀಚ್ಛಂಭುದತ್ತೋ ಹರಪ್ರಿಯಃ ।
ಪಿತುಸ್ತುಲ್ಯಂ ಕೃತಂ ರಾಜ್ಯಂ ಭೌಮರಾಜಸ್ತತೋಽಭವತ್ ॥ ೩೧ ॥

ಪಿತುಸ್ತುಲ್ಯಂ ಕೃತಂ ರಾಜ್ಯಂ ವತ್ಸರಾಜಸ್ತತೋಽಭವತ್ ।
ಪಿತುಸ್ತುಲ್ಯಂ ಕೃತಂ ರಾಜ್ಯಂ ಭೋಜರಾಜಸ್ತತೋಽಭವತ್ ॥ ೩೨ ॥

ಪಿತುಸ್ತುಲ್ಯಂ ಕೃತಂ ರಾಜ್ಯಂ ಶಂಭುದತ್ತಸ್ತತೋಽಭವತ್ ।
ದಶಹೀನಂ ಕೃತಂ ರಾಜ್ಯಂ ಭೋಜರಾಜಪಿತುಸ್ಸಮಂ ॥ ೩೩ ॥

---

೩೦ ಅವನಿಗೆ ಏನು ವರ ಕೊಟ್ಟನೆಂಬುದನ್ನು ಹೇಳುತ್ತೇನೆ. ಎಲೈ ಮುನಿ ಶ್ರೇಷ್ಠನೇ! ಕೇಳು. "ಎಲೈ ರಾಜಶ್ರೇಷ್ಠನೇ! ನಿನ್ನ ಕುಲದಲ್ಲಿ ಎಷ್ಟುಮಂದಿ ರಾಜರು ಆಳುವರೋ ಅಷ್ಟುಕಾಲ ಪರ್ಯಂತ ಶ್ರೇಷ್ಠವಾದ ನಿನ್ನ ರಾಜ್ಯದಲ್ಲಿ ಅನಾವೃಷ್ಟಿಯು ಸಂಭವಿಸುವುದೇ ಇಲ್ಲ." ಎಂದು ತಿಳಿಸಿದನು.

೩೧. ಈ ಮಾಲ್ಯವಂತರಾಜನಿಗೆ ಶಿವಭಕ್ತನಾದ ಶಂಭುದತ್ತನೆಂಬ ಮಗನು ಉದಯಿಸಿದನು. ಈ ಶಂಭುದತ್ತನೂ ತಂದೆ ಆಳಿದಷ್ಟು ಕಾಲವೇ ರಾಜ್ಯಭಾರಮಾಡಿ ಅನಂತರ ತನ್ನ ಮಗನಾದ ಭೌಮರಾಜನಿಗೆ ರಾಜ್ಯಭಾರ ವಹಿಸಿದನು.

೩೨. ಆತನೂ ತನ್ನ ತಂದೆಗೆ ಸಮಾನವಾಗಿಯೇ ರಾಜ್ಯವಾಳಿದನು. ಬಳಿಕ ಈ ಭೌಮರಾಜನ ಪುತ್ರ ವತ್ಸರಾಜನೆಂಬವನು ಪಟ್ಟಕ್ಕೆ ಬಂದನು. ಇವನೂ ತನ್ನ ತಂದೆ ಆಳಿದಷ್ಟು ಕಾಲ ರಾಜ್ಯಭಾರಮಾಡಿ ತನ್ನ ಮಗನಾದ ಭೋಜರಾಜನೆಂಬವನಿಗೆ ರಾಜ್ಯವಹಿಸಿದನು.

೩೩. ಈ ಭೋಜರಾಜನೂ ತಂದೆ ಆಳಿದಷ್ಟು ವರ್ಷಗಳಕಾಲ ರಾಜ್ಯವಾಳಿದನು. ಅನಂತರ ಇವನ ಮಗನಾದ (ಎರಡನೇ) ಶಂಭುದತ್ತನು ರಾಜ್ಯಭಾರವನ್ನು ವಹಿಸಿ, ತನ್ನ ತಂದೆಯಾದ ಭೋಜರಾಜನು ರಾಜ್ಯವಾಳಿದ್ದಕ್ಕಿಂತ ಹತ್ತುವರ್ಷಗಳು ಕಡಿಮೆ ಕಾಲದವರೆಗೆ ರಾಜ್ಯಭಾರ ಮಾಡಿದನು.

ಶಂಭುದತ್ತಸ್ಯ ತನಯೋ ಬಿಂದುಪಾಲಸ್ತತೋಽಭವತ್ ।
ಬಿಂದುಖಂಡಂ ಚ ರಾಷ್ಟ್ರಂ ವೈ ಕೃತ್ವಾ ಸ ಸುಖಿತೋಽಭವತ್ ॥
ತೇನ ರಾಜ್ಯಂ ಪಿತುಸ್ತುಲ್ಯಂ ಕೃತಂ ವೇದವಿದಾ ಮುನೇ ॥ ೩೪ ॥

ಬಿಂದುಪಾಲಸ್ಯ ತನಯೋ ರಾಜಪಾಲಸ್ತತೋಽಭವತ್ ।
ಪಿತುಸ್ತುಲ್ಯಂ ಕೃತಂ ರಾಜ್ಯಂ ತಸ್ಮಾಜ್ಜಾತೋ ಮಹೀನರಃ ॥ ೩೫ ॥

ಪಿತುಸ್ತುಲ್ಯಂ ಕೃತಂ ರಾಜ್ಯಂ ಸೋಮವರ್ಮಾ ನೃಪೋಽಭವತ್ ।
ಪಿತುಸ್ತುಲ್ಯಂ ಕೃತಂ ರಾಜ್ಯಂ ಕಾಮವರ್ಮಾ ಸುತೋಽಭವತ್ ॥ ೩೬ ॥

ಪಿತುಸ್ತುಲ್ಯಂ ಕೃತಂ ರಾಜ್ಯಂ ಭೂಮಿಪಾಲಸ್ತತೋಽಭವತ್ ।
ಭೂಸರಸ್ತೇನ ಖನಿತಂ ಪುರಂ ತತ್ರ ಶುಭಂ ಕೃತಂ ॥ ೩೭ ॥

---

೩೪ ಹೇ ಮುನಿವರ್ಯನೇ! ಈ ಶಂಭುದತ್ತನಿಗೆ ಬಿಂದುಪಾಲನೆಂಬ ಮಗನು ಹುಟ್ಟಿದನು. ವೇದಪಾರಂಗತನಾದ ಈ ಬಿಂದುಪಾಲನು ಬಿಂದುಖಂಡವೆಂಬ ರಾಜ್ಯವನ್ನು ನಿರ್ಮಿಸಿ ಆ ಬಿಂದುಪಾಲನು ಅಲ್ಲಿಯೇ ಸುಖವಾಗಿ ವಾಸಮಾಡುತ್ತಾ ತನ್ನ ತಂದೆಯಂತೆಯೇ ರಾಜ್ಯಭಾರಮಾಡಿದನು.

೩೫. ಅನಂತರ ಈ ಬಿಂದುಪಾಲರಾಜನ ಮಗನಾದ ರಾಜಪಾಲನೆಂಬಾತನು ಪಟ್ಟಕ್ಕೆ ಬಂದನು. ಈ ರಾಜಪಾಲನೂ ತನ್ನ ತಂದೆ ಆಳಿದಷ್ಟು ವರ್ಷಕಾಲ ರಾಜ್ಯಭಾರ ಮಾಡಿದನು. ಇವನಿಗೆ ಮಹೀನರನೆಂಬ ಮಗನು ಹುಟ್ಟಿದನು.

೩೬. ಈ ಮಹೀನರನೂ ತನ್ನ ತಂದೆ ಆಳಿದಷ್ಟು ವರ್ಷವೇ ರಾಜ್ಯವಾಳಿದನು. ಅನಂತರ ಇವನ ಮಗನಾದ ಸೋಮವರ್ಮನೆಂಬವನು ರಾಜನಾದನು. ಇವನೂ ತನ್ನ ತಂದೆ ಆಳಿದಷ್ಟು ವರ್ಷಗಳು ರಾಜ್ಯವಾಳಿದನು. ಇವನಿಗೆ ಕಾಮವರ್ಮನೆಂಬ ಪುತ್ರನು ಜನಿಸಿದನು.

೩೭. ಈ ಕಾಮವರ್ಮನು ಪ್ರಾಪ್ತವಯಸ್ಕನಾಗುತ್ತಲೇ ತಂದೆಯ ಆಳ್ವಿಕೆಗೆ ಸಮಾನವಾಗಿ ರಾಜ್ಯವಾಳಿದನು ಆತನು ಭೂಮಿಪಾಲನೆಂಬ ಮಗನನ್ನು ಪಡೆದನು. ಈ ಭೂಮಿಪಾಲನು ಭೂಸರವೆಂಬ ಸರೋವರವನ್ನು ಕಟ್ಟಿಸಿ ಅದರ ಸಮೀಪದಲ್ಲಿಯೇ ಸುಂದರವಾದ ಪಟ್ಟಣವನ್ನೂ ರಚಿಸಿದನು.

ಪಿತುಸ್ತುಲ್ಯಂ ಕೃತಂ ರಾಜ್ಯಂ ರಂಗಪಾಲಸ್ತತೋಽಭವತ್ ।
ಭೂಮಿಪಾಲಸ್ತು ನೃಪತಿರ್ಜಿತ್ವಾ ಭೂಪಾನನೇಕಶಃ ॥ ೩೮ ॥

ವೀರಸಿಂಹಸ್ತತೋ ನಾಮ್ನಾ ವಿಖ್ಯಾತೋಽಭೂನ್ಮಹೀತಲೇ ।
ಸ್ವರಾಜ್ಯೇ ರಂಗಪಾಲಂ ಸ ಚಾಭಿಷಿಚ್ಯ ವನಂ ಯಯೌ ॥
ತಪಃ ಕೃತ್ವಾ ದಿವಂ ಯಾತೋ ದೇವದೇವಪ್ರಸಾದತಃ ॥ ೩೯ ॥

ಕಲ್ಪಸಿಂಹಸ್ತತೋ ಜಾತೋ ರಂಗಪಾಲಾನ್ನೃಪೋತ್ತಮಾತ್ ।
ಅನಪತ್ಯೋ ಹಿ ನೃಪತಿಃ ಪಿತುಸ್ತುಲ್ಯಂ ಕೃತಂ ಪದಂ ॥ ೪೦ ॥

ಏಕದಾ ಜಾಹ್ನವೀತೋಯೇ ಸ್ನಾನಾರ್ಥಂ ಮುದಿತೋ ಯಯೌ ।
ದಾನಂ ದತ್ವಾ ದ್ವಿಜಾತಿಭ್ಯಃ ಕಲ್ಪಕ್ಷೇತ್ರಮುವಾಪ್ತವಾನ್ ॥ ೪೧ ॥

---

೩೮. ಈತನೂ ತನ್ನ ತಂದೆ ಆಳಿದಷ್ಟು ಕಾಲವೇ ರಾಜ್ಯವಾಳಿದನು. ಅನಂತರ ಇವನಿಗೆ ರಂಗಪಾಲನೆಂಬ ಮಗನು ಜನಿಸಿದನು. ರಾಜನಾದ ಭೂಮಿಪಾಲನು ಅನೇಕ ರಾಜರುಗಳನ್ನು ಜಯಿಸಿದನು.

೩೯. ಇದರಿಂದ ಈ ಭೂಮಿಪಾಲರಾಜನಿಗೆ ವೀರಸಿಂಹನೆಂಬ ಖ್ಯಾತಿಯು ಹೆಸರೇ ಭೂಮಂಡಲದಲ್ಲಿ ಪ್ರಸಿದ್ಧವಾಯಿತು. ಅನಂತರ ಈ ವೀರಸಿಂಹನು ತನ್ನ ಮಗನಾದ ರಂಗಪಾಲನಿಗೆ ಪಟ್ಟಾಭಿಷೇಕಮಾಡಿ ತಾನು ಪುಣ್ಯಾಶ್ರಮಕ್ಕೆ ತೆರಳಿ ಅಲ್ಲಿ ನಿಯಮದಿಂದ ತಪಸ್ಸುಮಾಡಿ ದೇವದೇವನಾದ ಪರಮೇಶ್ವರನ ಅನುಗ್ರಹಹೊಂದಿ ಸ್ವರ್ಗಕ್ಕೆ ತೆರಳಿದನು.

೪೦. ರಾಜಶ್ರೇಷ್ಠನಾದ ಈ ರಂಗಪಾಲರಾಜನಿಗೆ ಕಲ್ಪಸಿಂಹನೆಂಬ ಮಗನು ಹುಟ್ಟಿದನು. ಇವನಿಗೆ ಮಕ್ಕಳಿರಲಿಲ್ಲ. ಈ ಕಲ್ಪಸಿಂಹನೂ ತಂದೆ ಆಳಿದಷ್ಟು ವರ್ಷ ಕಾಲ ರಾಜ್ಯಭಾರಮಾಡಿದನು.

೪೧. ಒಂದುದಿನ ಕಲ್ಪಸಿಂಹರಾಜನು ಸ್ನಾನಾರ್ಥವಾಗಿ ಸಂತೋಷದಿಂದ ಗಂಗಾನದಿಗೆ ಹೋದನು. ಅಲ್ಲಿ ವಿಧ್ಯುಕ್ತರೀತಿ ಸ್ನಾನಾದಿಗಳನ್ನು ಆಚರಿಸಿ ಬ್ರಾಹ್ಮಣರಿಗೆಲ್ಲಾ ಅನೇಕ ದಾನಧರ್ಮಗಳನ್ನು ಮಾಡಿ ಅಲ್ಲಿಂದ ಕಲ್ಪಕ್ಷೇತ್ರಕ್ಕೆ ಬಂದನು.

**ಪುಣ್ಯಭೂಮಿಂ ಸಮಾಲೋಕ್ಯ ಶೂನ್ಯಭೂತಾಂ ಸ್ಥಲೀಮಪಿ ।**
**ನಗರಂ ಕಾರಯಾಮಾಸ ತತ್ರ ಸ್ಥಾನೇ ಮುದಾನ್ವಿತಃ ॥ ೪೨ ॥**

**ಕಲಾಪನಗರಂ ನಾಮ್ನಾ ಪ್ರಸಿದ್ಧಮಭವದ್ಭುವಿ ।**
**ತತ್ರ ರಾಜ್ಯಂ ಕೃತಂ ತೇನ ಗಂಗಾಸಿಂಹಸ್ತತೋಽಭವತ್ ॥ ೪೩ ॥**

**ನವತ್ಯಬ್ದವಪುರ್ಭೂತ್ವಾ ಸೋಽನಪತ್ಯೋ ರಣಂ ಗತಃ ।**
**ತ್ಯಕ್ತ್ವಾ ಪ್ರಾಣಾನ್ಕುರುಕ್ಷೇತ್ರೇ ಸ್ವರ್ಗಲೋಕಮವಾಪ್ತವಾನ್ ॥**
**ಸಮಾಪ್ತಿಮಗಮದ್ವಿಪ್ರ ಪ್ರಮರಸ್ಯ ಕುಲಂ ಶುಭಂ ॥ ೪೪ ॥**

**ತದನ್ವಯೇ ಚ ಯೇ ಶೇಷಾಃ ಕ್ಷತ್ರಿಯಾಸ್ತದನಂತರಂ ।**
**ತನ್ನಾರೀಷ್ವಮಿತೋ ವಿಪ್ರ ಬಭೂವ ವರ್ಣಸಂಕರಃ ॥ ೪೫ ॥**

---

೪೨. ಪುಣ್ಯಭೂಮಿಯಾದರೂ ಆ ಕಲ್ಪಕ್ಷೇತ್ರವು ಜನಶೂನ್ಯವಾಗಿ ಇರುವುದನ್ನು ನೋಡಿ ಸಹಿಸದೆ ಸಂತೋಷದಿಂದ ಅಲ್ಲಿ ಒಂದು ಪಟ್ಟಣವನ್ನು ಕಟ್ಟಿಸಿದನು.

೪೩. ಆ ಪಟ್ಟಣವು ಕಲಾಪನಗರವೆಂಬ ಹೆಸರಿನಿಂದ ಲೋಕಪ್ರಸಿದ್ಧಿ ಹೊಂದಿತು. ಆ ಕಲಾಪನಗರದಲ್ಲಿ ಆ ಕಲ್ಪಸಿಂಹರಾಜನು ಅನೇಕ ವರ್ಷಗಳಕಾಲ ರಾಜ್ಯವಾಳಿದನು. ಅನಂತರ ಇವನಿಗೆ ಗಂಗಾಸಿಂಹನೆಂಬ ಹೆಸರೇ ಪ್ರಸಿದ್ಧಿಗೆ ಬಂದಿತು.

೪೪. ಕಲ್ಪಸಿಂಹರಾಜನು ತೊಂಬತ್ತುವರ್ಷಗಳು ಬದುಕಿದ್ದರೂ ಅವನಿಗೆ ಪುತ್ರಸಂತಾನವೇ ಆಗಲಿಲ್ಲ. ಆ ಕಲ್ಪಸಿಂಹನು ಕುರುಕ್ಷೇತ್ರವ ಯುದ್ಧಕ್ಕೆ ಹೋಗಿದ್ದಾಗ ಮೃತನಾಗಿ ಸ್ವರ್ಗಲೋಕವನ್ನೈದಿದನು. ಅಯ್ಯಾ ಶೌನಕನೇ ! ಇಲ್ಲಿಗೆ ಶುಭಕರವಾದ ಪ್ರಮರವಂಶವು ಕೊನೆಗೊಂಡಿತು.

೪೫ ಎಲೈ ವಿಪ್ರವರನೇ! ಈ ಪ್ರಮರವಂಶದಲ್ಲಿ ಇವನಾದನಂತರ ಕಳೆದುಳಿದ ಕ್ಷತ್ರಿಯರು ಅಸಂಖ್ಯಾತರಾಗಿ ಉಳಿದ ಸ್ತ್ರೀಯರು ಇವರಲ್ಲಿ ವರ್ಣಸಾಂಕರ್ಯವೇರ್ಪಟ್ಟಿತು.

**ವೈಶ್ಯವೃತ್ತಿಕರಾಃ ಸರ್ವೇ ಮ್ಲೇಚ್ಛತುಲ್ಯಾ ಮಹೀತಲೇ ।**
**ಇತಿ ತೇ ಕಥಿತಂ ವಿಪ್ರ ಕುಲಂ ದಕ್ಷಿಣಭೂಪತೇಃ ॥ ೪೬ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ಚತುರ್ಥಖಂಡೇ ಕಲಿಯುಗೀಯೇತಿಹಾಸಸಮುಚ್ಚಯೇ ಪ್ರಮರವಂಶವರ್ಣನಂ ನಾಮ ಪ್ರಥಮೋಽಧ್ಯಾಯಃ.**



---

೪೬. ಅನಂತರ ಅವರೆಲ್ಲರೂ ವೈಶ್ಯವೃತ್ತಿಯನ್ನಾಶ್ರಯಿಸಿ ಮ್ಲೇಚ್ಛರಿಗೆ ಸಮಾನರಾಗಿ ಜೀವಿಸತೊಡಗಿದರು. ಎಲೈ ಶೌನಕನೇ ! ಈರೀತಿ ದಕ್ಷಿಣದಿಕ್ಕಿನ ರಾಜರ ವಂಶಾವಳಿಯನ್ನು ನಿನಗೆ ತಿಳಿಸಿದೆನು. ಎಂದು ಸೂತರು ಶೌನಕನಿಗೆ ಹೇಳಿದರು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಪ್ರತಿಸರ್ಗಪರ್ವದ ನಾಲ್ಕನೆಯ ಖಂಡದಲ್ಲಿ ಕಲಿಯುಗದ ಇತಿಹಾಸಸಮುದಾಯದಲ್ಲಿ ಪ್ರಮರವಂಶವರ್ಣನೆಯೆಂಬ ಮೊದಲನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಪ್ರತಿಸರ್ಗಪರ್ವಣಿ ಚತುರ್ಥಖಂಡೇ
## ದ್ವಿತೀಯೋಽಧ್ಯಾಯಃ

॥ ಸೂತ ಉವಾಚ ॥

ವಯುಹಾನಿರ್ಮಹೀಪಾಲೋ ಮಧ್ಯದೇಶೇ ಸ್ವಕಂ ಪದಂ ।
ಗೃಹೀತ್ವಾ ಬ್ರಹ್ಮರಚಿತಮಜಮೇರಮವಾಸಯತ್ ॥ ೧ ॥

ಅಜಸ್ಯ ಬ್ರಹ್ಮಣೋ ಮಾ ಚ ಲಕ್ಷ್ಮೀಸ್ತತ್ರ ರಮಾ ಗತಾ ।
ತಯಾ ಚ ನಗರಂ ರಮ್ಯಮಜಮೇರಮಜಂ ಸ್ಮೃತಂ ॥ ೨ ॥

ದಶವರ್ಷಂ ಕೃತಂ ರಾಜ್ಯಂ ತೋಮರಸ್ತತ್ಸುತೋಽಭವತ್ ।
ಪಾರ್ಥಿವೈಃ ಪೂಜಯಾಮಾಸ ವರ್ಷಮಾತ್ರಂ ಮಹೇಶ್ವರಂ ॥ ೩ ॥

---

## ಎರಡನೆಯ ಅಧ್ಯಾಯ

೧. ಸೂತಮುನಿವರ್ಯನು ಹೇಳುತ್ತಾನೆ—ಮಧ್ಯದೇಶದಲ್ಲಿ ಬ್ರಹ್ಮನಿರ್ಮಿತವಾದ ಅಜಮೇರಿನಲ್ಲಿ ವಯುಹಾನಿಯೆಂಬ ಹೆಸರಿನ ರಾಜನು ರಾಜ್ಯಭಾರವನ್ನು ಮಾಡುತ್ತಾ ಇದ್ದನು.

೨. ಅಜನೆಂದರೆ ಬ್ರಹ್ಮ ಮಾ ಎಂದರೆ ಲಕ್ಷ್ಮಿ. ಇವರು ಅಲ್ಲಿ ನೆಲಸಿದ್ದುದರಿಂದ ಆ ಸುಂದರವಾದ ಆ ನಗರಕ್ಕೆ ಅಜಮೇರವೆಂಬ ಹೆಸರಾಯಿತೆಂದು ಉಕ್ತವಾಗಿದೆ.

೩. ಆ ವಯುಹಾನಿರಾಜನು ಹತ್ತುವರ್ಷಗಳ ಕಾಲ ರಾಜ್ಯಭಾರಮಾಡಿದನು. ಅವನಿಗೆ ತೋಮರನೆಂಬ ಮಗನು ಹುಟ್ಟಿದನು. ಆತನು ಒಂದುವರ್ಷಕಾಲ ಪರಮೇಶ್ವರನನ್ನು ಪಾರ್ಥಿವಲಿಂಗಪೂಜಾವಿಧಾನದಿಂದ ಆರಾಧಿಸಿದನು.

ಇಂದ್ರಪ್ರಸ್ಥಂ ದದೌ ತಸ್ಮೈ ಪ್ರಸನ್ನೋ ನಗರಂ ಶಿವಃ ।
ತದನ್ವಯೇ ಚ ಯೇ ಜಾತಾಸ್ತೋಮರಾಃ ಕ್ಷತ್ರಿಯಾಃ ಸ್ಮೃತಾಃ ॥ ೪ ॥

ತೋಮರಾವರಜಶ್ಚೈವ ಚಪ(ಯ)ಹಾನಿಸುತಃ ಶುಭಃ ।
ನಾಮ್ನಾ ಸಾಮಲದೇವಶ್ಚ ಪ್ರಶ್ರಿತೋऽಭೂನ್ಮಹೀತಲೇ ॥ ೫ ॥

ಸಪ್ತವರ್ಷಂ ಕೃತಂ ರಾಜ್ಯಂ ಮಹಾದೇವಸ್ತತೋऽಭವತ್ ।
ಪಿತುಸ್ತುಲ್ಯಂ ಕೃತಂ ರಾಜ್ಯಮಜಯಶ್ಚ ತತೋऽಭವತ್ ॥ ೬ ॥

ಪಿತುಸ್ತುಲ್ಯಂ ಕೃತಂ ರಾಜ್ಯಂ ವೀರಸಿಂಹಸ್ತತೋऽಭವತ್ ।
ಶತಾರ್ಧಾಬ್ದಂ ಕೃತಂ ರಾಜ್ಯಂ ತತೋ ಬಿಂದುಸುರೋऽಭವತ್ ॥ ೭ ॥

---

೪. ಈ ಆರಾಧನೆಯಿಂದ ಪ್ರಸನ್ನನಾದ ಪರಮೇಶ್ವರನು ಅವನಿಗೆ ಇಂದ್ರಪ್ರಸ್ಥ ನಗರವು ವಶವಾಗುವಂತೆ ಮಾಡಿದನು. ಅವನ ವಂಶದಲ್ಲಿ ಜನಿಸಿದವರಿಗೆ ತೋಮರ ವಂಶದ ಕ್ಷತ್ರಿಯರೆಂದು ರೂಢಿಯಾಯಿತು.

೫. ಆ ತೋಮರರಾಜನ ತಮ್ಮನಾದ ಚಯಹಾನಿಗೆ ಸಾಮಲವೇವನೆಂಬ ಶುಭಕರನಾದ ಸುತನು ಜನಿಸಿ ಲೋಕಪ್ರಸಿದ್ಧನಾಗಿದ್ದನು.

೬. ಆತನು ಏಳುವರ್ಷಕಾಲ ರಾಜ್ಯಭಾರ ಮಾಡಿದನು. ಅವನಿಗೆ ಮಹಾದೇವನೆಂಬ ಮಗನಾದನು. ಆ ಮಹಾದೇವನು ತಂದೆಯು ಆಳಿದಷ್ಟೇ ವರ್ಷಗಳಕಾಲ ರಾಜ್ಯವಾಳಿದನು. ಬಳಿಕ ಅವನ ಮಗನಾದ ಅಜಯನೆಂಬವನು ಪಟ್ಟಕ್ಕೆ ಬಂದು ತಂದೆ ಆಳಿದಷ್ಟು ವರ್ಷವೇ ರಾಜ್ಯವಾಳಿದನು.

೭. ಅನಂತರ ಅವನ ಮಗನಾದ ವೀರಸಿಂಹನು ಪಟ್ಟಕ್ಕೆ ಬಂದು ಐವತ್ತು ವರ್ಷಕಾಲ ರಾಜ್ಯಭಾರ ಮಾಡಿದನು. ಬಳಿಕ ಆತನ ಪುತ್ರನಾದ ಬಿಂದುಸುರನು ಪಟ್ಟಕ್ಕೆ ಬಂದನು.

**ಪಿತುರರ್ಧಂ ಕೃತಂ ರಾಜ್ಯಂ ಮಧ್ಯದೇಶೇ ಮಹಾತ್ಮನಾ ।**
**ತಸ್ಮಾಚ್ಚ ಮಿಥುನಂ ಜಾತಂ ವೀರಾ ವೀರವಿಹಾತ್ರಕಃ ॥ ೮ ॥**

**ವಿಕ್ರಮಾಯ ದದೌ ವೀರಾಂ ಪಿತಾ ವೇದವಿಧಾನತಃ ।**
**ಸ್ವಪುತ್ರಾಯ ಸ್ವಕಂ ರಾಜ್ಯಂ ಮಧ್ಯದೇಶಾಂತರಂ ಮುದಾ ॥ ೯ ॥**

**ಪಿತುಸ್ತುಲ್ಯಂ ಕೃತಂ ರಾಜ್ಯಂ ಮಾಣಿಕ್ಯಸ್ತತ್ಸುತೋಽಭವತ್ ।**
**ಶತಾರ್ಧಾಬ್ದಂ ಕೃತಂ ರಾಜ್ಯಂ ಮಹಾಸಿಂಹಸ್ತತೋಽಭವತ್ ॥ ೧೦ ॥**

**ಪಿತುಸ್ತುಲ್ಯಂ ಕೃತಂ ರಾಜ್ಯಂ ಚಂದ್ರಗುಪ್ತಸ್ತತೋಽಭವತ್ ।**
**ಪಿತುರರ್ಧಂ ಕೃತಂ ರಾಜ್ಯ ತತ್ಸುತಶ್ಚ ಪ್ರತಾಪವಾನ್ ॥ ೧೧ ॥**

---

೮. ಮಹಾತ್ಮನಾದ ಬಿಂದುಸುರನು ತನ್ನ ತಂದೆ ಆಳಿದ ಕಾಲದ ಅರ್ಧದಷ್ಟು ಕಾಲ ಎಂದರೆ ಇಪ್ಪತ್ತೈದು ವರ್ಷಗಳಕಾಲ ಮಧ್ಯದೇಶದಲ್ಲಿ ರಾಜ್ಯವಾಳಿದನು ಆತನಿಗೆ ವೀರೆಯೆಂಬ ಹೆಣ್ಣುಮಗಳೂ, ವೀರವಿಹಾತ್ರಕ ಎಂಬ ಒಬ್ಬ ಮಗನೂ ಅವಳಿಯಾಗಿ ಜನಿಸಿದರು.

೯. ತಂದೆಯಾದ ಬಿಂದುಸುರನು ತನ್ನ ಪುತ್ರಿಯಾದ ವೀರಾದೇವಿಯನ್ನು ವಿಕ್ರಮರಾಜನಿಗೆ ಕೊಟ್ಟು ವೇದೋಕ್ತವಿಧಿಪ್ರಕಾರ ವಿವಾಹ ಮಾಡಿದನು. ತನ್ನ ಮಗನಿಗೆ ತನ್ನ ಮಧ್ಯದೇಶಾಂತರ ರಾಜ್ಯವನ್ನು ಸಂತೋಷದಿಂದ ವಹಿಸಿದನು.

೧೦. ಆ ವೀರವಿಹಾತ್ರಕನೂ ಸಹ ತನ್ನ ತಂದೆಯು ಆಳ್ವಿಕೆಗೆ ಸಮಾನವಾಗುವಂತೆ ರಾಜ್ಯಭಾರ ಮಾಡುತ್ತಿರುವಲ್ಲಿ ಆತನಿಗೆ ಮಾಣಿಕ್ಯನೆಂಬ ಪುತ್ರನು ಜನಿಸಿದನು. ಆ ಮಾಣಿಕ್ಯಸಿಂಹನೂ ಪಟ್ಟಕ್ಕೆ ಬಂದು ಐವತ್ತುವರ್ಷಗಳಕಾಲ ರಾಜ್ಯವನ್ನು ಆಳಿದನು. ಬಳಿಕ ಅವನ ಮಗ ಮಹಾಸಿಂಹನೆಂಬುವನು ಪಟ್ಟಾಭಿಷಿಕ್ತನಾದನು

೧೧. ಆತನೂ ತನ್ನ ತಂದೆಯು ಆಳಿದಷ್ಟುಕಾಲ ಚೆನ್ನಾಗಿ ಪ್ರಜಾಸಂರಕ್ಷಣೆ ಮಾಡಿದನು. ಬಳಿಕ ಅವನ ಮಗ ಚಂದ್ರಗುಪ್ತನೆಂಬವನು ರಾಜನಾದನು. ಆ ಚಂದ್ರಗುಪ್ತನೂ ತಂದೆಯು ಆಳಿದಷ್ಟೇಕಾಲ ಪ್ರಜಾಪಾಲನೆ ಮಾಡಿದನು. ಅವನಿಗೆ ಪ್ರತಾಪವಾನ್ ಎಂಬ ಪುತ್ರನುದಯಿಸಿದನು.

**ಪಿತುಸ್ತುಲ್ಯಂ ಕೃತಂ ರಾಜ್ಯಂ ಮೋಹನಸ್ತತ್ಸುತೋಽಭವತ್ ।**
**ತ್ರಿಂಶದಬ್ದಂ ಕೃತಂ ರಾಜ್ಯಂ ಶ್ವೇತರಾಯಸ್ತತೋಽಭವತ್ ॥ ೧೨ ॥**

**ಪಿತುಸ್ತುಲ್ಯಂ ಕೃತಂ ರಾಜ್ಯಂ ನಾಗವಾಹಸ್ತತೋಽಭವತ್ ।**
**ಪಿತುಸ್ತುಲ್ಯಂ ಕೃತಂ ರಾಜ್ಯಂ ಲೋಹಧಾರಸ್ತತೋಽಭವತ್ ॥ ೧೩ ॥**

**ಪಿತುಸ್ತುಲ್ಯಂ ಕೃತಂ ರಾಜ್ಯಂ ವೀರಸಿಂಹಸ್ತತೋಽಭವತ್ ।**
**ಪಿತುಸ್ತುಲ್ಯಂ ಕೃತಂ ರಾಜ್ಯಂ ವಿಬುಧಸ್ತತ್ಸುತೋಽಭವತ್ ॥ ೧೪ ॥**

**ಶತಾರ್ಧಾಬ್ದಂ ಕೃತಂ ರಾಜ್ಯಂ ಚಂದ್ರರಾಯಸ್ತತೋಽಭವತ್ ।**
**ಪಿತುಸ್ತುಲ್ಯಂ ಕೃತಂ ರಾಜ್ಯಂ ತತೋ ಹರಿಹರೋಽಭವತ್ ॥ ೧೫ ॥**

---

೧೨. ಆತನೂ ತಂದೆಯು ಆಳಿದಷ್ಟುಕಾಲ ರಾಜ್ಯಸಂರಕ್ಷಣೆ ಮಾಡಿದನು. ಬಳಿಕ ಅವನ ಸುತನಾದ ಮೋಹನನೆಂಬವನು ದೊರೆಯಾದನು. ಆ ಮೋಹನನು ಮೂವತ್ತುವರ್ಷಕಾಲ ರಾಜ್ಯವಾಳಿದನು. ಬಳಿಕ ಅವನ ಮಗನಾದ ಶ್ವೇತರಾಯನು ಪಟ್ಟಕ್ಕೆ ಬಂದನು.

೧೩. ಆ ಶ್ವೇತರಾಯನು ತಂದೆಯು ಆಳಿದಷ್ಟು ವರ್ಷಕಾಲ ರಾಜ್ಯಭಾರ ಮಾಡಿದನು. ಬಳಿಕ ಅವನ ಮಗನಾದ ನಾಗವಾಹನೆಂಬವನು ಪಟ್ಟಕ್ಕೆ ಬಂದು ತಂದೆ ಆಳಿದಷ್ಟು ವರ್ಷವೇ ರಾಜ್ಯವಾಳುತ್ತಾ ಇರಲು, ಬಳಿಕ ಆತನ ಪುತ್ರ ಲೋಹಧಾರ ನೆಂಬವನು ರಾಜ್ಯಕ್ಕೆ ಬಂದನು.

೧೪. ಆ ಲೋಹಧಾರನೂ ತನ್ನ ತಂದೆಯು ಆಳಿದಷ್ಟೇ ವರ್ಷಗಳು ಪ್ರಜಾ ಸಂರಕ್ಷಣೆ ಮಾಡಿದನು. ಬಳಿಕ ವೀರಸಿಂಹನೆಂಬವನು ರಾಜ್ಯಾಭಿಷಿಕ್ತನಾದನು. ಆತನ ರಾಜ್ಯಭಾರವೂ, ಆತನ ತಂದೆಯ ಆಳ್ವಿಕೆಯಂತೆಯೇ ವಿಹಿತವಾಗಿದ್ದಿತು. ಆತನಿಗೆ ವಿಬುಧನೆಂಬ ಪುತ್ರನಾದನು.

೧೫. ಆ ವಿಬುಧನು ಪ್ರಖ್ಯಾತನಾಗಿ ಐವತ್ತುವರ್ಷಕಾಲ ರಾಜ್ಯಸಂರಕ್ಷಣೆ ಮಾಡುತ್ತಿದ್ದನು ಬಳಿಕ ಅವನ ಪುತ್ರನಾದ ಚಂದ್ರರಾಯನೆಂಬವನು ರಾಜ್ಯಕ್ಕೆ ಬಂದನು. ಆ ಚಂದ್ರರಾಯನು ತಂದೆಯು ಆಳಿದಷ್ಟು ವರ್ಷಕಾಲ ರಾಜ್ಯವಾಳಿದನು. ಅನಂತರ ಹರಿಹರನೆಂಬವನು ಪಟ್ಟಾಭಿಷಿಕ್ತನಾದನು.

**ಪಿತುಸ್ತುಲ್ಯಂ ಕೃತಂ ರಾಜ್ಯಂ ವಸಂತಸ್ತಸ್ಯ ಚಾತ್ಮಜಃ ।**
**ಪಿತುಸ್ತುಲ್ಯಂ ಕೃತಂ ರಾಜ್ಯಂ ಬಲಾಂಗಸ್ತನಯೋಽಭವತ್ ॥ ೧೬ ॥**

**ಪಿತುಸ್ತುಲ್ಯಂ ಕೃತಂ ರಾಜ್ಯಂ ಪ್ರಮಥಸ್ತತ್ಸುತೋಽಭವತ್ ।**
**ಪಿತುಸ್ತುಲ್ಯಂ ಕೃತಂ ರಾಜ್ಯಮಂಗರಾಯಸ್ತತೋಽಭವತ್ ॥ ೧೭ ॥**

**ಪಿತುಸ್ತುಲ್ಯಂ ಕೃತಂ ರಾಜ್ಯಂ ವಿಶಾಲಸ್ತಸ್ಯ ಚಾತ್ಮಜಃ ।**
**ಪಿತುಸ್ತುಲ್ಯಂ ಕೃತಂ ರಾಜ್ಯಂ ಶಾರ್ಙ್ಗದೇವಸ್ತತೋಽಭವತ್ ॥ ೧೮ ॥**

**ಪಿತುಸ್ತುಲ್ಯಂ ಕೃತಂ ರಾಜ್ಯಂ ಮಂತ್ರದೇವಸ್ತತೋಽಭವತ್ ।**
**ಪಿತುಸ್ತುಲ್ಯಂ ಕೃತಂ ರಾಜ್ಯಂ ಜಯಸಿಂಹಸ್ತತೋಽಭವತ್ ॥ ೧೯ ॥**

---

೧೬. ಆತನೂ ತಂದೆ ಆಳಿದಷ್ಟು ವರ್ಷಕಾಲ ವಿಚಕ್ಷಣೆಯಿಂದ ರಾಜ್ಯಭಾರ ಮಾಡುತ್ತಿರಲು ಆತನಿಗೆ ವಸಂತನೆಂಬ ಪುತ್ರನು ಜನಿಸಿದನು. ಆತನೂ ಪ್ರಾಪ್ತ ವಯಸ್ಕನಾಗಿ ಪಟ್ಟಕ್ಕೆ ಬಂದು, ತಂದೆ ಆಳಿದಷ್ಟು ವರ್ಷಕಾಲ ಚೆನ್ನಾಗಿ ರಾಜ್ಯವಾಳಿದನು. ಆತನಿಗೆ ಬಲಾಂಗನೆಂಬ ತನಯನು ಹುಟ್ಟಿದನು.

೧೭. ಬಲಾಂಗನು ಪಟ್ಟಕ್ಕೆ ಬಂದು ತನ್ನ ತಂದೆ ಆಳಿದಷ್ಟೇ ವರ್ಷಕಾಲ ರಾಜ್ಯಭಾರ ಮಾಡುತ್ತಿರಲು ಆವನಿಗೆ ಪ್ರಮಥನೆಂಬ ಪುತ್ರನು ಉತ್ಪನ್ನನಾದನು. ಆ ಪ್ರಮಥನು ಪಟ್ಟಾಭಿಷಿಕ್ತನಾಗಿ ತನ್ನ ತಂದೆಯ ರಾಜ್ಯಭಾರಕ್ಕೆ ಸಮನೆನಿಸುವಂತೆ ಅಷ್ಟೇಕಾಲ ರಾಜ್ಯವಾಳಿದನು. ಆತನಿಗೆ ಅಂಗರಾಯನೆಂಬ ಮಗನು ಹುಟ್ಟಿದನು.

೧೮. ಸರಿಯಾದ ವಯಸ್ಸು ಬಂದಮೇಲೆ ಈ ಅಂಗರಾಯನು ಪಟ್ಟಾಭಿಷಿಕ್ತನಾಗಿ ತಂದೆ ಆಳಿದಷ್ಟುವರ್ಷ ರಾಜ್ಯಭಾರ ಮಾಡಿದನು. ಆತನಿಗೆ ವಿಶಾಲನೆಂಬ ಪುತ್ರನು ಜನಿಸಿದನು. ಅವನೂ ತಂದೆಯ ಆಳ್ವಿಕೆಗೆ ಸಮನೆನಿಸುವಂತೆ ಅಷ್ಟೇವರ್ಷ ಆಳಿದನು. ಆತನಿಗೆ ಶಾರ್ಙ್ಗದೇವನೆಂಬ ಪುತ್ರನು ಜನಿಸಿದನು.

೧೯. ಅವನು ಪಟ್ಟಕ್ಕೆ ಬಂದು ತಂದೆ ಆಳಿದಷ್ಟು ವರ್ಷಕಾಲ ರಾಜ್ಯಭಾರ ಮಾಡಿದನು. ಬಳಿಕ ಮಂತ್ರದೇವನೆಂಬ ಅವನ ಸುತನು ಪಟ್ಟಕ್ಕೇರಿ ಬಂದನು. ಆತನೂ ತನ್ನ ತಂದೆ ಆಳಿದಷ್ಟು ವರ್ಷಕಾಲವೇ ಪ್ರಜಾಪಾಲನ ಮಾಡುತ್ತಿದ್ದನು. ಆತನಿಗೆ ಜಯಸಿಂಹನೆಂಬ ಪುತ್ರನು ಜನಿಸಿದನು.

ಆರ್ಯದೇಶಾಶ್ಚ ಸಕಲಾ ಜಿತಾಸ್ತೇನ ಮಹಾತ್ಮನಾ ।
ತದ್ಧನೈಃ ಕಾರಯಾಮಾಸ ಯಜ್ಞಂ ಬಹುಫಲಪ್ರದಂ ॥ ೨೦ ॥

ತತಶ್ಚಾನಂದದೇವೋ ಹಿ ಜಾತಃ ಪುತ್ರಃ ಶುಭಾನನಃ ।
ಶತಾರ್ಧಾಬ್ದಂ ಕೃತಂ ರಾಜ್ಯಂ ಜಯಸಿಂಹೇನ ಧೀಮತಾ ॥ ೨೧ ॥

ತತ್ಸುತೇನ ಪಿತುಸ್ತುಲ್ಯಂ ಕೃತಂ ರಾಜ್ಯಂ ಮಹೀತಲೇ ।
ಸೋಮೇಶ್ವರಸ್ತಸ್ಯ ಸುತೋ ಮಹಾಶೂರೋ ಬಭೂವ ಹ ॥ ೨೨ ॥

ಅನಂಗಪಾಲಸ್ಯ ಸುತಾಂ ಜ್ಯೇಷ್ಠಾಂ ವೈ ಕೀರ್ತಿಮಾಲಿನೀಂ ।
ತಾಮುದ್ವಾಹ್ಯ ವಿಧಾನೇನ ತಸ್ಯಾಂ ಪುತ್ರಾನಜೀಜನತ್ ॥ ೨೩ ॥

ಧುಂಧುಕಾರಶ್ಚ ವೈ ಜ್ಯೇಷ್ಠೋ ಮಥುರಾರಾಷ್ಟ್ರಸಂಸ್ಥಿತಃ ।
ಮಧ್ಯಃ ಕುಮಾರಾಖ್ಯಸುತಃ ಪಿತುಃ ಪದಸಮಾಸ್ಥಿತಃ ॥ ೨೪ ॥

---

೨೦. ಮಹಾತ್ಮನಾದ ಆ ಜಯಸಿಂಹನು ಭರತಖಂಡದ ಆರ್ಯದೇಶಗಳೆಲ್ಲವನ್ನೂ ಜಯಿಸಿದನು. ಹೀಗೆ ದಿಗ್ವಿಜಯಮಾಡಿ ಸಂಪಾದಿಸಿದ ಧನದಿಂದ ಮಹಾಫಲಪ್ರದವಾದ ದೊಡ್ಡ ಯಜ್ಞವನ್ನು ಮಾಡಿಸಿದನು.

೨೧. ಮಂಗಳಸ್ವರೂಪನಾದ ಆನಂದದೇವನೆಂಬವನು ಇವನ ಪುತ್ರನು. ಅವನು ಪಟ್ಟಕ್ಕೆ ಬಂದು ಐವತ್ತುವರ್ಷಕಾಲ ರಾಜ್ಯವಾಳಿದನು.

೨೨. ಆತನ ಪುತ್ರನೂ ಬುದ್ಧಿಶಾಲಿಯೂ ಆದ ಜಯಸಿಂಹನು ತಂದೆಯ ಆಳ್ವಿಕೆಗೆ ಸಮನಾಗಿ ಐವತ್ತುವರ್ಷಗಳಕಾಲ ಲೋಕವಿಖ್ಯಾತನಾಗಿ ರಾಜ್ಯವನ್ನು ಆಳಿದನು. ಇವನಿಗೆ ಸೋಮೇಶ್ವರನೆಂಬ ಮಹಾಶೂರನಾದ ಒಬ್ಬ ಕುಮಾರನು ಜನಿಸಿಸಿದನು.

೨೩. ಆ ಕುಮಾರನು ಅನಂಗಪಾಲನ ಹಿರಿಯ ಮಗಳಾದ ಕೀರ್ತಿಮಾಲಿನಿಯನ್ನು ಶಾಸ್ತ್ರೋಕ್ತವಾಗಿ ಪಾಣಿಗ್ರಹಣ ಮಾಡಿಕೊಂಡನು. ಅವಳಲ್ಲಿ ಹಲವರು ಪುತ್ರರು ಜನಿಸಿದರು.

೨೪. ಮಥುರಾಷ್ಟ್ರದಲ್ಲಿ ನೆಲಸಿದ್ದ ಧುಂಧುಕಾರನೆಂಬವನೇ ಆ ಕುಮಾರರಲ್ಲಿ ಹಿರಿಯವನು. ಎರಡನೆಯವನು ಎಂದರೆ ಮಧ್ಯದವನು ಕುಮಾರನೆಂಬ ಹೆಸರಿನಿಂದ ಪ್ರಸಿದ್ಧಿಹೊಂದಿ ತಂದೆಯ ಸಮೀಪದಲ್ಲಿಯೇ ಇರುತ್ತಿದನು.

ಮಹೀರಾಜಸ್ತು ಬಲವಾಂಸ್ತ್ವತೀಯೋ ದೇಹಲೀಪತಿಃ ।
ಸಹೋದ್ದೀನಸ್ಯ ನೃಪತೇರ್ವಶಮಾಪ್ಯ ಮೃತಿಂ ಗತಃ ॥ ೨೫ ॥

ಚಪಹಾನೇಶ್ಚ ಸ ಕುಲಂ ಛಾಯಯಿತ್ವಾ ದಿವಂ ಯಯೌ ।
ತಸ್ಯ ವಂಶೇ ತು ರಾಜನ್ಯಾಸ್ತೇಷಾಂ ಪತ್ನ್ಯಃ ಪಿಶಾಚಕೈಃ ॥ ೨೬ ॥

ಮ್ಲೇಚ್ಛೈಶ್ಚ ಭುಕ್ತವತ್ಯಸ್ತಾ ಬಭೂವುರ್ವರ್ಣಸಂಕರಾಃ ।
ನ ವೈ ಆರ್ಯಾ ನ ವೈ ಮ್ಲೇಚ್ಛಾ ಜಟ್ವಾ ಜಾತ್ಯಾ ಚ ಮೇಹನಾಃ ॥ ೨೭ ॥

ಮೇಹನಾ ಮ್ಲೇಚ್ಛಜಾತೀಯಾ ಜಟ್ವಾ ಆರ್ಯಮಯಾಃ ಸ್ಮೃತಾಃ ।
ಕ್ವಚಿತ್ಕ್ವಚಿಚ್ಚ ಯೇ ಶೇಷಾಃ ಕ್ಷತ್ರಿಯಾಶ್ಚಪಹಾನಿಜಾಃ ॥ ೨೮ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ಚತುರ್ಥಖಂಡೇ ಕಲಿಯುಗೀಯೇತಿಹಾಸಸಮುಚ್ಚಯೇ ಪ್ರಮರವಂಶವರ್ಣನಂ ನಾಮ ದ್ವಿತೀಯೋಽಧ್ಯಾಯಃ.

---

೨೫ ಮೂರನೆಯವನಾದ ಪೃಥ್ವೀರಾಜನು ಮಹಾಬಲಶಾಲಿಯೆನಿಸಿ ದೆಹಲೀ ಪಟ್ಟಣಕ್ಕೆ ಅಧಿಪತಿಯಾದನು. ಕೊನೆಯಲ್ಲಿ ಈತನು ಸಹೋದ್ದೀನನೆಂಬ ಮ್ಲೇಚ್ಛ ರಾಜನಿಗೆ ಸೋತು ಮರಣಹೊಂದಿದನು.

೨೬-೨೭. ಈ ಪೃಥ್ವೀರಾಜನು ಸ್ವರ್ಗಸ್ಥನಾಗಲಾಗಿ (ಚಹ್ವಾನ) ಚಪಹಾನಿ ವಂಶವು ನಿರ್ಮೂಲವಾಯಿತು. ಆ ವಂಶದ ಕ್ಷತ್ರಿಯರೆಲ್ಲಾ ಮೃತರಾಗಲು ಅವರ ಪತ್ನಿಯರು ಪಿಶಾಚಸ್ವರೂಪರಾದ ಮ್ಲೇಚ್ಛರಿಂದ ಭೋಗಿಸಲ್ಪಟ್ಟರು. ಇವರಿಂದ ವರ್ಣಸಾಂಕರ್ಯವುಂಟಾಯಿತು. ಆದುದರಿಂದ ಶುದ್ಧ ಆರ್ಯವಂಶದವರೂ ಶುದ್ಧ ಮ್ಲೇಚ್ಛವಂಶದವರೂ ಸಹ ಇಲ್ಲದಂತಾಗಿ ಜಟ್ವಾ ಮತ್ತು ಮೇಹನ ಎಂಬ ಎರಡು ಜಾತಿಗಳು ಏರ್ಪಟ್ಟವು.

೨೮. ಮ್ಲೇಚ್ಛರ ಅಂಶವೇ ಹೆಚ್ಚಾಗಿರುವ ಜಾತಿಗೆ ಮೇಹನ ಎಂದೂ, ಆರ್ಯಾಂಶವೇ ಹೆಚ್ಚಾಗಿರುವ ಜಾತಿಗೆ ಜಟ್ವಾ ಎಂದೂ ಹೆಸರು ಬಂದಿತು. ಕೆಲಕೆಲವು ಕಡೆಗಳಲ್ಲಿ ಕಳೆದುಳಿದ ಪ್ರಮರವಂಶದ ಕ್ಷತ್ರಿಯರೂ ಸಹ ನೆಲಸಿದ್ದರು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಪ್ರತಿಸರ್ಗಪರ್ವದ ಚತುರ್ಥ ಖಂಡದಲ್ಲಿ ಎರಡನೆಯ ಅಧ್ಯಾಯ ಮುಗಿದುದು.

॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಪ್ರತಿಸರ್ಗಪರ್ವಣಿ ಚತುರ್ಥಖಂಡೇ
## ತೃತೀಯೋಽಧ್ಯಾಯಃ

॥ ಸೂತ ಉವಾಚ ॥

ಶುಕ್ಲವಂಶಂ ಪ್ರವಕ್ಷ್ಯಾಮಿ ಶೃಣು ವಿಪ್ರವರಾದಿತಃ ।
ಯದಾ ಕೃಷ್ಣಃ ಸ್ವಯಂ ಬ್ರಹ್ಮ ತ್ಯಕ್ತ್ವಾ ಭೂಮಿಂ ಸ್ವಕಂ ಪದಂ ॥ ೧ ॥

ದಿವ್ಯಂ ವೃದಾಂವನಂ ರಮ್ಯಂ ಪ್ರಯಯೌ ಭೂತಲೇ ತದಾ ।
ಕಲೇರಾಗಮನಂ ಜ್ಞಾತ್ವಾ ಮ್ಲೇಚ್ಛಪಾ ದ್ವೀಪಮಧ್ಯಗೇ ॥ ೨ ॥

ಸ್ಥಿತಾ ದ್ವೀಪೇಷು ವೈ ನಾನಾ ಮನುಜಾ ವೇದತತ್ಪರಾಃ ।
ಕಲಿನಾಮಿತ್ರಧರ್ಮೇಣ ದೂಷಿತಾಸ್ತೇ ಬಭೂವಿರೇ ॥ ೩ ॥

---

## ಮೂರನೆಯ ಅಧ್ಯಾಯ

೧-೨. ಸೂತಮುನಿವರ್ಯನು ಹೇಳುತ್ತಾನೆ.—ಎಲೈ ಬ್ರಾಹ್ಮಣಶ್ರೇಷ್ಠನೇ ! ಶುಕ್ಲವಂಶವನ್ನು ಪ್ರಾರಂಭದಿಂದ ಕ್ರಮವಾಗಿ ವಿವರಿಸುವೆನು ; ಕೇಳು. ಪರಬ್ರಹ್ಮ ಸ್ವರೂಪನಾದ ಕೃಷ್ಣನು ಭೂಲೋಕಕ್ಕೆ ಕಲಿಯು ಆಗಮಿಸುವುದನ್ನು ತಿಳಿದು ಭೂಲೋಕದಲ್ಲಿ ತನ್ನ ಮಹಿಮಾಸ್ಪದವಾದ ನಿಜ ನಿವಾಸವೆನಿಸಿದ ಸುಂದರವಾದ ಬೃಂದಾವನವನ್ನು ಬಿಟ್ಟು ಹೊರಡಲನುವಾದನು. ಹಾಗೆ ಹೊರಟು ದ್ವೀಪಗಳ ಮಧ್ಯಪ್ರದೇಶಕ್ಕೆ ಬಂದನು.

೩. ಅಲ್ಲದೆ ವೇದಪಾರಂಗತರಾದ ಅನೇಕಜನ ಮಹಾತ್ಮರು ಅದೇ ದ್ವೀಪಗಳಲ್ಲಿ ಬಂದು ನೆಲಸಿದರು. ಆದರೆ ಕಲಿಪುರುಷನು ತನ್ನ ಮಿತ್ರರಾದ ಮ್ಲೇಚ್ಛರ ಧರ್ಮ ಪ್ರಕಾರ ವೇದಪಾರಂಗತರಾದ ಬ್ರಾಹ್ಮಣರನ್ನು ದೂಷಿತರೆನಿಸುವಂತೆ ಮಾಡಿದನು.

ಅಷ್ಟಷಷ್ಟಿಸಹಸ್ರಾಣಾಂ ವರ್ಷಾಣಾಂ ಮುನಿಸತ್ತಮ ।
ಅದ್ಯ ಪ್ರಭೃತಿ ವೈ ಜಾತಃ ಕಾಲಃ ಕಲಿಸಮಾಗಮೇ ॥ ೪ ॥

ಷಷ್ಟಿವರ್ಷಸಹಸ್ರಾಣಿ ದ್ವೀಪರಾಜ್ಯಮಚೀಕರತ್ ।
ಸ ಕಲಿರ್ಮ್ಲೇಚ್ಛಯಾ ಸಾರ್ಧಂ ಸೂರ್ಯಪೂಜನತತ್ಪರಃ ॥ ೫ ॥

ತತ್ಪಶ್ಚಾದ್ಭಾರತೇ ವರ್ಷೇ ಮ್ಲೇಚ್ಛಯಾ ಕಲಿರಾಯಯೌ ।
ದೃಷ್ಟ್ವಾ ತದ್ಭಾರತಂ ವರ್ಷಂ ಲೋಕಪಾಲೈಶ್ಚ ಪಾಲಿತಂ ॥ ೬ ॥

ಭಯಭೀತಸ್ತ್ವರಾವಿಷ್ಟೋ ಗಂಧರ್ವಾಣಾಂ ಯಶಸ್ಕರಃ ।
ಸ ಕಲಿಃ ಸೂರ್ಯಮಾರಾಧ್ಯ ಸಮಾಧಿಸ್ಥೋ ಬಭೂವ ಹ ॥ ೭ ॥

ತತೋ ವರ್ಷಶತಾಬ್ದಾಂತೇ ಸಂತುಷ್ಟೋ ರವಿರಾಗತಃ ।
ಸೋಽಂಶುಭಿರ್ಲೋಕಮಾತಪ್ಯ ಮಹಾವೃಷ್ಟಿಮಕಾರಯತ್ ॥ ೮ ॥

---

೪. ಎಲೈ ಶೌನಕ ಮುನಿಶ್ರೇಷ್ಠನೇ! ಅದು ಮೊದಲುಗೊಂಡು ಇಂದಿಗೆ ಕಲಿಯ ಸಮಾಗಮವಾಗಿ ಅರವತ್ತೆಂಟುಸಾವಿರ ವರ್ಷಗಳಾದುವು.

೫. ಕಲಿಪುರುಷನು ತನ್ನ ಪತ್ನಿಯಾದ ಮ್ಲೇಚ್ಛೆಯೊಡನೆ ಸೂರ್ಯಪೂಜಾ ತತ್ಪರನಾಗಿ ಅರವತ್ತುಸಾವಿರ ವರ್ಷಕಾಲ ದ್ವೀಪದಲ್ಲೇ ರಾಜ್ಯಭಾರ ಮಾಡಿದನು.

೬. ಅನಂತರ ಕಲಿಯು ತನ್ನ ಪತ್ನಿಯಾದ ಮ್ಲೇಚ್ಛೆಯೊಡನೆ ಭಾರತವರ್ಷಕ್ಕೆ ಬಂದು ಇಲ್ಲಿ ಲೋಕಪಾಲಕರಿಂದ ಈ ಭಾರತವು ಸುರಕ್ಷಿತವಾಗಿರುವುದನ್ನು ನೋಡಿದನು.

೭. ಗಂಧರ್ವರಿಗೆ ಕೀರ್ತಿಯನ್ನುಂಟುಮಾಡುವವನಾದ ಆ ಕಲಿಪುರುಷನು ಲೋಕಪಾಲಕರಿಂದ ರಕ್ಷಿತವಾದ ಆ ಭರತಖಂಡವನ್ನು ನೋಡಿ, ಧರ್ಮಮಾರ್ಗ ತತ್ಪರವಾದ ಈ ದೇಶದಲ್ಲಿ ನೆಲಸಲು ತನಗೆ ಅವಕಾಶ ದೊರೆಯಲಾರದೆಂದು ಹೆದರಿ, ಜಾಗ್ರತೆಯಾಗಿ ಅಲ್ಲಿಂದ ಬಂದು ಸೂರ್ಯನನ್ನು ಪೂಜಿಸಿ ಧ್ಯಾನಮಗ್ನನಾದನು.

೮. ಹೀಗೆ ಒಂದುನೂರು ವರ್ಷಕಾಲ ಕಲಿಪುರುಷನು ಸಮಾಧಿಸ್ಥನಾಗಿ ಧ್ಯಾನಿಸಲು ಸೂರ್ಯನು ಸಂತುಷ್ಟನಾಗಿ ಬಂದು, ತನ್ನ ಕಿರಣಗಳಿಂದ ಪ್ರಪಂಚವನ್ನೆಲ್ಲಾ ಚೆನ್ನಾಗಿ ಕಾಯಿಸಿ ತಾಪಪಡಿಸಿ ಮಹಾವೃಷ್ಟಿಯಾಗುವಂತೆ ಮಾಡಿದನು.

ಚತುರ್ವರ್ಷಸಹಸ್ರಾಣಿ ಚತುರ್ವರ್ಷಶತಾನಿ ಚ ।
ವ್ಯತೀತಾನಿ ಮುನಿಶ್ರೇಷ್ಠ ಚಾದ್ಯಪ್ರಭೃತಿ ಸಂಲಪೇ ॥ ೯ ॥

ಸಂಪನ್ನಂ ಭಾರತಂ ವರ್ಷಂ ತದಾ ಜಾತಂ ಸಮಂತತಃ ।
ನ್ಯೂಹಾಖ್ಯೋ ಯವನೋ ನಾಮ ತೇನ ವೈ ಪೂರಿತಂ ಜಗತ್ ॥ ೧೦ ॥

ಸಹಸ್ರಾಬ್ದಕಲೌ ಪ್ರಾಪ್ತೇ ಮಹೇಂದ್ರೋ ದೇವರಾಟ್ ಸ್ವಯಂ ।
ಕಾಶ್ಯಪಂ ಪ್ರೇಷಯಾಮಾಸ ಬ್ರಹ್ಮಾವರ್ತೇ ಮಹೋತ್ತಮೇ ॥ ೧೧ ॥

ಆರ್ಯಾವತೀ ದೇವಶಕ್ತಿಸ್ತತ್ಕರಂ ಚಾಗ್ರಹೀನ್ಮುದಾ ।
ದಶಪುತ್ರಾನ್ ಸಮುತ್ಪಾದ್ಯ ಸ ದ್ವಿಜೋ ಮಿಶ್ರಮಾಗಮತ್ ॥ ೧೨ ॥

ಮಿಶ್ರದೇಶೋದ್ಭವಾನ್‌ಮ್ಲೇಚ್ಛಾನ್ವಶೀಕೃತ್ಯಾಯುತಂ ಮುದಾ ।
ಸ್ವದೇಶಂ ಪುನರಾಗತ್ಯ ಶಿಷ್ಯಾಂಸ್ತಾನ್ಸ ಚಕಾರ ಹ ॥ ೧೩ ॥

---

೯. ಅಯ್ಯಾ ಮುನಿಶ್ರೇಷ್ಠನೇ ! ಇದು ನಡೆದು ನಾಲ್ಕುಸಾವಿರದ ನಾನೂರು ವರ್ಷಗಳು ಕಳೆದುವು. ಅಲ್ಲಿಂದ ಮುಂದೆ ನಡೆದ ವೃತ್ತಾಂತವನ್ನು ತಿಳಿಸುವೆನು ಕೇಳು.

೧೦ ಭಾರತವರ್ಷವು ಆಗ ಎಲ್ಲ ಕಡೆಯಲ್ಲೂ ಸಂಪದ್ಯುಕ್ತವಾಗಿದ್ದಿತು. ಆ ಸಮಯದಲ್ಲಿ ನ್ಯೂಹನೆಂಬ ಯವನನು ಜಗತ್ತನ್ನು ಪಾಲಿಸುತ್ತಿದ್ದನು.

೧೧. ಕಲಿಯುಗದಲ್ಲಿ ಹೀಗೆ ಸಾವಿರವರ್ಷ ಕಳೆಯಲು, ದೇವರಾಜನಾದ ಮಹೇಂದ್ರನು ಶ್ರೇಷ್ಠವಾದ ಬ್ರಹ್ಮಾವರ್ತಕ್ಕೆ ಕಾಶ್ಯಪನನ್ನು ಕಳುಹಿಸಿದನು.

೧೨. ದೇವಶಕ್ತಿಯಾದ ಆರ್ಯಾವತಿಯೆಂಬುವಳು ಆ ಕಾಶ್ಯಪನ ಪಾಣಿಗ್ರಹಣವನ್ನು ಮಾಡಿಕೊಂಡಳು. ಬಳಿಕ ಈ ದಂಪತಿಗಳಿಗೆ ಹತ್ತುಜನ ಪುತ್ರರು ಜನಿಸಿದರು. ಆಮೇಲೆ ಆ ಕಾಶ್ಯಪ ಬ್ರಾಹ್ಮಣನು ಮಿಶ್ರ (ಈಗಿನ ಈಜಿಪ್ಟ್) ದೇಶಕ್ಕೆ ತೆರಳಿದನು.

೧೩. ಅನಂತರದಲ್ಲಿ ಆ ಮಿಶ್ರದೇಶದ ಹತ್ತುಸಾವಿರ ಮ್ಲೇಚ್ಛರನ್ನು ತನ್ನ ಆಜ್ಞಾಧಾರಕರಾಗುವಂತೆ ವಶಪಡಿಸಿಕೊಂಡು ಸಂತೋಷದಿಂದ ತನ್ನ ದೇಶಕ್ಕೆ ಹಿಂದಿರುಗಿ ಬಂದು ಅವರೆಲ್ಲರನ್ನೂ ತನ್ನ ಶಿಷ್ಯರನ್ನಾಗಿ ಮಾಡಿಕೊಂಡನು.

ನಷ್ಟಾಯಾಂ ಸಪ್ತಪುರ್ಯಾಂ ಚ ಬ್ರಹ್ಮಾವರ್ತಂ ಮಹೋತ್ತಮಂ ।
ಸರಸ್ವತೀದೃಷದ್ವತ್ಯೋರ್ಮಧ್ಯಗಂ ತತ್ರ ಚಾವಸತ್ ॥ ೧೪ ॥

ಸ್ವಪುತ್ರಂ ಶುಕ್ಲಮಾಹೂಯ ದ್ವಿಜಶ್ರೇಷ್ಠಂ ತಪೋಧನಂ ।
ಆಜ್ಞಾಪ್ಯ ರೈವತಂ ಶೃಂಗಂ ತಪಸೇ ತು ಪುನಃ ಸ್ವಯಂ ॥ ೧೫ ॥

ನವ ಪುತ್ರಾಂಸ್ತಥಾ ಶಿಷ್ಯಾನ್ಮನುಧರ್ಮಂ ಸನಾತನಂ ।
ಶ್ರಾವಯಾಮಾಸ ಧರ್ಮಾತ್ಮಾ ಸ ರಾಜಾ ಮನುಧರ್ಮಗಃ ॥ ೧೬ ॥

ಶುಕ್ಲೋಽಪಿ ರೈವತಂ ಪ್ರಾಪ್ಯ ಸಚ್ಚಿದಾನಂದವಿಗ್ರಹಂ ।
ವಾಸುದೇವಂ ಜಗನ್ನಾಥಂ ತಪಸಾ ಸಮತೋಷಯತ್ ॥ ೧೭ ॥

ತದಾ ಪ್ರಸನ್ನೋ ಭಗವಾನ್ ದ್ವಾರಕಾನಾಯಕೋ ಬಲೀ ।
ಕರೇ ಗೃಹೀತ್ವಾ ತಂ ವಿಪ್ರಂ ಸಮುದ್ರಾಂತಮುಪಾಯಯೌ ॥ ೧೮ ॥

---

೧೪. ಸಪ್ತಪುರೀ ಪಟ್ಟಣವು ಖಿಲವಾದ ಮೇಲೆ ಆತನು ಸರಸ್ವತೀ ದೃಷದ್ವತೀ ನದಿಗಳ ಮಧ್ಯೆ ಇರುವ ಶ್ರೇಷ್ಠವಾದ ಬ್ರಹ್ಮಾವರ್ತದಲ್ಲಿ ವಾಸಮಾಡತೊಡಗಿದನು.

೧೫. ಆಮೇಲೆ ಈ ಕಾಶ್ಯಪನು ಬ್ರಾಹ್ಮಣಶ್ರೇಷ್ಠನೂ ತಪೋಸಿಧಿಯೂ ಆದ ತನ್ನ ಮಗ ಶುಕ್ಲನೆಂಬುವನನ್ನು ಕರೆದು ಅವನಿಗೆ ರೈವತಕಪರ್ವತದ ಶಿಖರದಲ್ಲಿ ತಪಸ್ಸುಮಾಡುವಂತೆ ಅಪ್ಪಣೆ ಮಾಡಿದನು.

೧೬. ಮನುಧರ್ಮಾವಲಂಬಿಯಾದ ಆತನು ಉಳಿದ ಒಂಭತ್ತುಜನ ಮಕ್ಕಳಿಗೂ, ತನ್ನ ಶಿಷ್ಯರಿಗೂ ಪುರಾತನವಾದ ಮನುಧರ್ಮಶಾಸ್ತ್ರವನ್ನು ಬೋಧಿಸಿದನು.

೧೭. ತಂದೆಯ ಅಪ್ಪಣೆಯಂತೆ ಕಾಶ್ಯಪನ ಮೊದಲನೆಯ ಮಗನಾದ ಶುಕ್ಲನು ರೈವತಪರ್ವತಕ್ಕೆ ಹೋಗಿ ಅಲ್ಲಿ ಸಚ್ಚಿದಾನಂದಮೂರ್ತಿಯೂ ಜಗದೊಡೆಯನೂ ಆದ ವಾಸುದೇವನನ್ನು ತನ್ನ ತಪಸ್ಸಿನಿಂದ ಸಂತೋಷಪಡಿಸಿದನು.

೧೮. ಭಗವಂತನೂ, ಬಲಶಾಲಿಯೂ, ದ್ವಾರಕಾಧಿಪತಿಯೂ ಆದ ಕೃಷ್ಣನು ಇವನ ತಪಸ್ಸಿಗೆ ಸಂತೋಷಗೊಂಡು ಆಗ ಪ್ರತ್ಯಕ್ಷನಾಗಿ ಆ ಬ್ರಾಹ್ಮಣನ ಕೈಯನ್ನು ಹಿಡಿದುಕೊಂಡು ಸಮುದ್ರತೀರಕ್ಕೆ ಹೋದನು.

ದ್ವಾರಕಾಂ ದರ್ಶಯಾಮಾಸ ದಿವ್ಯಶೋಭಾಸಮನ್ವಿತಾಂ ।
ವ್ಯತೀತೇ ದ್ವಿಸಹಸ್ರಾಬ್ದೇ ಕಿಂಚಿಜ್ಜಾತೇ ಭೃಗೂತ್ತಮ ॥ ೧೯ ॥

ಅಗ್ನಿದ್ವಾರೇಣ ಪ್ರಯಯೌ ಸ ಶುಕ್ಲೋಽರ್ಬುದಪರ್ವತೇ ।
ಜಿತ್ವಾ ಬೌದ್ಧಾನ್ದ್ವಿಜೈಃ ಸಾರ್ಧಂ ತ್ರಿಭಿರನ್ಯೈಶ್ಚ ಬಂಧುಭಿಃ ॥ ೨೦ ॥

ದ್ವಾರಕಾಂ ಕಾರಯಾಮಾಸ ಹರೇಶ್ಚ ಕೃಪಯಾ ಹಿ ಸಃ ।
ತತ್ರೋಷ್ಯ ಮುದಿತೋ ರಾಜಾ ಕೃಷ್ಣಧ್ಯಾನಪರೋಽಭವತ್ ॥ ೨೧ ॥

ಪಶ್ಚಿಮೇ ಭಾರತೇ ವರ್ಷೇ ದಶಾಬ್ದಂ ಕೃತವಾನ್ ಪದಂ ।
ನಾರಾಯಣಸ್ಯ ಕೃಪಯಾ ವಿಷ್ವಕ್ಸೇನಃ ಸುತೋಽಭವತ್ ॥ ೨೨ ॥

ವಿಂಶದಬ್ದಂ ಕೃತಂ ರಾಜ್ಯಂ ಜಯಸೇನಸ್ತತೋಽಭವತ್ ।
ತ್ರಿಂಶದಬ್ದಂ ಕೃತಂ ರಾಜ್ಯಂ ವಿಸೇನಸ್ತಸ್ಯ ಚಾತ್ಮಜಃ ॥ ೨೩ ॥

---

೧೯-೨೦. ಆಗ ಅಲ್ಲಿ ಸಕಲ ಲಕ್ಷಣಗಳಿಂದ ಕೂಡಿರುವ ದ್ವಾರಕಾನಗರವು ಅವನ ದೃಷ್ಟಿಗೆ ಗೋಚರವಾಗುವಂತೆ ತೋರಿಸಿದನು. ಎಲೈ ಭೃಗುಶ್ರೇಷ್ಠನಾದ ಶೌನಕನೇ! ಎರಡುಸಾವಿರ ವರ್ಷ ಕಳೆದು ಕೊಂಚದಿನವಾದ ಮೇಲೆ ಆ ಶುಕ್ಲನು ಅಗ್ನಿದೇವನ ಸೂಚನೆಯಂತೆ ಅರ್ಬುದ ಪರ್ವತಕ್ಕೆ ಹೋಗಿ ಅಲ್ಲಿ ನೆಲಸಿದ್ದ ಬೌದ್ಧರನ್ನೆಲ್ಲಾ ಜಯಿಸಿ ಅಲ್ಲಿದ್ದ ಬ್ರಾಹ್ಮಣರೊಡನೆಯೂ ಇತರ ಮೂವರು ಬಂಧುಗಳೊಡನೆಯೂ ಹೊರಟನು.

೨೧. ಅನಂತರ ಈ ಶುಕ್ಲನು ಸಮುದ್ರತೀರಕ್ಕೆ ಬಂದು ಪರಮಾತ್ಮನಾದ ಕೃಷ್ಣನ ದಯೆಯಿಂದ ಅಲ್ಲಿ ದ್ವಾರಕಾನಗರವನ್ನು ನಿರ್ಮಿಸಿಕೊಂಡು ಸಂತೋಷದಿಂದ ರಾಜ್ಯಭಾರಮಾಡುತ್ತಾ ಯಾವಾಗಲೂ ಕೃಷ್ಣಧ್ಯಾನದಲ್ಲಿ ನಿರತನಾಗಿದ್ದನು.

೨೨. ಈ ರೀತಿ ಶುಕ್ಲರಾಜನು ಪಶ್ಚಿಮ ಭರತಖಂಡ ಪ್ರಾಂತದಲ್ಲಿ ಹತ್ತು ವರ್ಷ ರಾಜ್ಯವಾಳಿದನು. ಅನಂತರ ನಾರಾಯಣನ ದಯೆಯಿಂದ ಅವನಿಗೆ ವಿಷ್ವಕ್ಸೇನನೆಂಬ ಪುತ್ರನು ಜನಿಸಿದನು.

೨೩. ಈ ವಿಷ್ವಕ್ಸೇನನೂ ಸಹ ಇಪ್ಪತ್ತುವರ್ಷ ರಾಜ್ಯವಾಳಿದನು. ಅನಂತರ ಅವನ ಮಗ ಜಯಸೇನನು ಪಟ್ಟಾಭಿಷಿಕ್ತನಾಗಿ ಮೂವತ್ತು ವರ್ಷಗಳಕಾಲ ರಾಜ್ಯವನ್ನಾಳಿದನು. ಇವನಿಗೆ ವಿಸೇನನೆಂಬ ಪುತ್ರನು ಜನಿಸಿದನು.

**ಶತಾರ್ಧಾಬ್ದಂ ಕೃತಂ ರಾಜ್ಯಂ ಮಿಥುನಂ ತಸ್ಯ ಚಾಭವತ್ ।**
**ಪ್ರಮೋದಾಮೋದಸಿಂಹಶ್ಚ ವಿಕ್ರಮಾಯ ನಿಜಾಂ ಸುತಾಂ ॥ ೨೪ ॥**

**ವಿಸೇನಶ್ಚ ದದೌ ಪ್ರೀತ್ಯಾ ರಾಷ್ಟ್ರಂ ಪುತ್ರಾಯ ಚೋತ್ತಮಂ ।**
**ಪಿತುಸ್ತುಲ್ಯಂ ಕೃತಂ ರಾಜ್ಯಂ ಸಿಂಧುವರ್ಮಾ ಸುತೋಽಭವತ್ ॥ ೨೫ ॥**

**ಸಿಂಧುಕೂಲೇ ಕೃತಂ ರಾಜ್ಯಂ ತ್ಯಕ್ತ್ವಾ ತತ್ಪೈತೃಕಂ ಪದಂ ।**
**ಸಿಂಧುದೇಶಸ್ತತೋ ನಾಮ್ನಾ ಪ್ರಸಿದ್ಧೋಽಭೂನ್ಮಹೀತಲೇ ॥ ೨೬ ॥**

**ಪಿತುಸ್ತುಲ್ಯಂ ಕೃತಂ ರಾಜ್ಯಂ ರಾಜ್ಞಾ ವೈ ಸಿಂಧುವರ್ಮಣಾ ।**
**ಸಿಂಧುದ್ವೀಪಸ್ತಸ್ಯ ಸುತಃ ಪಿತುಸ್ತುಲ್ಯಂ ಕೃತಂ ಪದಂ ॥ ೨೭ ॥**

---

೨೪. ಈ ವಿಸೇನನೂ ಸಹ ಐವತ್ತು ವರ್ಷಗಳಕಾಲ ರಾಜ್ಯವಾಳುತ್ತಿದ್ದನು. ಈತನಿಗೆ ಪ್ರಮೋದಾ ಎಂಬ ಹೆಣ್ಣುಮಗು, ಮೋದಸಿಂಹ ಎಂಬ ಗಂಡುಮಗು ಈ ರೀತಿ ಅವಳಿಮಕ್ಕಳು ಜನಿಸಿದರು.

೨೫. ಅನಂತರ ಆ ವಿಸೇನಮಹಾರಾಜನು ತನ್ನ ಮಗಳಾದ ಪ್ರಮೋದಳನ್ನು ವಿಕ್ರಮರಾಜನಿಗೆ ಕೊಟ್ಟು ವಿವಾಹಮಾಡಿದನು. ತನ್ನ ಮಗನಾದ ಮೋದಸಿಂಹನಿಗೆ ಶ್ರೇಷ್ಠವಾದ ತನ್ನ ರಾಜ್ಯವನ್ನು ಪ್ರೀತಿಪೂರ್ವಕವಾಗಿ ವಹಿಸಿದನು. ಈ ಮೋದ ಸಿಂಹನೂ ಸಹ ತಂದೆಯು ಆಳಿದಷ್ಟು ವರ್ಷ ರಾಜ್ಯವಾಳಿದನು. ಸಿಂಧುವರ್ಮ ನೆಂಬವನು ಈ ಮೋದಸಿಂಹನ ಮಗನು.

೨೬. ಈ ಸಿಂಧುವರ್ಮನು ಪ್ರಾಪ್ತವಯಸ್ಕನಾಗುತ್ತಲೆ ತನ್ನ ತಂದೆಯ ರಾಜ್ಯವನ್ನು ಬಿಟ್ಟು ಸಿಂಧುನದಿಯ ದಡಕ್ಕೆ ಬಂದು ಅಲ್ಲಿ ಬೇರೆ ಒಂದು ರಾಜ್ಯ ವನ್ನು ಕಟ್ಟಿ ರಾಜ್ಯಭಾರಮಾಡತೊಡಗಿದನು. ಅಂದಿನಿಂದ ಆ ದೇಶವು ಸಿಂಧುದೇಶ ವೆಂದು ಭೂಮಂಡಲದಲ್ಲಿ ಪ್ರಸಿದ್ಧವಾಯಿತು.

೨೭. ಈ ಸಿಂಧುವರ್ಮನು ತನ್ನ ತಂದೆ ಆಳಿದಷ್ಟು ವರ್ಷವೇ ರಾಜ್ಯಭಾರ ಮಾಡಿದನು. ಅನಂತರ ಇವನ ಮಗನಾದ ಸಿಂಧುದ್ವೀಪನು ಪಟ್ಟಕ್ಕೆ ಬಂದು ತನ್ನ ತಂದೆ ಆಳಿದಷ್ಟು ಕಾಲ ಆತನ ಸಮಾನವಾಗಿ ಸುಖದಿಂದ ರಾಜ್ಯಭಾರಮಾಡಿದನು.

ಶ್ರೀಪತಿಸ್ತಸ್ಯ ತನಯೋ ಗೌತಮಾನ್ವಯಸಂಭವಾಂ ।
ಕಾಚ್ಛಪೀಂ ಮಹಿಷೀಂ ಪ್ರಾಪ್ಯ ಕಚ್ಛದೇಶಮುಪಾಯಯೌ ॥ ೨೮ ॥

ಪುಲಿಂದಾನ್ಯವನಾಂಜಿತ್ವಾ ತತ್ರ ದೇಶಮಕಾರಯತ್ ।
ದೇಶೋ ವೈ ಶ್ರೀಪತಿರ್ನಾಮ್ನಾ ಸಿಂಧುಕೂಲೇ ಬಭೂವ ಹ ॥ ೨೯ ॥

ಪಿತುಸ್ತುಲ್ಯಂ ಕೃತಂ ರಾಜ್ಯಂ ಭುಜವರ್ಮಾ ತತೋಽಭವತ್ ।
ಜಿತ್ವಾ ಸ ಶಬರಾನ್‌ಭಿಲ್ಲಾಂಸ್ತತ್ರ ರಾಷ್ಟ್ರಮಕಾರಯತ್ ॥ ೩೦ ॥

ಭುಜದೇಶಸ್ತತೋ ಜಾತಃ ಪ್ರಸಿದ್ಧೋಽಭೂನ್ಮಹೀತಲೇ ।
ಪಿತುಸ್ತುಲ್ಯಂ ಕೃತಂ ರಾಜ್ಯಂ ರಣವರ್ಮಾ ಸುತೋಽಭವತ್ ॥ ೩೧ ॥

---

೨೮. ಈ ಸಿಂಧುದ್ವೀಪರಾಜನಿಗೆ ಶ್ರೀಪತಿಯೆಂಬ ಪುತ್ರನು ಜನಿಸಿದನು. ಇವನು ಗೌತಮವಂಶದಲ್ಲಿ ಹುಟ್ಟಿದ ಕಾಚ್ಛಪಿಯೆಂಬವಳನ್ನು ರಾಣಿಯನ್ನಾಗಿ ಪರಿಗ್ರಹಿಸಿ ಕಚ್ಛದೇಶಕ್ಕೇ ಹೋದನು.

೨೯. ಆ ದೇಶದಲ್ಲಿದ್ದ ಬೇಡರನ್ನೂ ಯವನರನ್ನೂ ಜಯಿಸಿ ಅಲ್ಲಿಯೇ ಒಂದು ರಾಜ್ಯವನ್ನು ನಿರ್ಮಿಸಿದನು. ಆ ದೇಶವು ಶ್ರೀಪತಿದೇಶವೆಂಬ ಹೆಸರಿನಿಂದ ಸಿಂಧುತೀರದಲ್ಲಿ ಪ್ರಸಿದ್ಧಿ ಪಡೆಯಿತು.

೩೦. ಈ ಶ್ರೀಪತಿರಾಜನು ತನ್ನ ತಂದೆಗೆ ಸಮಾನವಾಗಿ, ಆತನು ಆಳಿದಷ್ಟು ಕಾಲ ರಾಜ್ಯಭಾರಮಾಡಿದನು. ಬಳಿಕ ಆತನ ಪುತ್ರನಾದ ಭುಜವರ್ಮನು ಪಟ್ಟಕ್ಕೆ ಬಂದು ಆ ಪ್ರಾಂತದಲ್ಲಿದ್ದ ಬೇಡರನ್ನೂ ಭಿಲ್ಲರನ್ನೂ ಜಯಿಸಿ ತಾನೊಂದು ರಾಜ್ಯವನ್ನು ಕಟ್ಟಿದನು.

೩೧-೩೨. ಈ ದೇಶವು ಭುಜದೇಶವೆಂದು ಭೂಮಂಡಲದಲ್ಲಿ ಪ್ರಸಿದ್ಧಿ ಪಡೆಯಿತು. ಆ ಭೂಜ್‌ದೇಶದಲ್ಲಿ ಭುಜವರ್ಮನು ತನ್ನ ತಂದೆಯು ಆಳಿದಷ್ಟು ವರ್ಷನೇ ಧರ್ಮದಿಂದ ರಾಜ್ಯವಾಳುತ್ತಿದ್ದನು. ಆತನ ಪುತ್ರನಾದ ರಣವರ್ಮನು ತಂದೆಯನಂತರ ಪಟ್ಟಕ್ಕೆ ಬಂದು ತಂದೆಯ ಮಾರ್ಗವನ್ನೇ ಅನುಸರಿಸಿ ಅಷ್ಟೇ ವರ್ಷ ರಾಜ್ಯಭಾರಮಾಡಿದನು. ಇವನಿಗೆ ಚಿತ್ರವರ್ಮನೆಂಬ ಪುತ್ರನು ಜನಿಸಿದನು.

**ಪಿತುಸ್ತುಲ್ಯಂ ಕೃತಂ ರಾಜ್ಯಂ ಚಿತ್ರವರ್ಮಾ ಸುತೋಽಭವತ್ ।**
**ಕೃತ್ವಾ ಸ ಚಿತ್ರನಗರೀಂ ವನಮಧ್ಯೇ ನೃಪೋತ್ತಮಃ ॥ ೩೨ ॥**

**ಪಿತುಸ್ತುಲ್ಯಂ ಕೃತಂ ರಾಜ್ಯಂ ಧರ್ಮವರ್ಮಾ ಸುತೋಽಭವತ್ ।**
**ಪಿತುಸ್ತುಲ್ಯಂ ಕೃತಂ ರಾಜ್ಯಂ ಕೃಷ್ಣವರ್ಮಾ ಸುತೋಽಭವತ್ ॥ ೩೩ ॥**

**ಪಿತುಸ್ತುಲ್ಯಂ ಕೃತಂ ರಾಜ್ಯಮುದಯಸ್ತತ್ಸುತೋಽಭವತ್ ।**
**ಕೃತ್ವೋದಯಪುರಂ ರಮ್ಯಂ ವನಮಧ್ಯೇ ನೃಪೋತ್ತಮಃ ॥ ೩೪ ॥**

**ಪಿತುಸ್ತುಲ್ಯಂ ಕೃತಂ ರಾಜ್ಯಂ ವಾಪ್ಯಕರ್ಮಾಸುತೋಽಭವತ್ ।**
**ವಾಪೀಕೂಪತಡಾಗಾನಿ ನಾನಾಹರ್ಮ್ಯಾಣಿ ತೇನ ವೈ ॥ ೩೫ ॥**

---

ಈ ರಾಜಶ್ರೇಷ್ಠನಾದ ಚಿತ್ರವರ್ಮನು ಪಟ್ಟಕ್ಕೆ ಬಂದಮೇಲೆ ಕಾಡಿನ ಮಧ್ಯದಲ್ಲಿ ಚಿತ್ರನಗರವೆಂಬ ಪಟ್ಟಣವನ್ನು ನಿರ್ಮಿಸಿದನು.

೩೩. ಆತನು ಆ ನಗರದಲ್ಲಿಯೇ ತಂದೆ ಆಳಿದಷ್ಟು ವರ್ಷಕಾಲ ರಾಜ್ಯವಾಳಿದನು. ಇವನಿಗೆ ಧರ್ಮವರ್ಮನೆಂಬ ಮಗನು ಹುಟ್ಟಿದನು. ಕಾಲಕ್ರಮದಲ್ಲಿ ಇವನು ಸಿಂಹಾಸನವನ್ನೇರಿ ತಂದೆ ಆಳಿದಷ್ಟು ವರ್ಷ ರಾಜ್ಯವಾಳಿ ಕೊನೆಗೆ ತನ್ನ ಮಗನಾದ ಕೃಷ್ಣವರ್ಮನಿಗೆ ರಾಜ್ಯವನ್ನು ವಹಿಸಿದನು.

೩೪. ಈ ಕೃಷ್ಣವರ್ಮನು ತನ್ನ ತಂದೆಗೆ ಸಮನಾಗಿ ರಾಜ್ಯಭಾರಮಾಡಿದನು. ಬಳಿಕ ಇವನ ಪುತ್ರನಾದ ಉದಯನೆಂಬಾತನು ಪಟ್ಟಕ್ಕೆ ಬಂದನು. ರಾಜಶ್ರೇಷ್ಠನಾದ ಈ ಉದಯಕುಮಾರನು ವನಪ್ರಾಂತದಲ್ಲಿ ಉದಯಪುರವೆಂಬ ಪಟ್ಟಣವನ್ನು ಸುಂದರವಾಗಿ ನಿರ್ಮಿಸಿದನು.

೩೫-೩೬ ಅಲ್ಲಿ ತಂದೆ ಆಳಿದಷ್ಟು ವರ್ಷಕಾಲ ರಾಜ್ಯಭಾರಮಾಡುತ್ತಾ ಪ್ರಖ್ಯಾತನಾದನು. ಆಮೇಲೆ ಇವನ ಮಗನಾದ ವಾಪ್ಯಕರ್ಮ ಎಂಬುವನು ಪಟ್ಟಕ್ಕೆ ಬಂದನು. ಈ ರಾಜೋತ್ತಮನು ಬಾವಿ, ಕೆರೆ, ಕೊಳ ಮತ್ತು ಅನೇಕ ದೊಡ್ಡ ಪ್ರಾಸಾದಗಳು ಇವುಗಳನ್ನೆಲ್ಲಾ ಧರ್ಮಾರ್ಥವಾಗಿ ರಚಿಸಿ ಧರ್ಮಪುರುಷನೆಂದು ಪ್ರಸಿದ್ಧಿ ಪಡೆದನು.

ಧರ್ಮಾರ್ಥೇ ಕಾರಯಾಮಾಸ ಧರ್ಮಾತ್ಮಾ ಸ ಚ ವೈ ಪುರಂ ।
ಏತಸ್ಮಿನ್ನಂತರೇ ಪ್ರಾಪ್ತೋ ಬಲದೋ ನಾಮ ಭೂಪತಿಃ ॥ ೩೬ ॥

ಲಕ್ಷಸೈನ್ಯಯುತೋ ವೀರೋ ಮಹಾಮದಮತೇ ಸ್ಥಿತಃ ।
ತೇನ ಸಾರ್ಧಮಭೂದ್ಯುದ್ಧಂ ರಾಜ್ಞೋ ವೈ ವಾಪ್ಯಕರ್ಮಣಃ ॥ ೩೭ ॥

ಜಿತ್ವಾ ಪೈಶಾಚಕಾನ್ಮ್ಲೇಚ್ಛಾನ್ ಕೃಷ್ಣೋತ್ಸವಮಕಾರಯತ್ ।
ಪಿತುಸ್ತುಲ್ಯಂ ಕೃತಂ ರಾಜ್ಯಂ ಗುಹಿಲಸ್ತತ್ಸುತೋಽಭವತ್ ॥ ೩೮ ॥

ಪಿತುಸ್ತುಲ್ಯಂ ಕೃತಂ ರಾಜ್ಯಂ ಕಾಲಭೋಜಃ ಸುತೋಽಭವತ್ ।
ಪಿತುಸ್ತುಲ್ಯಂ ಕೃತಂ ರಾಜ್ಯಂ ರಾಷ್ಟ್ರಪಾಲಸ್ತತೋಽಭವತ್ ॥ ೩೯ ॥

ಸ ತ್ಯಕ್ತ್ವಾ ಪೈಕೃತಂ ಸ್ಥಾನಂ ವೈಷ್ಣವೀಂ ಶಕ್ತಿಮಾಗಮತ್ ।
ತಪಸಾರಾಧಯಾಮಾಸ ಶಾರದಾಂ ಸರ್ವಮಂಗಲಾಂ ॥ ೪೦ ॥

---

ಈ ವೇಳೆಗೆ ಮಹಾಮದಮತೀಯನಾದ ಬಲದ (ಬಹದ್ದೂರ್‌ಷಹ) ನೆಂಬ ರಾಜನು ಇವನ ಮೇಲೆ ಯುದ್ಧಕ್ಕೆ ಬಂದನು.

೩೭. ಈ ಬಲದನ ಪಕ್ಷದಲ್ಲಿ ಒಂದುಲಕ್ಷ ಸೇನೆಯಿತ್ತು. ಆ ಲಕ್ಷಸೇನೆಯೊಡೆಯನೂ, ವೀರನೂ ಮ್ಲೇಚ್ಛಾಧಿಪನೂ ಆದ ಆ ಬಲದನೊಡನೆ ವಾಪ್ಯಕರ್ಮರಾಜನು ಘೋರ ಯುದ್ಧಮಾಡಿದನು.

೩೮. ಈ ಯುದ್ಧದಲ್ಲಿ ವಾಪ್ಯಕರ್ಮನು ಪಿಶಾಚಸ್ವರೂಪರಾದ ಈ ಮ್ಲೇಚ್ಛರೆಲ್ಲರನ್ನೂ ಜಯಿಸಿ ಆ ಸಂತೋಷಾರ್ಥವಾಗಿ ಕೃಷ್ಣೋತ್ಸವವನ್ನು ನಡೆಸಿದನು. ಮತ್ತು ಆತನೂ ತಂದೆ ಆಳಿದಷ್ಟು ವರ್ಷಕಾಲ ರಾಜ್ಯಭಾರಮಾಡುತ್ತಾ ಇದ್ದನು. ಇವನಿಗೆ ಗುಹಿಲನೆಂಬ ಪುತ್ರನು ಜನಿಸಿದನು.

೩೯. ಈ ಗುಹಿಲನು ರಾಜ್ಯಕ್ಕೆ ಬಂದು ತಂದೆಗೆ ಸಮಾನನೆನಿಸಿ ರಾಜ್ಯವಾಳಿದನು. ಬಳಿಕ ಆತನ ಪುತ್ರನಾದ ಕಾಲಭೋಜನು ಪಟ್ಟವನ್ನೇರಿ, ತಂದೆ ಆಳಿದಷ್ಟು ಕಾಲವೇ ರಾಜ್ಯವಾಳಿದನು. ಇವನಿಗೆ ರಾಷ್ಟ್ರಪಾಲನೆಂಬ ಕುಮಾರನು ಉದಯಿಸಿದನು.

೪೦. ಈ ರಾಷ್ಟ್ರಪಾಲನು ತಂದೆಯ ರಾಜ್ಯವನ್ನು ಬಿಟ್ಟು, ವಿಷ್ಣುಶಕ್ತಿಪಂಥವನ್ನು ಅವಲಂಬಿಸಿ, ಸರ್ವಮಂಗಳ ಸ್ವರೂಪಿಣಿಯಾದ ಶಾರದಾದೇವಿಯನ್ನು ಕುರಿತು ಉಗ್ರವಾಗಿ ತಪಸ್ಸುಮಾಡಿದನು.

**ಪ್ರಸನ್ನಾ ಸಾ ತದಾ ದೇವೀ ಕಾರಯಾಮಾಸ ವೈ ಪುರೀಂ ।**
**ಮಹಾವತೀಂ ಮಹಾರಮ್ಯಾಂ ಮಣಿದೇವೇನ ರಕ್ಷಿತಾಂ　　॥ ೪೧ ॥**

**ತತ್ರೋಷ್ಯ ನೃಪತಿರ್ಧೀಮಾನ್‌ದಶಾಬ್ದಂ ರಾಜ್ಯಮಾಪ್ತವಾನ್ ।**
**ತಸ್ಯೋಭೌ ತನಯೌ ಜಾತೌ ವಿಜಯಃ ಪ್ರಜಯಸ್ತಥಾ　　॥ ೪೨ ॥**

**ಪ್ರಜಯಃ ಪಿತರೌ ತ್ಯಕ್ತ್ವಾ ಗಂಗಾಕೂಲಮುಪಾಯಯೌ ।**
**ದ್ವಾದಶಾಬ್ದಂ ಚ ತಪಸಾ ಪೂಜಯಾಮಾಸ ಶಾರದಾಂ　　॥ ೪೩ ॥**

**ಕನ್ಯಾಮೂರ್ತಿಮಯೀ ದೇವೀ ವೇಣುವಾದನತತ್ಪರಾ ।**
**ಹಯಮಾರುಹ್ಯ ಸಂಪ್ರಾಪ್ತಾ ವಿಹಸ್ಯಾಹ ಮಹೀಪತಿಂ　　॥ ೪೪ ॥**

---

೪೧. ಆಗ ಇವನ ತಪಸ್ಸಿಗೆ ಮೆಚ್ಚಿದ ಶಾರದಾದೇವಿಯು ಇವನಿಗೆ ಬಹು ಸುಂದರವಾದ ಮಹಾವತೀ ಎಂಬ ನಗರವನ್ನು ನಿರ್ಮಾಣಮಾಡಿ ಆ ಪಟ್ಟಣದ ರಕ್ಷಣೆಗಾಗಿ ಮಣಿದೇವನೆಂಬವನನ್ನು ನಿಯಮಿಸಿದಳು.

೪೨. ಬಲಶಾಲಿಯಾದ ಈ ರಾಷ್ಟ್ರಪಾಲನು ಮಹಾವತೀನಗರದಲ್ಲಿ ಹತ್ತು ವರ್ಷಕಾಲ ಸುಖವಾಗಿ ರಾಜ್ಯಭಾರಮಾಡಿದನು. ಅನಂತರ ಇವನಿಗೆ ವಿಜಯ ಮತ್ತು ಪ್ರಜಯ ಎಂಬ ಇಬ್ಬರು ಮಕ್ಕಳು ಹುಟ್ಟಿದರು.

೪೩. ಕಿರಿಯ ಮಗನಾದ ಪ್ರಜಯನು ತನ್ನ ತಂದೆತಾಯಿಗಳ ಸಾಮೀಪ್ಯವನ್ನು ಬಿಟ್ಟು, ಗಂಗಾನದಿಯ ದಡಕ್ಕೆ ಬಂದು, ಹನ್ನೆರಡುವರ್ಷಕಾಲ ತಪಸ್ಸುಮಾಡಿ ಶಾರದಾದೇವಿಯನ್ನು ಸಂತೋಷಪಡಿಸಿದನು.

೪೪. ಆಗ ಶಾರದಾದೇವಿಯು ಕನ್ಯಾರೂಪವನ್ನು ಧರಿಸಿ ಕೊಳಲನ್ನು ಬಾರಿಸುತ್ತಾ ಕುದುರೆಯನ್ನೇರಿಕೊಂಡು ಪ್ರಜಯನ ಸಮೀಪಕ್ಕೆ ಬಂದು ನಗುನಗುತ್ತಾ ಆ ರಾಜನೊಡನೆ ಮಾತನಾಡತೊಡಗಿದಳು.

ಕಿಂನಿಮಿತ್ತಂ ಭೂಪಸುತ ತ್ವಯಾ ಚಾರಾಧಿತಾ ಶಿವಾ ।
ತತ್ಫಲಂ ತ್ವಂ ಹಿ ತಪಸಾ ಮತ್ತಃ ಶೀಘ್ರಮವಾಪ್ಸ್ಯಸಿ ॥ ೪೫ ॥

ಇತಿ ಶ್ರುತ್ವಾ ಸ ಹೋವಾಚ ಕುಮಾರಿ ಮಧುರಸ್ವರೇ ।
ನವೀನಂ ನಗರಂ ಮಹ್ಯಂ ಕುರು ದೇವಿ ನಮೋಽಸ್ತು ತೇ ॥ ೪೬ ॥

ಇತಿ ಶ್ರುತ್ವಾ ತು ಸಾ ದೇವೀ ದದೌ ತಸ್ಮೈ ಹಯಂ ಶುಭಂ ।
ಪುರೋ ಭೂತ್ವಾ ವಾದ್ಯಕರೀ ದಕ್ಷಿಣಾಂ ದಿಶಮಾಗತಾ ॥ ೪೭ ॥

ಸ ಭೂಪೋ ಹಯಮಾರುಹ್ಯ ನೇತ್ರ ಆಚ್ಛಾದ್ಯ ಚಾಯಯೌ ।
ಪುನಃ ಸ ಭೂಪತಿಃ ಪಶ್ಚಾತ್‌ಪಶ್ಚಿಮಾಂ ದಿಶಮಾಗತಾ ॥ ೪೮ ॥

---

೪೫ "ಎಲೈ ರಾಜಕುಮಾರನೇ! ನೀನು ಯಾವಉದ್ದೇಶದಿಂದ ಸರ್ವಮಂಗಳಾಸ್ವರೂಪಿಣಿಯಾದ ಶಾರದಾದೇವಿಯನ್ನು ಪೂಜಿಸಿದೆಯೋ ಆ ಪೂಜೆಯ ಫಲವನ್ನು ನೀನು ನನ್ನಿಂದ ಜಾಗ್ರತೆಯಲ್ಲಿ ಪಡೆಯುತ್ತೀಯೆ; ತಿಳಿಯಿತೇ!" ಎಂದು ಹೇಳಿದಳು.

೪೬. ದೇವಿಯು ಹೇಳಿದ ಈ ಮಧುರವಾಕ್ಯಗಳನ್ನು ಕೇಳಿ, ಆ ರಾಜಕುಮಾರನಾದ ಪ್ರಜಯನು "ಮಧುರಧ್ವನಿಯುಕ್ತೆಯೂ ಕುಮಾರೀಸ್ವರೂಪಿಣಿಯೂ ಆದ ಎಲೌ ಶಾರದಾದೇವಿಯೇ! ನನಗೆ ಹೊಸದಾದ ಒಂದು ಪಟ್ಟಣವನ್ನು ನಿರ್ಮಿಸಿಕೊಡು. ಹೇ ದೇವಿಯೇ! ನಿನಗೆ ನಮಸ್ಕಾರ" ಎಂದು ಪ್ರಾರ್ಥಿಸಿದನು.

೪೭-೪೮. ಈ ಮಾತನ್ನು ಕೇಳಿ ಕನ್ಯಾರೂಪಿಣಿಯಾದ ಆ ಶಾರದಾದೇವಿಯು ಅವನಿಗೆ ಒಂದು ಮಂಗಳಕರವಾದ ಕುದುರೆಯನ್ನು ಕೊಟ್ಟು, ತಾನು ವೇಣುವಾದನ ಮಾಡುತ್ತಾ ಮುಂದೆಮುಂದೆಸಾಗುತ್ತಾ ಆ ರಾಜನನ್ನು ಆ ಕುದುರೆಯ ಮೇಲೆ ಕುಳಿತು ಕಣ್ಣುಮುಚ್ಚಿಕೊಂಡು ತನ್ನನ್ನು ಹಿಂಬಾಲಿಸಿ ಬರುವಂತೆ ಹೇಳಿ ದಕ್ಷಿಣ ದಿಕ್ಕಿಗೆ ಸಾಗಿದಳು. ಅನಂತರ ಆ ರಾಜನು ದೇವಿಯನ್ನೇ ಹಿಂಬಾಲಿಸಿದನು. ಅಲ್ಲಿಂದ ಆಕೆ ಪಶ್ಚಿಮದಿಕ್ಕಿಗೆ ನಡೆದಳು.

**ತತೋಽನುಪ್ರಯಯೌ ಪೂರ್ವಮರ್ಕಣೋ ಯತ್ರ ಪಕ್ಷಿರಾಟ್ ।**
**ಭಯಭೀತೋ ನೃಪಸ್ತೇನ ಸಮುನ್ಮೀಲ್ಯ ಸ ಚಕ್ಷುಷೀ ॥ ೪೯ ॥**

**ದದರ್ಶ ನಗರಂ ರಮ್ಯಂ ಕನ್ಯಾಯಾ ರಚಿತಂ ಶುಭಂ ।**
**ಉತ್ತರೇ ತಸ್ಯ ವೈ ಗಂಗಾ ದಕ್ಷಿಣೇನಾಸ ಪಾಂಡುರಾ ॥ ೫೦ ॥**

**ಪಶ್ಚಿಮೇ ಈಶಸರಿತಾ ಪೂರ್ವೇ ಪಕ್ಷೀ ಸ ಮರ್ಕಣಃ ।**
**ಕುಬ್ಜಭೂತಮಭೂದ್ಗ್ರಾಮಂ ಕಾನ್ಯಕುಬ್ಜ ಇತಿ ಸ್ಮೃತಃ ॥ ೫೧ ॥**

**ದಶವರ್ಷಂ ಚ ತೇನೈವ ಜಯಪಾಲೇನ ವೈ ಪದಂ ।**
**ಕೃತಂ ತಸ್ಯ ಸುತೋ ಜಾತೋ ವೇಣುವಾದ್ಯಾಚ್ಚ ವೇಣುಕಃ ॥ ೫೨ ॥**

---

೪೯. ಆಮೇಲೆ ರಾಜನು ದೇವಿಯ ಹಿಂದೆಯೇ ಸಾಗಿ ಪಕ್ಷಿರಾಜನಾದ ಮರ್ಕಣನಿದ್ದ ಪೂರ್ವದಿಕ್ಕಿಗೆ ಸಾಗಿದನು. ಆಗ ಆ ರಾಜನು ಏತಕ್ಕೋ ಹೆದರಿ, ದೇವಿಯ ವಾಕ್ಯವನ್ನು ಮರೆತು ಕಣ್ಣುಗಳನ್ನು ತೆರೆದನು.

೫೦. ಆಗ ಪ್ರಜಯನು ಕನ್ಯಾಸ್ವರೂಪಿಣಿಯಾದ ಶಾರದಾದೇವಿಯಿಂದ ತನಗಾಗಿ ನಿರ್ಮಿತವಾದ ಸುಂದರವೂ ಶುಭಕರವೂ ಆದ ಪಟ್ಟಣವನ್ನು ನೋಡಿದನು. ಆ ಪಟ್ಟಣದ ಉತ್ತರ ದಿಕ್ಕಿನಲ್ಲಿ ಗಂಗಾನದಿಯೂ, ದಕ್ಷಿಣದಲ್ಲಿ ಪಾಂಡುರಾನದಿಯೂ ಹರಿಯುತ್ತಿದ್ದಿತು.

೫೧. ಆ ನಗರದ ಪಶ್ಚಿಮದಿಕ್ಕಿನಲ್ಲಿ ಈಶಸರಿತ್ತು. ಪೂರ್ವದಲ್ಲಿ ಮರ್ಕಣ ಪಕ್ಷಿನಿವಾಸ, ಇವು ಆ ನಗರದ ಎಲ್ಲೆಯಾಗಿದ್ದುವು. ಈ ಗ್ರಾಮವು ಕುಬ್ಜಭೂತವಾಗಿ (ತಗ್ಗಿನಲ್ಲಿ)ದ್ದುದರಿಂದಲೂ ಶಾರದಾಸ್ವರೂಪಿಣಿಯಾದ ಕನ್ಯೆಯಿಂದ ನಿರ್ಮಿತವಾದುದರಿಂದಲೂ ಈ ನಗರಕ್ಕೆ ಕನ್ಯಾಕುಬ್ಜವೆಂದು ಹೆಸರಾಯಿತು.

೫೨. ಜಯಪಾಲನೆಂಬ ನಾಮಾಂತರವುಳ್ಳ ಈ ಪ್ರಜಯನು ಆ ಕನ್ಯಾಕುಬ್ಜದಲ್ಲಿ ಹತ್ತುವರ್ಷ ರಾಜ್ಯಭಾರಮಾಡಿದನು. ಅನಂತರ ಇವನಿಗೆ ಒಬ್ಬ ಪುತ್ರನು ಜನಿಸಿದನು. ಅವನು ಯಾವಾಗಲೂ ವೇಣುವಾದನ ತತ್ಪರನಾದುದರಿಂದ ಅವನಿಗೆ ವೇಣುಕನೆಂದೇ ಹೆಸರಾಯಿತು.

ಸ ವೇಣುಕ್ಷ ಮಹೀಪಾಲೋ ದೇವೀದತ್ತಾಂ ಮನೋಹರಾಂ ।
ಪತ್ನೀಂ ಕನ್ಯಾವತೀಂ ನಾಮ್ನಾ ಸಮುದ್ವಾಹ್ಯ ರರಾಜ ಹ ॥ ೫೩ ॥

ತಸ್ಯಾಂ ಸಪ್ತ ಸುತಾ ಜಾತಾ ಮಾತೃಣಾಂ ಮಂಗಲಾಃ ಕಲಾಃ ।
ಶೀತಲಾ ಪಾರ್ವತೀ ಕನ್ಯಾ ತಥಾ ಪುಷ್ಪವತೀ ಸ್ಮೃತಾ ॥ ೫೪ ॥

ಗೋವರ್ಧನೀ ಚ ಸಿಂದೂರಾ ಕಾಲೀ ನಾಮ್ನಾ ಪ್ರಕೀರ್ತಿತಾ ।
ಬ್ರಾಹ್ಮೀ ಮಾಹೇಶ್ವರೀ ಚೈವ ಕೌಮಾರೀ ವೈಷ್ಣವೀ ತಥಾ ॥ ೫೫ ॥

ವಾರಾಹೀ ಚ ತಥೇಂದ್ರಾಣೀ ಚಾಮುಂಡಾಃ ಕ್ರಮತೋಽಭವನ್ ।
ಏಕದಾ ಭೂಪತೇಃ ಪತ್ನೀ ತಂತುನಾ ಮೃತ್ತಿಕಾಘಟಂ ॥ ೫೬ ॥

ಕೂಪೇ ಕೃತವತೀ ಪ್ರೇಮ್ಣಾ ಯಥಾ ಪೂರ್ವಂ ತಥಾದ್ಯ ಸಾ ।
ದದರ್ಶ ಬಹುಲಾ ನಾರೀರ್ನಾನಾಭೂಷಣಭೂಷಿತಾಃ ॥ ೫೭ ॥

---

೫೩-೫೫. ಈ ವೇಣುಕ ಮಹಾರಾಜನು ದೇವಿಯನುಗ್ರಹದಿಂದ ಸುಂದರಿಯಾದ ಕನ್ಯಾವತಿ ಎಂಬವಳನ್ನು ಮದುವೆಮಾಡಿಕೊಂಡು ಸುಖವಾಗಿದ್ದನು. ಈ ವೇಣುಕ ಮಹಾರಾಜನಿಗೆ ಕನ್ಯಾವತಿಯಲ್ಲಿ ಸಪ್ತಮಾತೃಕೆಯರಾದ ಬ್ರಾಹ್ಮೀ, ಮಾಹೇಶ್ವರೀ, ಕೌಮಾರೀ, ವೈಷ್ಣವೀ, ವಾರಾಹೀ, ಇಂದ್ರಾಣೀ, ಚಾಮುಂಡಾ ಎಂಬವರ ಅಂಶಸಂಭೂತೆಯರೆನಿಸಿ ಅನುಕ್ರಮವಾಗಿ ಶೀತಲಾ, ಪಾರ್ವತೀ, ಕನ್ಯಾ, ಪುಷ್ಪವತೀ, ಗೋವರ್ಧನೀ, ಸಿಂಧೂರಾ ಮತ್ತು ಕಾಲೀ ಎಂಬ ಪುತ್ರಿಯರು ಜನಿಸಿದರು.

೫೬. ಒಂದು ದಿನ ಮಹಾರಾಣಿಯಾದ ಕನ್ಯಾವತಿಯು ಮಣ್ಣಿನ ಗಡಿಗೆಯನ್ನು ತೆಗೆದುಕೊಂಡು ಎಂದಿನಂತೆಯೇ ಅದರ ಕುತ್ತಿಗೆಗೆ ಹಗ್ಗಕಟ್ಟಿ ಭಾವಿಗೆ ಬಿಟ್ಟಳು.

೫೭. ಆದಿನ ಅನೇಕ ಆಭರಣಗಳಿಂದ ಅಲಂಕೃತೆಯರಾದ ಬಹುಮಂದಿ ಸ್ತ್ರೀಯರು ಆ ಭಾವಿಯಲ್ಲಿ ಇದ್ದುದನ್ನು ಮಹಾರಾಣಿಯು ನೋಡಿದಳು.

ಸ್ವಯಮೇಕೈವ ವಸನಾ ಮನೋಗ್ಲಾನಿಮುಪಾಯಯೌ ।
ತದೈವ ಸ ಘಟೋ ಭೂಮೌ ನ ಪ್ರಾಪ್ತಃ ಸಪ್ರವೃತ್ತಿಕಾಂ ॥ ೫೮ ॥

ದೃಷ್ಟ್ವಾ ಕನ್ಯಾವತೀ ದೇವೀ ಘಟಹೀನಾ ಗೃಹಂ ಯಯೌ ।
ತದಾ ತು ಸಪ್ತ ಕನ್ಯಾಶ್ಚ ಶಿಲಾಭೂತಾ ಗೃಹೇ ಸ್ಥಿತಾಃ ॥ ೫೯ ॥

ಶ್ರುತ್ವಾ ವೇಣುಸ್ತದಾಗತ್ಯ ಭರ್ತ್ಸಯಿತ್ವಾ ಸ್ವಕಾಂ ಪ್ರಿಯಾಂ ।
ಬ್ರಹ್ಮಚರ್ಯವ್ರತಂ ತ್ಯಕ್ತ್ವಾ ರಮಯಾಮಾಸ ಯೋಷಿತಂ ॥ ೬೦ ॥

ನೃಪಾದ್ವೈ ವೀರವತ್ಯಾಂ ಚ ಯಶೋವಿಗ್ರಹ ಆತ್ಮಜಃ ।
ಬಭೂವ ಬಲವಾನ್ ಧರ್ಮೀ ಚಾರ್ಯದೇಶಪತಿಃ ಸ್ವಯಂ ॥ ೬೧ ॥

ವಿಂಶದ್ವರ್ಷಂ ಕೃತಂ ರಾಜ್ಯಂ ತೇನ ರಾಜ್ಞಾ ಮಹೀತಲೇ ।
ಮಹೀಚಂದ್ರಸ್ತಸ್ಯ ಸುತಃ ಪಿತುಸ್ತುಲ್ಯಂ ಕೃತಂ ಪದಂ ॥ ೬೨ ॥

---

೫೮. ಆಗ ಮಹಾರಾಣಿಯು ತಾನು ಏಕವಸ್ತ್ರಧಾರಿಣಿಯಾಗಿದ್ದುದರಿಂದ ತುಂಬಾ ಮನೋವ್ಯಥೆಯಿಂದ ಆಕುಲಳಾದಳು. ಆಗ ಇವಳು ಭಾವಿಗೆ ಬಿಟ್ಟಿದ್ದ ಆ ಹಗ್ಗವನ್ನು ಎಳೆದರೂ ಆ ಗಡಿಗೆಯು ಮೇಲಕ್ಕೆ ಬರಲೇ ಇಲ್ಲ.

೫೯. ಅನಂತರ ಆ ಕನ್ಯಾವತೀದೇವಿಯು ಹೀಗಾದುದನ್ನು ನೋಡಿ ಖಿನ್ನೆಯಾಗಿ, ಗಡಿಗೆಯಿಲ್ಲದೆ ಮನೆಗೆ ಹಿಂದಿರುಗಿ ಬಂದಳು. ಹೀಗೆ ಬಂದು ನೋಡುವಷ್ಟರಲ್ಲಿಯೇ ಮನೆಯಲ್ಲಿದ್ದ ಇವಳ ಏಳುಮಂದಿ ಕನ್ಯೆಯರೂ ಕಲ್ಲಾಗಿಹೋಗಿದ್ದರು.

೬೦. ಬಳಿಕ ವೇಣುಕಮಹಾರಾಜನು ನಡೆದ ವೃತ್ತಾಂತವನ್ನೆಲ್ಲಾ ಕೇಳಿ ತನ್ನ ಪತ್ನಿಯನ್ನು ತುಂಬಾ ಹೀಯಾಳಿಸಿ, ಅನಂತರ ತಾನು ಬ್ರಹ್ಮಚರ್ಯವ್ರತವನ್ನು ಬಿಟ್ಟು ಪತ್ನಿಯೊಡನೆ ವಿಹರಿಸಿದನು.

೬೧. ಬಳಿಕ ವೀರ್ಯವತಿಯೆಂದು ಹೆಸರಾಂತ ಕನ್ಯಾವತಿಯಲ್ಲಿ ಯಶೋವಿಗ್ರಹನೆಂಬ ಪುತ್ರನು ಜನಿಸಿದನು. ಇವನು ಧರ್ಮಿಷ್ಠನೂ ಬಲಶಾಲಿಯೂ ಆಗಿ ಆರ್ಯದೇಶಕ್ಕೆಲ್ಲಾ ತಾನೇ ಅಧಿಪತಿಯೆನಿಸಿದನು.

೬೨. ಈ ಯಶೋವಿಗ್ರಹನು ಇಪ್ಪತ್ತುವರ್ಷಗಳಕಾಲ ಸುಖವಾಗಿ ರಾಜ್ಯವಾಳಿದನು. ಬಳಿಕ ಇವನ ಪುತ್ರನಾದ ಮಹೀಚಂದ್ರನು ಪಟ್ಟವೇರಿ ತಂದೆ ಆಳಿದಷ್ಟು ಕಾಲವೇ ರಾಜ್ಯಭಾರಮಾಡಿದನು.

ಚಂದ್ರದೇವಸ್ತಸ್ಯ ಸುತೋ ರಾಜ್ಯಂ ತೇನ ಪಿತುಃ ಸಮಂ ।
ಕೃತಂ ತಸ್ಮಾತ್ಸುತೋ ಜಾತೋ ಮಂದಪಾಲೋ ಮಹೀಪತಿಃ ॥ ೬೩ ॥

ತಸ್ಯ ಭೂಪಸ್ಯ ಸಮಯೇ ಸರ್ವೇ ಭೂಪಾಃ ಸಮಂತತಃ ।
ತ್ಯಕ್ತ್ವಾ ತಂ ಮಂದಪಾಲಂ ಚ ತದ್ದತ್ತೇ ಸಂಸ್ಥಿತಾ ಗೃಹೇ ॥ ೬೪ ॥

ಪಿತುರರ್ಧಂ ಕೃತಂ ರಾಜ್ಯಂ ಕುಂಭಪಾಲಸ್ತತೋಽಭವತ್ ।
ರಾಜನೀಯಾ ಚ ನಗರೀ ಪಿಶಾಚವಿಷಯೇ ಸ್ಥಿತಾ ॥ ೬೫ ॥

ತತ್ಪತಿಶ್ಚ ಮಹಾಮೋದೋ ಮ್ಲೇಚ್ಛಪೈಶಾಚಧರ್ಮಗಃ ।
ಸ ಜಿತ್ವಾ ಬಹುಧಾ ದೇಶಾನ್‌ಲುಂಠಯಿತ್ವಾ ಧನಂ ಬಹು ॥ ೬೬ ॥

---

೬೩. ಆಮೇಲೆ ಮಹೀಚಂದ್ರನ ಪುತ್ರನಾದ ಚಂದ್ರದೇವನು ಪಟ್ಟಕ್ಕೆಬಂದು ತನ್ನ ತಂದೆಯ ಆಳ್ವಿಕೆಗೆ ಸಮನಾಗಿ ರಾಜ್ಯವಾಳಿದನು. ಇವನಿಗೆ ಮಂದಪಾಲನೆಂಬ ಪುತ್ರನಾದನು.

೬೪. ಈ ಮಂದಪಾಲರಾಜನ ಕಾಲದಲ್ಲಿ ಸುತ್ತಮುತ್ತಿನ ಎಲ್ಲ ರಾಜರೂ ರಾಜ್ಯಭಾರ ಮಾಡುವುದನ್ನು ಬಿಟ್ಟು ಇವನಿಂದ ಅನುಗ್ರಹಿಸಲ್ಪಟ್ಟ ಮನೆಗಳಲ್ಲಿ ವಾಸ ಮಾಡತೊಡಗಿದನು. (ಎಂದರೆ ಈ ಮಂದಪಾಲ ಮಹಾರಾಜನು ಎಲ್ಲ ರಾಜರನ್ನೂ ಜಯಿಸಿ ಅವರನ್ನು ಸಾಮಾನ್ಯ ಪ್ರಜೆಗಳಂತೆ ಮಾಡಿಕೊಂಡು ರಾಜ್ಯಭಾರಮಾಡುತ್ತಿದ್ದನು.)

೬೫. ಈ ಮಂದಪಾಲ ಮಹಾರಾಜನು ತನ್ನ ತಂದೆ ಆಳಿದ ಕಾಲದಲ್ಲಿ ಅರ್ಧದಷ್ಟುಕಾಲ ರಾಜ್ಯಭಾರಮಾಡಿದನು. ಬಳಿಕ ಆತನ ಮಗ ಕುಂಭಪಾಲನು ಪಟ್ಟಕ್ಕೆ ಬಂದನು. ಆಗ ಪಿಶಾಚದೇಶದಲ್ಲಿ (ಫಾ) ರಾಜನೀಯವೆಂಬ ಪಟ್ಟಣವಿದ್ದಿತು.

೬೬. ಆ ಪಟ್ಟಣಕ್ಕೆ ಮ್ಲೇಚ್ಛ ಮತ್ತು ಪಿಶಾಚ ಈ ಎರಡು ಧರ್ಮವನ್ನೂ ಅವಲಂಬಿಸಿರುವ ಮಹಮೋದನೆಂಬುವನು ರಾಜನಾಗಿದ್ದನು. ಈ ಮಹಮೋದನು ಅನೇಕ ದೇಶಗಳನ್ನು ಜಯಿಸಿ ಅವುಗಳನ್ನೆಲ್ಲಾ ಲೂಟಿಹೊಡೆದು ದ್ರವ್ಯ ದೋಚಿಕೊಳ್ಳುತ್ತಿದ್ದನು.

ಮ್ಲೇಚ್ಛಧರ್ಮಕರೈಃ ಪ್ರಾಪ್ತೈಃ ಕುಂಭಪಾಲೋ ಯತಃ ಸ್ಥಿತಃ ।
ಕುಂಭಪಾಲಸ್ತು ತಂ ದೃಷ್ಟ್ವಾ ಕಲಿನಾ ನಿರ್ಮಿತಂ ನೃಪ ॥ ೬೭ ॥

ಮಹಾಮೋದಂ ಸಮಾಗಮ್ಯ ಪ್ರಣನಾಮ ಸ ಬುದ್ಧಿಮಾನ್ ।
ತದಾ ಮ್ಲೇಚ್ಛಪತಿಃ ಶೂರೋ ದತ್ವಾ ತಸ್ಮೈ ಧನಂ ಬಹು ॥ ೬೮ ॥

ರಾಜನೀಯಾಂ ಚ ನಗರೀಂ ಪ್ರಾಪ್ತವಾನ್ಮೂರ್ತಿಖಂಡಕಃ ।
ವಿಂಶದಬ್ದಂ ಕೃತಂ ರಾಜ್ಯಂ ಕುಂಭಪಾಲೇನ ಧೀಮತಾ ॥ ೬೯ ॥

ತತ್ಪುತ್ರೋ ದೇವಪಾಲಶ್ಚಾನಂಗಭೂಪಸ್ಯ ಕನ್ಯಕಾಂ ।
ಸಮುದ್ವಾಹ್ಯ ವಿಧಾನೇನ ಚಂದ್ರಕಾಂತಿಂ ತಯಾ ಸಹ ॥ ೭೦ ॥

ಕಾನ್ಯಕುಬ್ಜಗೃಹಂ ಪ್ರಾಪ್ಯ ಜಿತ್ವಾ ಭೂಪಾನನೇಕಶಃ ।
ಪಿತುಸ್ತುಲ್ಯಂ ಕೃತಂ ರಾಜ್ಯಂ ತಸ್ಯೋಭೌ ತನಯೌ ಸ್ಮೃತೌ ॥ ೭೧ ॥

---

೬೭-೬೯. ಹೀಗೆ ಮ್ಲೇಚ್ಛಧರ್ಮಾಸಕ್ತನಾದ ಈ ಮಹಾಮೋದನು ಮುಂದು ವರಿಯುತ್ತಾ ಕುಂಭಪಾಲನಿದ್ದ ದೇಶಕ್ಕೂ ದಂಡೆತ್ತಿಬಂದನು. ಆಗ ಬುದ್ಧಿಶಾಲಿ ಯಾದ ಕುಂಭಪಾಲರಾಜನು ಈ ಮಹಾಮದನು ಕಲಿಯಿಂದ ಕಳುಹಿಸಲ್ಪಟ್ಟಿರುವ ನೆಂಬುದನ್ನು ತಿಳಿದು, ಅವನ ಸಮೀಪಕ್ಕೆ ಬಂದು ಅವನಿಗೆ ನಮಸ್ಕರಿಸಿದನು. ಆಗ ಶೂರನೂ, ವಿಗ್ರಹಭೇದಕನೂ, ಮ್ಲೇಚ್ಛಾಧಿಪತಿಯೂ ಆದ ಅವನು ಆ ಕುಂಭಪಾಲ ನಿಗೆ ಬೇಕಾದಷ್ಟು ದ್ರವ್ಯವನ್ನು ಕೊಟ್ಟು, (ತಾ) ರಾಜನೀಯನಗರಕ್ಕೆ ಬಂದು ಸೇರಿ ದನು. ಹೀಗೆ ಮೇಧಾವಿಯಾದ ಕುಂಭಪಾಲನು ಮಹಾಮದನಿಂದ ಅನುಗೃಹೀತ ನಾಗಿ ತನ್ನ ದೇಶದಲ್ಲಿ ಇಪ್ಪತ್ತುವರ್ಷಗಳಕಾಲ ರಾಜ್ಯವನ್ನು ಆಳಿದನು.

೭೦. ಈ ಕುಂಭಪಾಲನ ಮಗನಾದ ದೇವಪಾಲನು ಅನಂಗರಾಜನ ಮಗಳಾದ ಚಂದ್ರಕಾಂತಿದೇವಿಯನ್ನು ವಿಧಿಪೂರ್ವಕವಾಗಿ ವಿವಾಹಮಾಡಿಕೊಂಡು ಅವಳೊಡನೆ ಪ್ರಯಾಣ ಹೊರಟನು.

೭೧. ಆತನು ಕನ್ಯಾಕುಬ್ಜಪಟ್ಟಣಕ್ಕೆ ಬಂದು ಸೇರಿ ಅನಂತರ ಅನೇಕ ರಾಜ ರನ್ನು ಜಯಿಸಿ ತಂದೆ ಆಳಿದಂತೆಯೇ ಅನೇಕವರ್ಷ ರಾಜ್ಯವಾಳಿದನು. ಇವನಿಗೆ ಜಯಚಂದ್ರ, ರತ್ನಭಾನು, ಎಂಬಿಬ್ಬರು ಮಕ್ಕಳು ಹುಟ್ಟಿದರು.

ಯಚಂದ್ರೇ ರತ್ನಭಾನುರ್ದಿಶಂ ಪೂರ್ವಾಂ ತಥೋತ್ತರಾಂ ।
ಆರ್ಯದೇಶಸ್ಯ ವೈ ಜಿತ್ವಾ ವೈಷ್ಣವೋ ರಾಜ್ಯಮಾಪ್ತವಾನ್ ॥ ೭೨ ॥

ರತ್ನಭಾನೋಶ್ಚ ತನಯೋ ಲಕ್ಷಣೋ ನಾಮ ವಿಶ್ರುತಃ ।
ಕುರುಕ್ಷೇತ್ರೇ ರಣಂ ಪ್ರಾಪ್ಯ ತ್ಯಕ್ತ್ವಾ ಪ್ರಾಣಾನ್ದಿವಂ ಗತಃ ॥ ೭೩ ॥

ಸಮಾಪ್ತಿಮಗಮದ್ವಂಶೋ ವೈಶ್ಯಪಾಲಸ್ಯ ಧೀಮತಃ ।
ಕುಂಭಪಾಲಸ್ಯ ಶೌಕ್ಲಸ್ಯ ವೈಶ್ಯಾನಾಂ ರಕ್ಷಕಸ್ಯ ಚ ॥ ೭೪ ॥

ವಿಷ್ವಕ್ಸೇನಾನ್ವಯೇ ಜಾತಾ ವಿಷ್ವಕ್ಸೇನಾ ನೃಪಾಃ ಸ್ಮೃತಾಃ ।
ವಿಸೇನಸ್ಯ ಕುಲೇ ಜಾತಾ ವಿಸೇನಾಃ ಕ್ಷತ್ರಿಯಾಃ ಸ್ಮೃತಾಃ ॥ ೭೫ ॥

ಗುಹಿಲಸ್ಯ ಕುಲೇ ಜಾತಾ ಗೌಹಿಲಾಃ ಕ್ಷತ್ರಿಯಾ ಹಿ ತೇ ।
ರಾಷ್ಟ್ರಪಾಲಾನ್ವಯೇ ಜಾತಾ ರಾಷ್ಟ್ರಪಾಲಾ ನೃಪಾಃ ಸ್ಮೃತಾಃ ॥ ೭೬ ॥

---

೭೨ ಇವರಲ್ಲಿ ಜಯಚಂದ್ರನು ಆರ್ಯದೇಶದ ಪೂರ್ವದಿಕ್ಕಿನಲ್ಲೂ ರತ್ನಭಾನುವು ಉತ್ತರಕ್ಕಿನಲ್ಲೂ ದಿಗ್ವಿಜಯಮಾಡಿ ರಾಜ್ಯವನ್ನು ವಿಸ್ತರಿಸಿದರು.

೭೩. ರತ್ನಭಾನು ಪುತ್ರನಾಗಿ ವಿಷ್ಣುಭಕ್ತನೆಂದು ಪ್ರಸಿದ್ಧನಾದ ಲಕ್ಷಣನು ಕುರುಕ್ಷೇತ್ರ ಯುದ್ಧಕ್ಕೆ ಹೋಗಿ ಅಲ್ಲಿ ಮೃತನಾಗಿ ಸ್ವರ್ಗಲೋಕವನ್ನು ಸೇರಿದನು.

೭೪ ಇಲ್ಲಿಗೆ ಮೇಧಾವಿಯಾದ ವೈಶ್ಯಪಾಲ, ಕುಂಭಪಾಲ, ಶೌಕ್ಲ, ಮುಂತಾದ ವೈಶ್ಯವಂಶೀಯರ ಮತ್ತು ರಕ್ಷಕವಂಶದವರ ಸಂತತಿಯು ಮುಗಿಯಿತು.

೭೫. ವಿಷ್ವಕ್ಸೇನನ ವಂಶದಲ್ಲಿ ಹುಟ್ಟಿದ ರಾಜರು ವಿಷ್ವಕ್ಸೇನರಾಜರೆನಿಸಿದರು. ವಿಸೇನನ ವಂಶದಲ್ಲಿ ಜನಿಸಿದ ಕ್ಷತ್ರಿಯರು ವಿಸೇನರಾಜರೆಂದೇ ಪ್ರಸಿದ್ಧಿಹೊಂದಿದರು.

೭೬. ಗುಹಿಲನ ವಂಶದಲ್ಲಿ ಜನಿಸಿದವರು ಗೌಹಿಲಕ್ಷತ್ರಿಯರೆಂದೇ ಪ್ರಖ್ಯಾತಿ ಪಡೆದರು. ರಾಷ್ಟ್ರಪಾಲನ ವಂಶದಲ್ಲಿ ಜನಿಸಿದ ರಾಜರು ರಾಷ್ಟ್ರಪಾಲರೆಂದೇ ಪ್ರಸಿದ್ಧರಾದರು.

ವೈಶ್ಯಪಾಲಸ್ಯ ವೈ ವಂಶೇ ಕುಂಭಪಾಲಸ್ಯ ಧೀಮತಃ ।
ವೈಶ್ಯಪಾಲಾಶ್ಚ ರಾಜನ್ಯಾ ಬಭೂವುರ್ಬಹುಧಾ ಹಿ ತೇ ॥ ೭೭ ॥

ಲಕ್ಷಣೇ ಮರಣಂ ಪ್ರಾಪ್ತೇ ಶುಕ್ಲವಂಶಧುರಂಧರೇ ।
ಸರ್ವೇ ತೇ ಕ್ಷತ್ರಿಯಾ ಮುಖ್ಯಾಃ ಕುರುಕ್ಷೇತ್ರೇ ಲಯಂ ಗತಾಃ ॥ ೭೮ ॥

ಶೇಷಾಸ್ತು ಕ್ಷುದ್ರಭೂಪಾಲಾ ವರ್ಣಸಂಕರಸಂಭವಾಃ ।
ಮ್ಲೇಚ್ಛೈಶ್ಚ ದೂಷಿತಾ ಜಾತಾ ಮ್ಲೇಚ್ಛರಾಜ್ಯೇ ಭಯಾನಕೇ ॥ ೭೯ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ಚತುರ್ಥಖಂಡೇ ಕಲಿಯುಗೀಯೇತಿಹಾಸಸಮುಚ್ಚಯೇ ಪ್ರಮರವಂಶವರ್ಣನಂ ನಾಮ ತೃತೀಯೋಽಧ್ಯಾಯಃ.



---

೭೭. ಮೇಧಾವಿಯಾದ ವೈಶ್ಯಪಾಲ ಮತ್ತು ಕುಂಭಪಾಲ ಇವರ ವಂಶದಲ್ಲಿ ಜನಿಸಿದವರು ವೈಶ್ಯಪಾಲರೆಂದು ಪ್ರಸಿದ್ಧಿಪಡೆದು ಅವರು ಅನೇಕ ಪಂಗಡವಾಗಿ ಏರ್ಪಟ್ಟರು.

೭೮. ಶುಕ್ಲವಂಶದ ರಾಜಶ್ರೇಷ್ಠನಾದ ಲಕ್ಷಣನು ಮೃತನಾದ ಮೇಲೆ ಆ ವಂಶದಲ್ಲಿ ಮುಖ್ಯರಾದ ಎಲ್ಲ ಕ್ಷತ್ರಿಯರೂ ಕುರುಕ್ಷೇತ್ರ ಯುದ್ಧದಲ್ಲೇ ಮೃತರಾದರು.

೭೯. ಕಳೆದುಳಿದ ಕೆಲವು ಕ್ಷುದ್ರರಾಜರು ವರ್ಣಸಾಂಕರ್ಯದಿಂದುತ್ಪನ್ನರಾಗಿ ಮ್ಲೇಚ್ಛರಿಂದಲೂ ದೂಷಿಸಲ್ಪಟ್ಟು ಆ ಭಯಂಕರವಾದ ಮ್ಲೇಚ್ಛರಾಜ್ಯದಲ್ಲಿಯೇ ವಾಸಿಸತೊಡಗಿದರು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಪ್ರತಿಸರ್ಗಪರ್ವದ ನಾಲ್ಕನೇ ಖಂಡದಲ್ಲಿ ಕಲಿಯುಗದ ಇತಿಹಾಸಸಮುದಾಯದಲ್ಲಿ ಪ್ರಮರವಂಶ ವರ್ಣನೆಯೆಂಬ ಮೂರನೇ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಪ್ರತಿಸರ್ಗಪರ್ವಣಿ ಚತುರ್ಥಖಂಡೇ

## ಚತುರ್ಥೋಽಧ್ಯಾಯಃ

॥ ಸೂತ ಉವಾಚ ॥

ಭೃಗುವರ್ಯ ಶೃಣು ತ್ವಂ ವೈ ವಂಶಂ ಪರಿಹರಸ್ಯ ಚ ।
ಜಿತ್ವಾ ಬೌದ್ಧಾನ್ ಪರಿಹರೋಽಥರ್ವವೇದಪರಾಯಣಃ ॥ ೧ ॥

ಶಕ್ತಿಂ ಸರ್ವಮಯೀಂ ನಿತ್ಯಾಂ ಧ್ಯಾತ್ವಾ ಪ್ರೇಮಪರೋಽಭವತ್ ।
ಪ್ರಸನ್ನಾ ಸಾ ತದಾ ದೇವೀ ಸಾರ್ಧಯೋಜನಮಾಯತಂ ॥ ೨ ॥

ನಗರಂ ಚಿತ್ರಕೂಟಾದ್ರೌ ಚಕಾರ ಕಲಿನಿರ್ಜರಂ ।
ಕಲಿರ್ಯತ್ರ ಭವೇದ್ಬದ್ಧೋ ನಗರೇಽಸ್ಮಿನ್ಸುರಪ್ರಿಯೇ ॥ ೩ ॥

---

### ನಾಲ್ಕನೆಯ ಅಧ್ಯಾಯ

೧-೩. ಸೂತಮುನಿವರ್ಯನು ಹೇಳುತ್ತಾನೆ.—ಎಲೈ ಭೃಗುಶ್ರೇಷ್ಠನಾದ ಶೌನಕನೇ! ಇನ್ನುಮುಂದೆ ಪರಿಹರ ವಂಶಾವಳಿಯನ್ನು ಹೇಳುತ್ತೇನೆ ಕೇಳು. ಅಥರ್ವಣವೇದಪರಾಯಣನಾದ ಈ ಪರಿಹರರಾಜನು ಬೌದ್ಧರನ್ನೆಲ್ಲಾ ಜಯಿಸಿ ಸರ್ವವ್ಯಾಪಕಳೂ ನಿತ್ಯಳೂ ಆದ ಶಕ್ತಿದೇವತೆಯನ್ನು ಧ್ಯಾನಮಾಡುತ್ತಾ ಆ ದೇವತಾ ಪ್ರೇಮಪರನಾಗಿ ಇರುತ್ತಿದ್ದನು. ಆಗ ಆ ಶಕ್ತಿದೇವತೆಯು ಪ್ರಸನ್ನಳಾಗಿ ತನ್ನ ಭಕ್ತನಾದ ಪರಿಹರನಿಗೋಸ್ಕರ ಅರ್ಧಯೋಜನ ವಿಸ್ತಾರವುಳ್ಳ ಕಲಿನಿರ್ಜರವೆಂಬ ಒಂದು ಪಟ್ಟಣವನ್ನು ಚಿತ್ರಕೂಟಪರ್ವತದಲ್ಲಿ ರಚಿಸಿದಳು.

**ಅತಃ ಕಲಿಂಜರೋ ನಾಮ್ನಾ ಪ್ರಸಿದ್ಧೋಽಭೂನ್ಮಹೀತಲೇ ।**
**ದ್ವಾದಶಾಬ್ದಂ ಕೃತಂ ರಾಜ್ಯಂ ತೇನ ಪೂರ್ವಪ್ರದೇಶಕೇ ॥ ೪ ॥**

**ಗೌರವರ್ಮಾ ತಸ್ಯ ಸುತಃ ಕೃತಂ ರಾಜ್ಯಂ ಪಿತುಃ ಸಮಂ ।**
**ಸ್ವಾನುಜಂ ಘೋರವರ್ಮಾಣಂ ತತ್ರಾಸ್ಥಾಪ್ಯ ಮುದಾನ್ವಿತಃ ॥ ೫ ॥**

**ಗೌಡದೇಶಂ ಸಮಾಗಮ್ಯ ತತ್ರ ರಾಜ್ಯಮಕಾರಯತ್ ।**
**ಸುಪರ್ಣೋ ನಾಮ ನೃಪತಿಸ್ತತೋಽಭೂದ್ಗೌರವರ್ಮಣಃ ॥ ೬ ॥**

**ಪಿತುಸ್ತುಲ್ಯಂ ಕೃತಂ ರಾಜ್ಯಂ ರೂಪಣಸ್ತತ್ಸುತೋಽಭವತ್ ।**
**ಪಿತುಸ್ತುಲ್ಯಂ ಕೃತಂ ರಾಜ್ಯಂ ಕಾಮವರ್ಮಾ ಸುತೋಽಭವತ್ ॥ ೭ ॥**

**ಶಕೋ ನಾಮ ತತೋ ರಾಜಾ ಮಹಾಲಕ್ಷ್ಮೀಂ ಸನಾತನೀಂ ।**
**ತ್ರಿವರ್ಷಾಂತೇ ಚ ಸಾ ದೇವೀ ಕಾಮಾಕ್ಷೀರೂಪಧಾರಿಣೀ ॥ ೮ ॥**

---

೪. ಕಲಿಯು ಬಂಧನಕ್ಕೊಳಗಾದುದರಿಂದ ಈ ಪಟ್ಟಣಕ್ಕೆ ಕಲಿಂಜರವೆಂಬ ಹೆಸರು ಲೋಕಪ್ರಸಿದ್ಧವಾಯಿತು. ದೇವತೆಗಳಿಗೆ ಇಷ್ಟವಾದ ಈ ಕಲಿಂಜರಪಟ್ಟಣದಲ್ಲಿ ಪರಿಹರನು ಪೂರ್ವದೇಶದಲ್ಲಿ ಹನ್ನೆರಡು ವರ್ಷಕಾಲ ರಾಜ್ಯವಾಳಿದನು.

೫. ಅನಂತರ ಇವನ ಮಗನಾದ ಗೌರವರ್ಮನೆಂಬವನು ಪಟ್ಟಕ್ಕೆ ಬಂದು ತನ್ನ ತಂದೆ ಆಳಿದಷ್ಟು ವರ್ಷಕಾಲ ರಾಜ್ಯಭಾರಮಾಡಿದನು. ಬಳಿಕ ತನ್ನ ತಮ್ಮನಾದ ಘೋರವರ್ಮನನ್ನು ಸಂತೋಷದಿಂದ ತನ್ನ ರಾಜ್ಯದಲ್ಲಿರಿಸಿದನು.

೬ ತಾನು ಅಲ್ಲಿಂದ ಹೊರಟು ಗೌಡದೇಶಕ್ಕೆ ಬಂದು ಅಲ್ಲಿ ರಾಜ್ಯವನ್ನು ಆಳತೊಡಗಿದನು. ರಾಜನಾದ ಈ ಗೌರವರ್ಮನ ಅನಂತರ ಅವನ ಮಗ ಸುಪರ್ಣನೆಂಬವನು ಪಟ್ಟಕ್ಕೆ ಬಂದು ಪ್ರಸಿದ್ಧನಾದನು.

೭-೮. ಈ ಸುಪರ್ಣನು ತಂದೆಯಂತೆಯೇ ರಾಜ್ಯಭಾರಮಾಡಿದನು. ಆತನಿಗೆ ರೂಪಣನೆಂಬ ಹೆಸರುಳ್ಳ ಪುತ್ರನು ಜನಿಸಿದನು. ಈ ರೂಪಣನು ಪಟ್ಟಕ್ಕೆ ಬಂದು ತಂದೆಯು ಆಳಿದಷ್ಟು ವರ್ಷವೇ ಅವನಿಗೆ ಸಮನಾಗಿ ರಾಜ್ಯಭಾರಮಾಡಿದನು. ಅನಂತರ ಕಾಮವರ್ಮನೆಂಬ ಆತನ ಪುತ್ರನು ಪಟ್ಟಕ್ಕೆ ಬಂದನು ಶಕನೆಂದು ಪ್ರಸಿದ್ಧನಾದ ಈ ರಾಜನು ಮೂರುವರ್ಷಕಾಲ ಸನಾತನಿಯಾದ ಮಹಾಲಕ್ಷ್ಮಿಯನ್ನು ಸೇವಿಸಿದನು.

ಸ್ವಭಕ್ತಪಾಲನಾ ಚೈವ ತತ್ರ ವಾಸಮಕಾರಯತ್ ।
ಶತಾರ್ಧಾಬ್ದಂ ಕೃತಂ ರಾಜ್ಯಂ ತೇನ ವೈ ಕಾಮವರ್ಮಣಾ ॥ ೯ ॥

ಮಿಥುನಂ ಜನಯಾಮಾಸ ಭೋಗೋ ಭೋಗವತೀ ಹಿ ಸಾ ।
ವಿಕ್ರಮಾಯೈವ ನೃಪತಿಃ ಸುತಾಂ ಭೋಗವತೀಂ ದದೌ ॥ ೧೦ ॥

ಸ್ವರಾಜ್ಯಂ ಚ ಸ್ವಪುತ್ರಾಯ ಪ್ರದದೌ ಭೋಗವರ್ಮಣೇ ।
ಪಿತುಸ್ತುಲ್ಯಂ ಕೃತಂ ರಾಜ್ಯಂ ಕಾಲಿವರ್ಮಾ ಸುತೋಽಭವತ್ ॥ ೧೧ ॥

ಮಹೋತ್ಸವಂ ಮಹಾಕಾಲ್ಯಾಃ ಕೃತವಾನ್ಸ ಚ ಭೂಪತಿಃ ।
ತಸ್ಮೈ ಪ್ರಸನ್ನಾ ವರದಾ ಕಾಲೀ ಭೂತ್ವಾ ಸ್ವಯಂ ಸ್ಥಿತಾ ॥ ೧೨ ॥

---

೯. ಮೂರುವರ್ಷದ ಕೊನೆಯಲ್ಲಿ ಆ ಮಹಾಲಕ್ಷ್ಮೀದೇವಿಯು, ಕಾಮಾಕ್ಷೀ ರೂಪವನ್ನು ಧರಿಸಿ ಭಕ್ತರನ್ನು ರಕ್ಷಿಸುವುದಕ್ಕಾಗಿ ಆತನ ರಾಜ್ಯದಲ್ಲಿ ನೆಲಸಿದಳು. ರಾಜನಾದ ಕಾಮವರ್ಮನು ಐವತ್ತುವರ್ಷಕಾಲ ನಿರಾತಂಕವಾಗಿ ರಾಜ್ಯಭಾರ ಮಾಡಿದನು.

೧೦ ಈ ಕಾಮವರ್ಮನಿಗೆ ಭೋಗವರ್ಮ, ಮತ್ತು ಭೋಗವತೀ ಎಂಬ ಅವಳಿ ಮಕ್ಕಳು ಜನಿಸಿದರು. ಆ ರಾಜನು ತನ್ನ ಮಗಳಾದ ಭೋಗವತಿಯನ್ನು ವಿಕ್ರಮರಾಜನಿಗೆ ಕೊಟ್ಟು ಮದುವೆಮಾಡಿದನು.

೧೧. ತನ್ನ ಮಗನಾದ ಭೋಗವರ್ಮನು ಪ್ರಾಪ್ತವಯಸ್ಕನಾಗುತ್ತಲೆ ತನ್ನ ರಾಜ್ಯವನ್ನು ಅವನಿಗೆ ವಹಿಸಿದನು. ಈ ಭೋಗವರ್ಮನು ತನ್ನ ತಂದೆಯ ಸಮಾನ ನೆನಿಸಿ ರಾಜ್ಯಭಾರಮಾಡಿದನು. ಬಳಿಕ ಅವನ ಮಗನಾದ ಕಾಲೀವರ್ಮನು ಪಟ್ಟಕ್ಕೆ ಬಂದನು.

೧೨. ಈ ಕಾಲೀವರ್ಮರಾಜನು ಮಹಾಕಾಳೀದೇವಿಗೆ ದೊಡ್ಡ ಉತ್ಸವ ಮಾಡಿಸಿದನು. ಇದರಿಂದ ಪ್ರಸನ್ನೆಯಾದ ಆ ಕಾಳೀದೇವಿಯು ಆತನ ರಾಜ್ಯದಲ್ಲಿ ತಾನೇ ಪ್ರತ್ಯಕ್ಷವಾಗಿ ನೆಲಸಿದಳು

**ಕಲಿಕಾ ಬಹುಪುಷ್ಪಾಣಾಂ ಸಾ ಚಕಾರ ಸ್ವಹರ್ಷತಃ ।**
**ತಾಭಿರ್ಭವಂ ಚ ನಗರಂ ಸಂಜಾತಂ ಚ ಮನೋಹರಂ ॥ ೧೩ ॥**

**ಕಲಿಕಾತಾ ಪುರೀ ನಾಮ್ನಾ ಪ್ರಸಿದ್ಧಾಭೂನ್ಮಹೀತಲೇ ।**
**ಕೌಶಿಕಸ್ತಸ್ಯ ತನಯಃ ಪಿತುಸ್ತುಲ್ಯಂ ಕೃತಂ ಪದಂ ॥ ೧೪ ॥**

**ಕಾತ್ಯಾಯನಸ್ತಸ್ಯ ಸುತಃ ಪಿತುಸ್ತುಲ್ಯಂ ಕೃತಂ ಪದಂ ।**
**ತಸ್ಯ ಪುತ್ರೋ ಹೇಮವತಃ ಪಿತುಸ್ತುಲ್ಯಂ ಕೃತಂ ಪದಂ ॥ ೧೫ ॥**

**ಶಿವವರ್ಮಾ ಚ ತತ್ಪುತ್ರಃ ಪಿತುಸ್ತುಲ್ಯಂ ಕೃತಂ ಪದಂ ।**
**ಭವವರ್ಮಾ ಚ ತತ್ಪುತ್ರಃ ಪಿತುಸ್ತುಲ್ಯಂ ಕೃತಂ ಪದಂ ॥ ೧೬ ॥**

---

೧೩. ಪ್ರಸನ್ನೆಯಾದ ದೇವಿಯು ತನಗೆ ಸಂತೋಷ ಉಂಟಾಗಲಾಗಿ ಬೇಕಾದಷ್ಟು ಪುಷ್ಪಕಲಿಕೆಗಳನ್ನು (ಎಂದರೆ ಮೊಗ್ಗುಗಳನ್ನು) ನಿರ್ಮಿಸಿದಳು. ಆ ಕಲಿಕೆ (ಮೊಗ್ಗು) ಗಳಿಂದ ಒಂದು ಸುಂದರವಾದ ಪಟ್ಟಣವುಂಟಾಯಿತು.

೧೪. ಕಲಿಕೆಗಳಿಂದ ಉಂಟಾದುದರಿಂದ ಈ ಪಟ್ಟಣಕ್ಕೆ ಭೂಮಂಡಲದಲ್ಲಿ ಕಲಿಕಾತಾ (ಕಲ್ಕತ್ತಾ) ಎಂಬ ಹೆಸರು ಪ್ರಸಿದ್ಧವಾಯಿತು. ಆ ಕಾಲಿವರ್ಮನ ಅನಂತರ ಅವನ ಪುತ್ರನಾದ ಕೌಶಿಕನು ಪಟ್ಟಕ್ಕೆ ಬಂದು ತನ್ನ ತಂದೆಗೆ ಸಮನಾಗಿ ರಾಜ್ಯಭಾರ ಮಾಡಿದನು.

೧೫. ಬಳಿಕ ಅವನ ಪುತ್ರನಾದ ಕಾತ್ಯಾಯನನು ಪಟ್ಟಾಭಿಷಿಕ್ತನಾಗಿ ತನ್ನ ತಂದೆಯ ಆಳ್ವಿಕೆಗೆ ಸಮನೆನ್ನುವಂತೆ ರಾಜ್ಯಭಾರಮಾಡಿದನು. ಕಾಲಕ್ರಮದಲ್ಲಿ ಅವನ ಮಗನಾದ ಹೇಮವತನೆಂಬವನು ಪಟ್ಟಕ್ಕೆ ಬಂದು ತಂದೆಯಂತೆಯೇ ರಾಜ್ಯವಾಳಿದನು.

೧೬. ಬಳಿಕ ಅವನ ಮಗನಾದ ಶಿವವರ್ಮನು ಪಟ್ಟಕ್ಕೆ ಬಂದು ತನ್ನ ತಂದೆಯ ಆಳ್ವಿಕೆಗೆ ಸಮನಾಗಿ ರಾಜ್ಯಭಾರಮಾಡಿದನು. ಅನಂತರ ಅವನ ಮಗನಾದ ಭವವರ್ಮನು ಪಟ್ಟಕ್ಕೆ ಬಂದು ತಂದೆಯಂತೆಯೇ ಪ್ರಜಾಸಂರಕ್ಷಣೆ ಮಾಡಿದನು.

ರುದ್ರವರ್ಮಾ ಚ ತತ್ಪುತ್ರಃ ಕೃತಂ ರಾಜ್ಯಂ ಪಿತುಃ ಸಮಂ ।
ಭೋಜವರ್ಮಾ ಚ ತತ್ಪುತ್ರಸ್ತ್ಯಕ್ತ್ವಾ ವೈ ಪೈತೃಕಂ ಪದಂ ॥ ೧೭ ॥

ಭೋಜರಾಷ್ಟ್ರಂ ವನೋದ್ದೇಶೇ ಕಾರಯಾಮಾಸ ವೀರ್ಯವಾನ್ ।
ಪಿತುಸ್ತುಲ್ಯಂ ಕೃತಂ ರಾಜ್ಯಂ ಗವವರ್ಮಾ ನೃಪೋಽಭವತ್ ॥ ೧೮ ॥

ಪಿತುಸ್ತುಲ್ಯಂ ಕೃತಂ ರಾಜ್ಯಂ ವಿಂಧ್ಯವರ್ಮಾ ನೃಪೋಽಭವತ್ ।
ಸ್ವಾನುಜಾಯ ಸ್ವಕಂ ರಾಜ್ಯಂ ದತ್ವಾ ವಂಗಮುಪಾಯಯೌ ॥ ೧೯ ॥

ಪಿತುಸ್ತುಲ್ಯಂ ಕೃತಂ ರಾಜ್ಯಂ ಸುಖಸೇನಸ್ತತೋಽಭವತ್ ।
ಪಿತುಸ್ತುಲ್ಯಂ ಕೃತಂ ರಾಜ್ಯಂ ಬಲಾಕಸ್ತಸ್ಯ ಚಾತ್ಮಜಃ ॥ ೨೦ ॥

---

೧೭. ಅನಂತರ ಅವನ ಮಗನಾದ ರುದ್ರವರ್ಮನು ರಾಜ್ಯಕ್ಕೆ ಬಂದು ತನ್ನ ತಂದೆಗೆ ಯಾವವಿಷಯದಲ್ಲಿಯೂ ಕಡಿಮೆಯಿಲ್ಲದಂತೆ ರಾಜ್ಯವಾಳಿದನು. ಅವನ ಕಾಲಾನಂತರ ಅವನ ಪುತ್ರನಾದ ಭೋಜವರ್ಮನು ತನ್ನ ತಂದೆಯ ರಾಜಧಾನಿಯನ್ನು ಬಿಟ್ಟು ಹೊರಟನು.

೧೮. ಶೂರನಾದ ಈತನು ವನಪ್ರಾಂತದಲ್ಲಿ ಹೊಸರಾಜ್ಯವನ್ನು ಕಟ್ಟಿದನು. ಅದಕ್ಕೆ ಭೋಜರಾಷ್ಟ್ರವೆಂದು ಹೆಸರಾಯಿತು. ಆತನು ತಂದೆ ಆಳಿದಷ್ಟುವರ್ಷ ರಾಜ್ಯವಾಳಿದನು. ಆ ಬಳಿಕ ಅವನ ಮಗನಾದ ಗವವರ್ಮನೆಂಬವನು ರಾಜ್ಯಕ್ಕೆ ಬಂದನು. ಆತನೂ ತಂದೆ ಆಳಿದಷ್ಟುವರ್ಷ ರಾಜ್ಯಭಾರಮಾಡಿದನು.

೧೯. ಅನಂತರ ಅವನ ಸುತನಾದ ವಿಂಧ್ಯವರ್ಮನು ಪಟ್ಟಾಭಿಷಿಕ್ತನಾದನು. ಆತನು ತನಗೆ ಲಭಿಸಿದ ರಾಜ್ಯವನ್ನು ತನ್ನ ತಮ್ಮನಿಗೆ ವಹಿಸಿ, ತಾನು ವಂಗದೇಶಕ್ಕೆ ಹೋಗಿ ತಂದೆ ಆಳಿದಷ್ಟುವರ್ಷ ರಾಜ್ಯವಾಳಿದನು.

೨೦. ಅವನ ಅನಂತರ ಆತನ ಮಗನಾದ ಸುಖಸೇನನೆಂಬವನು ಪಟ್ಟವೇರಿದನು. ಅವನೂ ತಂದೆಯ ಆಳ್ವಿಕೆಗೆ ಸಮನೆನಿಸುವಂತೆ ರಾಜ್ಯವಾಳಿದನು. ಅನಂತರ ಅವನ ಮಗನಾದ ಬಲಾಕನೆಂಬವನು ರಾಜ್ಯಸೂತ್ರವನ್ನು ವಹಿಸಿ ಹತ್ತು ವರ್ಷಕಾಲ ರಾಜ್ಯಭಾರಮಾಡಿದನು.

**ದಶವರ್ಷಂ ಕೃತಂ ರಾಜ್ಯಂ ಲಕ್ಷ್ಮಣಸ್ತತ್ಸುತೋಽಭವತ್ ।**
**ಪಿತುಸ್ತುಲ್ಯಂ ಕೃತಂ ರಾಜ್ಯಂ ಮಾಧವಸ್ತತ್ಸುತೋಽಭವತ್ ॥ ೨೧ ॥**

**ಪಿತುಸ್ತುಲ್ಯಂ ಕೃತಂ ರಾಜ್ಯಂ ಕೇಶವಸ್ತತ್ಸುತೋಽಭವತ್ ।**
**ಪಿತುಸ್ತುಲ್ಯಂ ಕೃತಂ ರಾಜ್ಯಂ ಸುರಸೇನಸ್ತತೋಽಭವತ್ ॥ ೨೨ ॥**

**ಪಿತುಸ್ತುಲ್ಯಂ ಕೃತಂ ರಾಜ್ಯಂ ತತೋ ನಾರಾಯಣೋಽಭವತ್ ।**
**ಪಿತುಸ್ತುಲ್ಯಂ ಕೃತಂ ರಾಜ್ಯಂ ಶಾಂತಿವರ್ಮಾ ಸುತೋಽಭವತ್ ॥ ೨೩ ॥**

**ಗಂಗಾಕೂಲೇ ಶಾಂತಿಪುರಂ ರಚಿತಂ ತೇನ ಧೀಮತಾ ।**
**ನಿವಾಸಂ ಕೃತವಾನ್ ಭೂಪಃ ಪಿತುಸ್ತುಲ್ಯಂ ಕೃತಂ ಪದಂ ॥ ೨೪ ॥**

---

೨೧. ಅವನ ಅನಂತರ ಅವನ ಮಗನಾದ ಲಕ್ಷ್ಮಣನು ಪಟ್ಟಕ್ಕೆ ಬಂದು ತಂದೆ ಆಳಿದಷ್ಟುವರ್ಷ ರಾಜ್ಯವಾಳಿದನು. ಆ ಬಳಿಕ ಅವನ ಮಗನಾದ ಮಾಧವನೆಂಬವನು ರಾಜ್ಯಕ್ಕೆ ಬಂದು ತಂದೆಯಂತೆ ಅಷ್ಟೇವರ್ಷ ವಿಹಿತವಾಗಿ ರಾಜ್ಯವನ್ನು ಆಳಿದನು.

೨೨. ಆ ಬಳಿಕ ಅವನ ಪುತ್ರನಾದ ಕೇಶವನು ಪಟ್ಟಾಭಿಷಿಕ್ತನಾಗಿ ತಂದೆಯ ರಾಜ್ಯಭಾರಕ್ಕೆ ಸಮಾನವಾಗಿ ರಾಜ್ಯವನ್ನು ಆಳಿದನು. ಆತನ ಅನಂತರ ಸುರಸೇನನೆಂಬವನು ರಾಜ್ಯವನ್ನು ವಹಿಸಿ ತನ್ನ ತಂದೆಯು ಆಳಿದಷ್ಟುವರ್ಷ ರಾಜ್ಯವನ್ನು ರಕ್ಷಿಸಿದನು.

೨೩. ಬಳಿಕ ನಾರಾಯಣನೆಂಬವನು ಪಟ್ಟಕ್ಕೆ ಬಂದು ತನ್ನ ತಂದೆ ಆಳಿದಷ್ಟು ವರ್ಷ ರಾಜ್ಯಸಂರಕ್ಷಣೆಮಾಡಿದನು. ಬಳಿಕ ಅವನ ಮಗನಾದ ಶಾಂತಿವರ್ಮನು ಪಟ್ಟಾಭಿಷಿಕ್ತನಾಗಿ ತಂದೆ ಆಳಿದಷ್ಟುವರ್ಷ ರಾಜ್ಯವಾಳಿದನು.

೨೪. ಬುದ್ಧಿಶಾಲಿಯಾದ ಆ ಶಾಂತಿವರ್ಮನು ಗಂಗಾತೀರದಲ್ಲಿ ಶಾಂತಿಪುರವೆಂಬ ನಗರವನ್ನು ನಿರ್ಮಿಸಿ ಅದನ್ನು ತನ್ನ ನಿವಾಸಸ್ಥಾನವನ್ನಾಗಿ ಮಾಡಿಕೊಂಡು ತಂದೆ ಆಳಿದಷ್ಟುವರ್ಷ ವಿತರಣೆಯಿಂದ ರಾಜ್ಯವಾಳಿದನು.

ನದೀವರ್ಮಾ ತಸ್ಯ ಸುತೋ ಗಂಗಾದತ್ತವರೋ ಬಲೀ ।
ಚಕಾರ ನಗರೀಂ ರಮ್ಯಾಂ ನದೀಹಾಂ ಗೌಡರಾಷ್ಟ್ರಗಾಂ ॥ ೨೫ ॥

ಗಂಗಯಾ ಚ ತದಾಹೂತೋಭಿಜ್ಞೋ ವಿದ್ಯಾಧರಃ ಸ್ವಯಂ ।
ತೇನೈವ ರಕ್ಷಿತಾ ಚಾಸೀತ್ಪುರೀ ವೇದಪರಾಯಣಾ ॥ ೨೬ ॥

ವಿಂಶದ್ವರ್ಷಂ ಕೃತಂ ರಾಜ್ಯಂ ತೇನ ರಾಜ್ಞಾ ಮಹಾತ್ಮನಾ ।
ಗಂಗಾವಂಶಸ್ತತೋ ಜಾತೋ ವಿಶ್ರುತೋಽಭೂನ್ಮಹೀತಲೇ ॥ ೨೭ ॥

ಶಾಙ್ಗ್ರದೇವಸ್ತಸ್ಯ ಸುತೋ ಬಲವಾನ್ ಹರಿಪೂಜಕಃ ।
ಗೌಡದೇಶಮುಪಾಗಮ್ಯ ಹರಿಧ್ಯಾನಪರೋಽಭವತ್ ॥ ೨೮ ॥

ದಶವರ್ಷಂ ಕೃತಂ ರಾಜ್ಯಂ ಗಂಗಾದೇವಸ್ತು ತತ್ಸುತಃ ।
ವಿಂಶದ್ವರ್ಷಂ ಕೃತಂ ರಾಜ್ಯಂ ಚಾನಂಗಸ್ತಸ್ಯ ಭೂಪತಿಃ ॥ ೨೯ ॥

---

೨೫. ಆ ಶಾಂತಿವರ್ಮನಿಗೆ ಗಂಗೆಯ ಪ್ರಸಾದದಿಂದ ಜನಿಸಿ ಬಲಶಾಲಿಯೆನಿಸಿದ ನದೀವರ್ಮನೆಂಬವನು ಗೌಡದೇಶದಲ್ಲಿ ನದೀಹಾ (ನದಿಯಾ) ಎಂಬ ಸುಂದರವಾದ ನಗರವನ್ನು ಕಟ್ಟಿಸಿದನು.

೨೬. ಗಂಗಾದೇವಿಯು ಅಭಿಜ್ಞನಾದ ವಿದ್ಯಾಧರನನ್ನು ತಾನೇ ಬರಮಾಡಿದಳು. ಆ ವಿದ್ಯಾಧರನು ಆ ನಗರವನ್ನು ರಕ್ಷಿಸುತ್ತಿದ್ದನು. ಆ ಪಟ್ಟಣದಲ್ಲಿ ವೇದಶಾಸ್ತ್ರಗಳ ಅಭ್ಯಾಸವು ಸರ್ವದಾ ನಡೆಯುತ್ತಿದ್ದಿತು.

೨೭. ಮಹಾತ್ಮನಾದ ನದೀವರ್ಮನು ಇಪ್ಪತ್ತುವರ್ಷಕಾಲ ರಾಜ್ಯಭಾರ ಮಾಡಿದನು. ಹೀಗೆ ಗಂಗಾವರಪ್ರಸಾದದಿಂದ ಏಳಿಗೆ ಹೊಂದಿದ ಆ ವಂಶಕ್ಕೆ ಭೂಮಂಡಲದಲ್ಲಿ ಗಂಗಾವಂಶವೆಂಬ ಹೆಸರೇ ಪ್ರಸಿದ್ಧವಾಯಿತು.

೨೮. ಅವನ ಮಗನಾದ ಶಾಙ್ಗ್ರದೇವನು ವಿಷ್ಣುಪೂಜಕನೂ ಬಲಶಾಲಿಯೂ ಆಗಿ, ಗೌಡದೇಶದಲ್ಲಿ ತನ್ನ ಪೂರ್ವಿಕರು ರಚಿಸಿದ್ದ ನದೀಹಾಪಟ್ಟಣಕ್ಕೆ ಬಂದು ಹರಿಧ್ಯಾನದಲ್ಲಿ ಆಸಕ್ತನಾಗಿನಿಂತನು.

೨೯. ಬಳಿಕ ಅವನ ಪುತ್ರನಾದ ಗಂಗಾದೇವನೆಂಬವನು ಪಟ್ಟಕ್ಕೆ ಬಂದು ಹತ್ತುವರ್ಷಕಾಲ ರಾಜ್ಯವಾಳಿದನು. ಆ ಮಹಾರಾಜನ ಮಗನಾದ ಅನಂಗನು ಇಪ್ಪತ್ತುವರ್ಷಕಾಲ ರಾಜ್ಯವನ್ನು ಆಳಿದನು.

**ತನಯೋ ಬಲವಾಂಶ್ಚಾಸೀದ್ಗೌಡದೇಶಮಹೀಪತಿಃ ।**
**ಪಿತುಸ್ತುಲ್ಯಂ ಕೃತಂ ರಾಜ್ಯಂ ತತೋ ರಾಜೇಶ್ವರೋಽಭವತ್ । ॥ ೩೦ ॥**

**ಪಿತುಸ್ತುಲ್ಯಂ ಕೃತಂ ರಾಜ್ಯಂ ನೃಸಿಂಹಸ್ತನಯೋಽಭವತ್ ।**
**ಪಿತುಸ್ತುಲ್ಯಂ ಕೃತಂ ರಾಜ್ಯಂ ಕಲಿವರ್ಮಾ ಸುತೋಽಭವತ್ ॥ ೩೧ ॥**

**ರಾಷ್ಟ್ರದೇಶಮುಪಾಗಮ್ಯ ಜಿತ್ವಾ ತಸ್ಯ ನೃಪಂ ಬಲೀ ।**
**ಮಹಾವತೀಂ ಪುರೀಂ ರಮ್ಯಾಮಧ್ಯಾಸ್ಯ ಸುಖಿತೋಽಭವತ್ ॥ ೩೨ ॥**

**ಪಿತುಸ್ತುಲ್ಯಂ ಕೃತಂ ರಾಜ್ಯಂ ಧೃತಿವರ್ಮಾ ಸುತೋಽಭವತ್ ।**
**ಪಿತುಸ್ತುಲ್ಯಂ ಕೃತಂ ರಾಜ್ಯಂ ತಸ್ಯ ಪುತ್ರೋ ಮಹೀಪತಿಃ ॥ ೩೩ ॥**

**ಜಯಚಂದ್ರಾಜ್ಞಯಾ ಭೂಪ ಉರ್ವೀಮಾಯಾಮಿತಿ ಸ್ಮೃತಾಂ ।**
**ನಗರೀಂ ಕಾರಯಾಮಾಸ ತತ್ರ ವಾಸಮಕಾರಯತ್ ॥ ೩೪ ॥**

---

೩೦. ಅವನ ಅನಂತರ ರಾಜೇಶ್ವರನೆಂಬವನು ಪಟ್ಟಕ್ಕೆ ಬಂದು ತನ್ನ ತಂದೆಯ ಆಳ್ವಿಕೆಗೆ ಸಮಾನವೆನಿಸುವಂತೆ ರಾಜ್ಯವಾಳಿದನು.

೩೧. ಆ ಬಳಿಕ ಅವನ ಮಗನಾದ ನರಸಿಂಹನೆಂಬುವನು ಪಟ್ಟಾಭಿಷಿಕ್ತನಾಗಿ ತನ್ನ ತಂದೆಯ ರಾಜ್ಯಭಾರಕ್ಕೆ ಸರಿದೂಗುವಂತೆ ರಾಜ್ಯವಾಳಿದನು.

೩೨. ಬಳಿಕ ಅವನ ಮಗ ಕಲಿವರ್ಮನೆಂಬ ಬಲಿಷ್ಠನು ಪಟ್ಟಕ್ಕೆ ಬಂದು, ತಂದೆಯಂತೆಯೇ ರಾಜ್ಯವಾಳಿದನು. ಆ ಕಲಿವರ್ಮನು ರಾಷ್ಟ್ರದೇಶಕ್ಕೆ ದಂಡೆತ್ತಿ ಹೋಗಿ ಅಲ್ಲಿನ ರಾಜರನ್ನು ಜಯಿಸಿ ಸುಂದರವಾದ ಮಹಾವತೀನಗರವನ್ನು ಸೇರಿ ಆ ನಗರದಲ್ಲಿ ಸುಖವಾಗಿದ್ದನು.

೩೩. ಅನಂತರ ಅವನ ಮಗನಾದ ಧೃತಿವರ್ಮನು ಪಟ್ಟಕ್ಕೆ ಬಂದು ತಂದೆಗೆ ಸಮನಾಗಿ ರಾಜ್ಯಭಾರಮಾಡಿದನು. ಅನಂತರ ಅವನ ಮಗ ಮಹೀಪತಿಯು ಪಟ್ಟಕ್ಕೆ ಬಂದನು.

೩೪. ಆತನೂ ತಂದೆಯು ಆಳಿದಷ್ಟು ಕಾಲವೇ ರಾಜ್ಯವಾಳಿದನು. ಇವನು ಜಯಚಂದ್ರನ ಆಜ್ಞೆಯಂತೆ ಉರ್ವೀಮಾಯಾ ಎಂದು ಹೆಸರಾದ ನಗರವನ್ನು ನಿರ್ಮಿಸಿ ಅಲ್ಲಿ ವಾಸಿಸತೊಡಗಿದನು.

ಕುರುಕ್ಷೇತ್ರೇ ಹತಾಃ ಸರ್ವೇ ಕ್ಷತ್ರಿಯಾಶ್ಚಂದ್ರವಂಶಿನಃ ।
ತದಾ ಮಹೀಪತೀ ರಾಜಾ ಮಹಾವತ್ಯಧಿಪೋಽಭವತ್ ॥ ೩೫ ॥

ವಿಂಶದ್ವರ್ಷಂ ಕೃತಂ ರಾಜ್ಯಂ ಸಹೋದ್ದೀನೇನ ವೈ ತತಃ ।
ಕುರುಕ್ಷೇತ್ರೇ ಮೃತಿಂ ಪ್ರಾಪ್ತಾಃ ಸುಯೋಧನಕಲಾಂಶಕಾಃ ॥ ೩೬ ॥

ಘೋರವರ್ಮಾ ತು ನೃಪತಿಃ ಸುತಃ ಪರಿಹರಸ್ಯ ವೈ ।
ಕಲಿಂಜರೇ ಕೃತಂ ರಾಜ್ಯಂ ಶಾರ್ದೂಲಸ್ತತ್ಸುತೋಽಭವತ್ ॥ ೩೭ ॥

ತದನ್ವಯೇ ಚ ಯೇ ಭೂಪಾಃ ಶಾರ್ದೂಲೀಯಾಃ ಪ್ರಕೀರ್ತಿತಾಃ ।
ಭೂಪಾನಾಂ ಬಹುಧಾ ರಾಷ್ಟ್ರಂ ಶಾರ್ದೂಲಾನ್ವಯಸಂಭವಂ ॥ ೩೮ ॥

ಬಭೂವ ಸರ್ವತೋ ಭೂಮೌ ಮಹಾಮಾಯಾಪ್ರಸಾದತಃ ।
ಇತಿ ತೇ ಕಥಿತಂ ವಿಪ್ರ ಪಾವಕೀಯಮಹೀಭುಜಾಂ ॥ ೩೯ ॥

---

೩೫. ಚಂದ್ರವಂಶದ ರಾಜರೆಲ್ಲರೂ ಕುರುಕ್ಷೇತ್ರಯುದ್ಧದಲ್ಲಿ ಧ್ವಂಸವಾದ ಬಳಿಕ ಮಹೀಪತಿರಾಜನೇ ಮಹಾವತೀನಗರಕ್ಕೆ ಅಧಿಪತಿಯಾದನು.

೩೬. ಅನಂತರ ಸಹೋದ್ದೀನನು ರಾಜ್ಯವನ್ನಾಕ್ರಮಿಸಿ ಇಪ್ಪತ್ತುವರ್ಷ ರಾಜ್ಯವಾಳಿದನು. ಸುಯೋಧನಾಂಶದಿಂದ ಜನಿಸಿದ್ದವರೆಲ್ಲಾ ಕುರುಕ್ಷೇತ್ರ ಯುದ್ಧದಲ್ಲಿ ಮೃತರಾದರು.

೩೭. ಪರಿಹರರಾಜನ ಮಗನಾದ ಘೋರವರ್ಮನು ಕಲಿಂಜರ ನಗರದಲ್ಲಿ ರಾಜನಾಗಿ ಆಳುತ್ತಿದ್ದನು. ಅವನಿಗೆ ಶಾರ್ದೂಲನೆಂಬ ಮಗನಾದನು. ಅವನಿಂದ ಈಚೆಗೆ ಜನಿಸಿದ ರಾಜರಿಗೆ ಶಾರ್ದೂಲವಂಶೀಯರೆಂದೇ ಪ್ರಸಿದ್ಧಿಯಾಯಿತು.

೩೮. ಮಹಾಮಾಯೆಯ ಅನುಗ್ರಹದಿಂದ ಶಾರ್ದೂಲವಂಶದಲ್ಲಿ ಅನೇಕ ರಾಜರು ಜನಿಸಿದರು. ಇವರೆಲ್ಲರೂ ಭೂಮಂಡಲದಲ್ಲಿ ತಮ್ಮ ರಾಜ್ಯವನ್ನು ಬಹುವಾಗಿ ವಿಸ್ತರಿಸಿದರು.

೩೯. ಅಯ್ಯಾ ವಿಪ್ರೋತ್ತಮನಾದ ಶೌನಕನೇ ! ಅಗ್ನಿವಂಶದ ರಾಜರ ಕಥೆಯನ್ನು ನಿನಗೆ ವಿಸ್ತಾರವಾಗಿ ತಿಳಿಸಿದೇನೆ. ಚಂದ್ರವಂಶ ಸೂರ್ಯವಂಶಗಳ ರಾಜರ ಚರಿತ್ರೆಯಂತೆ ಅಗ್ನಿಕುಲಜರೂ ಚರಿತ್ರೆಯ ಸಮಸ್ತಪಾಪಗಳನ್ನೂ ನಾಶಮಾಡುವುದು.

ಕುಲಂ ಸಕಲಪಾಪಘ್ನಂ ಯಥೈವ ಶಶಿಸೂರ್ಯಯೋಃ ।
ಪುನರನ್ಯತ್ಪ್ರವಕ್ಷ್ಯಾಮಿ ಯಥಾ ಜಾತಃ ಸ್ವಯಂ ಹರಿಃ ॥ ೪೦ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ಚತುರ್ಥಖಂಡೇ ಕಲಿಯುಗೀಯೇತಿಹಾಸಸಮುಚ್ಚಯೇ ಚತುರ್ಥೋಽಧ್ಯಾಯಃ.



---

೪೦. ಮಹಾವಿಷ್ಣುವು ಮತ್ತೆ ಹೇಗೆ ಅವತರಿಸಿದನೆಂಬ ವಿಚಾರದ ಇನ್ನೊಂದು ಸಂದರ್ಭವನ್ನು ಹೇಳುತ್ತೇನೆ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಪ್ರತಿಸರ್ಗಪರ್ವದಲ್ಲಿ ನಾಲ್ಕನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಪ್ರತಿಸರ್ಗಪರ್ವಣಿ ಚತುರ್ಥಖಂಡೇ

## ಪಂಚಮೋಽಧ್ಯಾಯಃ

॥ ಸೂತ ಉವಾಚ ॥

ಮಧ್ಯಾಹ್ನ ಕಾಲೇ ಸಂಪ್ರಾಪ್ತೇ ಬ್ರಹ್ಮಣೋಽವ್ಯಕ್ತಜನ್ಮನಃ ।
ಚಾಕ್ಷುಷಾಂತರಮೇವಾಪಿ ಮಹಾವಾಯುರ್ಬಭೂವ ಹ ॥ ೧ ॥

ತತ್ಪ್ರಭಾವೇನ ಹೇಮಾದ್ರಿಃ ಕಂಪಮಾನಃ ಪುನಃಪುನಃ ।
ಯಥಾವೃಕ್ಷಸ್ತಥೈವಾ ಸೌ ತತ್ಕಂಪಾದೇವ ಮಂಡಲಃ ॥ ೨ ॥

ನಭಸೋ ಭೂತಲೇ ಪ್ರಾಪ್ತಸ್ತದಾ ಭೂಮಿಃ ಪ್ರಕಂಪಿತಾ ।
ಬಭೂವ ಮುನಿಶಾರ್ದೂಲ ಸರ್ವಲೋಕವಿನಾಶಿನೀ ॥ ೩ ॥

---

### ಐದನೆಯ ಅಧ್ಯಾಯ

೧. ಸೂತಮುನಿವರ್ಯನು ಹೇಳುತ್ತಾನೆ.—ಅವ್ಯಕ್ತಸ್ವರೂಪನಾದ ಪರಬ್ರಹ್ಮನಿಗೆ ಹಗಲಾಗಿದ್ದಾಗ ಚಾಕ್ಷುಷ ಮನ್ವಂತರದಲ್ಲಿ ಒಂದುದಿನ ದೊಡ್ಡ ಬಿರುಗಾಳಿಯು ಉಂಟಾಯಿತು.

೨. ಆ ಜಂಝೂವಾತದ ಮಹಿಮೆಯಿಂದ ಸುವರ್ಣಾದ್ರಿಯೆನಿಸಿದ ಮೇರುವು ಮರದಂತೆ ಕಂಪಿಸತೊಡಗಿತು. ಸಕಲ ಭೂಮಿಗೂ ಆಶ್ರಯವಾದ ಈ ಮೇರುವೇ ಅಲುಗುತ್ತಿರುವಾಗ ಭೂಮಂಡಲವೆಲ್ಲಾ ಕಂಪಿಸತೊಡಗಿತು.

೩. ಆಗ ಅಂತರಿಕ್ಷವು ಭೂಮಿಗೆ ಬಂದುಸೇರಿತು. ಇದರಿಂದ ಭೂಮಿಯು ತುಂಬಾ ಅಲ್ಲೋಲಕಲ್ಲೋಲವಾಗಿ ಸಕಲ ಲೋಕಗಳನ್ನೂ ನಾಶಮಾಡಿತು.

**ಸಪ್ತದ್ವೀಪಾಃ ಸಮುದ್ರಾಶ್ಚ ಜಲಭೂತಾ ಬಭೂವಿರೇ ।**
**ಲೋಕಾಲೋಕಸ್ತದಾ ಶೇಷೋಽಭವತ್ಸೋತ್ತರಪರ್ವತಃ ॥ ೪ ॥**

**ಶೇಷಾ ಭೂಮಿರ್ಲಯಂ ಪ್ರಾಪ್ತಾ ಮುನೇ ಮನ್ವಂತರೇ ಲಯೇ ।**
**ಸಹಸ್ರಾಬ್ದಾಂತರೇ ಭೂಮಿರ್ಬಭೂವ ಜಲಮಧ್ಯಗಾ ॥ ೫ ॥**

**ತದಾ ಸ ಭಗವಾನ್ ವಿಷ್ಣುರ್ಭವೇನ ವಿಧಿನಾ ಸಹ ।**
**ಶೈಶುಮಾರಂ ಶುಭಂ ಚಕ್ರಂ ಚಕಾರ ನಭಸಿ ಸ್ಥಿತಂ ॥ ೬ ॥**

**ಗೃಹೀತ್ವಾ ಸಕಲಾಸ್ತಾರಾ ಗ್ರಹಾನ್ಸರ್ವಾನ್ಯಥಾವಿಧಿ ।**
**ಸ್ಥಾಪಯಾಮಾಸ ಭಗವಾನ್ಯಥಾಯೋಗ್ಯಂ ಪಿತಾಮಹಃ ॥ ೭ ॥**

**ಪುನರ್ವೈ ಜ್ಯೋತಿಷಾಂ ಚಕ್ರೈಃ ಶೋಷಿತಾ ಸಕಲಾ ಮಹೀ ।**
**ಸ್ಥಲೀಭೂಯಾಯುತಾಬ್ದಾಂತೇ ದೃಶ್ಯಮಾನಾ ಬಭೂವ ಹ ॥ ೮ ॥**

---

೪. ಎಲೈ ವಿಪ್ರನಾದ ಶೌನಕನೇ ! ಜಂಬೂ, ಪ್ಲಕ್ಷ ಮೊದಲಾದ ಸಪ್ತದ್ವೀಪಗಳೂ, ಚತುಸ್ಸಮುದ್ರಗಳೂ ಜಲಮಯವಾದುವು. ಆಗ ಉತ್ತರದಿಕ್ಕಿನಲ್ಲಿ ಲೋಕಾಲೋಕ ಪರ್ವತವೊಂದೇ ಉಳಿಯಿತು.

೫ ಉಳಿದ ಭೂಮಿಯೆಲ್ಲವೂ ನೀರಿನಲ್ಲಿ ಮುಳುಗಿಹೋಯಿತು. ಅಯ್ಯಾ ಮುನಿಯೇ ! ಹೀಗೆ ಮನ್ವಂತರ ಪ್ರಳಯದಲ್ಲಿ ಸಾವಿರಾರುವರ್ಷ ಕಳೆದರೂ ಭೂಮಿಯು ನೀರಿನ ಮಧ್ಯದಲ್ಲೇ ಇದ್ದಿತು.

೬. ಭಗವಂತನಾದ ವಿಷ್ಣುವು ಈಶ್ವರ ಮತ್ತು ಬ್ರಹ್ಮ ಇವರೊಡನೆ ಶೈಶುಮಾರವೆಂಬ ಒಂದು ಮಂಗಳಕರವಾದ ಚಕ್ರವನ್ನು ಅಂತರಿಕ್ಷದಲ್ಲಿ ಸ್ಥಾಪಿಸಿದನು.

೭. ಈ ಚಕ್ರದ ಸಹಾಯದಿಂದ ಭಗವಂತನಾದ ಬ್ರಹ್ಮನು, ಎಲ್ಲಾ ನಕ್ಷತ್ರಗಳನ್ನೂ ಗ್ರಹಗಳನ್ನೂ ಕ್ರಮವಾಗಿ ಹಿಂದಿನಂತೆ ಅವುಗಳ ಸ್ಥಾನದಲ್ಲಿ ಸ್ಥಾಪಿಸಿದನು.

೮. ಹೀಗೆ ಸ್ಥಾಪಿಸಿದ ಗ್ರಹನಕ್ಷತ್ರಾದಿತೇಜಶ್ಚಕ್ರಗಳಿಂದ ನೀರಿನಲ್ಲಿ ಮುಳುಗಿ ನೆನೆದಿದ್ದ ಭೂಮಿಯೆಲ್ಲವೂ ಕ್ರಮವಾಗಿ ಒಣಗುತ್ತಾ ಬಂದಿತು ಹೀಗೆ ಹತ್ತುಸಾವಿರ ವರ್ಷದ ವೇಳೆಗೆ ಭೂಮಿಯು ಕಣ್ಣಿಗೆ ಗೋಚರವಾಗುವಂತಾಯಿತು.

ತದಾ ಸ ಭಗವಾನ್‌ಬ್ರಹ್ಮಾ ಮುಖಾತ್ಸೋಮಂ ಚಕಾರ ಹ ।
ದ್ವಿಜರಾಜಂ ಮಹಾಪ್ರಾಜ್ಞಂ ಸರ್ವವೇದವಿಶಾರದಂ ॥ ೯ ॥

ಭುಜಾಭ್ಯಾಂ ಭಗವಾನ್‌ಬ್ರಹ್ಮಾ ಕ್ಷತ್ರರಾಜಂ ಮಹಾಬಲಂ ।
ಸೂರ್ಯಂ ಚ ಜನಯಾಮಾಸ ರಾಜನೀತಿಪರಾಯಣಂ ॥ ೧೦ ॥

ಊರುಭ್ಯಾಂ ವೈಶ್ಯರಾಜಂ ಚ ಸಮುದ್ರಂ ಸರಿತಾಂಪತಿಂ ।
ರತ್ನಾಕರಂ ಚ ಕೃತವಾನ್ ಪರಮೇಷ್ಠೀ ಪಿತಾಮಹಃ ॥ ೧೧ ॥

ಪದ್ಭ್ಯಾಂ ಚ ಜನಯಾಮಾಸ ವಿಶ್ವಕರ್ಮಾಣಮುತ್ತಮಂ ।
ದಕ್ಷಂ ನಾಮ ಕಲಾಭಿಜ್ಞಂ ಶೂದ್ರರಾಜಂ ಸುಕೃತ್ಯಕಂ ॥ ೧೨ ॥

ಸೋಮಾದ್ವೈ ಬ್ರಾಹ್ಮಣಾ ಜಾತಾಃ ಸೂರ್ಯಾದ್ರಾಜನ್ಯವಂಶಜಾಃ ।
ಸಮುದ್ರಾತ್ಸಕಲಾ ವೈಶ್ಯಾ ದಕ್ಷಾಚ್ಛೂದ್ರಾ ಬಭೂವಿರೇ ॥ ೧೩ ॥

---

೯. ಆಗ ಭಗವಂತನಾದ ಬ್ರಹ್ಮನು ತನ್ನ ಮುಖದಿಂದ ಚಂದ್ರನನ್ನು ನಿರ್ಮಿಸಿದನು. ಅವನು ಸರ್ವವೇದವಿಶಾರದನೂ, ಮಹಾಪ್ರಾಜ್ಞನೂ ದ್ವಿಜರಾಜನೂ ಎನಿಸಿದನು.

೧೦. ಅನಂತರ ಭಗವಂತನಾದ ಬ್ರಹ್ಮನು ಕ್ಷತ್ರರಾಜನೂ, ಮಹಾಬಲ ಶಾಲಿಯೂ ಮತ್ತು ರಾಜನೀತಿ ಪರಾಯಣನೂ ಆದ ಸೂರ್ಯನನ್ನು ತನ್ನ ಭುಜ ಗಳಿಂದ ನಿರ್ಮಿಸಿದನು.

೧೧. ಆಮೇಲೆ ಪಿತಾಮಹನು ವೈಶ್ಯರಾಜನೂ, ಸರಿತ್ಪತಿಯೂ, ರತ್ನಗಳಿಗೆ ಆವಾಸಸ್ಥಾನನೂ ಆದ ಸಮುದ್ರವನ್ನು ತನ್ನ ತೊಡೆಗಳಿಂದ ಸೃಷ್ಟಿಸಿದನು.

೧೨. ಬಳಿಕ ಬ್ರಹ್ಮನು ಶೂದ್ರರಾಜನೂ ವಿಶ್ವಕರ್ಮನೂ ಕಲಾಭಿಜ್ಞನೂ ಸುಕೃತ್ಯನೂ ಆದ ದಕ್ಷನನ್ನು ತನ್ನ ಕಾಲಿನಿಂದ ನಿರ್ಮಿಸಿದನು.

೧೩. ಸೋಮನಿಂದ ಬ್ರಾಹ್ಮಣರು ಉತ್ಪನ್ನರಾದರು. ಸೂರ್ಯನಿಂದ ಕ್ಷತ್ರಿಯರೂ, ಸಮುದ್ರದಿಂದ ಸಕಲ ವೈಶ್ಯಕುಲದವರೂ, ಮತ್ತು ದಕ್ಷನಿಂದ ಶೂದ್ರರೂ ಸಹ ಜನಿಸಿದರು.

**ಸೂರ್ಯಮಂಡಲತೋ ಜಾತೋ ಮನುರ್ವೈವಸ್ವತಃ ಸ್ವಯಂ ।**
**ತಸ್ಯ ರಾಜ್ಯಮಭೂತ್ಸರ್ವಂ ಪ್ರಾಣಿನಾಂ ಲೋಕವಾಸಿನಾಂ ॥ ೧೪ ॥**

**ದಿವ್ಯಾನಾಂ ಚ ಯುಗಾನಾಂ ಚ ತದ್ಜ್ಞೇಯಂ ಚೈಕಸಪ್ತತಿಃ ।**
**ತದಾ ಸ ಭಗವಾನ್ವಿಷ್ಣುರ್ವಿಶ್ವರೂಪ್ಯಾವತಾರಕಃ ॥ ೧೫ ॥**

**ವಿಷ್ಣುಃ ಪೂರ್ವಾರ್ಧತೋ ಜಾತಃ ಪರಾರ್ಧಾದ್ವಾಮನಃ ಸ್ವಯಂ ।**
**ಬಾಲಃ ಸತ್ಯಯುಗೇ ದೇವೋ ವಿಶ್ವರೂಪಃ ಸನಾತನಃ ॥ ೧೬ ॥**

**ಚತುಶ್ಶತಾನಿ ವರ್ಷಾಣಿ ಪರಮಾಯುರ್ನೃಣಾಂ ತದಾ ।**
**ತ್ರೇತಾಯಾಂ ಯೌವನಂ ಪ್ರಾಪ್ತಃ ಪೂರ್ವಾರ್ಧಾತ್ಸಂಭವೋ ಹರೇಃ ॥೧೭॥**

**ವರ್ಷಾಣಾಂ ತ್ರಿಶತಾನಾಂ ಚ ನೃಣಾಮಾಯುಃ ಪ್ರಕೀರ್ತಿತಂ ।**
**ದ್ವಾಪರೇ ವಾರ್ಧ್ಧಿಕೋ ದೇವೋ ನೃಣಾಮಾಯುಃ ಶತದ್ವಯಂ ॥ ೧೮ ॥**

---

೧೪ ಅನಂತರ ಸೂರ್ಯಮಂಡಲದಿಂದ ವೈವಸ್ವತನೆಂಬ ಮನುವು ತಾನೇ ಜನಿಸಿದನು. ಪ್ರಪಂಚವಾಸಿಗಳಾದ ಸಕಲ ಪ್ರಾಣಿಗಳ ರಾಜ್ಯವೆಲ್ಲ ಇವನದೇ ಆಯಿತು.

೧೫-೧೬. ಈ ವೈವಸ್ವತಮನುವಿನ ರಾಜ್ಯವು ಎಪ್ಪತ್ತೊಂದು ದೇವಯುಗಗಳವರೆಗೆ ನಡೆಯಿತು. ಆಗ ಭಗವಂತನಾದ ವಿಷ್ಣುವು ವಿಶ್ವರೂಪವನ್ನು ಧರಿಸಲು ಅಪೇಕ್ಷಿಸಿ ತನ್ನ ಶರೀರದ ಪೂರ್ವಾರ್ಧದಿಂದ ವಿಷ್ಣುವೆಂದೂ ಉಳಿದ ಅರ್ಧಭಾಗದಿಂದ ವಾಮನನೆಂದೂ ರೂಪನ್ನು ತಾಳಿದನು. ವಿಶ್ವರೂಪನೂ, ಪುರಾತನನೂ ಆದ ಈ ಮಹಾವಿಷ್ಣುವು ಸತ್ಯಯುಗದಲ್ಲಿ ಬಾಲಸ್ವರೂಪನಾಗಿರುವನು.

೧೭. ಆ ಸತ್ಯಯುಗದಲ್ಲಿ ಮನುಷ್ಯರಿಗೆ ನಾನೂರುವರ್ಷ ಪರಮಾಯುಷ್ಯವೆನಿಸಿತ್ತು. ಮಹಾವಿಷ್ಣುವಿನ ಪೂರ್ವಾರ್ಧದಿಂದ ಜನಿಸಿದ ದೇವನು ತ್ರೇತಾಯುಗದಲ್ಲಿ ಯುವಕನಾದನು.

೧೮. ಆ ತ್ರೇತಾಯುಗದಲ್ಲಿ ಮನುಜರಿಗೆ ಆಯುಃಪರಿಮಿತಿ ಮುನ್ನೂರು ವರ್ಷಗಳಾಗಿದ್ದಿತು. ಅಲ್ಲಿಂದ ಮುಂದೆ ಮಹಾವಿಷ್ಣುವು ದ್ವಾಪರಯುಗದಲ್ಲಿ ವಾರ್ಧಕ್ಯ ಹೊಂದುವನು. ಆಗ ಮಾನವನ ಆಯುಸ್ಸಿನ ಪರಿಮಾಣವು ಇನ್ನೂರುವರ್ಷಗಳು.

ಕಲೌ ತು ಮರಣಂ ಪ್ರಾಪ್ತೋ ವಿಶ್ವರೂಪೋ ಹರಿಃ ಸ್ವಯಂ ।
ನೃಣಾಮಾಯುಃ ಶತಾಬ್ದಂ ಚ ಕೇಷಾಂಚಿದ್ಧರ್ಮಶಾಲಿನಾಂ ॥ ೧೯ ॥

ಪರಾರ್ಧಾದ್ವಾಮನೋ ದೇವೋ ಮಹೇಂದ್ರಾವರಜೋ ಹರಿಃ ।
ಚತುರ್ಭುಜೋ ಮಹಾಶ್ಯಾಮೋ ಗರುಡೋಪರಿ ಸಂಸ್ಥಿತಃ ॥ ೨೦ ॥

ವಿಶ್ವರೂಪಹಿತಾರ್ಥಾಯ ತ್ರಿಯುಗೀ ಸಂಬಭೂವ ಹ ।
ವಾಮನಾರ್ಧಾಚ್ಚ ತ್ರಿಯುಗೀ ಜಾತೋ ನಾರಾಯಣಃ ಸ್ವಯಂ ॥ ೨೧ ॥

ಶ್ವೇತರೂಪೋ ಹರಿಃ ಸತ್ಯೇ ಹಂಸಾಖ್ಯೋ ಭಗವಾನ್ಸ್ವಯಂ ।
ದ್ವಾಪರೇ ಪೀತರೂಪಶ್ಚ ಸ್ವರ್ಣಗರ್ಭೋ ಹರಿಃ ಸ್ವಯಂ ॥ ೨೨ ॥

---

೧೯. ಅನಂತರ ವಿಶ್ವರೂಪನಾದ ಮಹಾವಿಷ್ಣುವು ಕಲಿಯುಗದಲ್ಲಿ ಮರಣ ಹೊಂದುವನು. ಆದುದರಿಂದ ಈ ಕಲಿಯುಗದಲ್ಲಿ ಜನಿಸುವ ಧರ್ಮಾವಲಂಬಿಗಳಾದ ಕೆಲವರು ಮಹನೀಯರಿಗೆ ನೂರುವರ್ಷ ಆಯುಸ್ಸು.

೨೦. ಶ್ರೀ ಹರಿಯ ಉತ್ತರಭಾಗದ ಅರ್ಧದೇಹದಿಂದ ಜನಿಸಿದ ವಾಮನನು ಇಂದ್ರನ ಅನುಜ (ಉಪೇಂದ್ರ) ನೆನಿಸಿ ಶ್ಯಾಮವರ್ಣನೂ ನಾಲ್ಕು ಭುಜಗಳುಳ್ಳವನೂ ಗರುಡವಾಹನೂ ಆಗಿರುವನು.

೨೧. ಈ ದೇವನು ಪ್ರಪಂಚದ ಹಿತಕ್ಕೋಸ್ಕರ ಮೂರು ಯುಗಸ್ವರೂಪನಾದನು. ವಾಮನನ ಅರ್ಧಶರೀರದಿಂದ ತ್ರಿಯುಗಸ್ವರೂಪನಾದ ಈ ದೇವನು ಜನಿಸಿ ನಾರಾಯಣನೆನಿಸಿದನು.

೨೨. ಸತ್ಯ (ಕೃತ) ಯುಗದಲ್ಲಿ ಮಹಾವಿಷ್ಣುವು ಬಿಳುಪು ಬಣ್ಣವುಳ್ಳವನಾಗಿ ಹಂಸನೆಂಬ ಹೆಸರನ್ನು ಧರಿಸಿದನು. ತ್ರೇತಾಯುಗದಲ್ಲಿ ಕೆಂಪುಬಣ್ಣವುಳ್ಳವನಾಗಿ ಯಜ್ಞಪುರುಷನೆನಿಸಿದನು. ದ್ವಾಪರಯುಗದಲ್ಲಿ ಹೊಂಬಣ್ಣವುಳ್ಳವನಾಗಿ ಸ್ವರ್ಣಗರ್ಭನೆನಿಸಿದನು.

**ಕಲಿಕಾಲೇ ತು ಸಂಪ್ರಾಪ್ತೇ ಸಂಧ್ಯಾಯಾಂ ದ್ವಾಪರೇ ಯುಗೇ ।**
**ಕಲಾ ತು ಸಕಲಾ ವಿಷ್ಣೋರ್ವಾಮನಸ್ಯ ತಥಾ ಕಲಾ ।**
**ಏಕೀಭೂತಾಚ ದೇವಕ್ಯಾಂ ಜಾತೋ ವಿಷ್ಣುಸ್ತದಾ ಸ್ವಯಂ** ॥ ೨೩ ॥

**ವಸುದೇವಗೃಹೇ ರಮ್ಯೇ ಮಥುರಾಯಾಂ ಚ ದೇವತಾಃ ।**
**ಬ್ರಹ್ಮಾದ್ಯಾಸ್ತುಷ್ಟುವುರ್ದೇವಂ ಪರಂ ಬ್ರಹ್ಮ ಸನಾತನಂ** ॥ ೨೪ ॥

**ತದಾ ಪ್ರಸನ್ನೋ ಭಗವಾನ್‌ದೇವಾನಾಹ ಶುಭಂ ವಚಃ ।**
**ದೇವಾನಾಂ ಚ ಹಿತಾರ್ಥಾಯ ದೈತ್ಯಾನಾಂ ನಿಧನಾಯ ಚ ॥**
**ಅಹಂ ಕಲೌ ಚ ಬಹುಧಾ ಭವಾಮಿ ಸುರಸತ್ತಮಾಃ** ॥ ೨೫ ॥

**ದಿವ್ಯಂ ವೃಂದಾವನಂ ರಮ್ಯಂ ಸೂಕ್ಷ್ಮಂ ಭೂತಲಸಂಸ್ಥಿತಂ ।**
**ತತ್ರಾಹಂ ಚ ರಹಃಕ್ರೀಡಾಂ ಕರಿಷ್ಯಾಮಿ ಕಲೌ ಯುಗೇ** ॥ ೨೬ ॥

---

೨೩. ದ್ವಾಪರಯುಗದ ಸಂಧ್ಯಾಂತದಲ್ಲಿಯೂ ಕಲಿಯ ಪ್ರಾರಂಭದಲ್ಲಿಯೂ ಸಹ ಮಹಾವಿಷ್ಣುವಿನ ಮತ್ತು ವಾಮನನ ಎಲ್ಲಾ ಕಲೆಗಳೂ ಒಂದಾಗಿಸೇರಿ ಆ ಅಂಶ ದಿಂದ ವಿಷ್ಣುವು ದೇವಕೀದೇವಿಯಲ್ಲಿ ಅವತರಿಸಿದನು.

೨೪. ಮಥುರಾಪುರಿಯಲ್ಲಿ ಸುಂದರವಾದ ವಸುದೇವನ ಮನೆಯಲ್ಲಿ ದೇವ ದೇವನೂ ಪುರಾತನನೂ ಪರಬ್ರಹ್ಮಸ್ವರೂಪನೂ ಆದ ಮಹಾವಿಷ್ಣುವು ಜನಿಸಿದುದನ್ನು ನೋಡಿ ಬ್ರಹ್ಮಾದಿಸಕಲದೇವತೆಗಳೂ ಅವನನ್ನು ಸ್ತೋತ್ರಮಾಡಿದರು.

೨೫. ಈ ಸ್ತೋತ್ರದಿಂದ ಪ್ರಸನ್ನನಾದ ಭಗವಂತನು ಬ್ರಹ್ಮಾದಿದೇವತೆಗಳನ್ನು ಕುರಿತು "ಎಲೈ ದೇವತೆಗಳಿರಾ ! ದೇವತೆಗಳಿಗೆ ಹಿತವನ್ನುಂಟುಮಾಡುವುದಕ್ಕೂ, ರಾಕ್ಷಸರನ್ನು ಧ್ವಂಸಮಾಡುವುದಕ್ಕೂ, ನಾನು ಕಲಿಯುಗದಲ್ಲಿ ಅನೇಕ ರೂಪಿನಿಂದ ಅವತರಿಸುವೆನು."

೨೬. "ಈ ಭೂಮಂಡಲದಲ್ಲಿ ಸೂಕ್ಷ್ಮವೂ ಸುಂದರವೂ ಮತ್ತು ದಿವ್ಯಸ್ವರೂಪವೂ ಆದ ಬೃಂದಾವನ ಕ್ಷೇತ್ರವಿರುವುದು. ನಾನು ಈ ಕಲಿಯುಗದಲ್ಲಿ ಅಲ್ಲಿ ವಾಸಿಸುತ್ತಾ ರಹಃಕ್ರೀಡೆಯನ್ನು ಆಚರಿಸುವೆನು."

**ಸರ್ವೇ ದೇವಾಃ ಕಲೌ ಘೋರೇ ಗೋಪೀಭೂತಾಃ ಸಮಂತತಃ ।**
**ರಂಸ್ಯಂತೇ ಹಿ ಮಯಾ ಸಾರ್ಧಂ ತ್ಯಕ್ತ್ವಾ ಭೂಮಂಡಲಂ ತದಾ ॥ ೨೭ ॥**

**ರಾಧಯಾ ಪ್ರಾರ್ಥಿತೋಽಹಂ ವೈ ಯದಾ ಕಲಿಯುಗಾಂತಕೇ ।**
**ಸಮಾಪ್ಯ ಚ ರಹಃಕ್ರೀಡಾಂ ಕಲ್ಕೀ ಚ ಭವಿತಾಸ್ಮ್ಯಹಂ ॥ ೨೮ ॥**

**ಯುಗಾಂತಪ್ರಲಯಂ ಕೃತ್ವಾ ಪುನರ್ಭೂತ್ವಾ ದ್ವಿಧಾತನುಃ ।**
**ಸತ್ಯಧರ್ಮಂ ಕರಿಷ್ಯಾಮಿ ಸತ್ಯೇ ಪ್ರಾಪ್ತೇ ಸುರೋತ್ತಮಾಃ ॥ ೨೯ ॥**

**ಇತಿ ಶ್ರುತ್ವಾ ತು ತೇ ದೇವಾ ಸ್ತತ್ರೈವಾಂತರ್ಲಯಂ ಗತಾಃ ।**
**ಏವಂ ಯುಗೇಯುಗೇ ಕ್ರೀಡಾ ಹರೇರದ್ಭುತಕರ್ಮಣಃ ॥ ೩೦ ॥**

**ಯೇ ತು ವೈ ವಿಷ್ಣುಭಕ್ತಾಶ್ಚ ತೇ ಹಿ ಜಾನಂತಿ ವಿಶ್ವಗಂ ।**
**ಯಥೈವ ನೃಪತೇರ್ದಾಸಾಃ ಸ್ವರಾಜ್ಞಃ ಕಾರ್ಯಗೌರವಂ ॥**
**ಜಾನಂತಿ ನಾಪರೇ ವಿಪ್ರ ಯಥಾ ದಾಸಾ ಹರೇಃ ಸ್ವಯಂ ॥ ೩೧ ॥**

---

೨೭. "ಘೋರವಾದ ಈ ಕಲಿಯುಗದಲ್ಲಿ ಎಲ್ಲಾ ಕಡೆಯಲ್ಲಿರುವ ಸಕಲ ದೇವತೆಗಳೂ ಗೋಪಿಕಾಸ್ತ್ರೀಯರಾಗಿ ನನ್ನೊಡನೆ ವಿಹರಿಸುವರು."

೨೮. "ಈ ಕಲಿಯುಗದ ಕೊನೆಯಲ್ಲಿ ರಾಧೆಯಿಂದ ಪ್ರಾರ್ಥಿತನಾದ ನಾನು ರಹಃಕ್ರೀಡೆಯನ್ನು ಮುಗಿಸಿ ಈ ಭೂಮಂಡಲವನ್ನು ಬಿಟ್ಟು ಕಲ್ಕಿ ಎಂಬ ಹೆಸರಿನಿಂದ ಅವತರಿಸುವೆನು."

೨೯. ಆಗ ಯುಗದಕೊನೆಯಲ್ಲಿ ಸಂಭವಿಸಬೇಕಾದ ಪ್ರಲಯವನ್ನುಂಟು ಮಾಡಿ, ಬಳಿಕ ನಾನು ಪುನಃ ಎರಡು ರೂಪವನ್ನು ಧರಿಸಿ, ಸತ್ಯಯುಗವು ಪ್ರಾಪ್ತವಾಗುತ್ತಲೆ ಸತ್ಯವನ್ನೂ ಧರ್ಮವನ್ನೂ ಉದ್ಧಾರಮಾಡುವೆನು" ಎಂದು ಶುಭಕರವಾದ ಈ ಮಾತನ್ನು ಹೇಳಿದನು.

೩೦. ಈರೀತಿ ಪರಮಾತ್ಮನು ಹೇಳಿದುದನ್ನು ಕೇಳಿ ಆ ಬ್ರಹ್ಮಾದಿದೇವತೆಗಳೆಲ್ಲರೂ ಅಲ್ಲಿಯೇ ಅದೃಶ್ಯರಾದರು. ಹೀಗೆ ಅದ್ಭುತವ್ಯಾಪಾರಗಳುಳ್ಳ ಮಹಾವಿಷ್ಣುವು ಪ್ರತಿಯುಗದಲ್ಲಿಯೂ ಅವತರಿಸಿ ವಿಹರಿಸುವನು.

೩೧. ರಾಜನ ಆಪ್ತಸೇವಕರು ತಮ್ಮ ಪ್ರಭುವಿನ ಕಾರ್ಯಗೌರವವನ್ನು ತಿಳಿಯಲು ಹೇಗೆ ಸಮರ್ಥರಾಗುವರೋ ಹಾಗೆ ವಿಷ್ಣುಭಕ್ತರು ಮಾತ್ರ ವಿಶ್ವವ್ಯಾಪಿಯೂ

**ವಿಷ್ಣೋರ್ವಾಂಛಾನುಸಾರೇಣ ವಿಷ್ಣುಮಾಯಾ ಸನಾತನೀ ।**
**ರಚಿತ್ವಾ ವಿವಿಧಾನ್‌ಲೋಕಾನ್ ಮಹಾಕಾಲೀ ಬಭೂವ ಹ　　॥ ೩೨ ॥**

**ಕೃತ್ವಾ ಕಾಲಮಯಂ ಸರ್ವಂ ಜಗದೇತಚ್ಚರಾಚರಂ ।**
**ಪಶ್ಚಾತ್ತು ಭಕ್ಷಯಿತ್ವಾ ತಾನ್ಮಹಾಗೌರೀ ಭವಿಷ್ಯತಿ　　॥ ೩೩ ॥**

**ನಮಸ್ತಸ್ಯೈ ಮಹಾಕಾಲ್ಯೈ ವಿಷ್ಣುಮಾಯೇ ನಮೋನಮಃ ।**
**ಮಹಾಗೌರಿ ನಮಸ್ತುಭ್ಯಮಸ್ಮಾನ್ಪಾಹಿ ಭಯಾನ್ವಿತಾನ್　　॥ ೩೪ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ಚತುರ್ಥಖಂಡೇ ಕಲಿಯುಗೀಯೇತಿಹಾಸಸಮುಚ್ಚಯೇ ಪಂಚಮೋಽಧ್ಯಾಯಃ.**



---

ತಮ್ಮ ಪ್ರಭುವೂ ಆದ ವಿಷ್ಣುವಿನ ಚರಿತ್ರೆಯನ್ನು ತಿಳಿಯಬಲ್ಲರು. ಇತರರ್‍ಯಾರೂ ತಿಳಿಯಲಾರರು. ವಿಷ್ಣುಭಕ್ತರಿಗೆ ಗೋಚರವಾಗುವಂತೆ ಮಹಾವಿಷ್ಣುವಿನ ಸ್ವರೂಪವು ಇತರ್‍ಯಾರಿಗೂ ತಿಳಿಯಲಾರದು.

೩೨. ವಿಷ್ಣುವಿನ ಇಷ್ಟಾನುಸಾರವಾಗಿ ಸನಾತನೆಯಾದ ವಿಷ್ಣುಮಾಯೆಯು ಅನೇಕ ಲೋಕಗಳನ್ನು ರಚಿಸಿ ಮಹಾಕಾಳಿಯೆನಿಸಿದಳು.

೩೩. ಆನಂತರ ಈ ಚರಾಚರವಾದ ಪ್ರಪಂಚವೆಲ್ಲವನ್ನೂ ಕಾಲಸ್ವರೂಪವಾಗಿ ಮಾಡಿ ಆ ಬಳಿಕ ಅವೆಲ್ಲವನ್ನೂ ಭಕ್ಷಿಸಿ ಮಹಾಗೌರಿಯೆನಿಸಿದಳು.

೩೪. ಮಹಾಕಾಲೀಸ್ವರೂಪಳಾದ ಎಲೌ ವಿಷ್ಣುಮಾಯೆಯೇ ! ನಿನಗೆ ನಮಸ್ಕಾರ. ಎಲೌ ಮಹಾಗೌರಿಯೇ ! ನಿನ್ನನ್ನು ನಮಿಸುವೆನು ಭಯಪೀಡಿತರಾದ ನಮ್ಮನ್ನು ರಕ್ಷಿಸು ಎಂದು ಹೇಳಿದನು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಪ್ರತಿಸರ್ಗಪರ್ವದಲ್ಲಿ ಚತುರ್ಥ ಖಂಡದಲ್ಲಿ ಐದನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಪ್ರತಿಸರ್ಗಪರ್ವಣಿ ಚತುರ್ಥಖಂಡೇ

## ಷಷ್ಠೋಽಧ್ಯಾಯಃ

॥ ಋಷಿರುವಾಚ ॥

ಮಹೀರಾಜಾನ್ಮುನಿಶ್ರೇಷ್ಠ ಕೇ ರಾಜಾನೋ ಬಭೂವಿರೇ ।
ತಾನ್ನೋ ವದ ಮಹಾಭಾಗ ಸರ್ವಜ್ಞೋಽಸ್ತಿ ಭವಾನ್ ಸದಾ ॥ ೧ ॥

॥ ಸೂತ ಉವಾಚ ॥

ಪೈಶಾಚಃ ಕುತುಕೋದ್ದೀನೋ ದೇಹಲೀರಾಜ್ಯಮಾಸ್ಥಿತಃ ।
ವಲೀಗಢಂ ಮಹಾರಮ್ಯಂ ಯಾದವೈ ರಕ್ಷಿತಂ ಪುರಂ ॥ ೨ ॥

---

### ಆರನೆಯ ಅಧ್ಯಾಯ

೧. ಶೌನಕಋಷಿವರ್ಯನು ಹೇಳುತ್ತಾನೆ—ಎಲೈ ಪೂಜ್ಯ ಋಷಿವರ್ಯನಾದ ಸೂತನೇ! ತ್ರಿಕಾಲದಲ್ಲೂ ನೀನು ಸರ್ವಜ್ಞನಾದುದರಿಂದ ಪೃಥ್ವೀರಾಜನ ಅನಂತರ ಯಾವರಾಜರು ಆಳಿದರು ಎಂಬುದನ್ನು ನಮಗೆ ಹೇಳಬೇಕು ಎಂದು ಪ್ರಶ್ನೆ ಮಾಡಲು ಸೂತಮುನಿವರನು ಹೇಳುತ್ತಾನೆ.

೨. ಪಿಶಾಚಿ ಸ್ವರೂಪನಾದ ಕುತುಕೋದ್ದೀನನು ದೆಹಲಿಯಲ್ಲಿ ರಾಜ್ಯವಾಳುತ್ತಿದ್ದನು. ಆಗ ಯದುವಂಶದ ರಾಜರು ಬಹು ಸುಂದರವಾದ ವಲೀಗಢ ಪಟ್ಟಣವನ್ನು ನಿರ್ಮಿಸಿ ಅದನ್ನು ರಕ್ಷಿಸಿಕೊಂಡಿದ್ದರು.

ಯಯೌ ತತ್ರ ಸ ಪೈಶಾಚಃ ಶೂರಾಯುತಸಮನ್ವಿತಃ ।
ವೀರಸೇನಸ್ಯ ವೈ ಪೌತ್ರಂ ಭೂಪಸೇನಂ ನೃಪೋತ್ತಮಂ ॥
ಸ ಜಿತ್ವಾ ಕುತುಕೋದ್ದೀನೋ ದೇಹಲೀಗ್ರಾಮಸಂಸ್ಥಿತಃ ॥ ೩ ॥

ಏತಸ್ಮಿನ್ನಂತರೇ ಭೂಪಾ ನಾನಾದೇಶ್ಯಾಃ ಸಮಾಗತಾಃ ।
ಜಿತ್ವಾ ಸ ಕುತುಕೋದ್ದೀನಃ ಸ್ವದೇಶಾತ್ತೈರ್ನಿರಾಕೃತಃ ॥ ೪ ॥

ಸಹೋದ್ದೀನಸ್ತು ತಚ್ಛ್ರುತ್ವಾ ಪುನರಾಗತ್ಯ ದೇಹಲೀಂ ।
ಜಿತ್ವಾ ಭೂಪಾನ್ ದೈತ್ಯವರೋ ಮೂರ್ತಿಖಂಡಮಥಾಕರೋತ್ ॥ ೫ ॥

ತತ್ಪಶ್ಚಾದ್ಬಹುಧಾ ಮ್ಲೇಚ್ಛಾ ಇಹಾಗತ್ಯ ಸಮಂತತಃ ।
ಪಂಚಷಟ್‌ಸಪ್ತವರ್ಷಾಣಿ ಕೃತ್ವಾ ರಾಜ್ಯಂ ಲಯಂ ಗತಾಃ ॥ ೬ ॥

---

೩. ಈ ಪಿಶಾಚ ಸ್ವರೂಪನು ಹತ್ತುಸಾವಿರ ಸೈನ್ಯವನ್ನು ತೆಗೆದುಕೊಂಡು ಆ ದೇಶದ ಮೇಲೆ ದಂಡೆತ್ತಿಹೋದನು. ಆಗ ಪ್ರಸಿದ್ಧನೆನಿಸಿದ ವೀರಸೇನನ ಮಗನ ಮಗನಾದ ಭೂಪಸೇನನೆಂಬವನು ಅಲ್ಲಿ ರಾಜ್ಯವಾಳುತ್ತಿದ್ದನು. ಈ ಕುತುಕೋದ್ದೀನನು ಅವನನ್ನು ಜಯಿಸಿ ದೆಹಲಿಗೆ ಹಿಂದಿರುಗಿದನು.

೪ ಈ ವೇಳೆಗೆ ನಾನಾದೇಶದ ರಾಜರು ಅಲ್ಲಿಗೆ ಬಂದಿದ್ದರು. ಅವರೆಲ್ಲಾ ಆ ಕುತುಕೋದ್ದೀನನನ್ನು ಜಯಿಸಿದರು. ಅವರಿಂದ ನಿರಾಕರಿಸಲ್ಪಟ್ಟು ಅವನು ಈ ದೇಶವನ್ನು ಬಿಟ್ಟು ಹೋಗಬೇಕಾಯಿತು.

೫. ಕುತುಕೋದ್ದೀನನ ಯಜಮಾನನಾದ ಸಹೋದ್ದೀನನು ಈ ವರ್ತಮಾನ ವನ್ನು ಕೇಳಿ ದೆಹಲಿಯ ಮೇಲೆ ಪುನಃ ದಂಡೆತ್ತಿಬಂದನು. ದೈತ್ಯಶ್ರೇಷ್ಠನಾದ ಅವನು ದೆಹಲಿಯನ್ನು ಆಕ್ರಮಿಸಿದ್ದ ರಾಜರನ್ನೆಲ್ಲಾ ಜಯಿಸಿದುದಲ್ಲದೆ ದೇವತಾ ವಿಗ್ರಹಗಳನ್ನು ಒಡೆದನು.

೬ ಈ ರೀತಿ ಅನೇಕ ಮ್ಲೇಚ್ಛರಾಜರು ಅವನನ್ನು ಹಿಂಬಾಲಿಸಿ ಅನೇಕಸಾರಿ ಈ ದೇಶಕ್ಕೆ ನುಗ್ಗಿಬಂದು ಎಲ್ಲಾ ಕಡೆಯಲ್ಲೂ ಅನೇಕ ದೇವಾಲಯಗಳಿಗೆ ನುಗ್ಗಿ ದೇವರ ವಿಗ್ರಹಗಳನ್ನು ಒಡೆದುಹಾಕಿದರು. ಬಳಿಕ ಆರೋ ಏಳೋ ವರ್ಷಗಳು ರಾಜ್ಯವನ್ನು ಆಕ್ರಮಿಸಿದ್ದು ಬಳಿಕ ನಾಶವಾಗಿಹೋದರು

ಅದ್ಯ ಪ್ರಭೃತಿ ದೇಶೇಸ್ಮಿಞ್ಛತವರ್ಷಾಂತರೇ ಹಿ ತೇ ।
ಭೂತ್ವಾ ಚಾಲ್ಪಾಯುಷೋ ಮಂದಾ ದೇವತೀರ್ಥವಿನಾಶಕಾಃ ॥ ೭ ॥

ಮ್ಲೇಚ್ಛಭೂಪಾ ಮುನಿಶ್ರೇಷ್ಠಾಸ್ತಸ್ಮಾದ್ಯೂಯಂ ಮಯಾ ಸಹ ।
ಗಂತುಮರ್ಹಥ ವೈ ಶೀಘ್ರಂ ವಿಶಾಲಾಂ ನಗರೀಂ ಶುಭಾಂ ॥ ೮ ॥

ಇತಿ ಶ್ರುತ್ವಾ ತು ವಚನಂ ದುಃಖಾತ್ಸಂತ್ಯಜ್ಯ ನೈಮಿಷಂ ।
ಯಯುಃ ಸರ್ವೇ ವಿಶಾಲಾಯಾಂ ಹಿಮಾದ್ರೌ ಗಿರಿಸತ್ತಮೇ ॥ ೯ ॥

ತತ್ರ ಸರ್ವೇ ಸಮಾಧಿಸ್ಥಾ ಧ್ಯಾತ್ವಾ ಸರ್ವಮಯಂ ಹರಿಂ ।
ಶತವರ್ಷಾಂತರೇ ಸರ್ವೇ ಧ್ಯಾನಾದ್ಬ್ರಹ್ಮಗೃಹಂ ಯಯುಃ ॥ ೧೦ ॥

ವ್ಯಾಸ ಉವಾಚ

ಇತ್ಯೇವಂ ಸಕಲಂ ಭಾವ್ಯಂ ಯೋಗಾಭ್ಯಾಸವಶಾದ್ದ್ರುತಂ ।
ವರ್ಣಿತಂ ಚ ಮಯಾ ತುಭ್ಯಂ ಕಿಮನ್ಯಚ್ಛ್ರೋತುಮಿಚ್ಛಸಿ ॥ ೧೧ ॥

---

೭-೮. ಅದು ಮೊದಲುಗೊಂಡು ನೂರಾರುವರ್ಷಗಳವರೆಗೂ ಈ ಮ್ಲೇಚ್ಛ ರಾಜರು ಈ ರಾಷ್ಟ್ರದಲ್ಲಿ ನೆಲಸಿರುತ್ತಾ ಅಲ್ಪಾಯುಸ್ಸುಳ್ಳವರಾಗಿ ದೇವ ವಿಗ್ರಹಗಳು ಪುಣ್ಯಕ್ಷೇತ್ರಗಳು, ಇವನ್ನು ನಾಶಮಾಡುತ್ತಾ ಸ್ವೇಚ್ಛೆಯಾಗಿ ವಿಹರಿಸುವರು. ಆದ್ದರಿಂದ ಮುನಿಶ್ರೇಷ್ಠರಾದ ನೀವೆಲ್ಲರೂ ನನ್ನ ಸಂಗಡ ಜಾಗ್ರತೆ ಇಲ್ಲಿಂದ ಹೊರಟು ಶುಭಕರವಾದ ವಿಶಾಲಾ ನಗರಕ್ಕೆ ಬನ್ನಿ ಎಂದು ಹೇಳಿದರು.

೯. ಆ ಶೌನಕಾದಿಋಷಿಗಳು ಸೂತರು ಹೇಳಿದ ಮಾತನ್ನು ಕೇಳಿ ಬಹಳ ಖೇದದಿಂದ ಆ ನೈಮಿಶಾರಣ್ಯವನ್ನು ತೊರೆದು ಪರ್ವತಶ್ರೇಷ್ಠವೆನಿಸಿದ ಹಿಮಾಲಯುದಲ್ಲಿರುವ ವಿಶಾಲಾ ನಗರಕ್ಕೆ ಹೋದರು.

೧೦. ಅಲ್ಲಿ ಅವರೆಲ್ಲರೂ ಸರ್ವವ್ಯಾಪಿಯೆನಿಸಿದ ಮಹಾವಿಷ್ಣುವನ್ನು ಧ್ಯಾನ ಮಾಡತೊಡಗಿ ನೂರುವರ್ಷಗಳಲ್ಲಿ ಆಧ್ಯಾನಮಹಿಮೆಯಿಂದ ಬ್ರಹ್ಮಲೋಕವನ್ನು ಸೇರಿದರು.

೧೧ ವ್ಯಾಸನು ಹೇಳುತ್ತಾನೆ.—"ಅಯ್ಯಾಮನುವೇ! ಇವೆಲ್ಲವನ್ನೂ ನಾನು ನನ್ನ ಯೋಗಮಹಿಮೆಯಿಂದ ಶೀಘ್ರವಾಗಿ ಅರಿತು ನಿಮಗೆ ವರ್ಣಿಸಿದೆನು. ಇನ್ನು ಯಾವ ಪ್ರಶ್ನೆಯನ್ನು ಕೇಳಬೇಕೆಂದು ಕುತೂಹಲವಿದ್ದೈತಿಳಿಸು" ಎಂದನು.

ಮನುರುವಾಚ

ಭಗವಾನ್ವೇದತತ್ವಜ್ಞ ಸರ್ವಲೋಕಶಿವಂಕರ ।
ಅಹಂ ಮಾಯಾಭವೋ ಜಾತೋ ಭವಾನ್ವೇದಭವೋ ಭುವಿ ॥ ೧೨ ॥

ಅವಿದ್ಯಯಾ ಚ ಸಕಲಂ ಮಮ ಜ್ಞಾನಂ ಸಮಾಹೃತಂ ।
ಅತೋಽಹಂ ವಿವಿಧಾ ಯೋನೀರ್ಗೃಹೀತ್ವಾ ಲೋಕಮಾಗತಃ ॥ ೧೩ ॥

ಪರಂ ಬ್ರಹ್ಮೈವ ಕೃಪಯಾ ದೃಷ್ಟ್ವಾ ಮಾಂ ಮಂದಭಾಗಿನಂ ।
ವ್ಯಾಸರೂಪಂ ಸ್ವಯಂ ಕೃತ್ವಾ ಸಮುದ್ಧರ್ತುಮುಪಾಗತಃ ॥ ೧೪ ॥

ನಮಸ್ತಸ್ಮೈ ಮುನೀಂದ್ರಾಯ ವೇದವ್ಯಾಸಾಯ ಸಾಕ್ಷಿಣೇ ।
ಅವಿದ್ಯಾಮೋಹಭಾವೇಭ್ಯೋ ರಕ್ಷಣಾಯ ನಮೋನಮಃ ॥ ೧೫ ॥

ಪುನರನ್ಯಚ್ಚ ಮೇ ಬ್ರೂಹಿ ಸೂತಾದ್ಯೈಃ ಕಿಂ ಕೃತಂ ಮುನೇ ।
ತತ್ಸರ್ವಂ ಕೃಪಯಾ ಸ್ವಾಮಿನ್ವಕ್ತುಮರ್ಹಸಿ ಸಾಂಪ್ರತಂ ॥ ೧೬ ॥

---

೧೨-೧೩. ಆಗ ಮನುವು ಹೇಳುತ್ತಾನೆ—ವೇದತತ್ವವನ್ನು ತಿಳಿದವನೂ, ಸಮಸ್ತ ಲೋಕಗಳಿಗೂ ಮಂಗಳವನ್ನುಂಟುಮಾಡುವವನೂ ಆದ ಭಗವಂತನೇ ! ಈ ಭೂಮಿಯಲ್ಲಿ ನಾನು ಮಾಯೆಯಿಂದ ಹುಟ್ಟಿರುವೆನು. ಅಜ್ಞಾನ ಸ್ವರೂಪನು. ನೀನು ಜ್ಞಾನಿ. ವೇದದಿಂದ ಜನಿಸಿದವನು ; ಎಂದರೆ ಜ್ಞಾನಸ್ವರೂಪನು.

೧೪. ನನ್ನ ಜ್ಞಾನವೆಲ್ಲವೂ ಅವಿದ್ಯೆಯಿಂದ ಅಪಹರಿಸಲ್ಪಟ್ಟಿತು. ಆದುದರಿಂದ ನಾನು ನಾನಾ ಯೋನಿಗಳನ್ನು ಆಶ್ರಯಿಸಿ ಈ ಲೋಕಕ್ಕೆ ಬಂದೆನು. ಪರಬ್ರಹ್ಮಸ್ವರೂಪನಾದ ನೀನು ಅದೃಷ್ಟಹೀನನಾದ ನನ್ನನ್ನು ದಯೆಯಿಟ್ಟು ಉದ್ಧಾರಮಾಡುವುದಕ್ಕೋಸ್ಕರವೇ ಈ ವ್ಯಾಸರೂಪವನ್ನು ಧರಿಸಿ ಇಲ್ಲಿಗೆ ಬಂದಿದ್ದೀಯೆ.

೧೫. ಅವಿದ್ಯೆ ಮೋಹ ಎಂಬ ಭಾವಗಳದೆಸೆಯಿಂದ ರಕ್ಷಿಸತಕ್ಕವನೂ, ಸರ್ವಸಾಕ್ಷಿಯೂ ಎನಿಸಿರುವ ವೇದವ್ಯಾಸರೂಪಿಯಾದ ನಿನಗೆ ನಮಸ್ಕಾರ.

೧೬. ಮುನಿವರ್ಯನೇ ! ಸೂತ ಮೊದಲಾದವರು ಮುಂದೇನುಮಾಡಿದರು ? ಎಂಬುದನ್ನೆಲ್ಲವನ್ನೂ ದಯೆಯಿಟ್ಟು ಈಗ ನನಗೆ ತಿಳಿಸು ಎಂದು ಪ್ರಾರ್ಥಿಸಿದರು. ಮನುವು ಹೀಗೆ ಪ್ರಶ್ನೆ ಮಾಡಿದುದನ್ನು ಕೇಳಿ ವ್ಯಾಸನು ಹೇಳುತ್ತಾನೆ.

ವ್ಯಾಸ ಉವಾಚ

ಬ್ರಹ್ಮಾಂಡೇ ಯೇ ಸ್ಥಿತಾ ಲೋಕಾಸ್ತೇ ಸರ್ವೇಽಸ್ಮಿನ್‌ಕಲೇವರೇ ।
ಅಹಂಕಾರೋ ಹಿ ಜೀವಾತ್ಮಾ ಸರ್ವಃ ಸ್ಯಾತ್ಕೋಟಿಕೋಟಿಕಃ ॥ ೧೭ ॥

ಪುರಾಣೋಽಣೋರಣೀಯಾಂಶ್ಚ ಷೋಡಶಾತ್ಮಾ ಸನಾತನಃ ।
ಇಂದ್ರಿಯಾಣಿ ಮನಶ್ಚೈವ ಪಂಚ ಚೇಂದ್ರಿಯಗೋಚರಾಃ ॥ ೧೮ ॥

ಜ್ಞೇಯೋ ಜೀವಃ ಶರೀರೇಽಸ್ಮಿನ್‌ಸ ಈಶಗುಣಬಂಧಿತಃ ।
ಈಶೋ ಹ್ಯಷ್ಟಾದಶಾತ್ಮಾ ವೈ ಶಂಕರೋ ಜೀವಶಂಕರಃ ॥ ೧೯ ॥

ಬುದ್ಧಿರ್ಮನಶ್ಚ ವಿಷಯಾ ಇಂದ್ರಿಯಾಣಿ ಷಡೈವ ಚ ।
ಅಹಂಕಾರಸ್ಸ ಚೇಶೋ ವೈ ಮಹಾದೇವಃ ಸನಾತನಃ ॥ ೨೦ ॥

---

೧೭. ಬ್ರಹ್ಮಾಂಡದೊಳಗಿರುವ ಲೋಕಗಳೆಲ್ಲವೂ ಈ ಶರೀರದಲ್ಲಿಯೇ ಅಡಗಿವೆ. ಶುದ್ಧ ಚೈತನ್ಯವು ಅಹಂಕಾರವೆಂಬ ಪದದಿಂದ ಹೇಳಲ್ಪಡುವ ಅಂತಃಕರಣದಲ್ಲಿ ಅಧ್ಯಾಸ ಹೊಂದಿ, ಅಹಂ ಎಂಬ ಅಭಿಮಾನಕ್ಕೆ ಪಾತ್ರವಾಗಿ ಜೀವನೆಂದೆನಿಸಿಕೊಂಡು ಸರ್ವವಿಧವಾದ ಕೋಟ್ಯನುಕೋಟಿ ಪ್ರಾಣಿಸ್ವರೂಪವಾಯಿತು.

೧೮. ಆ ಜೀವವೆಂದು ವ್ಯವಹರಿಸಲ್ಪಡುವ ಚೈತನ್ಯವು, ವೃದ್ಧಿ ಎಂಬ ವಿಕಾರರಹಿತವೂ, ಸೂಕ್ಷ್ಮವಸ್ತುಗಳಿಗಿಂತ ಅತಿ ಸೂಕ್ಷ್ಮವೂ, ಅನಾದಿಯೂ ಆಗಿರುವನಲ್ಲದೆ ದಶೇಂದ್ರಿಯಗಳು, ಮನಸ್ಸು, ಐದು ಇಂದ್ರಿಯವಿಷಯಗಳಾದ ಶಬ್ದಾದಿಗಳು, ಈ ಹದಿನಾರು ಪದಾರ್ಥಗಳ ಉಪಾಧಿಯಿಂದ ಷೋಡಶಾತ್ಮಕನೆಂದು ಹೇಳಲ್ಪಡುತ್ತಾನೆ.

೧೯-೨೦. ಇಂತಹ ಜೀವನು ಈ ಶರೀರದಲ್ಲಿ ಈಶ್ವರನ ಮಾಯಾಗುಣದಿಂದ ಬಂಧಿತನಾಗಿರುವನು. ಜೀವರಿಗೆ ಸುಖ ದಾತೃವಾದ ಈಶ್ವರ, ಬುದ್ಧಿ, ಮನಸ್ಸು, ಶಬ್ದಾದಿ ಐದು ವಿಷಯ, ಪಂಚಕರ್ಮೇಂದ್ರಿಯ, ಪಂಚಜ್ಞಾನೇಂದ್ರಿಯ ಎಂಬ ದಶೇಂದ್ರಿಯ, ಅಹಂಕಾರ ಈ ಹದಿನೆಂಟು ಪದಾರ್ಥಗಳಿಗೆ ನಿಯಾಮಕ (ಪ್ರೇರಕ) ನಾಗಿರೋಣದಿಂದ ಅಷ್ಟಾದಶಾತ್ಮ ಎಂದು ಹೇಳಿಸಿಕೊಳ್ಳುವನು. ಇಂತಹ ಈಶ್ವರನೇ ಮಹಾದೇವನೂ ಸನಾತನನೂ ಆಗಿರುವನು.

**ಜೀವೋ ನಾರಾಯಣಃ ಸಾಕ್ಷಾಚ್ಛಂಕರೇಣ ವಿಮೋಹಿತಃ ।**
**ಸ ಬದ್ಧಸ್ತ್ರಿಗುಣೈಃ ಪಾಶೈರೇಕಶ್ಚ ಬಹುಧಾಽಭವತ್　　॥ ೨೧ ॥**

**ಕಾಲಾತ್ಮಾ ಭಗವಾನೀಶೋ ಮಹಾಕಲ್ಪಸ್ವರೂಪಕಃ ।**
**ಶಿವಕಲ್ಪೋ ಬ್ರಹ್ಮಕಲ್ಪೋ ವಿಷ್ಣುಕಲ್ಪಸ್ತೃತೀಯಕಃ　　॥ ೨೨ ॥**

**ಈಶನೇತ್ರಾಣಿ ತಾನ್ಯೇವ ಸ್ಕಂಧಕಲ್ಪಶ್ಚತುರ್ಥಕಃ ॥**
**ವಾಯುಕಲ್ಪೋ ವಹ್ನಿಕಲ್ಪೋ ಬ್ರಹ್ಮಾಂಡೋ ಲಿಂಗಕಲ್ಪಕಃ ।**
**ಈಶವಕ್ತ್ರಾಣಿ ಪಂಚೈವ ತತ್ವಜ್ಞೈಃ ಕಥಿತಾನಿ ವೈ　　॥ ೨೩ ॥**

**ಭವಿಷ್ಯಕಲ್ಪಶ್ಚ ತಥಾ ಪದ್ಮೋ ಗರುಡಕಲ್ಪಕಃ ।**
**ಕಲ್ಪೋ ಭಾಗವತಶ್ಚೈವ ಮಾರ್ಕಂಡೇಯಶ್ಚ ಕಲ್ಪಕಃ　　॥ ೨೪ ॥**

**ವಾಮನಶ್ಚ ನೃಸಿಂಹಶ್ಚ ವರಾಹೋ ಮತ್ಸ್ಯಕೂರ್ಮಕೌ ।**
**ಜ್ಞಾನಾತ್ಮನೋ ಮಹೇಶಸ್ಯ ಜ್ಞೇಯಾ ದಶಭುಜಾ ಬುಧೈಃ　　॥ ೨೫ ॥**

---

೨೧. ಜೀವನು ಸಾಕ್ಷಾತ್ ಶುದ್ಧಚಿತ್ಸ್ವರೂಪನಾಗಿದ್ದರೂ, ಈಶ್ವರನ ಮಾಯೆಯಿಂದ ಮೋಹಿತನಾಗಿರುತ್ತಾನೆ. ಹೀಗೆ ಸತ್ವರಜಸ್ತಮೋಗುಣಾತ್ಮಕವಾದ ಮಾಯಾಪಾಶದಿಂದ ಬದ್ಧನಾಗಿ ಆ ಏಕಬ್ರಹ್ಮಸ್ವರೂಪಿಯಾಗಿದ್ದರೂ ಉಪಾಧಿ ವಶದಿಂದ ಅನೇಕ ಜೀವಭಾವವನ್ನು ಹೊಂದಿದನು.

೨೨-೨೩. ಇಂಥ ಜೀವನಿಗೆ ಕಾರಣನಾದ ಈಶ್ವರನು ಕಾಲರೂಪಿಯಾಗಿದ್ದಾನೆ. ಕಾಲಸ್ವರೂಪನೂ ಭಗವಂತನೂ ಆದ ಪರಮೇಶ್ವರನು ಮಹಾಕಲ್ಪಸ್ವರೂಪನು. ಶಿವಕಲ್ಪ, ಬ್ರಹ್ಮಕಲ್ಪ, ವಿಷ್ಣುಕಲ್ಪ ಈ ಮೂರೂ ಪರಮೇಶ್ವರನ ಮೂರು ಕಣ್ಣುಗಳು. ಸ್ಕಂಧಕಲ್ಪವೆಂಬುದು ನಾಲ್ಕನೆಯದು. ಈ ಸ್ಕಂಧಕಲ್ಪ, ವಾಯುಕಲ್ಪ, ವಹ್ನಿಕಲ್ಪ, ಬ್ರಹ್ಮಾಂಡಕಲ್ಪ, ಮತ್ತು ಲಿಂಗಕಲ್ಪ ಈ ಐದು ಕಲ್ಪಗಳೂ ಪರಮೇಶ್ವರನ ಐದು ಮುಖಗಳೆಂದು ವಿದ್ವಾಂಸರು ಹೇಳುವರು.

೨೪-೨೫. ಭವಿಷ್ಯಕಲ್ಪ, ಪದ್ಮಕಲ್ಪ, ಗರುಡಕಲ್ಪ, ಭಾಗವತಕಲ್ಪ, ಮಾರ್ಕಂಡೇಯಕಲ್ಪ, ವಾಮನಕಲ್ಪ, ನೃಸಿಂಹಕಲ್ಪ, ವರಾಹಕಲ್ಪ, ಮತ್ಸ್ಯಕಲ್ಪ ಮತ್ತು ಕೂರ್ಮಕಲ್ಪ, ಈ ಹತ್ತು ಕಲ್ಪಗಳೂ ಜ್ಞಾನಸ್ವರೂಪನಾದ ಮಹೇಶ್ವರನ ಹತ್ತು ಭುಜಗಳೆಂದು ಪಂಡಿತರು ಹೇಳಿರುವರು.

ಅಷ್ಟಾದಶದಿನೇಷ್ವೇವ ಬ್ರಹ್ಮಣೋಽವ್ಯಕ್ತಜನ್ಮನಃ ।
ಕಲ್ಪಾಶ್ಚಾಷ್ಟಾದಶಾಸ್ಸರ್ವೇ ಬುಧೈರ್ಜ್ಞೇಯಾ ವಿಲೋಮತಃ ॥ ೨೬ ॥

ಕೂರ್ಮಕಲ್ಪಶ್ಚ ತತ್ರಾದ್ಯೋ ಮತ್ಸ್ಯಕಲ್ಪೋ ದ್ವಿತೀಯಕಃ ।
ತೃತೀಯಃ ಶ್ವೇತವಾರಾಹಃ ಕಲ್ಪೋ ಜ್ಞೇಯಃ ಪುರಾತನೈಃ ॥ ೨೭ ॥

ದ್ವಿಧಾ ಚ ಭಗವಾನ್‌ಬ್ರಹ್ಮಾ ಸೂಕ್ಷ್ಮಃ ಸ್ಥೂಲೋಽಗುಣೋ ಗುಣೀ ।
ಸಗುಣಃ ಸ ವಿರಾಣ್ಣಾಮ್ನಾ ವಿಷ್ಣುನಾಭಿಸಮುದ್ಭವಃ ॥ ೨೮ ॥

ನಿರ್ಗುಣೋಽವ್ಯಕ್ತರೂಪಶ್ಚಾವ್ಯಕ್ತಜನ್ಮಾ ಸ್ವಭೂಃ ಸ್ವಯಂ ।
ಬ್ರಹ್ಮಣಃ ಸಗುಣಸ್ಯೈವ ಶತಾಯುಃ ಕಾಲನಿರ್ಮಿತಂ ॥ ೨೯ ॥

ಊನವಿಂಶಸಹಸ್ರಾಣಿ ಲಕ್ಷೈಕೋ ಮಾನುಷಾಬ್ದಕೈಃ ।
ಏಭಿರ್ವರ್ಷೈರ್ದಿನಂ ಜ್ಞೇಯಂ ವಿರಾಜೋ ಬ್ರಹ್ಮಣಃ ಸ್ವಯಂ ॥ ೩೦ ॥

---

೨೬. ಅವ್ಯಕ್ತ ಸ್ವರೂಪನಾದ ಬ್ರಹ್ಮನ ಹದಿನೆಂಟುದಿನಗಳಲ್ಲಿ ಹದಿನೆಂಟು ಕಲ್ಪಗಳೆಲ್ಲವೂ ಅನುಲೋಮ ವಿಲೋಮವಾಗಿ ಎಂದರೆ ಸ್ವಲ್ಪ ಹಿಂದುಮುಂದಾಗಿ ನಡೆದವೆಂದು ತಿಳಿಯಬೇಕು.

೨೭. ಅದರಲ್ಲಿ ಮೊದಲನೆಯದು ಕೂರ್ಮ, ಎರಡನೆಯದು ಮತ್ಸ್ಯ, ಮೂರನೆಯದು ಶ್ವೇತವರಾಹಕಲ್ಪ, ಎಂದು ಪ್ರಾಚೀನ ಪಂಡಿತರು ಹೇಳಿರುವರು.

೨೮. ಭಗವಂತನಾದ ಪರಬ್ರಹ್ಮನು ಮೊದಲು ಸೂಕ್ಷ್ಮ, ಸ್ಥೂಲ ಎಂಬ ಎರಡು ಸ್ವರೂಪ ಹೊಂದಿದನು. ಆ ಸೂಕ್ಷ್ಮಸ್ವರೂಪನಾದ ಬ್ರಹ್ಮನು ನಿರ್ಗುಣ ಸ್ವರೂಪನು, ಸ್ಥೂಲರೂಪ ಬ್ರಹ್ಮನು ಗುಣಯುಕ್ತನು. ಈ ಸಗುಣಬ್ರಹ್ಮನೇ ವಿರಾಟ ಎಂಬ ಹೆಸರಿನಿಂದ ವಿಷ್ಣುವಿನ ನಾಭಿಯಲ್ಲಿ ಜನಿಸಿದನು.

೨೯. ಗುಣರಹಿತನೂ, ನಾಶರಹಿತನೂ, ಅವ್ಯಕ್ತಸ್ವರೂಪನೂ, ಆದ ಬ್ರಹ್ಮನು 'ಸ್ವಭೂ' ಎನಿಸಿದನು. ಈ ಸಗುಣ ಬ್ರಹ್ಮನಿಗೆ ಆಯುಷ್ಯಕಾಲಮಾನವು ನೂರುವರ್ಷಗಳೆಂದೇರ್ಪಟ್ಟಿತು.

೩೦. ಮನುಷ್ಯಮಾನದಲ್ಲಿ ಇಪ್ಪತ್ತುಸಾವಿರ ಕಡಿಮೆ ಒಂದುಲಕ್ಷ ವರ್ಷಗಳಿಗೆ ವಿರಾಟ್ ಸ್ವರೂಪನಾದ ಬ್ರಹ್ಮನ ಒಂದು ದಿವಸವಾಗುವುದು.

**ನಿರ್ಗುಣೋಽವ್ಯಕ್ತಜನ್ಮಾ ಚ ಕಾಲಾತ್ಸರ್ವೇಶ್ವರಃ ಪರಃ ।**
**ಅವ್ಯಕ್ತಂ ಪ್ರಕೃತಿರ್ಜ್ಞೇಯಾ ದ್ವಾದಶಾಂಗಾನಿ ವೈ ತತಃ ॥ ೩೧ ॥**

**ಇಂದ್ರಿಯಾಣಿ ಮನೋ ಬುದ್ಧಿರವ್ಯಕ್ತಸ್ಯ ಸ್ಮೃತಾನಿ ವೈ ॥**
**ಅವ್ಯಕ್ತಾಚ್ಚ ಪರಂ ಬ್ರಹ್ಮ ಸೂಕ್ಷ್ಮಜ್ಯೋತಿಸ್ತದವ್ಯಯಂ ॥ ೩೨ ॥**

**ಯದಾ ವ್ಯಕ್ತೇ ಸ್ವಯಂ ಪ್ರಾಪ್ತೋಽವ್ಯಕ್ತಜನ್ಮಾ ಹಿ ಸಂಸ್ಕೃತಃ ।**
**ಶತವರ್ಷಸಮಾಧಿಸ್ಥೋ ಯುಸ್ತಿಷ್ಠೇಚ್ಚ ನಿರಂತರಂ ॥ ೩೩ ॥**

**ಸೂಕ್ಷ್ಮೋ ಮನೋಽನಿಲೋ ಭೂತ್ವಾ ಗಚ್ಛೇದ್ವೈ ಬ್ರಹ್ಮಣಃ ಪದಂ ।**
**ಸತ್ಯಲೋಕಮಿತಿ ಜ್ಞೇಯಂ ಯೋಗಗಮ್ಯಂ ಸನಾತನಂ ॥ ೩೪ ॥**

**ತತ್ರ ಸ್ಥಾನೇ ತು ಮುನಯೋ ಗತಾಃ ಸರ್ವೇ ಸಮಾಧಿನಾ ।**
**ತತ್ರೋಷಿತ್ವಾ ಚ ಲಕ್ಷಾಬ್ದಂ ಭೂಲೋಕಾತ್ಕ್ಷಣಮಾತ್ರಕಮ್ ॥ ೩೫ ॥**

---

೩೧. ನಿರ್ಗುಣನೂ, ಅವ್ಯಕ್ತ ಸ್ವರೂಪನೂ, ಸರ್ವ ಶ್ರೇಷ್ಠನೂ, ಆದ ಪರ ಬ್ರಹ್ಮನು ಕಾಲಕ್ಕಿಂತಲೂ ಶ್ರೇಷ್ಠನು. ಈ ಅವ್ಯಕ್ತವೆಂಬುದು ಪ್ರಕೃತಿಯೆನಿಸುವುದು. ಈ ಪ್ರಕೃತಿಗೆ ಹನ್ನೆರಡು ಅವಯುವಗಳಿರುವುವು.

೩೨. ವಿವರವಾಗಿ ಹೇಳುವುದಾದರೆ ಪಂಚಕರ್ಮೇಂದ್ರಿಯ, ಪಂಚ ಜ್ಞಾನೇಂದ್ರಿಯ, ಮನಸ್ಸು, ಬುದ್ಧಿ ಇವುಗಳೇ ಅವ್ಯಕ್ತಸ್ವರೂಪವಾದ ಪ್ರಕೃತಿಯ ಹನ್ನೆರಡು ಅವಯುವಗಳು. ಈ ಅವ್ಯಕ್ತಕ್ಕಿಂತಲೂ ಸೂಕ್ಷ್ಮಜ್ಯೋತಿಸ್ಸ್ವರೂಪನಾದ ಬ್ರಹ್ಮನು ಶ್ರೇಷ್ಠನು. ಮತ್ತು ನಾಶರಹಿತನು ಎಂದು ತಿಳಿಯಬೇಕು.

೩೩-೩೪. ಈ ಪರಬ್ರಹ್ಮವೇ ವ್ಯಕ್ತಸ್ವರೂಪದಲ್ಲಿದ್ದುಕೊಂಡು ಅನಂತರ ತಾನೇ ಅವ್ಯಕ್ತವೆನಿಸುವುದು. ನೂರು ವರ್ಷಕಾಲ ನಿರಂತರವಾಗಿ ಸಮಾಧಿಮಗ್ನನಾಗಿ ಧ್ಯಾನಮಾಡಿದವನು ಸೂಕ್ಷ್ಮವಾದ ಮನಸ್ಸುಳ್ಳವನಾಗಿ ವಾಯುಸ್ವರೂಪ ಹೊಂದಿ ಯೋಗಶಕ್ತಿಯಿಂದ ಪಡೆಯುವ, ಸನಾತನವಾದ ಸತ್ಯಲೋಕವೆಂದು ಪ್ರಸಿದ್ಧವಾದ, ಬ್ರಹ್ಮಲೋಕವನ್ನು ಹೊಂದುವನು.

೩೫-೩೬ ಈ ಬ್ರಹ್ಮಲೋಕವನ್ನು ಎಲ್ಲ ಮಹರ್ಷಿಗಳೂ ತಮ್ಮ ಸಮಾಧಿ ಯೋಗದಿಂದಲೇ ಪಡೆದರು. ಮತ್ತು ಭೂಲೋಕದಿಂದ ಈ ಸತ್ಯಲೋಕಕ್ಕೆ ಬಂದು ಲಕ್ಷ ವರ್ಷಗಳ ಕಾಲ ನೆಲಸಿ, ಅನಂತರ ಅಲ್ಲಿಂದ ಹೊರಟು ಕಲಿಯುಗದಲ್ಲಿ ಸಚ್ಚಿ

ಸಚ್ಚಿದಾನಂದಘನಕಂ ತತಃ ಪ್ರಾಪ್ತಾಃ ಕಲೌಯುಗೇ ।
ನೇತ್ರಾಣಿ ಚ ಸಮುನ್ಮೀಲ್ಯ ಸಂಪ್ರಾಪ್ತೇ ದ್ವಿತಯಾಽಹ್ನಿಕೇ ॥ ೩೬ ॥

ದದೃಶುರ್ಮನುಜಾನ್ ಸರ್ವಾನ್ ಪಶುತುಲ್ಯಾನ್ಸಿ ಸೂಕ್ಷ್ಮಕಾನ್ ।
ಷಷ್ಟ್ಯಬ್ದಾಯುಯುರ್ಯುತಾನ್ ಘೋರಾನ್ ಸಾರ್ಧಕಿಷ್ಕುದ್ವಯೋನ್ನತಾನ್ ॥ ೩೭ ॥

ಕ್ವಚಿತ್ ಕ್ವಚಿತ್ ಸ್ಥಿತಾ ವರ್ಣಾ ವರ್ಣಸಂಕರಸನ್ನಿಭಾಃ ।
ಸರ್ವೇ ಮ್ಲೇಚ್ಛಾಶ್ಚ ಪಾಷಂಡಾ ಬಹುರೂಪಮತೋ ಸ್ಥಿತಾಃ ॥ ೩೮ ॥

ತೀರ್ಥಾನಿ ಸಕಲಾ ವೇದಾಸ್ತ್ಯಕ್ತ್ವಾ ಭೂಮಂಡಲಂ ತದಾ ।
ಗೋಪ್ಯೋ ಭೂತ್ವಾ ಚ ಹರಿಣಾ ಸಾರ್ಧಂ ಚಕ್ರುರ್ಮಹೋತ್ಸವಂ ॥ ೩೯ ॥

ಪಾಷಂಡಾ ಬಹುಜಾತೀಯಾ ನಾನಾಮಾರ್ಗಪ್ರದರ್ಶಕಾಃ ।
ಕಲಿನಾ ನಿರ್ಮಿತಾನ್ವರ್ಣಾನ್ ವಂಚಯಿತ್ವಾ ಸ್ಥಿತಾ ಭುವಿ ॥ ೪೦ ॥

---

ದಾನಂದ ರೂಪನಾದ ಪರಮಾತ್ಮನ ಸಮೀಪಕ್ಕೆ ಬಂದುಬಿಟ್ಟರು. ಅನಂತರ ಹೀಗೆ ಒಂದುದಿನ ಕಳೆಯಲು ಮಾರನೆಯದಿನ ಕಣ್ಣುತೆರೆದು ನೋಡಲಾಗಿ, ಮನುಷ್ಯರೆಲ್ಲರೂ ಸೂಕ್ಷ್ಮಸ್ವರೂಪವುಳ್ಳವರಾಗಿ ಪಶುಸಮಾನವಾಗಿದ್ದರು. ಇವರಿಗೆ ಅರುವತ್ತು ವರ್ಷಗಳು ಆಯುಃಪರಿಮಾಣವಿದ್ದಿತು. ಈ ಮನುಜರು ಎರಡೂವರೆ ಮೊಳ ಉದ್ದ ಉಳ್ಳವರಾಗಿ ಮಹಾಭಯಂಕರರಾಗಿದ್ದರು.

೩೮. ಕೆಲವು ಕೆಲವು ಕಡೆ ವರ್ಣಸಾಂಕರ್ಯದಿಂದ ಜನಿಸಿದ ಪ್ರಜೆಗಳಿದ್ದರು ಪಾಷಂಡರಾದ ಮ್ಲೇಚ್ಛರೇ ಬಹುರೂಪರಾಗಿ ನೆಲಸಿದ್ದರು.

೩೯. ಆಗ ಎಲ್ಲ ತೀರ್ಥಕ್ಷೇತ್ರಗಳೂ ವೇದಗಳೂ ಸಹ ಭೂಮಂಡಲವನ್ನು ಬಿಟ್ಟು ಗೋಪಿಕಾಸ್ತ್ರೀಯರ ವೇಷವನ್ನು ಧರಿಸಿ ವಿಷ್ಣುವಿನೊಡನೆ ವಿಹಾರ ಮಾಡುತ್ತಾ ಮಹೋತ್ಸವವನ್ನು ಆರಂಭಿಸಿದರು.

೪೦. ನಾನಾಜಾತಿಯವರೂ ಪಾಷಂಡರೂ ಆದ ಈ ಮ್ಲೇಚ್ಛರು ಅನೇಕ ಮಾರ್ಗ ಪ್ರದರ್ಶಕರಾಗಿ ಕಲಿಯಿಂದ ನಿರ್ಮಿಸಲ್ಪಟ್ಟ ವರ್ಣಾಶ್ರಮದವರನ್ನು ಮೋಸಪಡಿಸಿ ಭೂಮಿಯಲ್ಲಿ ವಾಸಮಾಡತೊಡಗಿದರು.

ಇತಿ ದೃಷ್ಟ್ವಾ ತು ಮುನಯೋ ರೋಮಹರ್ಷಣಮಂತಿಕೇ ।
ಗತ್ವಾ ತತ್ರ ಭವಿಷ್ಯಂತಿ ತತಃ ಪ್ರಾಂಜಲಯೋ ಹಿ ತೇ ॥ ೪೧ ॥

ತೈಶ್ಚ ತತ್ರ ಸ್ತುತಃ ಸೂತೋ ಯೋಗನಿದ್ರಾಂ ಸನಾತನೀಂ ।
ಕಥಯಿಷ್ಯತಿ ಸಂತ್ಯಜ್ಯ ಕಲ್ಪಾಖ್ಯಾನಂ ಮುನೀನ್‌ಪ್ರತಿ ॥
ತಚ್ಛೃಣುಷ್ವ ನೃಪಶ್ರೇಷ್ಠ ಯಥಾ ಸೂತೇನ ವರ್ಣ್ಯತೇ ॥ ೪೨ ॥

॥ ಸೂತ ಉವಾಚ ॥

ಕಲ್ಪಾಖ್ಯಾನಂ ಪ್ರವಕ್ಷ್ಯಾಮಿ ಯದ್ದೃಷ್ಟಂ ಯೋಗನಿದ್ರಯಾ ।
ತಚ್ಛೃಣುಧ್ವಂ ಮುನಿಶ್ರೇಷ್ಠಾ ಲಕ್ಷಾಬ್ದಾಂತೇ ಯಥಾಭವತ್ ॥ ೪೩ ॥

ಮುಕುಲಾನ್ವಯಸಂಭೂತೋ ಮ್ಲೇಚ್ಛಭೂಪಃ ಪಿಶಾಚಕಃ ।
ನಾಮ್ನಾ ತಿಮಿರಲಿಂಗಶ್ಚ ಮಧ್ಯದೇಶಮುಪಾಯಯೌ ॥ ೪೪ ॥

ಆರ್ಯಾನ್ಮ್ಲೇಚ್ಛಾಂಸ್ತದಾ ಭೂಪಾಞ್ಜಿತ್ವಾ ಕಾಲಸ್ವರೂಪಕಃ ।
ದೇಹಲೀನಗರೀಮಧ್ಯೇ ಮಹಾವಧಮಕಾರಯತ್ ॥ ೪೫ ॥

---

೪೧. ಈ ಭಯಂಕರವಾದ ನಡವಳಿಕೆಯನ್ನು ನೋಡಿ ಮಹರ್ಷಿಗಳೆಲ್ಲರೂ ಸೂತಮಹರ್ಷಿಯ ಸಮೀಪಕ್ಕೆ ಹೋಗಿ ಅಲ್ಲಿ ಅಂಜಲಿಬದ್ಧರಾಗಿ ಅವನನ್ನು ಕುರಿತು ಸ್ತೋತ್ರಮಾಡತೊಡಗುವರು.

೪೨. ಈ ರೀತಿ ಆ ಮಹರ್ಷಿಗಳು ಸ್ತೋತ್ರಮಾಡಿದುದನ್ನು ಕೇಳಿ ಸೂತ ಮಹರ್ಷಿಯು ಯೋಗನಿದ್ರೆಯಿಂದ ಎಚ್ಚತ್ತು ಆ ಮುನಿಗಳಿಗೆ ಕಲ್ಪಾಖ್ಯಾನವನ್ನು ಅವನು ವರ್ಣಿಸಿದಂತೆಯೇ ನಾನು ನಿನಗೆ ಹೇಳುವೆನು. ಕೇಳು ಎಂದು ಹೇಳಿದನು.

೪೩. ಸೂತಮುನಿವರ್ಯನು ಹೇಳುತ್ತಾನೆ—"ಎಲೈ ಮುನಿವರ್ಯರಿರಾ! ಲಕ್ಷ ವರ್ಷದೊಳಗೆ ನಡೆವ ಕಲ್ಪಾಖ್ಯಾನವನ್ನು ನಾನು ಯೋಗನಿದ್ರೆಯಲ್ಲಿದ್ದಾಗ ಅರಿತೆನು. ಅದನ್ನೇ ನಿಮಗೆ ಹೇಳುವೆನು ಕೇಳಿ" ಎಂದನು.

೪೪. ಮುಕುಲ (ಮೊಗಲ) ವಂಶದಲ್ಲಿ ಹುಟ್ಟಿದವನೂ ಪಿಶಾಚಸ್ವರೂಪನೂ ಮ್ಲೇಚ್ಛರಾಜನೂ ಆದ ತಿಮಿರಲಿಂಗನೆಂಬವನು ಮಧ್ಯದೇಶಕ್ಕೆ ಬಂದನು.

೪೫. ಅಲ್ಲಿ ಆರ್ಯ ಮತ್ತು ಮ್ಲೇಚ್ಛರಾಜರುಗಳೆಲ್ಲರನ್ನೂ ಜಯಿಸಿ ಯಮ ಸ್ವರೂಪನಾಗಿ ವರ್ತಿಸಿ ದೆಹಲಿ ಪಟ್ಟಣಕ್ಕೆ ಬಂದು ಅಲ್ಲಿ ತುಂಬಾ ಕೊಲೆಮಾಡಿದನು.

ಆಹೂಯ ಸಕಲಾನ್ ವಿಪ್ರಾನಾರ್ಯದೇಶನಿವಾಸಿನಃ ।
ಉವಾಚ ವಚನಂ ಧೀಮಾನ್ಯೂಯಂ ಮೂರ್ತಿಪ್ರಪೂಜಕಾಃ ॥ ೪೬ ॥

ನಿರ್ಮಿತಾ ಯೇನ ವಾ ಮೂರ್ತಿಸ್ತಸ್ಯ ಪುತ್ರೀಸಮಾ ಸ್ಮೃತಾ ।
ತಸ್ಯಾಃ ಕಿಂ ಪೂಜನಂ ಶುದ್ಧಂ ಶಾಲಗ್ರಾಮಶಿಲಾಮಯಂ ॥
ವಿಷ್ಣುದೇವಶ್ಚ ಯುಷ್ಮಾಭಿಃ ಪ್ರೋಕ್ತಃ ಸ ತು ನ ವೈ ಹರಿಃ ॥ ೪೭ ॥

ಅತೋ ವಃ ಸಕಲಾ ವೇದಾಃ ಶಾಸ್ತ್ರಾಣಿ ವಿವಿಧಾನಿ ಚ ।
ವೃಥಾ ಕೃತಾನಿ ಮುನಿಭಿರ್ಲೋಕವಂಚನಹೇತವೇ ॥
ಇತ್ಯುಕ್ತ್ವಾ ತಾನ್ಬಲಾದ್ಗೃಹ್ಯ ಜ್ವಲದಗ್ನೌ ಸಮಾಕ್ಷಿಪತ್ ॥ ೪೮ ॥

ಶಾಲಗ್ರಾಮಶಿಲಾಃ ಸರ್ವಾ ಬಲಾತ್ತೇಷಾಂ ಸುಪೂಜ್ಯಕಾಃ ।
ಗೃಹೀತ್ವಾ ಚೋಷ್ಟ್ರಪೃಷ್ಠೇಷು ಸಮಾರೋಪ್ಯ ಗೃಹಂ ಯಯೌ ॥ ೪೯ ॥

---

೪೬. ಬಳಿಕ ಆ ಮ್ಲೇಚ್ಛರಾಜನು ಆರ್ಯದೇಶನಿವಾಸಿಗಳಾದ ಬ್ರಾಹ್ಮಣರನ್ನೆಲ್ಲಾ ಕರೆಯಿಸಿ ಅವರನ್ನು ಕುರಿತು "ಎಲೈ ವಿಪ್ರರಿರಾ ! ನೀವೆಲ್ಲಾ ವಿಗ್ರಹಾರಾಧಕರು.

೪೭. ವಿಗ್ರಹವನ್ನು ನಿರ್ಮಿಸುವವರು ಶಿಲ್ಪಿಗಳು. ಅವರಿಂದ ನಿರ್ಮಿತವಾದ ಆ ಮೂರ್ತಿಯು ಅವರಿಗೆ ಪುತ್ರೀಸಮಾನ. ಹೀಗೆ ತನ್ನ ಪುತ್ರಿಗೆ ಸಮಾನವೂ ಸಾಲಗ್ರಾಮಶಿಲಾಮಯವೂ ಆದ ಮೂರ್ತಿಪೂಜೆಮಾಡುವುದು ಯೋಗ್ಯವೇ? ನೀವು ಶಿಲೆಯಲ್ಲಿದ್ದಾನೆಂದು ಹೇಳುವ ವಿಷ್ಣುದೇವನೆಂಬುವನು ಮಹಾವಿಷ್ಣುವಲ್ಲ.

೪೮ ಆದುದರಿಂದ ನಿಮ್ಮ ಸಕಲ ವೇದಶಾಸ್ತ್ರಗಳೂ ಜನಗಳನ್ನು ಮೋಸ ಮಾಡುವುದಕ್ಕೋಸ್ಕರವೇ ಮುನಿಜನಗಳಿಂದ ಬಗೆಬಗೆಯಾದ ಹೆಸರಿನಿಂದ ವ್ಯರ್ಥವಾಗಿ ರಚಿತವಾಗಿವೆಯೆಂದು" ಹೇಳಿ ಆ ವೇದಶಾಸ್ತ್ರ ಗ್ರಂಥಗಳನ್ನು ಬಲಾತ್ಕಾರದಿಂದ ಕಸಿದುಕೊಂಡು ಉರಿಯುತ್ತಿರುವ ಬೆಂಕಿಯಲ್ಲಿ ಹಾಕಿಬಿಟ್ಟನು.

೪೯. ಮತ್ತು ಅವರು ಪೂಜಿಸುತ್ತಿದ್ದ ಸಾಲಿಗ್ರಾಮಶಿಲೆಗಳೆಲ್ಲವನ್ನೂ ಬಲಾತ್ಕಾರದಿಂದ ಕಿತ್ತುಕೊಂಡು ಒಂಟೆಯ ಮೇಲೆ ಹೇರಿಕೊಂಡು ಮನೆಗೆ ಹೊರಟನು.

ತ್ರೈತ್ತಿರಂ ದೇಶಮಾಗಮ್ಯ ದುರ್ಗಂ ತತ್ರ ಚಕಾರ ಸಃ ।
ಶಾಲಗ್ರಾಮಶಿಲಾನಾಂ ಚ ಸ್ವಾಸನಾರೋಹಣಂ ಕೃತಂ ॥ ೫೦ ॥

ತದಾ ತು ಸಕಲಾ ದೇವಾ ದುಃಖಿತಾ ವಾಸವಂ ಪ್ರಭುಂ ।
ಸಮೂಚುರ್ಬಹುಧಾಲಪ್ಯ ದೇವದೇವಂ ಶಚೀಪತಿಂ ॥ ೫೧ ॥

ವಯಂ ತು ಭಗವನ್‌ಸರ್ವೇ ಶಾಲಗ್ರಾಮಶಿಲಾಸ್ಥಿತಾಃ ।
ತ್ಯಕ್ತ್ವಾ ಮೂರ್ತೀಶ್ಚ ಸಕಲಾಃ ಕೃಷ್ಣಾಂಶೇನ ಪ್ರಭೋಧಿತಾಃ ॥
ಶಾಲಗ್ರಾಮಶಿಲಾಮಧ್ಯೇ ವಸಾಮೋ ಮುದಿತಾ ವಯಂ ॥ ೫೨ ॥

ಶಿಲಾಸ್ಸರ್ವಾಶ್ಚ ನೋ ದೇವ ಶಾಲದೇಶಸಮುದ್ಭವಾಃ ।
ತಾಶ್ಚ ವೈ ಮ್ಲೇಚ್ಛರಾಜೇನ ಸ್ವಪದಾರೋಹಣೀಕೃತಾಃ ॥ ೫೩ ॥

---

೫೦. ಹೀಗೆ ಹೊರಟು ತ್ರೈತ್ತಿರದೇಶಕ್ಕೆ ಬಂದು, ಅಲ್ಲಿ ಒಂದು ಕೋಟೆಯನ್ನು ನಿರ್ಮಿಸಿದನು. ಮತ್ತು ತಾನು ತಂದಿದ್ದ ಸಾಲಿಗ್ರಾಮಶಿಲೆಗಳೆಲ್ಲವನ್ನೂ ತಾನು ಕುಳಿತುಕೊಳ್ಳುವ ಸಿಂಹಾಸನಕ್ಕೆ ಹತ್ತುವ ಮೆಟ್ಟಲುಗಳಿಗೆ ಹಾಕಿ ಅದರ ಮೇಲೆ ಹತ್ತುತ್ತಿದ್ದನು.

೫೧-೫೨. ಆಗ ದೇವತೆಗಳೆಲ್ಲಾ ತುಂಬ ದುಃಖಿತರಾಗಿ ದೇವದೇವನೂ, ಶಚೀಪತಿಯೂ, ತಮಗೆ ಒಡೆಯನೂ ಆದ ಇಂದ್ರನ ಸಮೀಪಕ್ಕೆ ಹೋಗಿ ಬಹಳವಾಗಿ ಗೋಳಾಡುತ್ತಾ ನಡೆದ ಸಮಾಚಾರವನ್ನು ಅರಿಕೆಮಾಡಿದರು. ಅಲ್ಲದೆ ಅವನನ್ನು ಕುರಿತು " ಭಗವಂತನೇ ! ನಾವು ಶಿಲಾವಿಗ್ರಹಗಳಲ್ಲಿ ವಾಸಿಸುತ್ತಿದ್ದವರು. ಕೃಷ್ಣಾಂಶನಿಂದ ಬೋಧಿತರಾಗಿ ದೇವಮೂರ್ತಿಗಳನ್ನು ಬಿಟ್ಟು ಸಾಲಿಗ್ರಾಮಶಿಲಾಮಧ್ಯದಲ್ಲಿ ಬಂದು ಸಂತೋಷದಿಂದ ನೆಲಸಿರುತ್ತಿದ್ದೆವು.

೫೩. ಹೀಗೆ ನಮಗೆ ಆವಾಸಸ್ಥಳವಾದ ಈ ಸಾಲಿಗ್ರಾಮಶಿಲೆಗಳೆಲ್ಲವೂ ಶಾಲಿದೇಶದಲ್ಲಿ ಉತ್ಪನ್ನವಾದುವು. ಈ ಮ್ಲೇಚ್ಛರಾಜನಾದ ತಿಮಿರಲಿಂಗನೆಂಬುವನು ಆ ಶಿಲೆಗಳ ಮೆಟ್ಟಲನ್ನು ತನ್ನ ಕಾಲಿನಿಂದ ತುಳಿದುಕೊಂಡು ಸಿಂಹಾಸನಕ್ಕೆ ಹತ್ತುತ್ತಾನೆ. ಎಂದು ಹೇಳಿದರು.

ಇತಿ ಶ್ರುತ್ವಾ ತು ವಚನಂ ದೇವಾನಾಂ ಭಗವಾನ್ ಸ್ವರಾಟ್ ।
ಜ್ಞಾತ್ವಾ ಬಲಿಕೃತಂ ಸರ್ವಂ ದೇವಪೂಜಾನಿರಾಕೃತಂ ॥ ೫೪ ॥

ಚುಕೋಪ ಭಗವಾನಿಂದ್ರೋ ದೈತ್ಯಾನ್ ಪ್ರತ್ಯಭ್ರವಾಹನಃ ।
ಗೃಹೀತ್ವಾ ವಜ್ರಮತುಲಂ ಸ್ವಾಯುಧಂ ದೈತ್ಯನಾಶನಂ ॥ ೫೫ ॥

ತೈತ್ತಿರೇ ಪ್ರೇಷಯಾಮಾಸ ದೇಶೇ ಮ್ಲೇಚ್ಛನಿವಾಸಕೇ ।
ತಸ್ಯ ಶಬ್ದೇನ ಸಕಲಾ ದೇಶಾಶ್ಚ ಬಹುಭಿನ್ನಕಾಃ ॥
ಸ ಮ್ಲೇಚ್ಛೋ ಮರಣಂ ಪ್ರಾಪ್ತಸ್ತದಾ ಸರ್ವಸಭಾಜನೈಃ ॥ ೫೬ ॥

ಶಾಲಗ್ರಾಮಶಿಲಾಃ ಸರ್ವಾ ಗೃಹೀತ್ವಾ ವಿಬುಧಾಸ್ತದಾ ।
ಗಂಡಕ್ಯಾಂ ಚ ಸಮಾಕ್ಷಿಪ್ಯ ಸ್ವರ್ಗಲೋಕಮುಪಾಯಯುಃ ॥ ೫೭ ॥

ಮಹೇಂದ್ರಸ್ತು ಸುರೈಃ ಸಾರ್ಧಂ ದೇವಪೂಜ್ಯಮುವಾಚ ಹ ।
ಮಹೀತಲೇ ಕಲೌ ಪ್ರಾಪ್ತೇ ಭಗವಾನ್ ದಾನವೋತ್ತಮಾಃ ॥ ೫೮ ॥

---

೫೪. ಈ ರೀತಿ ದೇವತೆಗಳು ಹೇಳಿದ ಮಾತನ್ನು ಕೇಳಿ ದೇವರಾಜನಾದ ಇಂದ್ರನು ಈ ರೀತಿ ಬಲಿಯಿಂದ ದೇವಪೂಜೆಯು ನಿರಾಕರಿಸಲ್ಪಟ್ಟಿದ್ದಕ್ಕೋಸ್ಕರ ಕೋಪಗೊಂಡನು.

೫೫. ಅನಂತರ ಮೇಘವಾಹನನೂ ಭಗವಂತನೂ ಆದ ಇಂದ್ರನು ದೈತ್ಯರನ್ನು ನಾಶಮಾಡುವುದಕ್ಕೋಸ್ಕರ ನಿರ್ಮಿತವಾದ ಶ್ರೇಷ್ಠವಾದ ವಜ್ರಾಯುಧವನ್ನು ತೆಗೆದುಕೊಂಡು ಅದನ್ನು ಮ್ಲೇಚ್ಛರು ವಾಸಿಸುತ್ತಿದ್ದ ತೈತ್ತಿರದೇಶಕ್ಕೆ ಕಳುಹಿಸಿದನು.

೫೬. ಆ ವಜ್ರಾಯುಧದ ಆಗಮನಶಬ್ದದಿಂದ ಆ ಮ್ಲೇಚ್ಛದೇಶಗಳೆಲ್ಲವೂ ಛಿನ್ನಭಿನ್ನವಾಗಿ ಅನೇಕ ಪಾಲಾದುವು. ಅಲ್ಲದೆ ಆ ಮ್ಲೇಚ್ಛರಾಜನಾದ ತಿಮಿರಲಿಂಗನು ತನ್ನ ಸಭಾಜನರ ಸಮೇತನಾಗಿ ಮೃತನಾದನು

೫೭. ಅನಂತರ ದೇವತೆಗಳೆಲ್ಲರೂ ಆ ಸಾಲಿಗ್ರಾಮಶಿಲೆಗಳನ್ನೆಲ್ಲಾ ತೆಗೆದುಕೊಂಡು ಬಂದು ಗಂಡಕೀನದಿಯೊಳಗೆ ಹಾಕಿ ತಾವು ಸ್ವರ್ಗಲೋಕಕ್ಕೆ ಹೋದರು.

೫೮-೫೯. ಆಮೇಲೆ ಮಹೇಂದ್ರನು ಎಲ್ಲಾ ದೇವತೆಗಳೊಡನೆ ಪೂಜ್ಯರಾದ ಬೃಹಸ್ಪತ್ಯಾಚಾರ್ಯರನ್ನು ಕುರಿತು ಹೀಗೆ ಹೇಳಿದನು. ಎಲೈ ಭಗವಂತನೇ! ಕಲಿಯುಗವು ಪ್ರಾರಂಭವಾದಾಗಿನಿಂದ ಭೂಮಂಡಲದಲ್ಲಿ ದಾನವಶ್ರೇಷ್ಠರೆಲ್ಲರೂ ನನಗೆ

ವೇದಧರ್ಮಂ ಸಮುಲ್ಲಂಘ್ಯ ಮಮ ನಾಶನತತ್ಪರಾಃ ।
ಅತೋ ಮಾಂ ರಕ್ಷ ಭಗವಾನ್ ದೇವೈಸ್ಸಾರ್ಧಂ ಕಲೌ ಯುಗೇ ॥ ೫೯ ॥

ಜೀವ ಉವಾಚ

ಮಹೇಂದ್ರ ತವ ಯಾ ಪತ್ನೀ ಶಚೀ ನಾಮ್ನಾ ಮಹೋತ್ತಮಾ ।
ದದೌ ತಸ್ಯೈ ವರಂ ವಿಷ್ಣುರ್ಭವಿತಾಸ್ಮಿ ಸುತಃ ಕಲೌ ॥ ೬೦ ॥

ತ್ವದಾಜ್ಞಯಾ ಚ ಸಾ ದೇವೀ ಪುರೀಂ ಶಾಂತಿಮಯೀಂ ಶುಭಾಂ ।
ಗೌಡದೇಶೇ ಚ ಗಂಗಾಯಾಃ ಕೂಲೇ ಲೋಕನಿವಾಸಿನೀಂ ॥ ೬೧ ॥

ಪ್ರತ್ಯಾಗತ್ಯ ದ್ವಿಜಾಭೂತ್ವಾ ಕಾರ್ಯಸಿದ್ಧಿಂ ಕರಿಷ್ಯತಿ ।
ಭವಾನ್ವೈ ಬ್ರಾಹ್ಮಣೋ ಭೂತ್ವಾ ದೇವಕಾರ್ಯಂ ಪ್ರಸಾಧಯ ॥ ೬೨ ॥

ಇತಿ ಶ್ರುತ್ವಾ ಗುರೋರ್ವಾಕ್ಯಂ ರುದ್ರೈರೇಕಾದಶೈಃ ಸಹ ।
ಅಷ್ಟಭಿರ್ವಸುಭಿಃ ಸಾರ್ಧಮಶ್ವಿಭ್ಯಾಂ ಸ ಚ ವಾಸವಃ ॥ ೬೩ ॥

---

ಪ್ರೀತಿಪಾತ್ರವಾದ ವೇದಧರ್ಮವನ್ನು ಉಲ್ಲಂಘಿಸಿ ಅದನ್ನು ನಾಶಪಡಿಸುತ್ತಿರುವರು. ಆದುದರಿಂದ ಎಲೈ ಸರ್ವಸಮರ್ಥನಾದ ಆಚಾರ್ಯನೇ! ಈ ಕಲಿಯುಗದಲ್ಲಿ ಸಕಲ ದೇವತೆಗಳೊಡನೆ ನನ್ನನ್ನು ರಕ್ಷಿಸು" ಎಂದನು. ಇಂದ್ರನು ಹೇಳಿದ ಈ ಮಾತನ್ನು ಕೇಳಿ ಬೃಹಸ್ಪತ್ಯಾಚಾರ್ಯರು ಹೇಳುತ್ತಾರೆ.

೬೦. "ಎಲೈ ಮಹೇಂದ್ರನೇ! ನಿನ್ನ ಪತ್ನಿಯೆನಿಸಿದ ಮಹಾಶ್ರೇಷ್ಠಳಾದ ಶಚೀದೇವಿಗೆ, ಮಹಾವಿಷ್ಣುವು ಕಲಿಯುಗದಲ್ಲಿ ನಾನು ನಿನಗೆ ಮಗನಾಗಿ ಹುಟ್ಟುವೆ ನೆಂದು ವರವನ್ನು ಕೊಟ್ಟಿರುವನು."

೬೧–೬೨. "ಈಗ ನಿನ್ನ ಅಪ್ಪಣೆ ಪಡೆದು ಆ ಶಚೀದೇವಿಯು ಶುಭಕರವಾದ ಗೌಡದೇಶದಲ್ಲಿರುವ ಶಾಂತಿಗ್ರಾಮಕ್ಕೆ ಹೋಗಿ ಬ್ರಾಹ್ಮಣಸ್ತ್ರೀಯಾಗಿ ಜನಿಸಿ, ಅಲ್ಲಿ ಗಂಗಾತೀರದಲ್ಲಿರುವ ಲೋಕನಿವಾಸಿನೀದೇವಿಯನ್ನು ಆರಾಧಿಸಿ ಕಾರ್ಯವನ್ನು ಸಾಧಿಸು ವಳು. ನೀನೂ ಸಹ ಬ್ರಾಹ್ಮಣನಾಗಿ ಜನಿಸಿ ದೇವಕಾರ್ಯವನ್ನು ನೆರವೇರಿಸು" ಎಂದನು.

೬೩-೬೪. ಹೀಗೆ ಬೃಹಸ್ಪತ್ಯಾಚಾರ್ಯರು ಹೇಳಿದ ಈ ಮಾತನ್ನು ಕೇಳಿ ಆ ಇಂದ್ರನು ಏಕಾದಶರುದ್ರರೊಡನೆಯೂ ಅಷ್ಟವಸುಗಳೊಡನೆಯೂ ಮತ್ತು ಅಶ್ವಿನೀ

ತೀರ್ಥರಾಜಮುಪಾಗಮ್ಯ ಪ್ರಯಾಗಂ ಚ ರವಿಪ್ರಿಯಂ ।
ಮಾಘೇ ತು ಮಕರೇ ಸೂರ್ಯೇ ಸೂರ್ಯದೇವಮತೋಷಯತ್॥ ೭೪ ॥

ಬೃಹಸ್ಪತಿಸ್ತದಾಗತ್ಯ ಸೂರ್ಯಮಹಾತ್ಮ್ಯಮುತ್ತಮಂ ।
ಇಂದ್ರಾದೀನ್ ಕಥಯಾಮಾಸ ದ್ವಾದಶಾಧ್ಯಾಯಮಾಪಠನ್ ॥ ೭೫ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ಚತುರ್ಥಖಂಡೇ
ಕಲಿಯುಗೀಯೇತಿಹಾಸಸಮುಚ್ಚಯೇ ಪ್ರಮರವಂಶವರ್ಣನೋ
ನಾಮ ಷಷ್ಠೋಽಧ್ಯಾಯಃ.



ದೇವತೆಗಳೊಡನೆಯೂ ಹೊರಟು, ಸೂರ್ಯನಿಗೆ ಅತ್ಯಂತ ಪ್ರೀತಿಪಾತ್ರವೂ ತೀರ್ಥ ಶ್ರೇಷ್ಠವೂ ಆದ ಪ್ರಯಾಗವನ್ನು ಸೇರಿ ಸೂರ್ಯನು ಮಕರರಾಶಿಗೆ ಬಂದು ಮಾಘ ಮಾಸಯುಕ್ತವಾಗಿರುವಾಗ ಅವನನ್ನು ಆರಾಧಿಸಿ ಸಂತೋಷಪಡಿಸಿದನು.

೭೫. ಆ ಸಮಯದಲ್ಲಿ ಬೃಹಸ್ಪತ್ಯಾಚಾರ್ಯರು ಅಲ್ಲಿಗೆ ಬಂದು ಉತ್ತಮವಾದ ಹನ್ನೆರಡು ಅಧ್ಯಾಯಗಳುಳ್ಳ ಸೂರ್ಯಮಹಾತ್ಮೆಯನ್ನು ಇಂದ್ರಾದಿಗಳಿಗೆ ವಾಚನ ಮಾಡಿದರು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಪ್ರತಿಸರ್ಗಪರ್ವದ ಚತುರ್ಥಖಂಡದಲ್ಲಿ
ಆರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಪ್ರತಿಸರ್ಗಪರ್ವಣಿ ಚತುರ್ಥಖಂಡೇ

## ಸಪ್ತಮೋಽಧ್ಯಾಯಃ

---

॥ ಋಷಯ ಊಚುಃ ॥

ಬೃಹಸ್ಪತಿಸ್ತು ಭಗವಾನ್ ಮುನಿದೇವಾನ್ಸಮಾಸ್ಥಿತಾನ್ ।
ಕಿಂ ಪ್ರೋವಾಚ ಚ ಮಾಹಾತ್ಮ್ಯಂ ಮಂಡಲಸ್ಥಸ್ಯ ವೈ ರವೇಃ ॥ ೧ ॥

ತತ್ಸರ್ವಂ ಕೃಪಯಾ ಬ್ರಹ್ಮನ್ ಬ್ರೂಹಿ ನಸ್ತತ್ಸಮುತ್ಸುಕಾನ್ ।
ಇತಿ ಶ್ರುತ್ವಾ ವಚಸ್ತೇಷಾಂ ಸೂತೋ ವಚನಮಬ್ರವೀತ್ ॥ ೨ ॥

ಬೃಹಸ್ಪತಿಂ ಸಮಾಸೀನಂ ಜೀವರೂಪಂ ಗುಣಾಲಯಂ ।
ಪ್ರಯಾಗಸ್ಥೋ ಮಹೇಂದ್ರಶ್ಚ ಸುರೈಃ ಸಾರ್ಧಮುವಾಚ ಹ ॥ ೩ ॥

---

## ಏಳನೆಯ ಅಧ್ಯಾಯ

೧. ಋಷಿಗಳು ಸೂತಮುನಿವರ್ಯನನ್ನು ಪ್ರಶ್ನೆಮಾಡುತ್ತಾರೆ—" ಎಲೈ ಭಗವಂತನಾದ ಸೂತನೆ! ಮುನಿವರ್ಯರಾದ ಬೃಹಸ್ಪತ್ಯಾಚಾರ್ಯರು ಸೂರ್ಯಾರಾಧನೆಯನ್ನು ಮಾಡುತ್ತಿದ್ದ ಇಂದ್ರಾದಿದೇವತೆಗಳನ್ನು ಕುರಿತು ಮಂಡಲಾಂತರ್ವರ್ತಿಯಾದ ಸೂರ್ಯನ ಮಹಿಮೆಯನ್ನು ಯಾವರೀತಿ ಹೇಳಿದರು?

೨. ಎಲೈ ಬ್ರಹ್ಮಜ್ಞಾನಿಯೇ! ನಮ್ಮಲ್ಲಿ ಕರುಣವಿಟ್ಟು ಕುತೂಹಲಾವಿಷ್ಟರಾದ ನಮಗೆ ಅದೆಲ್ಲವನ್ನೂ ತಿಳಿಸು" ಎಂದು ಪ್ರಾರ್ಥಿಸಿದರು.

೩. ಈ ಮಾತನ್ನು ಕೇಳಿ ಸೂತಮಹರ್ಷಿಯು ಆ ಮುನಿಗಳನ್ನು ಕುರಿತು ಎಲೈ ಮುನಿಗಳಿರಾ! ಸದ್ಗುಣಗಳಿಗೆ ಆಶ್ರಯನಾದ ಬೃಹಸ್ಪತ್ಯಾಚಾರ್ಯನು ಸುಖವಾಗಿ ಕುಳಿತಿರಲು ಪ್ರಯಾಗಕ್ಷೇತ್ರದಲ್ಲಿ ದೇವತೆಗಳೊಡನೆ ವಾಸಮಾಡುತ್ತಿದ್ದ ಮಹೇಂದ್ರನು ಅವರ ಸಮೀಪಕ್ಕೆ ಬಂದನು.

ಕಥಯಸ್ವ ಮಹಾಭಾಗ ಸೂರ್ಯಮಾಹಾತ್ಮ್ಯಮುತ್ತಮಂ ।
ಯಚ್ಛ್ರುತೇನ ರವಿಃ ಸಾಕ್ಷಾತ್ಪ್ರಸನ್ನೋಽದ್ಯ ಭವೇತ್ಪ್ರಭುಃ ॥ ೪ ॥

॥ ಬೃಹಸ್ಪತಿರುವಾಚ ॥

ಧಾತೃಶರ್ಮಾ ದ್ವಿಜಃ ಕಶ್ಚಿದಪತ್ಯಾರ್ಥೀ ಪ್ರಜಾಪತಿಂ ।
ತಪಸಾ ತೋಷಯಾಮಾಸ ಬರ್ಹಿಷ್ಮತಿಪುರೇ ಸ್ಥಿತಃ ॥ ೫ ॥

ಪಂಚಮಾಬ್ದೇ ತು ಭಗವಾನ್ ಸಂತುಷ್ಟಶ್ಚ ಪ್ರಜಾಪತಿಃ ।
ಸುತಂ ಕನ್ಯಾಂ ಪುನಃ ಪುತ್ರಂ ತ್ರೀಣ್ಯಪತ್ಯಾನಿ ಸಂದದೌ ॥ ೬ ॥

ವರ್ಷಾಂತರೇ ತ್ರ್ಯಪತ್ಯಂ ಸ ಜನಯಿತ್ವಾ ದ್ವಿಜೋತ್ತಮಃ ।
ಧಾತೃಶರ್ಮಾ ಪರಂ ಹರ್ಷಮಾಪ್ತವಾನ್‌ಪುತ್ರಲಾಲನೈಃ ॥ ೭ ॥

---

೪. ಆ ಗುರುವರ್ಯರನ್ನು ಕುರಿತು "ಎಲೈ ಮಹಾಭಾಗನೇ! ಯಾವ ಮಹಾತ್ಮೆಯನ್ನು ಶ್ರವಣಮಾಡುವುದರಿಂದ ಪ್ರಭುವಾದ ಸೂರ್ಯನು ಈಗಲೇ ಪ್ರಸನ್ನನಾಗುವನೋ ಅಂತಹ ಶ್ರೇಷ್ಠವಾದ ಸೂರ್ಯಮಹಾತ್ಮೆಯನ್ನು ನಮಗೆ ತಿಳಿಸು" ಎಂದು ಪ್ರಾರ್ಥಿಸಿದನು. ಹೀಗೆ ಪ್ರಶ್ನೆಮಾಡಿದ ಇಂದ್ರನ ಮಾತನ್ನು ಕೇಳಿ ಬೃಹಸ್ಪತ್ಯಾಚಾರ್ಯರು ಹೇಳುತ್ತಾರೆ.

೫ ಒಂದಾನೊಂದು ಕಾಲದಲ್ಲಿ ಬರ್ಹಿಷ್ಮತೀಪಟ್ಟಣದಲ್ಲಿ ವಾಸಮಾಡುತ್ತಿದ್ದ ಧಾತೃಶರ್ಮನೆಂಬ ಬ್ರಾಹ್ಮಣೋತ್ತಮನು ಪುತ್ರಾಪೇಕ್ಷೆಯುಳ್ಳವನಾಗಿ ಬ್ರಹ್ಮನನ್ನು ಕುರಿತು ತಪಸ್ಸುಮಾಡಿದನು.

೬. ಹೀಗೆ ಐದುವರ್ಷಗಳಕಾಲ ತಪಸ್ಸುಮಾಡಿದನಂತರ ಭಗವಂತನಾದ ಬ್ರಹ್ಮನು, ಪ್ರಸನ್ನನಾಗಿ ಆ ಧಾತೃಶರ್ಮನಿಗೆ ಮೊದಲು ಒಬ್ಬ ಪುತ್ರ, ಅನಂತರ ಒಂದು ಕನ್ಯೆ, ಪುನಃ ಮತ್ತೊಬ್ಬ ಮಗ, ಈರೀತಿ ಮೂವರು ಮಕ್ಕಳನ್ನು ಕರುಣಿಸಿದನು.

೭. ಹೀಗೆ ಬ್ರಹ್ಮನ ವರದಿಂದ ಬ್ರಾಹ್ಮಣಶ್ರೇಷ್ಠನಾದ ಆಧಾತೃಶರ್ಮನು ಒಂದೊಂದುವರ್ಷ ಅಂತರದಲ್ಲಿ ಮೂರುಜನ ಮಕ್ಕಳನ್ನೂ ಪಡೆದು ಅವರುಗಳ ಲಾಲನೆಪಾಲನೆಗಳಿಂದ ಸಂತೋಷಪಡುತ್ತಿದ್ದನು.

**ವಿವಾಹಾಶ್ಚ ಕಥಂ ತೇಷಾಂ ಭವಿತವ್ಯಾ ಮಹೋತ್ತಮಾಃ ।**
**ಇತಿ ಚಿಂತಾನ್ವಿತೋ ವಿಪ್ರೋ ಗಂಧರ್ವೇಶಂ ಚ ತುಂಬುರುಂ ॥ ೮ ॥**

**ಹವನೈಸ್ತೋಷಯಾಮಾಸ ವರ್ಷಮಾತ್ರವಿಧಾನತಃ ।**
**ತುಂಬುರುಶ್ಚ ತದಾಗತ್ಯ ತಂ ಚಕಾರ ಮನೋರಥಂ ॥ ೯ ॥**

**ಪ್ರಸನ್ನಸ್ತು ತದಾ ವಿಪ್ರೋ ವಧೂಜಾಮಾತರಂ ಮುದಾ ।**
**ದೃಷ್ಟ್ವಾ ತೇಷಾಂ ವಿಹಾರಂ ಚ ಪುನಶ್ಚಿಂತಾಂ ಚಕಾರ ಹ ॥ ೧೦ ॥**

**ಭೂಷಣಾನಿ ಚ ವಾಸಾಂಸಿ ಧನಾನಿ ವಿವಿಧಾನಿ ಚ ।**
**ತೇಷಾಂ ಕಥಂ ಭವಿಷ್ಯಂತಿ ನಿರ್ಧನಾನಾಂ ಮಮಾಶು ಚ ॥ ೧೧ ॥**

**ಷಷ್ಟಿರ್ವರ್ಷವಯೋ ಭೂತ್ವಾ ಚಂದನಾದ್ಯೈರ್ಧನಾಧಿಪಂ ॥**
**ವಿಧಿವತ್ಪೂಜಯಾಮಾಸ ವರ್ಷಮಾತ್ರಂ ತು ತತ್ಪರಃ ॥ ೧೨ ॥**

---

೮-೯. ಅನಂತರ ಬ್ರಾಹ್ಮಣೋತ್ತಮನು ತನ್ನ ಈ ಮೂರುಮಂದಿ ಮಕ್ಕಳುಗಳಿಗೆ ಶುಭಕರವಾದ ವಿವಾಹಕರ್ಮವು ಹೇಗೆ ನೆರವೇರುವುದೋ ಎಂದು ಚಿಂತೆಯಿಂದ ಕೂಡಿ, ಇದಕ್ಕೋಸ್ಕರ ಗಂಧರ್ವಶ್ರೇಷ್ಠನಾದ ತುಂಬುರನನ್ನು ಒಂದುವರ್ಷಕಾಲ ವಿಧಿವತ್ತಾಗಿ ಹೋಮಾದಿಗಳನ್ನು ಆಚರಿಸಿ ಸಂತೋಷಪಡಿಸಿದನು. ಆಗ ಅದರಿಂದ ಸಂತೋಷಗೊಂಡ ತುಂಬುರನು ಆ ಬ್ರಾಹ್ಮಣನ ಸಮೀಪಕ್ಕೆ ಬಂದು ಅವನ ಮನೋರಥವನ್ನು ಈಡೇರಿಸಿದನು.

೧೦-೧೧. ಆಗ ಪ್ರಸನ್ನನಾದ ಆ ಬ್ರಾಹ್ಮಣನು ಸಂತೋಷದಿಂದ ಸೊಸೆಯರನ್ನೂ ಅಳಿಯನನ್ನೂ ನೋಡಿ "ಇವರುಗಳು ಆನಂದದಿಂದ ವಿಹರಿಸುವಬಗೆ ಹೇಗೆ? ಇವರಿಗೆ ಧರಿಸುವುದಕ್ಕೆ ಒಡವೆಗಳು ನಾನಾವಿಧವಾದ ವಸ್ತ್ರಗಳು, ಹೇರಳವಾದ ಧನ, ಇವೆಲ್ಲಾ ಬಡವನಾದ ನನಗೆ ಹೇಗೆ ಪ್ರಾಪ್ತವಾದಾವು" ಎಂದು ಪುನಃ ಚಿಂತೆ ಮಾಡತೊಡಗಿದನು.

೧೨. ತಾನು ಅರುವತ್ತುವರ್ಷದ ಮುದುಕನಾದರೂ ಇದಕ್ಕಾಗಿ ವಿಧಿಪ್ರಕಾರ ಒಂದು ವರ್ಷಕಾಲ ತದೇಕಚಿತ್ತನಾಗಿ ಗಂಧಾದಿ ಪೂಜಾದ್ರವ್ಯಗಳಿಂದ ಕುಬೇರನನ್ನು ಪೂಜೆಮಾಡಿದನು.

ತದಾ ಪ್ರಸನ್ನೋ ಭಗವಾನ್ ದದೌ ತಸ್ಮೈ ಧನಂ ಬಹು ।
ವಿದ್ಯಾಂ ಯಕ್ಷಮಯೀಂ ರಮ್ಯಾಂ ಪಂಚಸ್ವರ್ಣಪ್ರದಾಂ ಮುದಾ ॥ ೧೩ ॥

ಸಹಸ್ರಂ ಜಾಪೀ ಸಂಪೂಜ್ಯ ಹವನಂ ತದ್ದಶಾಂಶಕಂ ।
ತರ್ಪಣಂ ಮಾರ್ಜನಂ ಚೈವ ಕೃತ್ವಾ ವಾಂಛಾಮವಾಪ್ತವಾನ್ ॥ ೧೪ ॥

ಇತ್ಯೇವಂ ವರ್ತಮಾನಸ್ಯ ಗತಃ ಕಾಲೋ ಮಹಾನ್ ಸ್ವಯಂ ।
ಮೃತ್ಯೋರಾಗಮನಂ ತಸ್ಯ ಜಾತಂ ರೋಗಸಮನ್ವಿತಂ ॥ ೧೫ ॥

ಪೀಡಿತಸ್ತು ರುಜಾ ವಿಪ್ರಃ ಶಂಕರಂ ಲೋಕಶಂಕರಂ ।
ಸ್ತುತಿಭಿಃ ಶ್ರುತಿರೂಪಾಭಿಸ್ತುಷ್ಟಾವ ಬಲವರ್ಜಿತಃ ॥
ಮಾಸಮಾತ್ರೇಣ ಭಗವಾನ್ ದದೌ ಜ್ಞಾನಂ ಸ್ವಯಂ ಹರಃ ॥ ೧೬ ॥

---

೧೩. ಆಗ ಕುಬೇರರೂಪೀ ಪರಬ್ರಹ್ಮನು ಅವನಲ್ಲಿ ಅನುಗ್ರಹಮಾಡಿ ಅವನಿಗೆ ತುಂಬಾ ದ್ರವ್ಯವನ್ನು ಕೊಟ್ಟಿದ್ದಲ್ಲದೆ ನಿತ್ಯವೂ ಪಂಚಸ್ವರ್ಣಗಳನ್ನು ಕೊಡತಕ್ಕ ರಮ್ಯವಾದ ಯಕ್ಷಮಯೀವಿದ್ಯೆಯನ್ನು ಸಂತೋಷದಿಂದ ಉಪದೇಶ ಮಾಡಿದನು.

೧೪. ಅವನು ಆ ಮಂತ್ರವನ್ನು ಸಹಸ್ರಜಪಮಾಡಿ ಪೂಜಿಸಿ ಅದರ ಹತ್ತನೆಯ ಒಂದುಭಾಗ ಸಂಖ್ಯೆಯ ಅಪೂಪವನ್ನು ಹೋಮಮಾಡಿ ತರ್ಪಣವನ್ನೂ ಕೊಟ್ಟು ಮಾರ್ಜನಾದಿಗಳನ್ನು ನೆರವೇರಿಸಿ ತನ್ನ ಇಷ್ಟಾರ್ಥವನ್ನು ಹೊಂದಿದನು. ಇದೇ ರೀತಿ ಬಹುಕಾಲ ಕಳೆಯಿತು.

೧೫. ಅವನಿಗೆ ಅವಸಾನಕಾಲವೊದಗಿದರೂ ವ್ಯಾಧಿಪ್ರಾಪ್ತಿಯಾಗಿ ರೋಗ ಬಾಧೆಯಿಂದ ನರಳುತ್ತಾ ದುರ್ಬಲನಾದನು. ಆದಾಗ್ಯೂ ಲೋಕಕ್ಕೆ ಸುಖವನ್ನು ಕೊಡತಕ್ಕ ಶಿವನನ್ನು ವೇದೋಕ್ತಸ್ತೋತ್ರಗಳಿಂದ ಸ್ತುತಿಸಿದನು.

೧೬. ಹೀಗೆ ಒಂದು ತಿಂಗಳು ಪ್ರಾರ್ಥಿಸುತ್ತಿರಲು ಭಗವಂತನಾದ ಶಿವನು ತಾನೇ ಬಂದು ಅವನಿಗೆ ಜ್ಞಾನವನ್ನು ಕರುಣಿಸಿದನು.

ಧಾತೃಶರ್ಮಾ ತು ತತ್ಪ್ರಾಪ್ಯ ಭಾಸ್ಕರಂ ಮೋಹನಾಶನಂ ।
ಸೂರ್ಯವಾರವ್ರತೈಸ್ತತ್ರ ತೋಷಯಾಮಾಸ ನಮ್ರಧೀಃ ॥ ೧೭ ॥

ಪಂಚಾಬ್ದೇ ಭಗವಾನ್ ಸೂರ್ಯೋ ಭಕ್ತಿಭಾವೇನ ವತ್ಸಲಃ ।
ಚೈತ್ರ್ಯಾಂ ತಮಾಹ ವಚನಂ ವರಂ ಬ್ರೂಹಿ ಪುನಃ ಪುನಃ ॥ ೧೮ ॥

ಧಾತೃಶರ್ಮಾ ತು ತಚ್ಛ್ರುತ್ವಾ ಭಾಸ್ಕರಂ ಮೋಹನಾಶನಂ ।
ಪ್ರಶ್ರಯಾವನತೋ ಭೂತ್ವಾ ತುಷ್ಟಾವ ಪರಯಾ ಗಿರಾ ॥ ೧೯ ॥

॥ ಧಾತೃಶರ್ಮೋವಾಚ ॥

ಪ್ರವೃತ್ತಿಶ್ಚ ನಿವೃತ್ತಿಶ್ಚ ಮನಸೋಸ್ಯ ತನೌ ಪ್ರಿಯಾ ।
ರಾತ್ರಿರೂಪಾ ಪ್ರವೃತ್ತಿಶ್ಚ ನಿವೃತ್ತಿರ್ದಿನರೂಪಿಣೀ ॥
ಭವತಸ್ತೇಜಸಾ ಜಾತೇ ಲೋಕಬಂಧನಹೇತವೇ ॥ ೨೦ ॥

---

೧೭. ಧಾತೃಶರ್ಮನು ಜ್ಞಾನವನ್ನು ಹೊಂದಿ ಧರ್ಮಬುದ್ಧಿಯಿಂದ ಕೂಡಿ ಮೋಹವನ್ನು ನಾಶಮಾಡುವ ಸೂರ್ಯದೇವನನ್ನು ಪ್ರತಿ ಭಾನುವಾರದ ದಿವಸ ನಿಯಮದಿಂದ ಅರ್ಚಿಸಿ ಸಂತೋಷಪಡಿಸಿದನು.

೧೮. ಹೀಗೆ ಐದುವರ್ಷ ಆಚರಿಸುತ್ತಿರಲು ಭಕ್ತವತ್ಸಲನಾದ ಸೂರ್ಯನು ಆ ವರ್ಷ ಚೈತ್ರಮಾಸದಲ್ಲಿ ಪ್ರತ್ಯಕ್ಷನಾಗಿ ಅವನನ್ನು "ಕುರಿತು ನಿನಗೇನು ವರಬೇಕು? ಹೇಳು ಹೇಳು" ಎಂದು ಮತ್ತೆ ಕೇಳಿದನು.

೧೯. ಧಾತೃಶರ್ಮನು ಅದನ್ನು ಕೇಳಿ ವಿನಯನಮ್ರನಾಗಿ ಮೋಹನಾಶಕನಾದ ಭಾಸ್ಕರನನ್ನು ಶ್ರೇಷ್ಠವಾದ ವಾಕ್ಕಿನಿಂದ ಸ್ತುತಿಸಿದನು.

೨೦. ಧಾತೃಶರ್ಮನು ಮಾಡಿದ ಸ್ತೋತ್ರದ ಅರ್ಥವು ಈ ಪ್ರಕಾರ ಇವೆ. ಪ್ರವೃತ್ತಿ ಮತ್ತು ನಿವೃತ್ತಿ ಎಂಬ ಎರಡೂ, ಮನಸ್ಸಿಗೂ ಮತ್ತು ದೇಹಕ್ಕೂ ಪ್ರಿಯವಾದುವು. ಅವುಗಳಲ್ಲಿ ಪ್ರವೃತ್ತಿಯು ರಾತ್ರಿಸ್ವರೂಪಳು. ನಿವೃತ್ತಿಯು ಹಗಲಿನ ಸ್ವರೂಪಳು. ಇವರಿಬ್ಬರೂ ಲೋಕದ ಬಂಧನಕ್ಕೋಸ್ಕರವಾಗಿ ನಿನ್ನ ತೇಜಸ್ಸಿನಿಂದ ಹುಟ್ಟಿದವರು.

ಅವ್ಯಕ್ತೇ ತು ಸ್ಥಿತಂ ತೇಜೋ ಭವತೋ ದಿವ್ಯಸೂಕ್ಷ್ಮಕಂ ।
ತ್ರಿಧಾಭೂತಂ ತು ವಿಶ್ವಾಯ ತಸ್ಮೈ ತೇಜಾತ್ಮನೇ ನಮಃ ॥ ೨೧ ॥

ರಾಜಸೀ ಯಾ ಸ್ಮೃತಾ ಬುದ್ಧಿಸ್ತತ್ಪತಿರ್ಭಗವಾನ್ವಿಧಿಃ ।
ಭವತಸ್ತೇಜಸಾ ಜಾತಸ್ತಸ್ಮೈ ತೇ ವಿಧಯೇ ನಮಃ ॥ ೨೨ ॥

ಸ್ವಾತ್ವಿಕೀ ಯಾ ತನೌ ಬುದ್ಧಿಸ್ತತ್ಪತಿರ್ಭಗವಾನ್ ಹರಿಃ ।
ಭವತಾ ನಿರ್ಮಿತಸ್ಸತ್ವಾತ್ ತಸ್ಮೈ ತೇ ಹರಯೇ ನಮಃ ॥ ೨೩ ॥

ತಾಮಸೀ ಮೋಹನಾ ಬುದ್ಧಿಸ್ತತ್ಪತಿಶ್ಚ ಸ್ವಯಂ ಶಿವಃ ।
ತಮೋಭೂತೇನ ಭವತಾ ಜಾತಸ್ತಸ್ಮೈ ನಮೋ ನಮಃ ॥ ೨೪ ॥

---

೨೧. ದಿವ್ಯವೂ ಸೂಕ್ಷ್ಮವೂ ಆದ ನಿನ್ನ ತೇಜಸ್ಸು ಅವ್ಯಕ್ತದಲ್ಲಿ ನಿಂತಿತು. ಅದು ವಿಶ್ವಸೃಷ್ಟಿಗಾಗಿ ಸತ್ವ, ರಜಸ್ಸು, ತಮಸ್ಸು, ಎಂಬ ಮೂರು ಭಾಗವಾಗಿ ಏರ್ಪಟ್ಟಿತು. ಅಂಥಾ ತೇಜಸ್ಸ್ವರೂಪನಾದ ನಿನಗೆ ನಮಸ್ಕಾರ

೨೨. ರಜೋಗುಣ ಸಂಬಂಧವಾದ ಬುದ್ಧಿಗೆ, ಭಗವಂತನಾದ ಬ್ರಹ್ಮನು ಅಧಿಪತಿಯು. ಅವನೂ ಸಹ ನಿನ್ನ ತೇಜಸ್ಸಿನಿಂದಲೇ ಹುಟ್ಟಿದ್ದಾನೆ. ಅಂಥ ವಿಧಿರೂಪನಾದ ನಿನಗೆ ನಮಸ್ಕಾರ.

೨೩. ಸತ್ವಗುಣ ಸಂಬಂಧಿಯಾದ ಬುದ್ಧಿಯು ಶರೀರದಲ್ಲಿರುವುದು. ಆ ಸಾತ್ವಿಕ ಬುದ್ಧಿಗೆ ಹರಿಯೇ ಅಧಿಪನು. ಆ ಹರಿಯನ್ನು ನೀನೇ ನಿರ್ಮಿಸಿದ್ದೀ. ಆ ಹರಿರೂಪನಾದ ನಿನಗೆ ನಮಸ್ಕಾರ.

೨೪. ತಮೋಗುಣಾತ್ಮಕವಾದ ಬುದ್ಧಿಗೆ ಶಿವನೇ ಅಧಿಪನು. ನೀನು ತಮೋಗುಣವನ್ನು ತಾಳಿದಾಗ ಆ ಪರಶಿವನು ನಿನ್ನಿಂದಲೇ ಹುಟ್ಟಿದನು. ಆ ಶಿವರೂಪನಾದ ನಿನಗೆ ನಮಸ್ಕಾರ.

**ದೇಹಿ ಮೇ ಭಗವನ್ಮೋಕ್ಷಂ ಸಂಜ್ಞಾಕಾಂತ ನಮೋನಮಃ ॥**

**॥ ಬೃಹಸ್ಪತಿರುವಾಚ ॥**

**ಇತ್ಯೇವಂ ಸಂಸ್ತುತಸ್ತೇನ ಭಗವಾನ್ ಧಾತೃಶರ್ಮಣಾ ।**
**ಮಹೇಂದ್ರವಚನಂ ಪ್ರಾಹ ತಂ ದ್ವಿಜಂ ಜ್ಞಾನಕೋವಿದಂ ॥ ೨೫ ॥**

**ಮೋಕ್ಷಶ್ಚತುರ್ವಿಧೋ ವಿಪ್ರ ಸಾಲೋಕ್ಯಂ ತಪಸೋದ್ಭವಂ ।**
**ಸಾಮೀಪ್ಯಂ ಭಕ್ತಿತೋ ಜಾತಂ ಸಾರೂಪ್ಯಂ ಧ್ಯಾನಸಂಭವಂ ॥ ೨೬ ॥**

**ಸಾಯುಜ್ಯಂ ಜ್ಞಾನತೋ ಜ್ಞೇಯಂ ತೇಷಾಂ ಸ್ವಾಮೀ ಪರಃಪುಮಾನ್ ।**
**ಸಗುಣೋ ನಿರ್ಗುಣೋ ಜ್ಞೇಯ ಆನಂದೋ ಮೋಕ್ಷಿಣಾಂ ಕ್ರಮಾತ್ ॥೨೭॥**

---

೨೫. ಸಂಜ್ಞಾದೇವಿಯ ಪತಿಯೂ ಭಗವಂತನೂ ಆದ ಸೂರ್ಯದೇವನೇ! ನಿನಗೆ ನಮಸ್ಕರಿಸುವೆನು. ನನಗೆ ಮೋಕ್ಷವನ್ನು ಕರುಣಿಸಿ ಕಾಪಾಡು ಎಂದು ಸ್ತುತಿಸಿದನು. ಬೃಹಸ್ಪತ್ಯಾಚಾರ್ಯರು ಮುಂದುವರಿಸಿ ಹೇಳುತ್ತಾರೆ. ಧಾತೃಶರ್ಮನು ಸೂರ್ಯದೇವನನ್ನು ಈ ರೀತಿ ಸ್ತೋತ್ರಮಾಡುತ್ತಲೆ ಸೂರ್ಯನು ಜ್ಞಾನಕೋವಿದನಾದ ಆ ಬ್ರಾಹ್ಮಣನನ್ನು ಕುರಿತು ಮಹಾಶ್ರೇಷ್ಠವಾದ ಈ ಮಾತನ್ನು ಹೇಳಿದನು.

೨೬. ಎಲೈ ವಿಪ್ರನೇ! ಮೋಕ್ಷವೆಂಬುದು ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯ ಎಂದು ನಾಲ್ಕು ಬಗೆ. ಅದರಲ್ಲಿ ಸಾಲೋಕ್ಯವು ಕೃಚ್ಛ್ರ ಚಾಂದ್ರಾಯಣಾದಿ ತಪಸ್ಸಿನಿಂದ ಲಭಿಸುವುದು. ಸಾಮೀಪ್ಯವೆಂಬುದು ಭಕ್ತಿಯಿಂದ ಲಭಿಸುವುದು. ಧ್ಯಾನದಿಂದ ಸಾರೂಪ್ಯ ಪ್ರಾಪ್ತಿಯಾಗುವುದು.

೨೭. ದಿವ್ಯಜ್ಞಾನದಿಂದ ಸಾಯುಜ್ಯ ಲಭಿಸುವುದು. ಇವುಗಳಿಗೂ ಪರಮ ಪುರುಷನೇ ಸ್ವಾಮಿಯು. ಆವನು ನಾಲ್ಕು ತರಹ ಮೋಕ್ಷಪ್ರಾಪ್ತಿ ಹೊಂದಿದ ವರಿಗೂ ಕ್ರಮವಾಗಿ ನಾಲ್ಕು ಪ್ರಕಾರನಾಗಿರುವನು ಎಂದರೆ ಸಾಲೋಕ್ಯ ಮೋಕ್ಷಾ ಕಾಂಕ್ಷಿಗಳಿಗೆ ಸಗುಣನಾಗಿಯೂ, ಸಾಮೀಪ್ಯ ಮೋಕ್ಷಾಪೇಕ್ಷಿಗಳಿಗೆ ನಿರ್ಗುಣನಾಗಿಯೂ ಸಾರೂಪ್ಯಮೋಕ್ಷಾಪೇಕ್ಷಿಗಳಿಗೆ ಜ್ಞೇಯಸ್ವರೂಪನಾಗಿಯೂ ಸಾಯುಜ್ಯಾಪೇಕ್ಷಿಗಳಿಗೆ ಆನಂದಸ್ವರೂಪನಾಗಿಯೂ ಇರುವನು.

ದೇವಾನಾಂ ಚೈವ ದೇಹೇಷು ಯೇ ಮೋಕ್ಷಾಃ ಪುನರಾಗತಾಃ ।
ಯದ್ಗತ್ವಾ ನ ನಿವರ್ತಂತೇ ತದ್ವಿಷ್ಣೋಃ ಪರಮಂ ಪದಂ ॥ ೨೮ ॥

ಯತ್ಪ್ರಸನ್ನೇನ ವಿಪ್ರೇಂದ್ರ ಸಾಯುಜ್ಯಂ ಮೇ ಭವೇತ್ತವ ।
ಮನುಮಾತ್ರಶ್ಚ ಯಃ ಕಾಲಸ್ತಾವತ್ತೇ ಮೋಕ್ಷ ಆಸ್ಥಿತಃ ॥ ೨೯ ॥

ಇತ್ಯುಕ್ತ್ವಾಂತರ್ದಧೇ ದೇವಸ್ತೇನ ಮೋಕ್ಷೀಕೃತೋ ದ್ವಿಜಃ ॥

॥ ಸೂತ ಉವಾಚ ॥

ಇತ್ಯುಕ್ತವಂತಂ ವಾಗೀಶಂ ಚೈತ್ರಮಾಸೇ ದಿವಾಕರಃ ।
ಸ್ವರೂಪಂ ದರ್ಶಯಾಮಾಸ ದೇವದೇವಃ ಸನಾತನಃ ॥ ೩೦ ॥

ಶೃಣುಧ್ವಂ ಸಕಲಾ ದೇವಾ ಯನ್ನಿಮಿತ್ತಾಃ ಸಮಾಗತಾಃ ।
ವಂಗೀಯೇ ಸ್ವಾಂಶಮುತ್ಪಾದ್ಯ ದೇವಕಾರ್ಯಂ ಕರೋಮ್ಯಹಂ ॥ ೩೧ ॥

---

೨೮. ಮೋಕ್ಷದಲ್ಲಿ ದೇವಶರೀರವನ್ನು ಹೊಂದಿದವರಿಗೂ ಸಹ, ಮತ್ತೆ ಮೋಕ್ಷಪ್ರಾಪ್ತಿಯಾಗುವುದುಂಟು. ಯಾವ ಮೋಕ್ಷವನ್ನು ಪಡೆಯುವುದರಿಂದ ಅವರು ಪುನರ್ಜನ್ಮಪಡೆಯುವುದಿಲ್ಲವೋ ಅಂತಹ ಮೋಕ್ಷವನ್ನು ವಿಷ್ಣುವಿನ ಪರಮಪದ ಎನ್ನುವರು.

೨೯. ಎಲೈ ಬ್ರಾಹ್ಮಣನೇ ! ನಾನು ನಿನಗೆ ಪ್ರಸನ್ನನಾಗಿರುವುದರಿಂದ ನಿನಗೆ ನನ್ನೊಡನೆಯೇ ಸೇರುವಂಥ ಸಾಯುಜ್ಯ ಲಭಿಸಲಿ. ಒಂದು ಮನ್ವಂತರ ಕಾಲ ಪರ್ಯಂತ ನಿನಗೆ ಮೋಕ್ಷವು ಸ್ಥಿರವಾಗಿರುವುದು. ಎಂದು ಹೇಳಿ ಅದೃಶ್ಯನಾದನು. ಅದರಂತೆ ದ್ವಿಜನಿಗೆ ಮೋಕ್ಷಪ್ರಾಪ್ತಿಯಾಯಿತು ಎಂದು ಸೂತರು ಹೇಳಿದರು.

೩೦. ಸೂತಮುನಿವರ್ಯನು ಹೇಳುತ್ತಾನೆ—ಹೀಗೆ ಹೇಳಿದ (ಧಾತೃಶರ್ಮರೂಪೀ) ಬ್ರಹ್ಮನಿಗೆ ಪುರಾತನನೂ ದೇವದೇವನೂ ಆದ ಸೂರ್ಯದೇವನು ಚೈತ್ರಮಾಸದಲ್ಲಿ ಪ್ರಸನ್ನನಾಗಿ ತನ್ನ ನಿಜರೂಪವನ್ನು ತೋರಿಸಿ ಈ ರೀತಿ ಹೇಳಿದನು

೩೧. ಎಲೈ ಸಮಸ್ತ ದೇವತೆಗಳಿರಾ ! ಯಾವ ಕಾರಣಕ್ಕಾಗಿ ನೀವು ಇಲ್ಲಿಗೆ ಬಂದಿರುವಿರೋ ಆ ವಿಚಾರವನ್ನು ಹೇಳುತ್ತೇನೆ ಕೇಳಿ. ವಂಗದೇಶದಲ್ಲಿ ನಾನು ನನ್ನ ಅಂಶದಿಂದ ಅವತರಿಸಿ ದೇವತೆಗಳ ಕಾರ್ಯವನ್ನು ನೆರವೇರಿಸುತ್ತೇನೆ

ಇತ್ಯುಕ್ತ್ವಾ ಸ್ವಮುಖಾತ್ತೇಜಃ ಸಮುತ್ಪಾದ್ಯ ದಿವಾಕರಃ ।
ಸ್ವಭಕ್ತ್ಯೈ ಸುಕನ್ಯಾಯೈ ದ್ವಿಜಪತ್ನ್ಯೈ ದದೌ ಹಿ ತತ್ ॥ ೩೨ ॥

ಧಾತೃಶರ್ಮಾ ದ್ವಿಜೋ ಯೋ ವೈ ಸೂರ್ಯೇ ಮೋಕ್ಷಮುಪಾಗತಃ ।
ಸ ವೈ ತತ್ತೇಜಸಾ ಜಾತಃ ಕಾವ್ಯಕಾರಸ್ಯ ಮಂದಿರೇ ॥ ೩೩ ॥

ಈಶ್ವರೋ ನಾಮ ವಿಖ್ಯಾತಃ ಸೂರ್ಯತೇಜೋಂಶ ಆತ್ಮವಾನ್ ।
ಜಿತ್ವಾ ವಿಪ್ರಾನ್ವೇದಪರಾನ್ಮಹತೀಂ ಕೀರ್ತಿಮಾಪ್ತವಾನ್ ॥ ೩೪ ॥

ಇತಿ ತೇ ಕಥಿತಂ ವಿಪ್ರ ಯಥಾ ಜೀವೇನ ಭಾಷಿತಂ ।
ಪುನಃ ಶೃಣು ಕಥಾಂ ರಮ್ಯಾಂ ದೇವೇಭ್ಯೋ ಜೀವನಿರ್ಮಿತಾಂ ॥ ೩೫ ॥

---

೩೨. ಎಂದು ಹೇಳಿ ಸೂರ್ಯದೇವನು ತನ್ನ ಮುಖದಿಂದ ಕಾಂತಿಯನ್ನು ಸೆಳೆದು ತನ್ನ ಭಕ್ತೆಯೂ ಆಧಾತೃಶರ್ಮಬ್ರಾಹ್ಮಣನ ಪತ್ನಿಯೂ ಆದ ಸುಕನ್ಯೆಗೆ ಅದನ್ನು ಕೊಟ್ಟನು.

೩೩. ಬಳಿಕ ವಿಪ್ರೋತ್ತಮನಾದ ಆ ಧಾತೃಶರ್ಮನು ಸೂರ್ಯನಲ್ಲಿ ಐಕ್ಯವಾಗಿ ಮೋಕ್ಷಹೊಂದಿದನು. ಅನಂತರ ಅವನು ಆ ತೇಜೋಂಶದಿಂದ ಕಾವ್ಯಕಾರನ ಮನೆಯಲ್ಲಿ ಈಶ್ವರನೆಂಬ ಹೆಸರಿನಿಂದ ಜನಿಸಿ ಆತ್ಮಜ್ಞಾನಿ ಎಂದು ವಿಖ್ಯಾತ ನಾದನು.

೩೪. ಸೂರ್ಯತೇಜಸ್ಸಿನ ಅಂಶದಿಂದ ಜನಿಸಿದ ಈ ಕುಮಾರನು ಈಶ್ವರನೆಂಬ ಹೆಸರಿನಿಂದ ಪ್ರಸಿದ್ಧನಾಗಿ ಆತ್ಮಜ್ಞಾನವನ್ನು ಪಡೆದು ವೇದಜ್ಞರಾದ ಬ್ರಾಹ್ಮಣರನ್ನೆಲ್ಲಾ ತನ್ನ ಜ್ಞಾನದಿಂದ ಜಯಿಸಿ ತುಂಬಾ ಯಶಸ್ಸನ್ನು ಗಳಿಸಿದನು.

೩೫. ಅಯ್ಯಾ ಬ್ರಾಹ್ಮಣೋತ್ತಮನೇ ! ಈರೀತಿ ಬೃಹಸ್ಪತ್ಯಾಚಾರ್ಯನು ಹೇಳಿದ ಕಥೆಯನ್ನು ನಿನಗೆ ತಿಳಿಸಿದೆನು. ಇನ್ನೂ ಅದೇ ದೇವಾಚಾರ್ಯನಾದ ಗುರುವು ದೇವತೆಗಳಿಗೆ ನಿರೂಪಿಸಿದ ಮನೋಹರವಾದ ಕಥೆಯನ್ನು ಪುನಃ ನಿನಗೆ ಹೇಳು ವೆನು ಕೇಳು

॥ ಬೃಹಸ್ಪತಿರುವಾಚ ॥

ಮಾಯಾವತ್ಯಾಂ ದ್ವಿಜಃ ಕಶ್ಚಿನ್ಮಿತ್ರಶರ್ಮೇತಿ ವಿಶ್ರುತಃ ।
ಕಾವ್ಯವಿದ್ಯಾಪರೋ ನಿತ್ಯಂ ರಸಿಕಃ ಕಾಮಿನೀಪ್ರಿಯಃ ॥ ೩೬ ॥

ಕುಂಭರಾಶಿಂ ಮಯಿ ಪ್ರಾಪ್ತೇ ಗಂಗಾದ್ವಾರೇ ಮಹೋತ್ಸವಃ ।
ಬಭೂವ ಬಹುಲೈರ್ಭೂಪೈಃ ಕಾರಿತಸ್ತೀರ್ಥತತ್ಪರೈಃ ॥ ೩೭ ॥

ತತ್ರೋತ್ಸವೇ ನರಾ ನಾರ್ಯೋ ಬಹುಭೂಷಣಭೂಷಿತಾಃ ।
ಸಮಾಯಯುರ್ದರ್ಶನಾರ್ಥೇ ಚ ಪರಮಾನಂದನಿರ್ಭರಾಃ ॥ ೩೮ ॥

ಮಿತ್ರಶರ್ಮಾ ತು ಸಂಪ್ರಾಪ್ಯ ಕಾಮಸೇನಸ್ಯ ವೈ ಸುತಾಂ ।
ಕಾವ್ಯಕೇಲಿಕಲಾಯುಕ್ತಾಂ ದ್ವಾದಶಾಬ್ದಮಯೀಂ ಶುಭಾಂ ॥ ೩೯ ॥

---

೩೬. ಬೃಹಸ್ಪತಿಯು ಮತ್ತೊಂದು ದೇವಕಥೆಯನ್ನು ಹೇಳುತ್ತಾನೆ— ಮಾಯಾವತೀಪಟ್ಟಣದಲ್ಲಿ ಮಿತ್ರಶರ್ಮನೆಂದು ಪ್ರಸಿದ್ಧನಾದ ಬ್ರಾಹ್ಮಣೋತ್ತಮನು ವಾಸಿಸುತ್ತಿದ್ದನು. ಅವನು ಕಾವ್ಯವಿದ್ಯಾನಿಪುಣನೂ ಕಾಮಿನೀಲೋಲುಪನೂ ಮತ್ತು ರಸಿಕನೂ ಆಗಿದ್ದನು.

೩೭. ತೀರ್ಥಯಾತ್ರೆಗಳಲ್ಲಿ ಆಸಕ್ತಿಯುಳ್ಳ ರಾಜರೆಲ್ಲರೂ ಒಟ್ಟುಸೇರಿ ಗಂಗಾದ್ವಾರವೆಂಬ ಕ್ಷೇತ್ರದಲ್ಲಿ (ಗುರುವು) ಕುಂಭರಾಶಿಯಲ್ಲಿದ್ದಾಗ ದೊಡ್ಡ ಉತ್ಸವವನ್ನು ನೆರವೇರಿಸಿದರು.

೩೮. ಆ ಮಹೋತ್ಸವವನ್ನು ನೋಡಲು ಕುತೂಹಲದಿಂದ ಅನೇಕ ಸ್ತ್ರೀಪುರುಷರು ನಾನಾಭರಣಭೂಷಿತರಾಗಿ ಬಹಳ ಸಂತೋಷದಿಂದ ಅಲ್ಲಿಗೆ ಬಂದರು.

೩೯. ಬ್ರಾಹ್ಮಣೋತ್ತಮನೂ ರಸಿಕನೂ ಆದ ಮಿತ್ರಶರ್ಮನೂ ಅಲ್ಲಿಗೆ ಬಂದಿದ್ದನು. ಇದೇ ಸಮಯದಲ್ಲಿ ದಕ್ಷಿಣದೇಶದ ರಾಜನಾದ ಕಾಮಸೇನನೂ ಪರಿವಾರದೊಡನೆ ತನ್ನ ಹನ್ನೆರಡುವಯಸ್ಸಿನ ಸುಂದರಮುಖಿಯಾದ ತನ್ನ ಮಗಳನ್ನೂ ಕರೆದುಕೊಂಡು ಅಲ್ಲಿಗೆ ಬಂದಿದ್ದನು.

ದಾಕ್ಷಿಣಾತ್ಯಸ್ಯ ಭೂಪಸ್ಯ ತನಯಾಂ ಮಧುರಾನನಾಂ ।
ದೃಷ್ಟ್ವಾ ತಾಂ ಮೃಗಶಾಬಾಕ್ಷೀಂ ತದ್ವಶಿತ್ವಮುಪಾಗತಃ ॥ ೪೦ ॥

ಸಾ ತು ತಂ ಚಿತ್ರಿಣೀ ನಾಮ್ನಾ ಮಿತ್ರಶರ್ಮಾಣಮುತ್ತಮಂ ।
ದೃಷ್ಟ್ವಾ ತು ಮೂರ್ಛಿತಾ ಚಾಸೀದ್ವಿಪ್ರಮೂರ್ತಿರ್ಹೃದಿ ಸ್ಥಿತಾ ॥ ೪೧ ॥

ಸ್ವಗೇಹಂ ಪುನರಾಗತ್ಯ ಚಿತ್ರಿಣೀ ಭಾಸ್ಕರಂ ಪ್ರಭುಂ ।
ಪ್ರತ್ಯಹಂ ಪೂಜಯಾಮಾಸ ಬಹುಮಾನಪುರಸ್ಸರಾ ॥ ೪೨ ॥

ಮಿತ್ರಶರ್ಮಾ ತು ತತ್ಸ್ಥಾನೇ ಗಂಗಾಕೂಲೇ ಮನೋಹರೇ ।
ಪ್ರಾತಃ ಸ್ನಾತ್ವಾ ಶುಚಿರ್ಭೂತ್ವಾ ವೈಶಾಖೇ ಜಲಮಧ್ಯಗಃ ॥ ೪೩ ॥

---

೪೦. ಆ ಕುಮಾರಿಯು ಮನೋಹರಳಾಗಿಯೂ ಕಾವ್ಯಕಲೆಯಲ್ಲಿಯೂ ನಾನಾ ವಿಧವಾದ ಕಲೆಯಲ್ಲಿಯೂ ನಿಪುಣಳಾಗಿ ಜನರ ಮನಸ್ಸನ್ನು ಸೆಳೆಯುವಂತೆ ಇದ್ದಳು ಆ ಮಿತ್ರಶರ್ಮಬ್ರಾಹ್ಮಣನು ಜಿಂಕೆಯ ಕಣ್ಣಿನಂತೆ ಚಂಚಲವಾದ ಕಣ್ಣುಗಳುಳ್ಳ ಆ ಕುಮಾರಿಯನ್ನು ನೋಡಿ ಅವಳಲ್ಲಿ ಮನಸೋತು ಮೂರ್ಛಿತನಾದನು.

೪೧. ಚಿತ್ರಿಣೀ ಎಂಬ ಹೆಸರುಳ್ಳ ಆ ರಾಜಕುಮಾರಿಯೂ ಸಹ ಸುಂದರನಾದ ಆ ಮಿತ್ರಶರ್ಮ ಬ್ರಾಹ್ಮಣನನ್ನು ನೋಡಿ ಮೋಹಗೊಂಡು ಮೂರ್ಛಿತಳಾದಳು. ಅದು ಮೊದಲ್ಗೊಂಡು ಆ ಮಿತ್ರಶರ್ಮನ ಮೂರ್ತಿಯು ಆ ರಾಜಕುಮಾರಿಯ ಹೃದಯದಲ್ಲಿ ನೆಲಸಿತು.

೪೨ ಆ ಚಿತ್ರಿಣೀ ರಾಜಕುಮಾರಿಯು ಅಲ್ಲಿಂದ ಮನೆಗೆ ಹಿಂದಿರುಗಿ ಬಂದು ತನ್ನ ಮನಸ್ಸಿನಲ್ಲಿ ನೆಲಸಿದ ಮೂರ್ತಿಯನ್ನು ಪಡೆಯುವುದಕ್ಕೋಸ್ಕರ ಸರ್ವಸಮರ್ಥನಾದ ಸೂರ್ಯದೇವನನ್ನು ಬಹುಮಾನ ಪೂರ್ವಕವಾಗಿ (ಗೌರವದಿಂದ) ಪ್ರತಿದಿನವೂ ಪೂಜಿಸುತ್ತಿದ್ದಳು.

೪೩. ಅತ್ತಲಾಗಿ ಮಿತ್ರಶರ್ಮನೂ ಸಹ ಮನೋಹರವಾದ ಗಂಗಾನದಿಯ ದಡದಲ್ಲೇ ವಾಸಿಸುತ್ತಾ, ಬೆಳಗಾಗುತ್ತಲೆ ಆ ಗಂಗಾನದಿಯಲ್ಲಿ ಸ್ನಾನಮಾಡಿ ಶುಚಿರ್ಭೂತನಾಗಿ ವೈಶಾಖಮಾಸದಲ್ಲಿ ನೀರಿನ ಮಧ್ಯದಲ್ಲಿ ನಿಂತುಕೊಂಡು ತಪಸ್ಸಿಗೆ ತೊಡಗಿದನು.

ಸ್ತೋತ್ರಮಾದಿತ್ಯಹೃದಯಮಜಪತ್ಸೂರ್ಯತತ್ಪರಃ ।
ಪ್ರತ್ಯಹಂ ದ್ವಾದಶಾವರ್ತ್ಯೈಃ ಸ್ತೋಷಯಾಮಾಸ ಭಾಸ್ಕರಂ ॥ ೪೪ ॥

ಮಾಸಾಂತೇ ಭಗವಾನ್ಸೂರ್ಯೋ ದದೌ ತಸ್ಮೈ ಹಿ ತಂ ವರಂ ।
ಸ ತು ಲಬ್ಧವರೋ ವಿಪ್ರಃ ಸ್ವಗೇಹಂ ಪುನರಾಗತಃ ॥ ೪೫ ॥

ಚಿತ್ರಿಣೀ ತು ವರಂ ಪ್ರಾಪ್ತಾ ವಾಂಛಿತಂ ಲೋಕಭಾಸ್ಕರಾತ್ ।
ಪುನಸ್ತೌ ಪಿತರೌ ಸ್ವಪ್ನೇ ಭಾಸ್ಕರೇಣ ಪ್ರಬೋಧಿತೌ ॥ ೪೬ ॥

ಮಿತ್ರಶರ್ಮಾಣಮಾಹೂಯ ವರಯಾಮಾಸತುಃ ಸುತಾಂ ।
ಸ್ವಾಂತೇ ನಿವಾಸಯಾಮಾಸ ಕಾಮಸೇನಶ್ಚ ದಂಪತೀ ॥ ೪೭ ॥

ತೌ ತು ಚಕ್ರಂ ಮುದಾವಿಷ್ಟೌ ಪ್ರತ್ಯಹಂ ಸೂರ್ಯದೈವತಂ ।
ತಾಮ್ರಪಾತ್ರೇ ಚ ತದ್ಯಂತ್ರಂ ಲೇಖಯಿತ್ವಾ ವಿಧಾನತಃ ॥ ೪೮ ॥

---

೪೪. ಆತನು ಸೂರ್ಯನಲ್ಲೇ ನೆಟ್ಟಮನಸ್ಸುಳ್ಳವನಾಗಿ ಆದಿತ್ಯಹೃದಯವನ್ನು ಪ್ರತಿನಿತ್ಯವೂ ಹನ್ನೆರಡುಸಲ ಪಾರಾಯಣಮಾಡುತ್ತಾ ಸೂರ್ಯದೇವನನ್ನು ಸಂತೋಷ ಪಡಿಸಿದನು.

೪೫. ಹೀಗೆ ಮಿತ್ರಶರ್ಮನು ಒಂದುತಿಂಗಳಕಾಲ ಸ್ತೋತ್ರಮಾಡಲಾಗಿ ಒಂದುತಿಂಗಳ ಕೊನೆಯಲ್ಲಿ ಭಗವಂತನಾದ ಸೂರ್ಯನು ಪ್ರಸನ್ನನಾಗಿ ಅವನಿಗೆ ಇಷ್ಟವಾದ ವರವನ್ನು ಕರುಣಿಸಿದನು. ಆ ಮಿತ್ರಶರ್ಮನು ಹೀಗೆ ಸೂರ್ಯನಿಂದ ವರವನ್ನು ಪಡೆದು ಅಲ್ಲಿಂದ ತನ್ನ ಮನೆಗೆ ಹಿಂತಿರುಗಿದನು.

೪೬-೪೭. ಆ ರಾಜಕುಮಾರಿಯಾದ ಚಿತ್ರಿಣೀದೇವಿಯೂ ಕೂಡ ಇತ್ತಲಾಗಿ ಸೂರ್ಯದೇವನ ಅನುಗ್ರಹದಿಂದ ತನಗೆ ಇಷ್ಟವಾದ ವರವನ್ನು ಪಡೆದಳು. ಮತ್ತು ಆ ಚಿತ್ರಿಣಿಯ ತಂದೆತಾಯಿಗಳು ಸ್ವಪ್ನದಲ್ಲಿ ಸೂರ್ಯನೇ ಬಂದು ತಮಗೆ ಹೇಳಿದಂತೆ ಆಗಲು ಮರುದಿನವೇ ಮಿತ್ರಶರ್ಮನನ್ನು ಕರೆಯಿಸಿ ತಮ್ಮ ಮಗಳನ್ನು ಆತನಿಗೆ ಕೊಟ್ಟು ಸಂತೋಷದಿಂದ ವಿವಾಹಮಾಡಿದರು. ಬಳಿಕ ಕಾಮಪಾಲರಾಜನು ಆ ಮಗಳು ಅಳಿಯ ಇವರನ್ನು ತನ್ನ ಮನೆಯಲ್ಲಿಯೇ ಇರಿಸಿಕೊಂಡನು.

೪೮-೪೯. ಅನಂತರ ಆ ನೂತನದಂಪತಿಗಳಿಬ್ಬರೂ ಆ ಸೂರ್ಯದೇವನ ಮಂಡಲವನ್ನು ಮತ್ತು ಸೂರ್ಯಯಂತ್ರವನ್ನು ತಾಮ್ರದ ತಗಡಿನಲ್ಲಿ ಬರೆಯಿಸಿ

ಈಜತೂ ರಕ್ತಕುಸುಮೈರ್ವ್ರತಂ ಕೃತ್ವಾ ರವಿಪ್ರಿಯಂ　　॥ ೪೯ ॥

ಶತಾಬ್ದವಪುಷೌ ಚೋಭೌ ನಿರ್ಜರೌ ಶ್ರಮವರ್ಜಿತೌ ।
ಆರೋಗ್ಯೌ ಮರಣಂ ಪ್ರಾಪ್ಯ ಸಾಮೀಪ್ಯಂ ಚ ರವೇರ್ಗತೌ　　॥ ೫೦ ॥

ಇತಿ ಶ್ರುತ್ವಾ ರವೇರ್ಗಾಥಾಂ ವೈಶಾಖ್ಯಾಂ ದೇವರಾಟ್ ಸ್ವಯಂ ।
ಪ್ರತ್ಯಕ್ಷಂ ಭಾಸ್ಕರಂ ದೇವಂ ದದರ್ಶ ಸಹಿತಂ ಸುರೈಃ　　॥ ೫೧ ॥

ಭಕ್ತಿನಮ್ರಾನ್ಸುರಾನ್ ದೃಷ್ಟ್ವಾ ಭಗವಾಂಸ್ತಿಮಿರಾಪಹಃ ।
ಉವಾಚ ವಚನಂ ರಮ್ಯಂ ದೇವಕಾರ್ಯಪರಂ ಶುಭಂ ॥
ಮಮಾಂಶಾತ್ತನಯೋ ಭೂಮೌ ಭವಿಷ್ಯತಿ ಸುರೋತ್ತಮ　　॥ ೫೨ ॥

---

ಶಾಸ್ತ್ರೋಕ್ತವಾದ ರೀತಿ ಸೂರ್ಯನಿಗೆ ಪ್ರೀತಿಕರವಾದ ವ್ರತವನ್ನಾಚರಿಸುವರಾಗಿ ಕೆಂಪು ಬಣ್ಣದ ಕುಸುಮಗಳಿಂದ ಆ ದೇವನನ್ನು ಪೂಜೆಮಾಡುತ್ತಿದ್ದರು.

೫೦. ಹೀಗೆ ಸೂರ್ಯದೇವನ ಪೂಜಾಪ್ರಭಾವದಿಂದ ಆ ದಂಪತಿಗಳು ನೂರು ವರ್ಷಗಳಕಾಲ ಮುಪ್ಪಿಲ್ಲದವರಾಗಿಯೂ, ಆಲಸ್ಯರಹಿತರಾಗಿಯೂ, ರೋಗವಿಹೀನರಾಗಿಯೂ ಬಾಳಿ ಅನಂತರ ಮರಣಹೊಂದಿ ಸೂರ್ಯನ ಸನ್ನಿಧಿಯನ್ನು ಪಡೆದರು.

೫೧. ದೇವರಾಜನಾದ ಇಂದ್ರನು ಈರೀತಿ ವೈಶಾಖಮಾಸದಲ್ಲಿ ನಡೆಯಿಸಿದ ಸೂರ್ಯಪೂಜೆಯ ಕಥೆಯನ್ನು ಬೃಹಸ್ಪತ್ಯಾಚಾರ್ಯರಿಂದ ತಿಳಿದು ಅನಂತರ ದೇವಗಣಗಳೊಡಗೂಡಿದ ಆ ಸೂರ್ಯನನ್ನು ಪ್ರತ್ಯಕ್ಷವಾಗಿಯೇ ದರ್ಶನಮಾಡಿದನು.

೫೨. ಹೀಗೆ ಭಕ್ತಿಯಿಂದಲೂ, ವಿನಯದಿಂದಲೂ ತನ್ನನ್ನು ದರ್ಶನಮಾಡಲು ಬಂದಿರುವ ಇಂದ್ರಾದಿದೇವತೆಗಳನ್ನು ನೋಡಿ ಭಗವಂತನೂ, ಅಂಧಕಾರನಾಶಕನೂ ಆದ ಸೂರ್ಯದೇವನು ಆ ಇಂದ್ರನನ್ನು ಕುರಿತು “ ಎಲೈ ದೇವಶ್ರೇಷ್ಠನೇ! ನನ್ನ ಅಂಶದ ಪುರುಷನೊಬ್ಬನು ಭೂಮಿಯಲ್ಲಿ ಅವತರಿಸಿ ದೇವಕಾರ್ಯವನ್ನು ನೆರವೇರಿಸುವನು ” ಎಂದು ಇಂಪಾಗಿ ನುಡಿದನು.

॥ ಸೂತ ಉವಾಚ ॥

ಇತ್ಯುಕ್ತ್ವಾ ಸ್ವಸ್ಯ ಬಿಂಬಸ್ಯ ತೇಜೋರಾಶಿಂ ಸಮಂತತಃ ।
ಸಮುತ್ಪಾದ್ಯ ಕೃತಃ ಕಾಶ್ಯಾಂ ರಾಮಾನಂದಸ್ತತೋಽಭವತ್ ॥ ೫೩ ॥

ದೇವಲಸ್ಯ ಚ ವಿಪ್ರಸ್ಯ ಕಾನ್ಯಕುಬ್ಜಸ್ಯ ವೈ ಸುತಃ ।
ಬಾಲ್ಯಾತ್ಪ್ರಭೃತಿ ಸ ಜ್ಞಾನೀ ರಾಮನಾಮಪರಾಯಣಃ ॥ ೫೪ ॥

ಪಿತ್ರಾ ಮಾತ್ರಾ ಪರಿತ್ಯಕ್ತೋ ರಾಘವಂ ಶರಣಂ ಗತಃ ॥
ತದಾ ತು ಭಗವಾನ್ಸಾಕ್ಷಾಚ್ಚತುರ್ದಶಕಲೋ ಹರಿಃ ।
ಸೀತಾಪತಿಸ್ತದ್ಧೃದಯೇ ನಿವಾಸಂ ಕೃತವಾನ್ಮುದಾ ॥ ೫೫ ॥

ಇತಿ ತೇ ಕಥಿತಂ ವಿಪ್ರ ಮಿತ್ರದೇವಾಂಶತೋ ಯಥಾ ।
ರಾಮಾನಂದಸ್ತು ಬಲವಾನ್ ಹರಿಭಕ್ತೇಶ್ಚ ಸಂಭವಃ ॥ ೫೬ ॥

---

೫೩. ಸೂತಮುನಿವರ್ಯನು ಮುಂದುವರಿಸಿ ಹೇಳುತ್ತಾನೆ—ಸೂರ್ಯದೇವನು ದೇವತೆಗಳನ್ನು ಕುರಿತು ಹಿಂದೆ ಹೇಳಿದಂತೆ ತಿಳಿಸಿ ತನ್ನ ಬಿಂಬದ ಸುತ್ತಲಿನ ಸ್ವಲ್ಪ ತೇಜಸ್ಸನ್ನು ತೆಗೆದು ಅದನ್ನು ಭೂಲೋಕಕ್ಕೆ ಕಳುಹಿಸಿದನು. ಆ ತೇಜಸ್ಸು ಕಾಶೀ ಪಟ್ಟಣದಲ್ಲಿ ಪುರುಷನಾಗಿ ಅವತರಿಸಿ ರಾಮಾನಂದನೆಂಬ ಹೆಸರಿನಿಂದ ಪ್ರಸಿದ್ಧನಾದನು.

೫೪. ಈ ರಾಮಾನಂದನು ಕಾನ್ಯಕುಬ್ಜದ ದೇವಲನೆಂಬ ಬ್ರಾಹ್ಮಣ ಮಗನಾಗಿ ಹುಟ್ಟಿದನು. ಇವನು ಬಾಲ್ಯದಿಂದ ಜ್ಞಾನಿಯಾಗಿ ರಾಮನಾಮ ಪಾರಾಯಣ ಮಾಡುತ್ತಾ ತಾಯಿತಂದೆಗಳನ್ನು ಬಿಟ್ಟು ಶ್ರೀರಾಮಚಂದ್ರನನ್ನು ಮರೆಹೊಕ್ಕನು.

೫೫ ಆಗ ಹದಿನಾಲ್ಕು ಕಲಾಪರಿಪೂರ್ಣನೂ, ಸೀತಾಪತಿಯೂ, ರಾಮಚಂದ್ರ ಸ್ವರೂಪನೂ ಆದ ಮಹಾವಿಷ್ಣುವು ಆ ರಾಮಾನಂದನ ಹೃದಯದಲ್ಲಿ ಸಂತೋಷದಿಂದ ನೆಲಸಿದನು.

೫೬. ಅಯ್ಯಾ ಬ್ರಾಹ್ಮಣೋತ್ತಮನಾದ ಶೌನಕನೇ! ಈರೀತಿ ಸೂರ್ಯದೇವನ ಅಂಶದಿಂದ ಜನಿಸಿದ ರಾಮಾನಂದನ ಕಥೆಯನ್ನು ನಿನಗೆ ತಿಳಿಸಿದೆನು. ಈ ರಾಮಾನಂದನು ಬಲಶಾಲಿಯಾಗಿಯೂ, ಹರಿಭಕ್ತನಾಗಿಯೂ ಕಾಲಕಳೆಯುತ್ತಾ ಸದ್ಗತಿಯನ್ನು ಪಡೆದನು" ಎಂದು ಹೇಳಿದನು.

॥ ಬೃಹಸ್ಪತಿರುವಾಚ ॥

ಶೃಣು ಶಕ್ರ ಕಥಾಂ ರಮ್ಯಾಂ ಜ್ಯೇಷ್ಠಮಾಸಸ್ಯ ವೈ ರವೇಃ ।
ಅರ್ಯಮಾ ನಾಮ ವೈ ವಿಪ್ರಃ ಪುರಾ ಸತ್ಯಯುಗೇ ಹ್ಯಭೂತ್ ॥ ೫೭ ॥

ವೇದವೇದಾಂಗತತ್ವಜ್ಞೋ ಧರ್ಮಶಾಸ್ತ್ರಪರಾಯಣಃ ।
ತಸ್ಯ ಪತ್ನೀ ಪಿತೃಮತೀ ಶ್ರಾದ್ಧಯಜ್ಞಸ್ಯ ಭೂಪತೇಃ ॥
ತನಯಾ ಚ ಮಹಾಸಾಧ್ವೀ ಸಪ್ತಪುತ್ರಾನಕಲ್ಮಷಾನ್ ।
ಅರ್ಯಮ್ಣೋ ಜನಯಾಮಾಸ ಧರ್ಮಶಾಸ್ತ್ರಪರಾಯಣಾನ್ ॥ ೫೮ ॥

ಏಕದಾ ಸ ದ್ವಿಜೋ ಧೀಮಾನ್ವಿಚಾರ್ಯ ಬಹುಧಾ ಹೃದಿ ।
ಧನಾರ್ಥೀ ಭಾಸ್ಕರಂ ದೇವಂ ತುಷ್ಟಾವ ಬಹುಪೂಜನೈಃ ॥ ೫೯ ॥

ಪ್ರಭಾತೇ ಶ್ವೇತಕುಸುಮೈಶ್ಚಂದನಾದಿಭಿರರ್ಚನೈಃ ।
ಮಧ್ಯಾಹ್ನೇ ರಕ್ತಕುಸುಮೈಃ ಪೀತಪುಷ್ಪೈಃ ಪಿತೃಪ್ರಸೌ ॥ ೬೦ ॥

---

೫೭. ಬೃಹಸ್ಪತ್ಯಾಚಾರ್ಯರು ಮುಂದುವರಿಸಿ ಹೇಳುತ್ತಾರೆ—ಎಲೈ ಇಂದ್ರನೇ! ಜ್ಯೇಷ್ಠಮಾಸದ ಸೂರ್ಯಾರಾಧನ ಸಂಬಂಧವಾಗಿ ಮನೋಹರವಾದ ಕಥೆಯನ್ನು ನಿನಗೆ ಹೇಳುವೆನು ಕೇಳು. ಹಿಂದೆ ಸತ್ಯಯುಗದಲ್ಲಿ ಅರ್ಯಮಾ ಎಂಬ ಬ್ರಾಹ್ಮಣನಿದ್ದನು. ಇವನು ವೇದವೇದಾಂಗ ಪಾರಂಗತನೂ ಧರ್ಮಶಾಸ್ತ್ರನಿಪುಣನೂ ಆಗಿದ್ದನು.

೫೮. ಶ್ರಾದ್ಧಯಜ್ಞ ಮಹಾರಾಜನ ಪುತ್ರಿಯಾದ ಪಿತೃಮತೀ ಎಂಬುವಳು ಇವನಿಗೆ ಪತ್ನಿಯಾಗಿದ್ದಳು. ಮಹಾಪತಿವ್ರತೆಯಾದ ಈ ಪಿತೃಮತೀದೇವಿಯು ತನ್ನ ಪತಿಯಾದ ಅರ್ಯಮನಿಂದ ಪರಿಶುದ್ಧರಾದ ಏಳುಜನ ಕುಮಾರರನ್ನು ಪಡೆದಳು. ಅವರೆಲ್ಲರೂ ಧರ್ಮಶಾಸ್ತ್ರನಿಪುಣರಾಗಿದ್ದರು.

೫೯. ಮೇಧಾವಿಯಾದ ಆ ಅರ್ಯಮಾ ಬ್ರಾಹ್ಮಣನು ತಾನು ಬಡವನಾಗಿದ್ದುದರಿಂದ ತನ್ನ ದಾರಿದ್ರ್ಯಸ್ಥಿತಿಗೋಸ್ಕರ ಬಹುಕಾಲ ಯೋಚಿಸಿ ದ್ರವ್ಯವನ್ನು ಪಡೆಯುವುದಕ್ಕೋಸ್ಕರ ಸೂರ್ಯದೇವನನ್ನು ನಾನಾವಿಧವಾದ ಪೂಜೆಗಳಿಂದ ತೃಪ್ತಿಪಡಿಸಬೇಕೆಂದು ಒಂದುದಿನ ಉದ್ದೇಶಮಾಡಿದನು.

೬೦-೬೧. ಜೇಷ್ಠಮಾಸದಲ್ಲಿ ಪ್ರತಿದಿನವೂ ಬೆಳಗಿನಹೊತ್ತು ಬಿಳಿಯ ಹೂವುಗಳಿಂದಲೂ ಚಂದನಾದಿ ಪೂಜಾದ್ರವ್ಯಗಳಿಂದಲೂ ಪೂಜಿಸಿ ಸಂತೋಷಪಡಿಸಿದನು.

ಮಾಸಮಾತ್ರಂ ತು ವಿಧಿನಾ ಪೂಜಯಾಮಾಸ ಭಾಸ್ಕರಂ ।
ಜ್ಯೇಷ್ಠೇ ವೈ ಭಗವಾನ್ಸೂರ್ಯೋ ದದೌ ತಸ್ಮೈ ಮಣಿಂ ಶುಭಂ ॥ ೬೧ ॥

ತನ್ಮಣೇಶ್ಚ ಪ್ರಭಾವೇಣ ಪ್ರಸ್ಥಮಾತ್ರಂ ಚ ಕಾಂಚನಂ ।
ಪ್ರತ್ಯಹಂ ಜನಯಾಮಾಸ ತೇನ ಧರ್ಮಃ ಸಮರ್ಜಿತಃ ॥ ೬೨ ॥

ವಾಪೀಕೂಪತಡಾಗಾನ್ಹಿ ತಥಾ ಹರ್ಮ್ಯಾಣಿ ಭೂತಲೇ ।
ಕಾರಯಾಮಾಸ ಧರ್ಮಾರ್ಥೀ ಸೂರ್ಯದೇವಪ್ರಸಾದತಃ ॥ ೬೩ ॥

ಸಹಸ್ರಾಬ್ದವಪುರ್ಭೂತ್ವಾ ನಿರ್ಜರೋ ನಿರುಪದ್ರವಃ ।
ತ್ಯಕ್ತ್ವಾ ಕಲೇವರಂ ರಮ್ಯಂ ಸೂರ್ಯಲೋಕಮುಪಾಯಯೌ ॥
ಉಷಿತ್ವಾ ತತ್ರ ಲಕ್ಷಾಬ್ದಂ ಸೂರ್ಯರೂಪೋ ಬಭೂವ ಹ ॥ ೬೪ ॥

---

ಪ್ರತಿದಿನ ಮಧ್ಯಾಹ್ನ ಕಾಲದಲ್ಲಿ ಕೆಂಪು ಹೂಗಳಿಂದಲೂ ಸಾಯಂಕಾಲದಲ್ಲಿ ಹೊಂಬಣ್ಣದ ಹೂವುಗಳಿಂದಲೂ ಜ್ಯೇಷ್ಠಮಾಸ ಒಂದುತಿಂಗಳು ಪೂರ್ತ ಮೂರು ಕಾಲಗಳಲ್ಲಿಯೂ ಸೂರ್ಯದೇವನನ್ನು ಕ್ರಮವಾಗಿ ಪೂಜಿಸಿದನು. ಆಗ ಸೂರ್ಯಭಗವಂತನು ಆ ಅರ್ಯಮಾ ಬ್ರಾಹ್ಮಣನಿಗೆ ಶುಭಕರವಾದ ಒಂದು ರತ್ನವನ್ನು ಕೊಟ್ಟನು.

೬೨-೬೩. ಆ ಮಣಿಯ ಪ್ರಭಾವದಿಂದ ಪ್ರತಿದಿನವೂ ಒಂದು ಪ್ರಸ್ಥ (ಬಳ್ಳ) ಪ್ರಮಾಣದ ಚಿನ್ನ ದೊರೆಯುತ್ತಿತ್ತು. ಸೂರ್ಯದೇವನ ಅನುಗ್ರಹದಿಂದ ದೊರೆತ ಆ ಸುವರ್ಣದಿಂದ ಆ ಅರ್ಯಮಾ ಬ್ರಾಹ್ಮಣನು ಕೊಳ, ಬಾವಿ ಕೆರೆ, ಅನೇಕ ಉಪ್ಪರಿಗೆ ಮನೆಗಳು ಇವುಗಳನ್ನು ಧರ್ಮಾರ್ಥವಾಗಿ ಕಟ್ಟಿಸಿ ಧರ್ಮಸಂಪಾದನೆ ಮಾಡಿದನು.

೬೪. ಬಳಿಕ ಸೂರ್ಯದೇವನ ಪ್ರಸಾದದಿಂದ ಒಂದುಸಾವಿರ ವರ್ಷಗಳಕಾಲ ಮುಪ್ಪು, ರೋಗ ಇವುಗಳಿಲ್ಲದವನಾಗಿ ಭೂಮಂಡಲದಲ್ಲಿ ವಾಸಿಸಿ ಅನಂತರ ಪಾರ್ಥಿವ ಶರೀರವನ್ನು ಬಿಟ್ಟು ಮನೋಹರವಾದ ಸ್ವರ್ಗಲೋಕಕ್ಕೆ ತೆರಳಿದನು. ಆ ಸ್ವರ್ಗ ಲೋಕದಲ್ಲಿ ಒಂದುಲಕ್ಷ ವರ್ಷಕಾಲ ಆ ದೇವನನ್ನು ಸೇವಿಸುತ್ತಾ ಸೂರ್ಯರೂಪವನ್ನೇ ಪಡೆದು ಸೂರ್ಯನಲ್ಲೇ ಐಕ್ಯನಾದನು.

ಇತ್ಯೇವಂ ಭಾಸ್ಕರಸ್ಯೈವ ಮಾಹಾತ್ಮ್ಯಂ ಕಥಿತಂ ಮಯಾ ।
ತಸ್ಮಾಚ್ಛಕ್ರ ಸುರೈಃ ಸಾರ್ಧಂ ಭಜ ಮಂಡಲಗಂ ರವಿಂ　　॥ ೬೫ ॥

ಇತಿ ಶ್ರುತ್ವಾ ತು ತೇ ದೇವಾಃ ಪದ್ಯೈಃ ಸೂರ್ಯಕಥಾಮಯೈಃ ।
ತೋಷಯಾಂಚಕ್ರಿರೇ ಪ್ರೇಮ್ಣಾ ಜ್ಯೇಷ್ಠಮಾಸಿ ರವಿಸ್ತ್ವಸೌ　　॥ ೬೬ ॥

ಪ್ರತ್ಯಕ್ಷಮಭವತ್ತತ್ರ ದೇವಾನಾಹ ಪ್ರಸನ್ನಧೀಃ ।
ಸುದರ್ಶನೋ ದ್ವಾಪರಾಂತೇ ಕೃಷ್ಣಾಜ್ಞಪ್ತೋ ಜನಿಷ್ಯತಿ　　॥ ೬೭ ॥

ನಿಂಬಾದಿತ್ಯ ಇತಿ ಖ್ಯಾತೋ ಧರ್ಮಗ್ಲಾನಿಂ ಹರಿಷ್ಯತಿ ॥

॥ ಸೂತ ಉವಾಚ ॥

ಶೃಣುಷ್ವ ಚರಿತಂ ತಸ್ಯ ನಿಂಬಾರ್ಕಸ್ಯ ಮಹಾತ್ಮನಃ　　॥ ೬೮ ॥

ಯದಾಹ ಭಗವಾನ್‌ಕೃಷ್ಣಃ ಕುರು ಕಾರ್ಯಂ ಮದಾಜ್ಞಯಾ।
ಮೇರೋಶ್ಚ ದಕ್ಷಿಣೇ ಪಾರ್ಶ್ವೇ ನರ್ಮದಾಯಾಸ್ತಟೇ ಶುಭೇ　　॥ ೬೯ ॥

---

೬೫. ಎಲೈ ಇಂದ್ರನೇ ! ಈ ರೀತಿ ನಿನಗೆ ಸೂರ್ಯಮಹಾತ್ಮೆಯನ್ನು ವರ್ಣಿಸಿದ್ದೇನೆ. ಆದುದರಿಂದ ನೀನು ಈಗ ಮಂಡಲಾಂತರ್ಗತನಾದ ಸೂರ್ಯನನ್ನು ದೇವತೆಗಳೊಡನೆ ಭಜಿಸು (ಸೇವಿಸು) ಎಂದು ಹೇಳಿದನು.

೬೬-೬೭. ದೇವೇಂದ್ರನು ಹೀಗೆ ಬೃಹಸ್ಪತ್ಯಾಚಾರ್ಯರು ಹೇಳಿದ ಮಾತನ್ನು ಕೇಳಿ, ದೇವತೆಗಳೊಡನೆ ಜ್ಯೇಷ್ಠಮಾಸದಲ್ಲಿ ಸೂರ್ಯಕಥಾಮಯವಾದ ಪದ್ಯಗಳಿಂದ ಸೂರ್ಯದೇವನನ್ನು ಸ್ತುತಿಸಿ ಸಂತೋಷಪಡಿಸಿದನು ಇದರಿಂದ ಪ್ರಸನ್ನನಾದ ಸೂರ್ಯದೇವನು ದೇವತೆಗಳಿಗೆ ಪ್ರತ್ಯಕ್ಷನಾಗಿ ಪ್ರಸನ್ನವಾದ ಅಂತಃಕರಣದಿಂದ ಅವರನ್ನು ಕುರಿತು "ಎಲೈ ದೇವತೆಗಳಿರಾ! ದ್ವಾಪರಯುಗದ ಕೊನೆಯಲ್ಲಿ ಕೃಷ್ಣನ ಅಪ್ಪಣೆಯಿಂದ ಸುದರ್ಶನಾಂಶವು ನಿಂಬಾದಿತ್ಯನೆಂಬ ಹೆಸರಿನಿಂದ ಅವತರಿಸಿ ಧರ್ಮಗಳಿಗೆ ಉಂಟಾಗಿರುವ ಕುಂದುಕೊರತೆಗಳನ್ನೆಲ್ಲಾ ಪರಿಹರಿಸುವನು" ಎಂದು ಹೇಳಿದನು.

೬೮. ಸೂತಮುನಿವರ್ಯನು ಮುಂದುವರಿಸಿ ಹೇಳುತ್ತಾನೆ—ಎಲೈ ಶೌನಕನೇ! ಮಹಾತ್ಮನಾದ ಆ ನಿಂಬಾದಿತ್ಯನ ಚರಿತ್ರೆಯನ್ನು ಹೇಳುವೆನು ಕೇಳು.

೬೯-೭೦. ಒಂದುಸಲ ಶ್ರೀ ಕೃಷ್ಣಪರಮಾತ್ಮನು ಸುದರ್ಶನನನ್ನು ಕುರಿತು "ನೀನು ನನ್ನ ಅಪ್ಪಣೆಯಂದ ನಡೆದುಕೋ. ಮೇರುಪರ್ವತದ ದಕ್ಷಿಣಪಾರ್ಶ್ವದಲ್ಲಿ

ದೇಶೇ ತೈಲಂಗಕೇ ರಮ್ಯೇ ದೇವರ್ಷಿವರಸೇವಿತೇ ।
ತತ್ರಾವತೀರ್ಯ ಸದ್ಧರ್ಮಾನ್ನಾರದಾದ್ದೇವದರ್ಶನಾತ್ ॥ ೭೦ ॥

ಲಬ್ಧ್ವಾ ಭೂಮೌ ವರ್ತಯಸ್ವ ನಷ್ಟಪ್ರಾಯಾನ್ಮಮಾಜ್ಞಯಾ ।
ಮಾಥುರೇ ನೈಮಿಷಾರಣ್ಯೇ ದ್ವಾರವತ್ಯಾಂ ಮಮಾಶ್ರಮೇ ॥ ೭೧ ॥

ಸುದರ್ಶನಾऽऽಶ್ರಮಾಪೌ ಚ ಸ್ಥಿತಿಃ ಕಾರ್ಯಾ ತ್ವಯಾನಘ ।
ಓಮಿತ್ಯಾದೇಶಮಾದಾಯ ಭಗವಾಞ್ಶ್ರೀಸುದರ್ಶನಃ ॥ ೭೨ ॥

ಭಕ್ತಾಭೀಷ್ಟಪ್ರದಃ ಸಾಕ್ಷಾದವತೀರ್ಣೋ ಮಹೀತಲೇ ।
ದೇಶೇ ತೈಲಂಗಕೇ ಪುಣ್ಯೇ ದ್ವಿಜವರ್ಯೋ ಮಹಾಮನಾಃ ॥ ೭೩ ॥

ಸುದರ್ಶನಾಶ್ರಮೇ ಪುಣ್ಯೇ ಭೃಗುವಂಶಸಮುದ್ಭವಃ ।
ನಾಮ್ನಾऽऽರುಣ ಇತಿ ಖ್ಯಾತೋ ವೇದವೇದಾಂಗಪಾರಗಃ ॥ ೭೪ ॥

---

ಶುಭಕರವಾದ ನರ್ಮದಾನದಿಯಿದೆ. ಆ ನರ್ಮದೆಯ ದಡದಲ್ಲಿ ಮನೋಹರವಾದ ತೈಲಂಗ ದೇಶವಿದೆ. ಆ ದೇಶವು ದೇವತೆಗಳಿಂದಲೂ ಋಷಿಗಳಿಂದಲೂ ಸೇವಿಸಲ್ಪಟ್ಟಿರುವುದು. ನೀನು ಆ ದೇಶದಲ್ಲಿ ಅವತರಿಸಿ ನಾರದಮಹರ್ಷಿಯ ಮತ್ತು ದೇವತೆಗಳ ದರ್ಶನದಿಂದ ಒಳ್ಳೆಯ ಧರ್ಮಾಚರಣತತ್ಪರನಾಗು.

೭೧-೭೨. ನಿನ್ನ ಧರ್ಮಾಚರಣೆಯಿಂದ ಭೂಲೋಕದಲ್ಲಿ ಮೃತಪ್ರಾಯರಾಗಿರುವ ಜನರಿಗೆಲ್ಲಾ ಧರ್ಮದಲ್ಲಿ ಆಸಕ್ತಿಹುಟ್ಟುವಂತೆ ಮಾಡಿ ಮಥುರೆಯಲ್ಲೂ ನೈಮಿಶಾರಣ್ಯದಲ್ಲೂ ನನ್ನ ಆಶ್ರಮದಲ್ಲಿಯೂ ಮತ್ತು ಸುದರ್ಶನನ ಆಶ್ರಮದಲ್ಲಿಯೂ ಸಹ ವಾಸಿಸುತ್ತ ಧರ್ಮಸಂರಕ್ಷಣೆ ಮಾಡು" ಎಂದು ನುಡಿದನು. ಆಗ ಭಗವಂತನಾದ ಸುದರ್ಶನನು ಹಾಗೆಯೇ ಆಗಲೆಂದು ಅನುಜ್ಞೆಯನ್ನು ಪಡೆದು ಹೊರಟನು.

೭೩. ಅನಂತರ ಭಕ್ತರ ಅಭೀಷ್ಟವನ್ನು ಸಲ್ಲಿಸುವ ಆ ಸುದರ್ಶನನು ಭೂಮಂಡಲದಲ್ಲಿ ಪುಣ್ಯಕರವಾದ ತೈಲಂಗದೇಶದಲ್ಲಿ ಮಹಾಶ್ರೇಷ್ಠನಾದ ಬ್ರಾಹ್ಮಣನಾಗಿ ಅವತರಿಸಿದನು.

೭೪. ಎಲೈ ಭೃಗುವಂಶೋತ್ಪನ್ನನಾದ ಶೌನಕನೇ! ಪುಣ್ಯಕರವಾದ ಈ ಸುದರ್ಶನಾಶ್ರಮದಲ್ಲಿ, ಸುದರ್ಶನನ ಅಂಶದಿಂದ ಯುಕ್ತನಾಗಿ ಅರುಣನೆಂಬ ಹೆಸರಿನಿಂದ ಜನಿಸಿ, ವೇದವೇದಾಂಗಪಾರಂಗತನಾಗಿ ಪ್ರಸಿದ್ಧಿ ಪಡೆದನು.

ಋಷಿರೂಪಧರಶ್ಚಾಸೀಜ್ಜಯಂತ್ಯಾ ಭಾರ್ಯಯಾ ಸಹ ।
ಸಮಾಹಿತಂ ತೇನ ತೇಜೋ ವಿಷ್ಣುಚಕ್ರಸಮುದ್ಭವಂ ॥ ೭೫ ॥

ದಧಾರ ಮನಸಾ ದೇವೀ ಜಯಂತೀ ಪತಿದೇವತಾ ।
ತೇಜಸಾ ಶುಶುಭೇ ತೇನ ಚಂದ್ರೇಣೇವ ದಿಶಾಮಲಾ ॥ ೭೬ ॥

ಅಥ ಸರ್ವಗುಣೋಪೇತೇ ಕಾಲೇ ಪರಮಶೋಭನೇ ।
ಕಾರ್ತಿಕಸ್ಯ ಸಿತೇ ಪಕ್ಷೇ ಪೂರ್ಣಿಮಾಯಾಂ ವೃಷೇ ವಿಧೌ ॥ ೭೭ ॥

ಕೃತ್ತಿಕಾಭೇ ಮಹಾರಮ್ಯೇ ಉಚ್ಚಸ್ಥೇ ಗ್ರಹಪಂಚಕೇ ।
ಸೂರ್ಯಾವಸಾನಸಮಯೇ ಮೇಷಲಗ್ನೇ ನಿಶಾಮುಖೇ ॥ ೭೮ ॥

ಜಯಂತ್ಯಾಂ ಜಯರೂಪಿಣ್ಯಾಂ ಜಜಾನ ಜಗದೀಶ್ವರಃ ।
ಯೇನ ಸರ್ವಮಿದಂ ವಿಶ್ವಂ ವೇದಧರ್ಮೇ ನಿಯೋಜಿತಂ ॥ ೭೯ ॥

---

೭೫. ಈ ಅರುಣನು ಋಷಿಯ ರೂಪವನ್ನು ಧರಿಸಿ ಪತ್ನಿಯಾದ ಜಯಂತಿಯೊಡನೆ ವಿಹರಿಸುತ್ತಿರುವಾಗ ಅರುಣನು ವಿಷ್ಣುಚಕ್ರ (ಸುದರ್ಶನ) ದ ತೇಜಸ್ಸನ್ನು ತನ್ನ ಭಾರ್ಯೆಯಾದ ಜಯಂತಿಯಲ್ಲಿ ಇರಿಸಿದನು.

೭೬. ಪತಿವ್ರತಾಶಿರೋಮಣಿಯಾದ ಆ ಜಯಂತೀದೇವಿಯು ಆ ತೇಜಸ್ಸನ್ನು ಮನಃಪೂರ್ವಕವಾಗಿ ಧರಿಸಿ ಚಂದ್ರನಿಂದ ದಿಕ್ಕುಗಳು ಬೆಳಗುವಂತೆ ಆ ತೇಜೋ ವಿಶೇಷದಿಂದ ಗರ್ಭಿಣಿಯಾಗಿ ಪ್ರಕಾಶಿಸಿದಳು

೭೭-೭೮ ಹೀಗೆ ಅಜಯಂತೀದೇವಿಗೆ ನವಮಾಸ ತುಂಬಲು ಮಂಗಳಕರವಾದ ಕಾರ್ತೀಕ ಶುಕ್ಲ ಪೂರ್ಣಿಮಾದಿನ ಚಂದ್ರನು ವೃಷಭರಾಶಿಯಲ್ಲಿರುವಾಗ ಮನೋಹರವಾದ ಕೃತ್ತಿಕಾ ನಕ್ಷತ್ರದಲ್ಲಿ ಸೂರ್ಯಾದಿ ಐದು ಗ್ರಹಗಳು ಉಚ್ಚಸ್ಥಾನದಲ್ಲಿರುವಾಗ ಸೂರ್ಯಾಸ್ತಮಯ ಸಮಯದಲ್ಲಿ ಜಯಸ್ವರೂಪಿಣಿಯಾದ ಜಯಂತೀದೇವಿಯಲ್ಲಿ ಸಕಲಗುಣಗಳಿಂದ ಪೂರ್ಣನಾದ ಜಗದೀಶ್ವರನು ಜನಿಸಿದನು.

೭೯-೮೧. ಈ ಮಹಾಪುರುಷನೇ ಸಕಲ ಪ್ರಪಂಚವನ್ನೂ ವೇದಧರ್ಮದಲ್ಲಿ ಆಸಕ್ತವಾಗುವಂತೆ ಮಾಡಿದವನು. ಹೀಗೆ ಅವನು ದಿನದಿನಕ್ಕೂ ಅಭಿವೃದ್ಧಿ

ವಿರಿಂಚಿರೇಕದಾ ತಸ್ಮಿನ್ನಿಂಬಾರ್ಕಸ್ಯಾಶ್ರಮೋ ಶುಭೇ ।
ಸಮಾಗತ್ಯಾಹ ಭೋ ಬ್ರಹ್ಮನ್ ಪ್ರಾಪ್ತೋಽಹಂ ಕ್ಷುಧಯಾನ್ವಿತಃ ॥ ೮೦ ॥

ಯಾವತ್ಸೂರ್ಯಃ ಸ್ಥಿತೋ ವ್ಯೋಮ್ನಿ ತಾವನ್ಮಾಂ ಭೋಜಯ ದ್ವಿಜ ।
ಇತಿ ಶ್ರುತ್ವಾ ತಥೇತ್ಯುಕ್ತ್ವಾ ದದೌ ತಸ್ಮೈ ಚ ಭೋಜನಂ ॥ ೮೧ ॥

ತದಾ ತು ಭಗವಾನ್ಸೂರ್ಯೋ ಹ್ಯಸ್ತಾಚಲಮುಪಾಗತಃ ।
ಮುನಿನಾ ಋಷಿಣಾ ತೇನ ನಿಂಬವೃಕ್ಷೇ ಶದಾ ಶುಭೇ ॥ ೮೨ ॥

ಸ್ಥಾಪಿತಂ ತೇಜಸಾ ಸ್ವೇನ ತೇಜಸ್ತತ್ತ್ವಂ ಸುದರ್ಶನಂ ।
ತತ್ತೇಜಃ ಸೂರ್ಯಸಂಕಾಶಂ ದೃಷ್ಟ್ವಾ ವೇಧಾಃ ಸ್ಮಯಾನ್ವಿತಃ ॥ ೮೩ ॥

ಭಿಕ್ಷುವೇಷಧರಂ ಬಾಲಂ ಮುನಿಂ ಸೂರ್ಯಮಿವಾಪರಂ ।
ನನಾಮ ದಂಡವದ್ಭೂಮೌ ತಪಸಾ ತಸ್ಯ ತೋಷಿತಃ ॥ ೮೪ ॥

---

ಹೊಂದುತ್ತಿರಲು ಒಂದುದಿವಸ ಬ್ರಹ್ಮನು ಆ ನಿಂಬಾದಿತ್ಯನ ಆಶ್ರಮಕ್ಕೆ ಬಂದು ಅವನನ್ನು ಕುರಿತು " ಎಲೈ ಬ್ರಾಹ್ಮಣನೇ ! ನಾನು ತುಂಬಾ ಹಸಿದು ಬಂದಿರುವೆನು. ಸೂರ್ಯನು ಅಂತರಿಕ್ಷದಲ್ಲಿ ಕಾಣುತ್ತಿರುವಷ್ಟರೊಳಗೆ ನನಗೆ ಭೋಜನಮಾಡಿಸು " ಎಂದು ಹೇಳಿದನು. ಆ ನಿಂಬಾದಿತ್ಯನು " ಹಾಗೆಯೇ ಆಗಲಿ " ಎಂದು ಅವನಿಗೆ ಭೋಜನಮಾಡಿಸಿದನು.

೮೨-೮೩. ಆಗ ಸೂರ್ಯಭಗವಂತನು ಅಸ್ತಂಗತನಾಗಲು ಆ ಮುನಿಯು ಶುಭಕರವಾದ ನಿಂಬವೃಕ್ಷದಲ್ಲಿ ತನ್ನ ತೇಜಸ್ಸಿನಿಂದ ನಿರ್ಮಿಸಿದ ಸುದರ್ಶನವನ್ನು ಸ್ಥಾಪಿಸಿದನು. ಆ ಸುದರ್ಶನನ ಕಾಂತಿಯು ಸೂರ್ಯಪ್ರಭೆಯಂತೆ ಇದ್ದುದನ್ನು ನೋಡಿ ಬ್ರಹ್ಮನು ಆಶ್ಚರ್ಯಗೊಂಡನು.

೮೪. ಅನಂತರ ಭಿಕ್ಷುವೇಷಧಾರಿಯೂ ಬಾಲಕನೂ ತೇಜಸ್ಸಿನಲ್ಲಿ ಸೂರ್ಯನಿಗೆ ಸಮಾನನೂ ಆಗಿರುವ ಆ ಮುನಿಗೆ ಭೂಮಿಯಲ್ಲಿ ದಂಡವತ್ ಪ್ರಣಾಮಮಾಡಿ ಅವನ ತಪಸ್ಸಿಗೆ ಮೆಚ್ಚಿ ಸಂತೋಷಗೊಂಡು ಆ ಮುನಿಯನ್ನು ಕುರಿತು " ಎಲೈ ಸಾಧುವೇ ! ನೀನು ಸತ್ಪುರುಷನು, ಪೂಜಾರ್ಹನು ; ಇನ್ನುಮುಂದೆ ನೀನು

**ಉವಾಚ ವಚನಂ ರಮ್ಯಂ ಸಾಧು ಸಾಧ್ವಿತಿ ಪೂಜಯನ್ ।**
**ನಿಂಬಾದಿತ್ಯ ಇತಿ ಖ್ಯಾತೋ ವಸುಧಾಯಾಂ ಭವಿಷ್ಯಸಿ ॥ ೮೫ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ಚತುರ್ಥಖಂಡೇ ಕಲಿಯುಗೀಯೇತಿಹಾಸಸಮುಚ್ಚಯೇ ರಾಮಾನಂದ ನಿಂಬಾರ್ಕ ಸಮುತ್ಪತ್ತಿರ್ವರ್ಣನಂ ನಾಮ ಸಪ್ತಮೋಽಧ್ಯಾಯಃ.**



---

ಭೂಮಂಡಲದಲ್ಲಿ ನಿಂಬಾದಿತ್ಯನೆಂದು ಪ್ರಸಿದ್ಧಿಪಡೆಯುವೆ" ಎಂದು ಹಿತಕರವಾಗಿ ನುಡಿದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ನಾಲ್ಕನೆಯ ಖಂಡದಲ್ಲಿ ರಾಮಾನಂದ ನಿಂಬಾದಿತ್ಯ ಇವರ ಉತ್ಪತ್ತಿರ್ವರ್ಣನೆಯೆಂಬ ಏಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಪ್ರತಿಸರ್ಗಪರ್ವಣಿ ಚತುರ್ಥಖಂಡೇ

## ಅಷ್ಟಮೋಽಧ್ಯಾಯಃ

---

॥ ಬೃಹಸ್ಪತಿರುವಾಚ ॥

ಪುರಾ ತ್ರೇತಾಯುಗೇ ಶಕ್ರ ಶಕ್ರಶರ್ಮಾ ದ್ವಿಜೋ ಹ್ಯಭೂತ್ ।
ಅಯೋಧ್ಯಾಯಾಂ ಮಹಾಭಾಗೋ ದೇವಪೂಜನತತ್ಪರಃ ॥ ೧ ॥

ಅಶ್ವಿನೌ ಚ ತಥಾ ರುದ್ರಾನ್ವಸೂನ್ಸೂರ್ಯಾನ್ ಪೃಥಕ್‌ಪೃಥಕ್ ।
ಯಜುರ್ವೇದಮಯೈರ್ಮಂತ್ರೈರರ್ಚಯಿತ್ವಾ ಪ್ರಸನ್ನಧೀಃ ॥
ಹವ್ಯೈಶ್ಚ ತರ್ಪಯಾಮಾಸ ದೇವಾಂಸ್ತಾನ್ಪ್ರತ್ಯಹಂ ದ್ವಿಜಃ ॥ ೨ ॥

---

### ಎಂಟನೆಯ ಅಧ್ಯಾಯ

೧. ಬೃಹಸ್ಪತ್ಯಾಚಾರ್ಯರು ಪುನಃ ದೇವತೆಗಳನ್ನು ಕುರಿತು ಹೇಳುತ್ತಾರೆ— ಎಲೈ ಇಂದ್ರನೇ! ಹಿಂದೆ ತ್ರೇತಾಯುಗದಲ್ಲಿ ಅಯೋಧ್ಯಾ ಪಟ್ಟಣದಲ್ಲಿ ಶಕ್ರಶರ್ಮ ನೆಂಬ ಬ್ರಾಹ್ಮಣನಿದ್ದನು. ಇವನು ಯಾವಾಗಲೂ ದೇವರ ಪೂಜೆಯಲ್ಲಿ ಆಸಕ್ತ ನಾಗಿದ್ದನು

೨. ಈ ಬ್ರಾಹ್ಮಣನು ಅಶ್ವಿನೀದೇವತೆಗಳನ್ನೂ ಏಕಾದಶ ರುದ್ರರನ್ನೂ ಅಷ್ಟವಸುಗಳನ್ನೂ ದ್ವಾದಶಾದಿತ್ಯರನ್ನೂ ಸಹ ಪ್ರತ್ಯೇಕಪ್ರತ್ಯೇಕವಾಗಿ ಯಜುರ್ವೇದ ಮಂತ್ರಗಳಿಂದ ಪೂಜಿಸುತ್ತಾ ನಿರ್ಮಲಾಂತಃಕರಣವುಳ್ಳವನಾಗಿ ಪ್ರತಿನಿತ್ಯವೂ ಆ ದೇವತೆಗಳನ್ನು ಉದ್ದೇಶಿಸಿ ಹೋಮಮಾಡುತ್ತಿದ್ದನು.

ತದ್ಭಾವತಸ್ತ್ರಯಸ್ತ್ರಿಂಶದ್ದೇವಾಃ ಸ್ವಾದ್ರಗಣೈರ್ಯುತಾಃ ।
ದದುರ್ಮನೋರಥಂ ತಸ್ಮೈ ದುರ್ಲಭಂ ಸುಲಭೀಕೃತಂ ॥ ೩ ॥

ದಶವರ್ಷಸಹಸ್ರಾಣಿ ನಿರ್ಜರೋ ನಿರುಪದ್ರವಃ ।
ಪಶ್ಚಾತ್ಕಲೇವರಂ ತ್ಯಕ್ತ್ವಾ ಪಶ್ಚಾತ್ಸೂರ್ಯೇ ಬಭೂವ ಸಃ ॥ ೪ ॥

ಲಕ್ಷಾಬ್ದಂ ಮಂಡಲೇ ತಸ್ಮಿನ್ನಧಿಕಾರಃ ಕೃತಸ್ತತಃ ।
ಬ್ರಹ್ಮಲೋಕಂ ಯಯೌ ವಿಪ್ರಃ ಸರ್ವದೇವಪ್ರಸಾದತಃ ॥ ೫ ॥

ಅಷ್ಟವರ್ಷಸಹಸ್ರಾಣಿ ದಿವ್ಯಾನಿ ಪದಮುತ್ತಮಂ
ವಿಲೋಕ್ಯ ಮಂಡಲೇ ಪ್ರಾಪ್ತಂ ತಂ ಸೂರ್ಯಂ ಜಪಪೂಜನೈಃ ॥ ೬ ॥

ಇತಿ ಶ್ರುತ್ವಾ ತು ವಚನಂ ಮಹೇಂದ್ರಃ ಸುರಸಂಯುತಃ ।
ಆಷಾಢೇ ಭಾಸ್ಕರಂ ದೇವಂ ಪೂಜಯಾಮಾಸ ನಮ್ರಧೀಃ ॥ ೭ ॥

---

೩. ಇದರ ಮಹಿಮೆಯಿಂದ ಅಶ್ವಿನೀದೇವತೆಗಳಿಬ್ಬರು, ಹನ್ನೊಂದು ಮಂದಿ ರುದ್ರರು, ಎಂಟುಜನ ವಸುಗಳು ಹನ್ನೆರಡು ಮಂದಿ ಆದಿತ್ಯರು ಈ ಮೂವತ್ತು ಮೂರು ಜನ ದೇವತೆಗಳೂ ತಮ್ಮ ಗಣಗಳೊಡನೆ ಪ್ರಸನ್ನರಾಗಿ ಇತರರಿಂದ ಹೊಂದಲು ಅಸಾಧ್ಯವಾದ ಅವನ ಮನೋರಥವನ್ನು ಪೂರ್ತಿಗೊಳಿಸಿದರು

೪ ಈ ಶಕ್ರಶರ್ಮನು ಹತ್ತುಸಾವಿರವರ್ಷ ಯಾವ ರೋಗಾದ್ಯುಪದ್ರವಗಳಿಗೂ ಗುರಿಯಾಗದೆಯೂ, ಮುಪ್ಪಿಲ್ಲದೆಯೂ ಜೀವಿಸಿ, ಅನಂತರ ಈ ಶರೀರವನ್ನು ಬಿಟ್ಟು ಸೂರ್ಯನಲ್ಲಿಯೇ ಐಕ್ಯನಾದನು.

೫. ಒಂದು ವರ್ಷಗಳಕಾಲ ಸೂರ್ಯಮಂಡಲದಲ್ಲಿ ಅಧಿಕಾರಮಾಡಿ ಆ ಮೇಲೆ ಸಕಲ ದೇವತೆಗಳ ಅನುಗ್ರಹದಿಂದ ಬ್ರಹ್ಮಲೋಕವನ್ನು ಪಡೆದನು.

೬. ಅಲ್ಲಿ ದೇವಮಾನದ ಎಂಟುಸಹಸ್ರ ವರ್ಷಗಳಕಾಲ ಉತ್ತಮವಾದ ಪದವಿಯನ್ನು ಅನುಭವಿಸಿ, ಅನಂತರ ಪುನಃ ಸೂರ್ಯಮಂಡಲವನ್ನು ಪಡೆದು ಅದರಲ್ಲಿ ಸೂರ್ಯದೇವನನ್ನು ಆರಾಧಿಸಿದನು" ಎಂದು ಹೇಳಿದರು.

೭. ಇದನ್ನು ಕೇಳಿ ದೇವೇಂದ್ರನು ತನ್ನ ದೇವಗಣಗಳೊಡನೆ ಆಷಾಢಮಾಸ ದಲ್ಲಿ ಸೂರ್ಯದೇವನನ್ನು ಭಕ್ತಿನಮ್ರನಾಗಿ ಮನಃಪೂರ್ವಕವಾಗಿ ಪೂಜೆಮಾಡಿದನು.

ಆಷಾಢಪೂರ್ಣಿಮಾಯಾಂ ಚ ಸ ದೇವೋ ಜಗತೀತಲೇ ।
ಪ್ರತ್ಯಕ್ಷಮಗಮತ್ತತ್ರ ಸುರಾನಾಹ ಶೃಣುಷ್ವ ತತ್ ॥ ೮ ॥

ವೃಂದಾವನೇ ಮಹಾರಮ್ಯೇ ಜನಯಿಷ್ಯೇ ಕಲೌ ಭಯೇ ।
ಸ ದ್ವಿಜಃ ಸೂರ್ಯರೂಪಶ್ಚ ದೇವಕಾರ್ಯಂ ಕರಿಷ್ಯತಿ ॥ ೯ ॥

ಮಾಧವಸ್ಯ ದ್ವಿಜಸ್ಯೈವ ತನಯಃ ಸ ಭವಿಷ್ಯತಿ ।
ಮಧುರ್ನಾಮ ಮಹಾಭಾಗೋ ವೇದಮಾರ್ಗಪರಾಯಣಃ ॥ ೧೦ ॥

॥ ಸೂತ ಉವಾಚ ॥
ಇತ್ಯುಕ್ತ್ವಾ ಭಗವಾನ್ಸೂರ್ಯೋ ದೇವಕಾರ್ಯಾರ್ಥಮುದ್ಯತಃ ।
ಸ್ವಾಂಗಾತ್ತು ತೇಜ ಉತ್ಪಾದ್ಯ ವೃಂದಾವನಮುಪೇಷಯತ್ ॥ ೧೧ ॥

---

೮. ಹೀಗೆ ಪೂಜೆಮಾಡಲು ಆ ಸೂರ್ಯದೇವನು ಆಷಾಢಮಾಸದ ಪೂರ್ಣಿಮಾ ದಿವಸ ಭೂಮಂಡಲದಲ್ಲಿ ಪ್ರತ್ಯಕ್ಷನಾಗಿ ದೇವತೆಗಳನ್ನು ಕುರಿತು ಮಾತಾಡ ತೊಡಗಿದನು.

೯. "ಎಲೈ ದೇವತೆಗಳಿರಾ ! ನಾನು ಈ ಭಯಂಕರವಾದ ಕಲಿಯುಗದಲ್ಲಿ ಮಹಾಸುಂದರವಾದ ಬೃಂದಾವನ ಕ್ಷೇತ್ರದಲ್ಲಿ ಅವತರಿಸುವೆನು. ಅಲ್ಲಿ ಬ್ರಾಹ್ಮಣ ರೂಪಿನಿಂದ ಮಾಧವನೆಂಬ ಬ್ರಾಹ್ಮಣನ ಮಗನ ಮಗನಾಗಿ ಮಧುವೆಂಬ ಹೆಸರಿನಿಂದ ಪ್ರಸಿದ್ಧನಾಗಿ ದೇವತೆಗಳ ಕಾರ್ಯವನ್ನು ನೆರವೇರಿಸುವೆನು" ಎಂದನು.

೧೦. ಈ ರೀತಿ ಆ ಸೂರ್ಯನು ಮಾಧವನೆಂಬ ಬ್ರಾಹ್ಮಣನ ಮಗನಾಗಿ ಮಧುವೆಂಬ ಹೆಸರಿನಿಂದ ವೇದಮಾರ್ಗಪರಾಯಣನಾಗಿ ಮಹಾಪುರುಷನೆನಿಸುವನು. ಸೂತಮುನಿವರ್ಯನು ಮುಂದುವರಿಸಿ ಹೇಳುತ್ತಾನೆ.

೧೧. ಎಲೈ ಶೌನಕನೇ ! ಭಗವಂತನಾದ ಸೂರ್ಯನು ಈ ರೀತಿ ದೇವತೆಗಳಿಗೆ ಹೇಳಿ ದೇವತಾಕಾರ್ಯದಲ್ಲಿ ಉದ್ಯುಕ್ತನಾಗಿ ತನ್ನ ಅವಯವದಿಂದ ತೇಜಸ್ಸನ್ನು ತೆಗೆದು ಅದನ್ನು ಬೃಂದಾವನಕ್ಕೆ ಕಳುಹಿಸಿದನು.

ವಿಮುಖಾನ್ಮಧುರಾಲಾಪೈರ್ವಶೀಕೃತ್ಯ ಸಮಂತತಃ ।
ತೇಭ್ಯಶ್ಚ ವೈಷ್ಣವೀಂ ಶಕ್ತಿಂ ಪ್ರದದೌ ಭುಕ್ತಿಮುಕ್ತಿದಾಂ ॥
ಮಧ್ವಾಚಾರ್ಯ ಇತಿ ಖ್ಯಾತಃ ಪ್ರಸಿದ್ಧೋಽಭೂನ್ಮಹೀತಲೇ ॥ ೧೨ ॥

॥ ಜೀವ ಉವಾಚ ॥

ದ್ವಾಪರೇ ಚ ದ್ವಿಜಶ್ರೇಷ್ಠೋ ಮೇಘಶರ್ಮಾ ಬಭೂವ ಹ ।
ಜ್ಞಾನವಾನ್ಮತಿಮಾನ್ಧರ್ಮೀ ವೇದಮಾರ್ಗಪರಾಯಣಃ ॥ ೧೩ ॥

ಕೃಷಿಕೃತ್ಯಪರೋ ನಿತ್ಯಂ ತದ್ಧನೈಶ್ಚ ದಶಾಂಶಕೈಃ ।
ಪ್ರತ್ಯಹಂ ಸಕಲಾನ್ದೇವಾನರ್ಚಯಾಮಾಸ ಭಕ್ತಿಮಾನ್ ॥ ೧೪ ॥

ಏಕದಾ ಪಂಚವರ್ಷಾಬ್ದೇ ಶಂತನೌ ಚ ಮಹೀಪತೌ ।
ಸಂಪ್ರಾಪ್ತೇ ತಸ್ಯ ವೈ ದೇಶೇ ಹ್ಯನಾವೃಷ್ಟಿರ್ಬಭೂವ ಹ ॥ ೧೫ ॥

---

೧೨. ಈ ತೇಜಸ್ಸು ಮಧುವೆಂಬ ಹೆಸರಿನಿಂದ ಬೃಂದಾವನದಲ್ಲಿ ಜನಿಸಿ ಧರ್ಮಬಾಹಿರರಾದ ಜನರನ್ನೆಲ್ಲಾ ತನ್ನ ಮಧುರವಾದ ಮಾತುಗಳಿಂದ ವಶಪಡಿಸಿಕೊಳ್ಳುವನು.

೧೩. ಅವರಿಗೆ ಇಹದಲ್ಲಿ ಭಕ್ತಿಯನ್ನೂ, ಪರದಲ್ಲಿ ಮೋಕ್ಷವನ್ನೂ ಉಂಟು ಮಾಡುವ ವೈಷ್ಣವೀ ಶಕ್ತಿಯನ್ನು ಉಪದೇಶಿಸಿ, ಕೊನೆಗೆ ಭೂಮಂಡಲದಲ್ಲಿ ಮಧ್ವಾಚಾರ್ಯನೆಂದು ಪ್ರಸಿದ್ಧಿಪಡೆದನು. ಬೃಹಸ್ಪತ್ಯಾಚಾರ್ಯರು ಪುನಃ ದೇವತೆಗಳನ್ನು ಕುರಿತು ಹೇಳುತ್ತಾರೆ.

೧೪. ದ್ವಾಪರಯುಗದಲ್ಲಿ ಮೇಘಶರ್ಮನೆಂಬ ಬ್ರಾಹ್ಮಣೋತ್ತಮನಿದ್ದನು. ಇವನು ಜ್ಞಾನಿಯೂ ಮೇಧಾವಿಯೂ ಧರ್ಮಿಷ್ಟನೂ ವೇದಮಾರ್ಗತತ್ಪರನೂ ಆಗಿದ್ದನು.

೧೫. ಈ ಬ್ರಾಹ್ಮಣನು ಕೃಷಿಕಾರ್ಯವನ್ನು ಮಾಡುತ್ತಾ ಅದರಿಂದ ಬಂದ ದ್ರವ್ಯದಲ್ಲಿ ಹತ್ತನೆಯ ಒಂದುಭಾಗದಿಂದ ಎಲ್ಲಾ ದೇವತೆಗಳನ್ನೂ ಪ್ರತಿನಿತ್ಯವೂ ಭಕ್ತಿಯಿಂದ ಪೂಜಿಸುತ್ತಿದ್ದನು. ಹೀಗೆ ಐದು ವರ್ಷಗಳಕಾಲ ನಡೆಯಿಸುತ್ತಿರುವಾಗ್ಗೆ ಒಂದುಸಲ ಶಂತನು ಮಹಾರಾಜನು ಆಳುತ್ತಿರುವ ಆ ದೇಶದಲ್ಲಿ ಅನಾವೃಷ್ಟಿಯುಂಟಾಯಿತು.

ಕ್ರೋಶಮಾತ್ರಂ ಹಿ ತತ್‌ಕ್ಷೇತ್ರಂ ಪರ್ಜನ್ಯೇನೈವ ಸೇಚಿತಂ ।
ಧಾನ್ಯಾನಾಂ ದ್ರೋಣಮಾನಶ್ಚ ಭಾವೋಽಭೂದೇಕಮುದ್ರಯಾ ॥ ೧೬ ॥

ಮೋಘಶರ್ಮಾ ತದಾ ತತ್ರ ಧನಧಾನ್ಯಯುತೋಽಭವತ್ ।
ಅನ್ಯೇ ತು ಪೀಡಿತಾ ಲೋಕಾ ರಾಜಾನಂ ಶರಣಂ ಯಯುಃ ॥ ೧೭ ॥

ತದಾ ತು ದುಃಖಿತೋ ರಾಜಾ ಮೋಘಶರ್ಮಾಣಮಾಹ್ವಯತ್ ।
ದ್ವಿಜಶ್ರೇಷ್ಠ ನಮಸ್ತುಭ್ಯಂ ಗುರುರ್ಭವ ಮಮ ಪ್ರಿಯಃ ॥ ೧೮ ॥

ಅನಾವೃಷ್ಟಿರ್ಯಥಾ ನ ಸ್ಯಾತ್ತಥಾ ವಿಪ್ರ ಸಮಾದಿಶ ॥ ೧೯ ॥

ಇತ್ಯೇವಂವಾದಿನಂ ಭೂಪಂ ಮೋಘಶರ್ಮಾ ವಚೋಽಬ್ರವೀತ್ ।
ಶ್ರಾವಣೇ ಮಾಸಿ ಸಂಪ್ರಾಪ್ತೇ ವಿಪ್ರಾನ್ವೇದಪರಾಯಣಾನ್ ॥ ೨೦ ॥

---

೧೬. ಈ ಮೋಘಶರ್ಮ ಬ್ರಾಹ್ಮಣನಿದ್ದ ಸ್ಥಳದ ಸುತ್ತ ಒಂದು ಕ್ರೋಶ ಪ್ರಮಾಣ ವಿಸ್ತಾರದೊಳಗೆ ಸಮೃದ್ಧಿಯಾಗಿ ಮಳೆ ಹೊಯ್ದು ಅಪರಿಮಿತವಾಗಿ ಧಾನ್ಯಗಳು ಬೆಳೆದವು.

೧೭. ಆಗ ಮೋಘಶರ್ಮನೊಬ್ಬನೇ ಧನಧಾನ್ಯಯುತನಾದನು. ಇತರರೆಲ್ಲರೂ ಧಾನ್ಯವಿಲ್ಲದೆ ಬಹು ಕ್ಲೇಶಪಡುತ್ತಾ ರಾಜನನ್ನು ಮರೆಹೊಕ್ಕರು.

೧೮. ಆಗ ಶಂತನುಮಹಾರಾಜನು ತುಂಬಾ ದುಃಖಿತನಾಗಿ ಆ ಮೋಘಶರ್ಮನನ್ನು ಕರೆಯಿಸಿ ಅವನನ್ನು ಕುರಿತು "ಎಲೈ ಬ್ರಾಹ್ಮಣೋತ್ತಮನೇ! ನಿನ್ನನ್ನು ನಮಸ್ಕರಿಸುವೆನು. ನನಗೆ ಗುರುವಾಗಿ ಹಿತವನ್ನುಂಟುಮಾಡು" (ಅನುಗ್ರಹಿಸು).

೧೯. "ಎಲೈ ಬ್ರಾಹ್ಮಣನೇ! ಅನಾವೃಷ್ಟಿ ಪ್ರಾಪ್ತವಾಗದೆ ಇರುವಂತೆ ಅನುಗ್ರಹಿಸಿ ನಮ್ಮನ್ನು ಉದ್ಧಾರಮಾಡು'' ಎಂದು ಪ್ರಾರ್ಥಿಸಿದನು.

೨೦-೨೧. ಹೀಗೆ ಪ್ರಾರ್ಥಿಸುತ್ತಿರುವ ರಾಜನನ್ನು ಕುರಿತು ಮೋಘಶರ್ಮನು "ಎಲೈ ರಾಜನೇ! ಶ್ರಾವಣಮಾಸ ಹುಟ್ಟುತ್ತಲೆ ವೇದಪಾರಂಗತರಾದ ಹನ್ನೆರಡು ಜನ ವಿಪ್ರರನ್ನು ಕರೆಯಿಸಿ ಅವರುಗಳಿಂದ ಒಂದುಲಕ್ಷ ಆವೃತ್ತಿ ಸೂರ್ಯಮಂತ್ರ ಜಪವನ್ನು ಮಾಡಿಸಿ ಪರಿಶುದ್ಧಚಿತ್ತನಾಗಿ ನಿಯಮದಿಂದ ಆ ಜಪಸಂಖ್ಯೆಯ

ದ್ವಾದಶ್ಯೈವ ಸಮಾಹೂಯ ಲಕ್ಷಮಾತ್ರಂ ರವೇಃ ಸ್ವಯಂ ।
ಜಾಪಯಿತ್ವಾ ಸುಮನಸಾ ಪೂರ್ಣಿಮಾಯಾಂ ತು ತದ್ವ್ರತೀ ॥
ಸೂರ್ಯಮಂತ್ರಾಹುತೀರ್ವಹ್ನೌ ತದ್ದಶಾಂಶಂ ಹಿ ತದ್ದ್ವಿಜೈಃ ॥ ೨೦ ॥

ಕಾರಯಿತ್ವಾ ವಿಧಾನೇನ ಕೃತಕೃತ್ಯಃ ಸುಖೀಭವ ।
ಇತಿ ಶ್ರುತ್ವಾ ತಥಾ ಕೃತ್ವಾ ಭೋಜಯಾಮಾಸ ವೇದಗಾನ್ ॥ ೨೨ ॥

ಪ್ರಸನ್ನಸ್ತು ತದಾ ಸೂರ್ಯಃ ಪರ್ಜನ್ಯಾತ್ಮಾ ಸಮಂತತಃ ।
ಭೂಮಿಮಾಚ್ಛಾದ್ಯ ಸ ದಿಶಂ ಪ್ರಭುರ್ವೃಷ್ಟಿಮಕಾರಯತ್ ॥ ೨೩ ॥

ಶಂತನುಸ್ತು ತದಾ ರಾಜಾ ಸೂರ್ಯವ್ರತಪರಾಯಣಃ ।
ತದ್ವ್ರತೇನ ಮಹಾಪುಣ್ಯೋ ಬಭೂವ ನೃಪಸತ್ತಮಃ ॥ ೨೪ ॥

---

ಹತ್ತನೆಯ ಒಂದು ಅಂಶದಷ್ಟು ಎಂದರೆ ಹತ್ತುಸಾವಿರವನ್ನು ಸೂರ್ಯಮಂತ್ರೋಚ್ಚಾರಣ ಪೂರ್ವಕವಾಗಿ ಆ ಬ್ರಾಹ್ಮಣರಿಂದ ಅಗ್ನಿಯಲ್ಲಿ ಹೋಮಮಾಡಿಸು. ನಿಯಮದಿಂದ ಹೀಗೆ ಮಾಡಿದರೆ ನೀನು ಕೃತಕೃತ್ಯನಾಗಿ ಸೂರ್ಯನನ್ನು ಹೊಂದುವೆ" ಎಂದು ಹೇಳಿದನು.

೨೨. ಆಗ ರಾಜನಾದ ಶಂತನುವು ಆ ಬ್ರಾಹ್ಮಣನು ಹೇಳಿದಂತೆಯೇ ಜಪ ಹೋಮಾದಿಗಳನ್ನು ಮಾಡಿಸಿ ಅನಂತರ ವೇದಪಾರಂಗತರಾದ ಆ ಬ್ರಾಹ್ಮಣರಿಗೆ ಸಂತರ್ಪಣೆಮಾಡಿಸಿದನು.

೨೩. ಇದರಿಂದ ಪರ್ಜನ್ಯಸ್ವರೂಪನಾದ ಸೂರ್ಯದೇವನು ಪ್ರಸನ್ನನಾಗಿ ಸುತ್ತಲೂ ಅಂತರಿಕ್ಷದಲ್ಲಿ ಮೇಘಗಳು ಆವರಿಸುವಂತೆ ಮಾಡಿ, ಭೂಮಿಯೇ ಕಾಣದೆ ಇರುವಂತೆ ಎಲ್ಲ ದಿಕ್ಕುಗಳಲ್ಲಿಯೂ ಮಳೆಗರೆದನು.

೨೪. ಹೀಗೆ ಸೂರ್ಯವ್ರತಪರಾಯಣನಾದ ಶಂತನುಮಹಾರಾಜನು ಈ ವ್ರತ ದಿಂದ ಮಹಾಪುಣ್ಯಶಾಲಿಯಾಗಿ ರಾಜಶ್ರೇಷ್ಠನೆನಿಸಿದನು.

ಯಂ ಯಂ ಕರೇಣ ಸ್ಪೃಶತಿ ವೃದ್ಧೋ ಭವತಿ ವೈ ಯುವಾ ।
ಸೂರ್ಯದೇವಪ್ರಭಾವೇನ ಮೇಘಶರ್ಮಾ ತಥಾ ಹ್ಯಭೂತ್ ॥ ೨೫ ॥

ಸ ವೈ ಪಂಚಶತಾಯುಷ್ಟ ನಿರ್ಜರೋ ನಿರುಪದ್ರವಃ ।
ತ್ಯಕ್ತ್ವಾ ಪ್ರಾಣಾನ್ರವಿಭೂರ್ತ್ವಾ ಸೂರ್ಯಲೋಕಮುಪಾಗಮತ್ ॥
ಲಕ್ಷಾಬ್ದಂ ಭುವಮಾಸಾದ್ಯ ಬ್ರಹ್ಮಲೋಕಂ ಗಮಿಷ್ಯತಿ ॥ ೨೬ ॥

ಇತ್ಯೇವಂವಾದಿನಂ ಜೀವಂ ಪರ್ಜನ್ಯೋ ಭಗವಾನ್ರವಿಃ ।
ಸ್ವರೂಪಂ ದರ್ಶಯಾಮಾಸ ಪ್ರಯಾಗಂ ಪ್ರತಿ ಚಾಗತಃ ॥ ೨೭ ॥

ಸುರಾನಾಹ ಪ್ರಸನ್ನಾತ್ಮಾ ಮ್ಲೇಚ್ಛರಾಜ್ಯೇ ಕಲೌ ಯುಗೇ ।
ವೃಂದಾವನೇ ಸಮಾಗಮ್ಯ ದೇವಕಾರ್ಯಂ ಕರೋಮ್ಯಹಂ ॥ ೨೮ ॥

---

೨೫. ಬ್ರಾಹ್ಮಣೋತ್ತಮನಾದ ಮೇಘಶರ್ಮನು ಸೂರ್ಯನಂತೆ ಮಹಿಮಾಯುಕ್ತನಾಗಿ, ಯಾರಾದರೂ ವೃದ್ಧರನ್ನು ತನ್ನ ಕೈಯಿಂದ ಸ್ಪರ್ಶಮಾಡಿದರೆ ಅವರು ಕೂಡಲೇ ಯುವಕರಾಗುತ್ತಿದ್ದರು.

೨೬. ಈರೀತಿ ಈ ಮೇಘಶರ್ಮನು ಐದುನೂರು ವರ್ಷಕಾಲ ದೃಢಾಂಗನಾಗಿ ಯಾವ ರೋಗವೂ ಇಲ್ಲದೆ ಇದ್ದು ಕೊನೆಗೆ ದೇಹತ್ಯಾಗಮಾಡಿ ಸೂರ್ಯಲೋಕಕ್ಕೆ ಹೋಗಿ ಸೂರ್ಯಸಾಯುಜ್ಯವನ್ನು ಪಡೆದನು. ಹೀಗೆ ಈ ಮೇಘಶರ್ಮನು ಒಂದುಲಕ್ಷ ವರ್ಷಗಳ ಕಾಲ ಆ ಸೂರ್ಯಲೋಕವಾಸಸುಖವನ್ನು ಅನುಭವಿಸಿ ಬಳಿಕ ಬ್ರಹ್ಮಲೋಕವನ್ನು ಹೊಂದುವನು.

೨೭-೨೮. ಈರೀತಿ ಬೃಹಸ್ಪತ್ಯಾಚಾರ್ಯರು ಹೇಳುತ್ತಿರಲು ಪೂಜ್ಯಸ್ವರೂಪನೂ ಭಗವಂತನೂ ಆದ ಸೂರ್ಯನು ಪ್ರಯಾಗಕ್ಷೇತ್ರಕ್ಕೆ ಬಂದು ಅಲ್ಲಿ ತನ್ನ ಸ್ವರೂಪವನ್ನು ತೋರಿಸಿ ಪ್ರಸನ್ನಾಂತಃಕರಣನಾಗಿ ಇಂದ್ರಾದಿ ದೇವತೆಗಳನ್ನು ಕುರಿತು "ಎಲೈ ದೇವತೆಗಳಿರಾ! ನಾನು ಕಲಿಯುಗದಲ್ಲಿ ಮ್ಲೇಚ್ಛರಾಜ್ಯದಲ್ಲಿ ಅವತರಿಸಿ ಬೃಂದಾವನ ಕ್ಷೇತ್ರಕ್ಕೆ ಬಂದು ಅಲ್ಲಿ ದೇವಕಾರ್ಯಗಳನ್ನು ನೆರವೇರಿಸುವೆನು" ಎಂದು ಹೇಳಿದನು.

॥ ಸೂತ ಉವಾಚ ॥

ಇತ್ಯುಕ್ತ್ವಾ ಭಗವಾನ್ಸೂರ್ಯೋ ಗತ್ವಾ ವೃಂದಾವನಂ ಶುಭಂ ।
ಶ್ರೀಧರೋ ನಾಮ ವಿಖ್ಯಾತಃ ಪುತ್ರೋಽಭೂದ್ವೇದಶರ್ಮಣಃ ॥ ೨೯ ॥

ಶ್ರೀಮದ್ಭಾಗವತಂ ಶಾಸ್ತ್ರಂ ಸಮಾಲೋಕ್ಯ ವಿಶಾರದಃ ।
ಚಕಾರ ವಿದುಷಾಮರ್ಥೇ ಪ್ರದೀಪ್ತಂ ಶ್ರೀಧರಃ ಶುಭಂ ॥
ಶ್ರೀಮದ್ಭಾಗವತಂ ಶಾಸ್ತ್ರಂ ಪುರಾಣೋಪರಿ ತತ್ಕೃತಂ ॥ ೩೦ ॥

॥ ಜೀವ ಉವಾಚ ॥

ಪುರಾ ಕಲೌ ಯುಗೇ ಪ್ರಾಪ್ತೇ ಪ್ರಾಂಶುಶರ್ಮಾ ದ್ವಿಜೋಽಭವತ್ ।
ವೇದಶಾಸ್ತ್ರಪರೋ ನಿತ್ಯಂ ದೇವತಾತಿಥಿಪೂಜಕಃ ॥ ೩೧ ॥

ಸತ್ಯವಾದೀ ಮಹಾಸಾಧುಃ ಸ್ತೇಯಹಿಂಸಾವಿವರ್ಜಿತಃ ।
ಭಿಕ್ಷಾವೃತ್ತಿಪರೋ ನಿತ್ಯಂ ಪುತ್ರದಾರಪ್ರಪೋಷಕಃ ॥ ೩೨ ॥

---

೨೯. ಸೂತಮುನಿವರ್ಯನು ಕಥೆಯನ್ನು ಮುಂದುವರಿಸಿ ಹೇಳುತ್ತಾನೆ—ಭಗವಂತನಾದ ಸೂರ್ಯನು ದೇವತೆಗಳನ್ನು ಕುರಿತು ಹೀಗೆ ಹೇಳಿದ ಮೇಲೆ ಶುಭಕರವಾದ ಬೃಂದಾವನ ಕ್ಷೇತ್ರಕ್ಕೆ ಬಂದು ವೇದಶರ್ಮನೆಂಬ ವಿಪ್ರನ ಮಗನಾಗಿ ಜನಿಸಿ ಶ್ರೀಧರನೆಂಬ ಹೆಸರಿನಿಂದ ಪ್ರಸಿದ್ಧನಾದನು.

೩೦. ಪಂಡಿತನಾದ ಈ ಶ್ರೀಧರನು ಶ್ರೀಮದ್ಭಾಗವತವನ್ನು ನೋಡಿ ಆ ವಿದ್ವಾಂಸರ ಅವಗಾಹನೆಗೋಸ್ಕರ ಭಾಗವತಗ್ರಂಥಕ್ಕೆ ಶುಭಕರವಾದ ಪ್ರದೀಪವೆಂಬ ಟೀಕೆಯನ್ನು ರಚಿಸಿದನು. ಇವನು ರಚಿಸಿದ ಈ ಭಾಗವತದ ವ್ಯಾಖ್ಯಾನವು ಪುರಾಣಕ್ಕಿಂತಲೂ ಅತಿಶಯವಾದ ಅರ್ಥಗಾಂಭೀರ್ಯವುಳ್ಳದಾಗಿರುವುದು.

೩೧. ಪುನಃ ಬೃಹಸ್ಪತ್ಯಾಚಾರ್ಯನು ಹೇಳುತ್ತಾನೆ—ಕಲಿಯುಗದಲ್ಲಿ ಹಿಂದೆ ಪ್ರಾಂಶುಶರ್ಮನೆಂಬ ಬ್ರಾಹ್ಮಣನಿದ್ದನು. ಇವನು ವೇದಶಾಸ್ತ್ರಪಾರಂಗತನಾಗಿ ಪ್ರತಿನಿತ್ಯವೂ ದೇವತೆಗಳನ್ನೂ ಅತಿಥಿಗಳನ್ನೂ ಪೂಜಿಸುತ್ತಿದ್ದನು.

೩೨. ಈ ಬ್ರಾಹ್ಮಣನು ಸತ್ಯವಾದಿಯೂ, ಮಹಾಸಾಧುವೂ ಆಗಿ ಕಳ್ಳತನ, ಹಿಂಸೆ ಮುಂತಾದುವಕ್ಕೆ ಪ್ರವರ್ತಿಸದೆ ಭಿಕ್ಷಾವೃತ್ತಿಯಿಂದ ಆರ್ಜಿಸಿ ತಂದು ಕುಟುಂಬ ಸಂರಕ್ಷಣೆಮಾಡುತ್ತಿದ್ದನು.

ಏಕದಾ ಪಥಿ ಭಿಕ್ಷಾರ್ಥಂ ಗಚ್ಛತಸ್ತಸ್ಯ ಭೂಪತೇಃ ।
ಮಾಯಾಕೃತ್ಯಕರೋ ಧೂರ್ತಃ ಕಲಿಸ್ತತ್ರಾಕ್ಷಿಗೋಚರಃ ॥ ೩೩ ॥

ಬಭೂವ ವಾಟಿಕಾಂ ಕೃತ್ವಾ ಕಲಿರ್ಧ್ಯಾನಮನೋಹರಾಂ ।
ತಮುವಾಚ ದ್ವಿಜೋ ಭೂತ್ವಾ ಪ್ರಾಂಶುಶರ್ಮನ್ ವಚಃ ಶೃಣು ॥ ೩೪ ॥

ಮಮೇಯಂ ವಾಟಿಕಾ ರಮ್ಯಾ ತತ್ರ ಗಚ್ಛ ಸುಖೀ ಭವ ।
ಇತಿ ವಿಪ್ರೋ ವಚಃ ಶ್ರುತ್ವಾ ವಾಟಿಕಾಂ ತಾಂ ಸಮಾಗತಃ ॥ ೩೫ ॥

ಕಲಿಸ್ತು ವಾಟಿಕಾಮಧ್ಯೇ ಗತ್ವಾ ರಮ್ಯಫಲಾನಿ ಚ ।
ತ್ರೋಟಯಿತ್ವಾ ದದೌ ತಸ್ಮೈ ಭೋಜನಾರ್ಥಂ ಮಹಾಖಲಃ ॥ ೩೬ ॥

ಪ್ರಾಂಜಲಿಃ ಪ್ರಣತೋ ಭೂತ್ವಾ ಪ್ರಾಂಶುಶರ್ಮಾಣಮಬ್ರವೀತ್ ।
ಭುಂಕ್ಷ್ವ ವಿಪ್ರ ಮಯಾ ಸಾರ್ಧಂ ಕಲಿಂದಸ್ಯ ಫಲಂ ಶುಭಂ ॥ ೩೭ ॥

---

೩೩. ಒಂದುಸಲ ಈ ಬ್ರಾಹ್ಮಣನು ಭಿಕ್ಷೆಗಾಗಿ ಬೀದಿಬೀದಿಯಲ್ಲಿ ಸಂಚರಿಸುವಾಗ, ಆ ಮೇಚ್ಛರಾಜನಿಗೆ ಮಾಯಾಕಾರ್ಯಗಳನ್ನು ನೆರವೇರಿಸಿಕೊಡುವ ಧೂರ್ತನಾದ ಕಲಿಯು ಆ ಬ್ರಾಹ್ಮಣನ ಕಣ್ಣಿಗೆ ಗೋಚರನಾದನು.

೩೪-೩೫. ಅನಂತರ ಮಾಯಾವಿಯಾದ ಕಲಿಯು, ಜನಗಳು ತಪಸ್ಸು ಮಾಡಲು ಮನೋಹರವಾಗಿರುವಂತೆ ಒಂದು ಉದ್ಯಾನವನವನ್ನು ನಿರ್ಮಿಸಿ, ಆ ಬ್ರಾಹ್ಮಣನನ್ನು ಕುರಿತು "ಎಲೈ ಪ್ರಾಂಶುಶರ್ಮನೇ ! ಕೇಳು ; ಈ ಮುಂದೆ ಕಾಣುತ್ತಿರುವ ಸುಂದರವಾದ ಉದ್ಯಾನವನವು ನನ್ನದು. ಅಲ್ಲಿ ಹೋಗಿ ನೀನು ಸುಖವಾಗಿರಬಹುದು" ಎಂದು ಹೇಳಿದನು. ಅನಂತರ ಆ ಬ್ರಾಹ್ಮಣನು ಕಲಿಯ ಈ ಮಾತನ್ನು ಕೇಳಿ ಆ ಉದ್ಯಾನವನಕ್ಕೆ ಬಂದನು.

೩೬. ಮಹಾಬಲಶಾಲಿಯಾದ ಕಲಿಯು ಆಗ ಆ ಉದ್ಯಾವನದ ಮಧ್ಯ ಪ್ರದೇಶಕ್ಕೆ ಬಂದು ಅಲ್ಲಿ ಮನೋಹರವಾದ ತಾರೆಯ ಹಣ್ಣುಗಳನ್ನು ಕಿತ್ತು ಆ ಬ್ರಾಹ್ಮಣನ ಮುಂದೆ ಇಟ್ಟನು.

೩೭. ಪುತ್ತೆ ಕೈಮುಗಿದುಕೊಂಡು ಆ ಪ್ರಾಂಶುಶರ್ಮನನ್ನು ಕುರಿತು "ಈ ಶುಭಕರವಾದ ಕಲಿಂದ ಫಲವ (ತಾರೆಯಹಣ್ಣು) ನ್ನು ನನ್ನೊಡನೆ ಭಕ್ಷಿಸು" ಎಂದು ಹೇಳಿದನು.

ಇತ್ಯುಕ್ತಃ ಸ ತು ತಂ ಪ್ರಾಹ ವಿಹಸ್ಯ ಮಧುರಸ್ವರಂ ।
ವೃಕ್ಷೇ ವಿಭೀತಕೇ ಚೈವ ಕಲಿಂದಸ್ಯ ಫಲೇ ತಥಾ ॥
ಕಲಿಃ ಪ್ರಾಪ್ತಃ ಸ್ಮೃತಃ ಪ್ರಾಜ್ಞೈಸ್ತಸ್ಮಾದ್ಗೃಹ್ಣಾಮ್ಯಹಂ ನ ಹಿ ॥ ೩೮ ॥

ಯದಿ ದತ್ತಂ ಫಲಂ ಭಕ್ತ್ಯಾ ತ್ವಯಾದ್ಯ ದ್ವಿಜಸೇವಿನಾ ।
ಶಾಲಗ್ರಾಮಾಯ ವೈ ದತ್ವಾ ಪ್ರಸಾದಂ ತದ್ಭಜಾಮ್ಯಹಂ ॥
ಶಾಲಗ್ರಾಮಃ ಸ್ವಯಂ ಬ್ರಹ್ಮ ಸಚ್ಚಿದಾನಂದವಿಗ್ರಹಃ ॥ ೩೯ ॥

ದರ್ಶನಾತ್ತಸ್ಯ ಚಾಭಕ್ಷ್ಯೋ ಭಕ್ಷ್ಯೋ ಭವತಿ ನಿಶ್ಚಿತಃ ।
ಇತಿ ಶ್ರುತ್ವಾ ಕಲಿಸ್ತತ್ರ ಲಜ್ಜಿತೋऽಭೂನ್ನಿರಾಶಕಃ ॥
ದ್ವಿಜಸ್ತು ತತ್ಫಲಂ ಗೃಹ್ಯ ಭೂಮಿಗ್ರಾಮಮುಪಾಯಯೌ ॥ ೪೦ ॥

ನೃಪತಿಸ್ತತ್ರ ಚಾಗತ್ಯ ದ್ವಿಜಮಾಹ ಪ್ರಸನ್ನಧೀಃ ।
ಕಿಂ ಗೃಹೀತಂ ತ್ವಯಾ ವಿಪ್ರ ದರ್ಶಯಾಶು ಪ್ರಿಯಂ ಕುರು ॥ ೪೧ ॥

---

೩೮. ಕಲಿಯು ಹೀಗೆ ಹೇಳಿದ ಮೇಲೆ ಆ ಬ್ರಾಹ್ಮಣನು ನಗುತ್ತಾ ಆ ಕಲಿಯನ್ನು ಕುರಿತು ಮಧುರವಾದ ಧ್ವನಿಯಿಂದ "ಎಲೈ ಪುರುಷನೇ! ತಾರೆಯಗಿಡದಲ್ಲೂ ತಾರೆಯಹಣ್ಣಿನಲ್ಲೂ ಸಹ ಕಲಿಯು ವಾಸಿಸುತ್ತಿರುವನು ಎಂದು ದೊಡ್ಡವರು ಹೇಳುವರು ಆದುದರಿಂದ ನಾನು ಅದನ್ನು ತೆಗೆದುಕೊಳ್ಳುವುದಿಲ್ಲ."

೩೯ "ನೀನು ಭಕ್ತಿಯಿಂದ ಬ್ರಾಹ್ಮಣನನ್ನು ಸತ್ಕರಿಸುವ ಉದ್ದೇಶದಿಂದ ಕೊಟ್ಟ ಫಲವನ್ನು ಸಾಲಿಗ್ರಾಮಮೂರ್ತಿಗೆ ನಿವೇದನಮಾಡಿ ಅನಂತರ ಪ್ರಸಾದವನ್ನು ನಾನು ಸೇವಿಸುತ್ತೇನೆ. ಸಾಲಿಗ್ರಾಮವೇ ಸಾಕ್ಷಾತ್ಪರಬ್ರಹ್ಮರೂಪವು. ಮತ್ತು ಸಚ್ಚಿದಾನಂದಮೂರ್ತಿಯು."

೪೦. "ಆ ಸಾಲಿಗ್ರಾಮದ ದರ್ಶನಮಾತ್ರದಿಂದ ಅಭಕ್ಷ್ಯವಾದ ಪದಾರ್ಥವೂ ಸಹ ತಿನ್ನಲು ಯೋಗ್ಯವಾದ ಭಕ್ಷ್ಯವಾಗುವುದು" ಎಂದು ಹೇಳಿದನು. ಆ ಬ್ರಾಹ್ಮಣನು ಹೀಗೆ ಹೇಳಿದುದನ್ನು ಕೇಳಿ ಕಲಿಯು ನಾಚಿಕೆಹೊಂದಿ ನಿರಾಶನಾದನು.

೪೧. ಆ ಬ್ರಾಹ್ಮಣನು ಆ ಹಣ್ಣನ್ನು ತೆಗೆದುಕೊಂಡು ಭೂಮಿಗ್ರಾಮಕ್ಕೆ ಬಂದನು. ಆ ದೇಶದ ರಾಜನು ಆ ಪ್ರಾಂಶುಶರ್ಮನಿದ್ದೆಡೆಗೆ ಬಂದು ಪ್ರಸನ್ನ ಮನಸ್ಸಿನಿಂದ ಅವನನ್ನು ಕುರಿತು "ಎಲೈ ಬ್ರಾಹ್ಮಣನೇ! ಈ ದಿವಸ ನಿನಗೆ ಭಿಕ್ಷೆಯಲ್ಲಿ ಏನು ದೊರೆಯಿತು ಎಂಬುದನ್ನು ತಿಳಿಸಿ ನನಗೆ ಸಂತೋಷವನ್ನುಂಟುಮಾಡು" ಎಂದು ಪ್ರಾರ್ಥಿಸಿದನು.

ಇತಿ ಶ್ರುತ್ವಾ ಪ್ರಾಂಶುಶರ್ಮಾ ತತ್ಫಲಂ ವತ್ಸಮುಂಡವತ್ ।
ಗೃಹೀತ್ವಾ ಪ್ರದದೌ ರಾಜ್ಞೇ ವಿಸ್ಮಿತೋ ದ್ವಿಜಸತ್ತಮಃ ॥ ೪೨ ॥

ತದಾ ತು ಸ ಕಲಿಭೂಪಃ ತಂ ವಿಪ್ರಂ ತಾಡ್ಯ ವೇತಸೈಃ ।
ಕಾರಾಗಾರೇ ಲೋಹಮಯೇ ಕೃತವಾನ್ನ್ಯಾಯಮಿತ್ರಕಃ ॥ ೪೩ ॥

ಪ್ರಾತಃಕಾಲೇ ರವೌ ಪ್ರಾಪ್ತೇ ಪ್ರಾಂಶುಶರ್ಮಾ ಸುದುಃಖಿತಃ ।
ತುಷ್ಟಾವ ಭಾಸ್ಕರಂ ದೇವಂ ಸ್ತೋತ್ರೈಃ ಋಗ್ವೇದಸಂಭವೈಃ ॥ ೪೪ ॥

ತದಾ ಪ್ರಸನ್ನೋ ಭಗವಾನ್ರವಿಃ ಸಾಕ್ಷಾತ್ಸನಾತನಃ ।
ವಿಪ್ರಸ್ಯ ಕರ್ಣಯೋರ್ವಾಕ್ಯಮುವಾಚ ನಭಸೇರಿತಂ ॥ ೪೫ ॥

ಶೃಣು ವಿಪ್ರ ಮಹಾಭಾಗ ಕಾಲರೂಪೋ ಹರಿಃ ಸ್ವಯಂ ।
ಚತುರ್ಯುಗಂ ತೇನ ಕೃತಂ ವಿಶ್ವಪಾಲಾದಿಹೇತವೇ ॥ ೪೬ ॥

---

೪೨. ಇದನ್ನು ಕೇಳಿ ಆ ಪ್ರಾಂಶುಶರ್ಮನು ಆಶ್ಚರ್ಯದಿಂದ ಕೂಡಿ ಮಕ್ಕಳ ತಲೆಯಂತೆ ದುಂಡಗಿರುವ ಆ ಕಳಿಂದಫಲವನ್ನು ತೆಗೆದು ರಾಜನಿಗೆ ಕೊಟ್ಟನು.

೪೩. ಆಗ ಕಲಿಪಕ್ಷಪಾತಿಯಾದ ನ್ಯಾಯಮಿತ್ರನೆಂಬ ಹೆಸರಿನ ಆ ರಾಜನು ಆ ಬ್ರಾಹ್ಮಣನನ್ನು ಜೊಂಡುಗಳಿಂದ ಹೊಡೆಯಿಸಿ ಲೋಹಮಯವಾದ ಕಾರಾಗಾರದಲ್ಲಿ ಬಂಧನದಲ್ಲಿಟ್ಟನು.

೪೪. ಆ ಬ್ರಾಹ್ಮಣನು ರಾತ್ರಿಯನ್ನೆಲ್ಲಾ ದುಃಖದಿಂದ ಆ ಕಾರಾಗಾರದಲ್ಲಿ ಕಳೆದು, ಬೆಳಗಾಗಿ ಸೂರ್ಯೋದಯವಾಗುತ್ತಲೆ ಸೂರ್ಯದೇವನನ್ನು ಋಗ್ವೇದಮಯ ವಾದ ಸ್ತೋತ್ರಗಳಿಂದ ಸ್ತುತಿಸಿ ಸಂತೋಷ ಪಡಿಸಿದನು.

೪೫. ಇದರಿಂದ ಸನಾತನನಾದ ಸೂರ್ಯಭಗವಂತನು ಪ್ರಸನ್ನನಾಗಿ, ಅಶರೀರ ವಾಣಿಯೊಂದು ಆ ಬ್ರಾಹ್ಮಣನ ಕಿವಿಗೆ ಕೇಳಿಸುವಂತೆ ಹೀಗೆ ಹೇಳಿದನು.

೪೬. "ಎಲೈ ಮಹಾಪುರುಷನಾದ ಬ್ರಾಹ್ಮಣನೇ ! ಕೇಳು. ಸಾಕ್ಷಾತ್ ಮಹಾವಿಷ್ಣುವೇ ಕಲಿಸ್ವರೂಪನು. ಅವನು ಜಗದ್ರಕ್ಷಣೆ ಮುಂತಾದುವುಗಳಿಗೋಸ್ಕರ ಕೃತ, ತ್ರೇತ, ದ್ವಾಪರ, ಮತ್ತು ಕಲಿ, ಎಂಬ ನಾಲ್ಕು ಯುಗಗಳನ್ನು ನಿರ್ಮಿಸಿದನು.

ಕಲಿರ್ವಿಶ್ವಸಮೂಹಾನಾಂ ಮೃತ್ಯವೇ ರಚಿತಸ್ತಥಾ ।
ಅತೋ ಘೋರೇ ಕಲೌ ಪ್ರಾಪ್ತೇ ವಿಷ್ಣುಮಾಯಾವಿನಿರ್ಮಿತಂ ॥
ಕಲಿಂಜರಂ ಚ ನಗರಂ ತತ್ಪ್ರೇಕ್ಷ್ಯ ಮುದಿತೋ ಭವ ॥ ೪೭ ॥

ಇತ್ಯುಕ್ತ್ವಾ ರಕ್ಷಣಂ ಕೃತ್ವಾ ತಸ್ಯ ವಿಪ್ರಸ್ಯ ಭಾಸ್ಕರಃ ।
ಕಲಿಂಜರೇ ಚ ನಗರೇ ಪ್ರೇಷಯಾಮಾಸ ತಂ ದ್ವಿಜಂ ॥ ೪೮ ॥

ಸಪಾದಶತವರ್ಷಂ ಚ ದ್ವಿಜಸ್ತತ್ರ ವಸನ್ರವಿಂ ।
ಆರಾಧ್ಯ ಪುತ್ರಪತ್ನೀಕೋ ರವಿಲೋಕಮುಪಾಯಯೌ ॥ ೪೯ ॥

ಸ ವೈ ಭಾದ್ರಪದೇ ಮಾಸಿ ಸೂರ್ಯೋ ಭೂತ್ವಾಯುತಾಬ್ದಕಂ ।
ಪಶ್ಚಾದ್ಬ್ರಹ್ಮ ಪುರಂ ಪ್ರಾಪ್ಯ ಪರಮಾನಂದಮಾಪ್ತವಾನ್ ॥
ಇತಿ ತೇ ಕಥಿತಂ ವಿಪ್ರ ಯಥಾ ಜೀವಸ್ತಮಬ್ರವೀತ್ ॥ ೫೦ ॥

---

೪೭. "ಈ ನಾಲ್ಕು ಯುಗಗಳಲ್ಲಿ ಕಲಿಯುಗಾಧಿಪನಾದ ಕಲಿಯು ಪ್ರಪಂಚ ಸಮುದಾಯದ ನಾಶಕ್ಕೋಸ್ಕರವೇ ನಿರ್ಮಿಸಲ್ಪಟ್ಟನು. ಆದುದರಿಂದ ಈ ಭಯಂಕರವಾದ ಕಲಿಯುಗವೊದಗಿರುವಾಗ ವಿಷ್ಣುಮಾಯೆಯಿಂದ ನಿರ್ಮಿಸಲ್ಪಟ್ಟಿರುವ ಕಲಿಂಜರವೆಂಬ ಪಟ್ಟಣಕ್ಕೆ ಹೋಗಿ ಅಲ್ಲಿ ಸಂತೋಷದಿಂದ ವಾಸಮಾಡು."

೪೮. ಎಂದು ಸೂರ್ಯದೇವನು ಹೇಳಿ ಆ ಬ್ರಾಹ್ಮಣನನ್ನು ನಿರಪಾಯವಾಗಿ ಕಲಿಂಜರ ಪಟ್ಟಣಕ್ಕೆ ಕಳುಹಿಸಿಕೊಟ್ಟನು.

೪೯. ಆ ಪ್ರಾಂಶುಶರ್ಮವಿಪ್ರನು ಕಲಿಂಜರರಾಷ್ಟ್ರದಲ್ಲಿ ನೂರಿಪ್ಪತ್ತೈದು ವರ್ಷಗಳಕಾಲ ಪತ್ನೀಪುತ್ರರೊಡನೆ ಸೂರ್ಯದೇವನನ್ನು ಆರಾಧಿಸುತ್ತಿದ್ದು ಮೃತನಾಗಿ ಸೂರ್ಯಲೋಕವನ್ನು ಪಡೆದನು.

೫೦. ಎಲೈ ಶೌನಕನೇ! ಆ ಪ್ರಾಂಶುಶರ್ಮನು ಭಾದ್ರಪದಮಾಸದಲ್ಲಿ ಸೂರ್ಯಸದೃಶನಾಗಿ ಸೂರ್ಯಲೋಕದಲ್ಲಿ ಹತ್ತು ಸಹಸ್ರವರ್ಷಗಳಕಾಲ ವಾಸಿಸಿ ಅನಂತರ ಬ್ರಹ್ಮಲೋಕಕ್ಕೆ ಹೋಗಿ ಪರಮಾನಂದಭರಿತನಾದನು. ಎಲೈ ಶೌನಕನೇ! ಬೃಹಸ್ಪತ್ಯಾಚಾರ್ಯರು ದೇವತೆಗಳಿಗೆ ಹೇಳಿದ ಈ ಕಥೆಯನ್ನು ನಿನಗೆ ನಾನು ಈ ಪ್ರಕಾರ ಹೇಳಿದೆನು.

ಆಗತ್ಯ ಭಾಸ್ಕರೋ ದೇವಃ ಪೂರ್ಣಿಮಾಯಾಂ ತು ಭಾದ್ರಕೇ ।
ಅಷ್ಟಾವಿಂಶೇ ಕಲೌ ಪ್ರಾಪ್ತೇ ಸ್ವಯಂ ಜಾತಃ ಕಲಿಂಜರೇ ॥ ೫೧ ॥

ಶಿವದತ್ತಸ್ಯ ತನಯೋ ವಿಷ್ಣುಶರ್ಮೇತಿ ವಿಶ್ರುತಃ ।
ವೇದಶಾಸ್ತ್ರಕಲಾಭಿಜ್ಞೋ ವೈಷ್ಣವೋ ದೇವಪೂಜಕಃ ॥ ೫೨ ॥

ಚತುರ್ವರ್ಣಾನ್ನರಾನ್ವಿಪ್ರ ಸಮಾಹೂಯ ಹರೇರ್ಗೃಹೇ ।
ವಚನಂ ಪ್ರಾಹ ಧರ್ಮಾತ್ಮಾ ವಿಷ್ಣುಃ ಸರ್ವೇಶ್ವರೋ ಹರಿಃ ॥ ೫೩ ॥

ಶೃಣು ತತ್ಕಾರಣಂ ಶಿಷ್ಯ ವಿಶ್ವಕಾರಣಕಾರಕಃ ।
ಭಗವಾನ್ಸಚ್ಚಿದಾನಂದಶ್ಚತುರ್ವಿಶಂತಿತತ್ತ್ವವಾನ್ ॥
ದೇವಾನ್ಸಸರ್ಜ ಲೋಕಾರ್ಥೇ ತಸ್ಮಾತ್ಸರ್ವೇಶ್ವರೋಽಭವತ್ ॥ ೫೪ ॥

---

೫೧. ಅನಂತರ ಸೂರ್ಯದೇವನು ಇಪ್ಪತ್ತೆಂಟನೆಯ ಕಲಿಯುಗದಲ್ಲಿ ಭಾದ್ರಪದ ಪೂರ್ಣಿಮಾದಿವಸ ತಾನೇ ಕಲಿಂಜರನಗರದಲ್ಲಿ ಬಂದು ಜನ್ಮವೆತ್ತುವನಾಗಿ.

೫೨. ಆ ಕಲಿಂಜರ ಪಟ್ಟಣದಲ್ಲಿದ್ದ ಶಿವದತ್ತನೆಂಬ ವೈಷ್ಣವಬ್ರಾಹ್ಮಣನ ಪತ್ನಿಯಲ್ಲಿ ಸೂರ್ಯದೇವನು ವಿಷ್ಣುಶರ್ಮನೆಂಬ ಹೆಸರಿನಿಂದ ಮಗನಾಗಿ ಜನಿಸಿ ವೇದಶಾಸ್ತ್ರಕಲೆಗಳಲ್ಲಿ ಪಂಡಿತನೂ ವಿಷ್ಣುಭಕ್ತನೂ ದೇವಪೂಜಾಧುರಂಧರನೂ ಆದನು.

೫೩. ಧರ್ಮಿಷ್ಠನಾದ ಈ ವಿಷ್ಣುಶರ್ಮನು ಚಾತುರ್ವರ್ಣ್ಯದ ಜನರನ್ನೆಲ್ಲರನ್ನೂ ವಿಷ್ಣುಮಂದಿರದಕ್ಕೆ ಕರೆಯಿಸಿ ಅವರೆಲ್ಲರನ್ನೂ ಕುರಿತು "ಎಲೈ ಶಿಷ್ಯ ಪ್ರಜೆಗಳಿರಾ! ವಿಷ್ಣುವೇ ಸರ್ವೇಶ್ವರನು. ಅದಕ್ಕೆ ಕಾರಣವನ್ನು ತಿಳಿಸುವೆನು" ಎಂದು ಈ ರೀತಿ ಹೇಳಿದನು.

೫೪. "ಜಗನ್ನಿಯಾಮಕನೂ ಸಚ್ಚಿದಾನಂದಸ್ವರೂಪನೂ ಇಪ್ಪತ್ತು ನಾಲ್ಕು ತತ್ವಯುತನೂ ಆದ ಭಗವಂತನು ಲೋಕಕಲ್ಯಾಣಕ್ಕೋಸ್ಕರ ದೇವತೆಗಳನ್ನು ಸೃಷ್ಟಿಸಿದನು. ಆದುದರಿಂದ ಅವನು ಸರ್ವೇಶ್ವರನೆನಿಸಿದನು."

ಪೂರ್ವಂ ಹಿ ಸಕಲಾನ್ದೇವಾನ್ಪೂಜಯಿತ್ವಾ ನರಃ ಶುಚಿಃ ।
ಪಶ್ಚಾಚ್ಚ ಪೂಜಯೇದ್ವಿಷ್ಣುಂ ಯಥಾ ಭೃತ್ಯಾ ನೃಪಂ ಪುನಃ ॥ ೫೫ ॥

ಇತಿ ಶ್ರುತ್ವಾ ತು ತೇ ಸರ್ವೇ ಪ್ರಶಸ್ಯ ಬಹುಧಾ ಹಿ ತಂ ।
ವಿಷ್ಣುಸ್ವಾಮೀತಿ ತನ್ನಾಮ್ನಾ ಕಥಾಂ ಚಕ್ರುಶ್ಚ ಹರ್ಷಿತಾಃ ॥ ೫೬ ॥

ಇತಿ ತೇ ಕಥಿತಂ ವಿಪ್ರ ವಿಷ್ಣುಸ್ವಾಮೀ ಯಥಾಽಭವತ್ ।
ಪುನಃ ಶೃಣು ಕಥಾಂ ರಮ್ಯಾಂ ಬೃಹಸ್ಪತಿಮುಖೇರಿತಾಂ ॥ ೫೭ ॥

॥ ಜೀವ ಉವಾಚ ॥

ಪುರಾ ಚೈತ್ರರಥೇ ದೇಶೇ ಭಗಶರ್ಮಾ ದ್ವಿಜೋಽಭವತ್ ।
ಸ್ವರ್ವೇಶ್ಯಾಮಂಜುಘೋಷಾಯಾಂ ಮುನಿಮೇಧಾವಿನಾ ಭುವಿ ॥ ೫೮ ॥

ಪಿತೃಮಾತೃಪರಿತ್ಯಕ್ತಃ ಸ ಬಾಲಃ ಶ್ರದ್ಧಯಾನ್ವಿತಃ ।
ಸೂರ್ಯಮಾರಾಧಯಾಮಾಸ ತಪಸಾ ಶತವಾರ್ಷಿಕಂ ॥ ೫೯ ॥

---

೫೫. "ರಾಜಭೃತ್ಯರು ಅಮಾತ್ಯಾದಿಗಳನ್ನು ಮೊದಲು ಸಂದರ್ಶಿಸಿ ಬಳಿಕ ರಾಜನನ್ನು ಪೂಜಿಸುವಂತೆ, ಪರಿಶುದ್ಧನಾದ ಮಾನವನು ಮೊದಲು ದೇವತೆಗಳನ್ನು ಪೂಜಿಸಿ ಅನಂತರ ಮಹಾವಿಷ್ಣುವನ್ನು ಪೂಜಿಸಬೇಕು" ಎಂದು ಹೇಳಿದನು.

೫೬. ಅಲ್ಲಿ ನೆರೆದಿದ್ದವರೆಲ್ಲರೂ ಇವನು ಹೇಳಿದುದನ್ನು ಕೇಳಿ ಈತನನ್ನು ಬಹುವಾಗಿ ಸ್ತುತಿಮಾಡಿ ಈ ವಿಷ್ಣುಶರ್ಮನನ್ನು ಸಂತೋಷದಿಂದ ವಿಷ್ಣುಸ್ವಾಮಿ ಎಂಬ ಹೆಸರಿನಿಂದ ಕರೆಯತೊಡಗಿದರು.

೫೭. ಎಲೈ ಶೌನಕನೇ! ಈರೀತಿ ವಿಷ್ಣುಸ್ವಾಮಿಯ ಕಥೆಯನ್ನು ನಿನಗೆ ತಿಳಿಸಿದೆನು. ಈಗ ಪುನಃ ಬೃಹಸ್ಪತ್ಯಾಚಾರ್ಯರು ಹೇಳಿದಂಥ ಮನೋಹರವಾದ ಮತ್ತೊಂದು ಕಥೆಯನ್ನು ಹೇಳುವೆನು ಕೇಳು ಎಂದು ಹೇಳಿದರು.

೫೮. ಬೃಹಸ್ಪತ್ಯಾಚಾರ್ಯರು ಹೇಳುತ್ತಾರೆ—ಮುನಿಮೇಧಾವಿ ಎಂಬವನಿಂದ ಸ್ವರ್ಗಲೋಕದ ವೇಶ್ಯೆಯಾದ ಮಂಜುಘೋಷೆಯಲ್ಲಿ ಜನಿಸಿದ ಭಗಶರ್ಮನೆಂಬ ಬ್ರಾಹ್ಮಣನು ಪೂರ್ವದಲ್ಲಿ ಚೈತ್ರರಥವೆಂಬ ದೇಶದಲ್ಲಿದ್ದನು.

೫೯. ಈ ಭಗಶರ್ಮನು ಚಿಕ್ಕಂದಿನಲ್ಲಿಯೇ ತಾಯಿತಂದೆಗಳಿಂದ ತ್ಯಜಿಸಲ್ಪಟ್ಟು ಬಹು ಶ್ರದ್ಧೆಯಿಂದ ನೂರುವರ್ಷಕಾಲ ತಪಸ್ಸುಮಾಡಿ ಸೂರ್ಯನನ್ನು ಪೂಜಿಸಿದನು.

**ಸೂರ್ಯಮಂಡಲಮಧ್ಯಸ್ಥಾ ಸಾವಿತ್ರೀ ನಾಮ ದೇವತಾ ।**
**ಸರ್ವಸೂರ್ಯಸ್ಯ ಜನನೀ ಕನ್ಯಾ ತನ್ಮಂಡಲಸ್ಯ ವೈ ॥ ೬೦ ॥**

**ಪ್ರಸನ್ನಾ ತಪಸಾ ತಸ್ಯ ಪ್ರಾದುರ್ಭೂತಾ ಸನಾತನೀ ।**
**ಆಶ್ವಿನೇ ಮಾಸಿ ರಾಜಾನಂ ದ್ವಿಜಂ ಚಕ್ರೇ ಚ ಮಂಡಲೇ ॥ ೬೧ ॥**

**ಲಕ್ಷವರ್ಷಸಹಸ್ರಾಣಿ ಮಾಸಿ ಮಾಸಿ ತಥಾಶ್ವಿನೇ ।**
**ಪ್ರಕಾಶಂ ಕೃತವಾನ್ವಿಪ್ರಃ ಪೂಜಿತೋ ಲೋಕವಾಸಿಭಿಃ ॥ ೬೨ ॥**

**ತ್ವಂ ಸೂರ್ಯಂ ಭಜ ದೇವೇಂದ್ರ ಸ ತೇ ಕಾರ್ಯಂ ಕರಿಷ್ಯತಿ ।**
**ಇತಿ ಶ್ರುತ್ವಾಶ್ವಿನೇ ಮಾಸಿ ಸ ರವಿರ್ದೇವಪೂಜನಾತ್ ॥ ೬೩ ॥**

**ಪ್ರತ್ಯಕ್ಷಮಗಮತ್ತತ್ರ ವಚಃ ಪ್ರಾಹ ಸುರಾನ್ಪ್ರತಿ ।**
**ಕಾನ್ಯಕುಬ್ಜೇ ಶುಭೇ ದೇಶೇ ವಾಣೀಭೂಷಣ ಇತ್ಯಹಂ ॥**
**ಭವಾಮಿ ಸತ್ಯದೇವಸ್ಯ ವಿಪ್ರಸ್ಯ ತನಯಃ ಶುಭಃ ॥ ೬೪ ॥**

---

೬೦-೬೧ ಆಗ ಸೂರ್ಯಮಂಡಲದ ಮಧ್ಯದಲ್ಲಿರುವಳೂ ಸಕಲ ಸೂರ್ಯರಿಗೂ ಉತ್ಪತ್ತಿಕಾರಣಳೂ, ಆ ಸೂರ್ಯಮಂಡಲದ ಕನ್ಯೆಯೂ, ಮತ್ತು ಸನಾತನೆಯೂ ಆದ ಸಾವಿತ್ರೀದೇವಿಯು ಈ ಹುಡುಗನ ತಪಸ್ಸಿನಿಂದ ಪ್ರಸನ್ನಳಾಗಿ ಆಶ್ವಯುಜಮಾಸದಲ್ಲಿ ಆ ಬ್ರಾಹ್ಮಣನನ್ನು ಆ ದೇಶದ ರಾಜನನ್ನಾಗಿ ಮಾಡಿದಳು.

೬೨. ರಾಜ್ಯಭಾರವಹಿಸಿದ ಈ ಬ್ರಾಹ್ಮಣನು ಒಂದುಲಕ್ಷದ ಒಂದುಸಾವಿರ ವರ್ಷ (೧,೧೦,೦೦೦) ಗಳಕಾಲ ಪ್ರತಿತಿಂಗಳಲ್ಲೂ ಮತ್ತು ಆಶ್ವಯುಜಮಾಸದಲ್ಲಿಯೂ ಸೂರ್ಯನು ಜನಗಳಿಂದ ಪೂಜಿತನಾಗಬೇಕೆಂಬುದನ್ನು ಪ್ರಕಾಶಪಡಿಸಿದನು.

೬೩. "ಆದುದರಿಂದ ಎಲೈ ದೇವೇಂದ್ರನೇ! ನೀನು ಸೂರ್ಯದೇವನನ್ನು ಭಜಿಸು. ಅವನು ನಿನ್ನ ಕಾರ್ಯವನ್ನು ನಡೆಯಿಸಿಕೊಡುವನು" ಎಂದು ಬೃಹಸ್ಪತ್ಯಾಚಾರ್ಯರು ಹೇಳಿದರು. ಆಗ ದೇವೇಂದ್ರನು ಅದರಂತೆಯೇ ಆಶ್ವಯುಜಮಾಸದಲ್ಲಿ ಸೂರ್ಯದೇವನನ್ನು ಪೂಜಿಸಿದನು. ಇದರಿಂದ ಸೂರ್ಯದೇವನು ಸಂತುಷ್ಟನಾಗಿ ಪ್ರತ್ಯಕ್ಷನಾಗಿ ದೇವತೆಗಳನ್ನು ಕುರಿತು ಮಾತಾಡುವನಾಗಿ,

೬೪. "ಮಂಗಳಕರವಾದ ಕಾನ್ಯಕುಬ್ಜದೇಶದಲ್ಲಿ ವಾಣೀಭೂಷಣನೆಂಬ ಹೆಸರಿನಿಂದ ನಾನು ಸತ್ಯದೇವನೆಂಬ ಬ್ರಾಹ್ಮಣನ ಮಗನಾಗಿ ಜನಿಸುವೆನು" ಎಂದು ಹೇಳಿದನು.

॥ ಸೂತ ಉವಾಚ ॥

ಇತ್ಯುಕ್ತ್ವಾ ಭಗವಾನ್ಸೂರ್ಯೋ ಜಾತಃ ಕಾನ್ಯಪುರೇ ಶುಭೇ ।
ಜಿತ್ವಾ ಪಾಖಂಡಿನೋ ವಿಪ್ರಾನ್ಮಾಂಸಭಕ್ಷಣತತ್ಪರಾನ್ ॥
ಛಂದೋಗ್ರಂಥಂ ಸ್ವನಾಮ್ನಾ ವೈ ಕೃತವಾನ್ದೈವತಪ್ರಿಯಃ ॥ ೬೫ ॥

ಮತ್ಸ್ಯಮಾಂಸಾಶನಾ ವಿಪ್ರಾ ಮೃಗಮೇಷಾಜಕಾಶನಾಃ ।
ಏಕೀಭೂಯ ಸಮಾಗಮ್ಯ ಚಕ್ರುಃ ಶಾಸ್ತ್ರಾರ್ಥಮುಲ್ಬಣಂ ॥ ೬೬ ॥

ಕಲಿನಾಽಥರ್ವಮಿತ್ರೇಣ ರಕ್ಷಿತಾಸ್ತೇ ದ್ವಿಜಾತಯಃ ।
ತಂ ದ್ವಿಜಂ ಚ ಪರಾಜಿತ್ಯ ಮತ್ಸ್ಯಕೇತುಂ ಚ ತದ್ಗೃಹೇ ॥ ೬೭ ॥

ಬಲಾಚ್ಚ ಸ್ತಂಭನಂ ಚಕ್ರುಸ್ತದಾ ವಿಷ್ಣುಪ್ರಿಯೋ ದ್ವಿಜಃ ।
ವೈಷ್ಣವೀಂ ಶಕ್ತಿಮಾಗಮ್ಯ ಸ್ವಮುಖಾನ್ಮೀನಖಾದಿತಾನ್ ॥ ೬೮ ॥

---

೬೫. ಸೂತಮುನಿವರ್ಯನು ಹೇಳುತ್ತಾನೆ.—ಷಡ್ಗುಣೈಶ್ವರ್ಯ ಸಂಪನ್ನನಾದ ಸೂರ್ಯದೇವನು ಈರೀತಿ ಹೇಳಿ ಅದರಂತೆ ಶುಭಕರವಾದ ಕಾನ್ಯಕುಬ್ಜನಗರದಲ್ಲಿ ಸತ್ಯದೇವನ ಮಗ ವಾಣೀಭೂಷಣನಾಗಿ ಜನಿಸಿ ಮಾಂಸಭಕ್ಷಣಾಸಕ್ತರಾದ ಪಾಷಂಡಿ ವಿಪ್ರರನ್ನು ವಾದದಲ್ಲಿ ಜಯಿಸಿ, ತನ್ನ ಹೆಸರಿನಿಂದ ಪ್ರಸಿದ್ಧವೂ, ದೈವತಪ್ರಿಯವೂ ಆದ ಛಂದೋಗ್ರಂಥವನ್ನು ರಚಿಸಿದನು.

೬೬. ಆಗ ಮೀನಿನ ಮಾಂಸಾಹಾರಿಗಳಾದ ಬ್ರಾಹ್ಮಣರೂ, ಜಿಂಕೆ, ಆಡು, ಕುರಿ ಇವುಗಳ ಮಾಂಸಭಕ್ಷರಾದ ಬ್ರಾಹ್ಮಣರೂ ಎಲ್ಲಾ ಒಗ್ಗಟ್ಟಾಗಿ ಬಂದು ಬಹು ಪ್ರಕಾರವಾಗಿ ವಾಕ್ಯಾರ್ಥಮಾಡಿ ಉಗ್ರರೀತಿಯಿಂದ ವಾದಿಸಿದರು.

೬೭. ಅಥರ್ವಕ್ಕೆ ಮಿತ್ರನಾದ ಕಲಿಯ ಪ್ರಭಾವದಿಂದ ಆ ಬ್ರಾಹ್ಮಣ ಸಂಗಡಗಳೆಲ್ಲಾ ವಾದದ ಬೆಂಬಲದಿಂದ ರಕ್ಷಿತವಾದುವು. ವಾದಕ್ಕೆ ನಿಂತಿದ್ದ ಮತ್ಸ್ಯಕೇತುವೆಂಬ ಬ್ರಾಹ್ಮಣನನ್ನು ಈ ಪಾಷಂಡಿಗಳು ಸೋಲಿಸಿ ಅವನ ಮನೆಯಲ್ಲಿ ಅವನನ್ನು ಬಲಾತ್ಕಾರದಿಂದ ಸ್ತಂಭನಮಾಡಿದರು.

೬೮. ಆಗ ವಿಷ್ಣುಪ್ರಿಯನಾದ ಆ ವಿಪ್ರನು ವೈಷ್ಣವೀಶಕ್ತಿಯನ್ನು ಧ್ಯಾನಿಸಿ ಆಹ್ವಾನಿಸಿ ಅವರು ತಮ್ಮ ಬಾಯಿಂದ ತಿಂದಿದ್ದ ಮೀನುಗಳನ್ನೆಲ್ಲಾ ಮತ್ತೆ ಬದುಕಿಸಿ ಅದನ್ನು ತೋರಿಸಿದನು.

ಸಂಜೀವ್ಯ ದರ್ಶಯಾಮಾಸ ತೇ ದೃಷ್ಟ್ವಾ ವಿಸ್ಮಿತಾಸ್ತದಾ ।
ಶಿಷ್ಯಭೂತಾಶ್ಚ ತೇ ತಸ್ಯ ವೈಷ್ಣವಂ ಮತಮಾಗಮನ್ ॥ ೬೯ ॥

॥ ಜೀವ ಉವಾಚ ॥

ಕದಾಚಿತ್ಸರಯೂತೀರೇ ದೇವಯಾಜೀ ದ್ವಿಜೋಽಭವತ್ ।
ಸರ್ವದೇವಪರೋ ನಿತ್ಯಂ ವೇದಪಾಠಪರಾಯಣಃ ॥ ೭೦ ॥

ತತ್ಸುತಸ್ತು ಮೃತಿಂ ಪ್ರಾಪ್ತೋ ಜನ್ಮಮಾತ್ರೇ ಹಿ ದಾರುಣೇ ।
ತದಾ ತು ಸ ದ್ವಿಜಃ ಶ್ರುತ್ವಾ ಸೂರ್ಯದೇವಮತೋಷಯತ್ ॥ ೭೧ ॥

ಜಿಜೀವ ತತ್ಪ್ರಸಾದೇನ ವಿವಸ್ವಾನ್ನಾಮ ಚಾಽಭವತ್ ।
ಷೋಡಶಾಬ್ದವಪುರ್ಭೂತ್ವಾ ಸರ್ವವಿದ್ಯಾವಿಶಾರದಃ ॥ ೭೨ ॥

ಅಪತ್ಯಾರ್ಥೇ ಧರ್ಮಪರಃ ಸೂರ್ಯವ್ರತಪರಾಯಣಃ ।
ಶಿವರಾತ್ರಿದಿನೇ ಪ್ರಾಪ್ತೇ ತತ್ಪತ್ನೀ ಭೂಷಣಪ್ರಿಯಾ ॥ ೭೩ ॥

---

೬೯. ಇದನ್ನು ನೋಡಿ ಆ ಪಾಷಂಡಿಗಳೆಲ್ಲರೂ ಬಹಳ ಆಶ್ಚರ್ಯಚಕಿತರಾಗಿ ಅವನ ಶಿಷ್ಯರಾಗಿ ವೈಷ್ಣವಮತವನ್ನು ಅವಲಂಬಿಸಿದರು.

೭೦. ಬೃಹಸ್ಪತ್ಯಾಚಾರ್ಯನು ಹೇಳುತ್ತಾನೆ—ಹಿಂದೆ ಒಂದುಕಾಲದಲ್ಲಿ ಸರಯೂ ನದಿಯದಡದಲ್ಲಿ ದೇವಯಾಜೀ ಎಂಬ ಬ್ರಾಹ್ಮಣನಿದ್ದನು. ಅವನು ಸಕಲ ದೇವತೆಗಳನ್ನೂ ಪೂಜಿಸುವುದರಲ್ಲಿ ತತ್ಪರನಾಗಿ ಯಾವಾಗಲೂ ವೇದಪಠನಮಾಡುತ್ತಿದ್ದನು.

೭೧. ಇವನಿಗೆ ಒಬ್ಬ ಪುತ್ರನು ಜನಿಸಿದನು. ಆದರೆ ಅವನು ಹುಟ್ಟಿದಕೂಡಲೇ ಮೃತನಾದನು. ಈ ಭಯಂಕರವಾದ ಸನ್ನಿವೇಶವನ್ನು ನೋಡಿ ಆ ಬ್ರಾಹ್ಮಣನು ಖಿನ್ನನಾಗಿ ಸೂರ್ಯದೇವನನ್ನು ಸ್ತೋತ್ರಮಾಡಿ ಪೂಜಿಸಿದನು.

೭೨. ಸೂರ್ಯದೇವನು ಇದರಿಂದ ಪ್ರಸನ್ನನಾಗಿ ಆ ಮಗುವನ್ನು ಬದುಕಿಸಿದನು. ಅನಂತರ ಆ ಮಗುವಿಗೆ ವಿವಸ್ವಾನ್ ಎಂದು ಹೆಸರಿಟ್ಟನು. ಈ ಬಾಲಕನು ಹದಿನಾರುವರ್ಷದವನಾಗಿ ಸಕಲವಿದ್ಯಾನಿಪುಣನಾದನು.

೭೩-೭೪. ಬಳಿಕ ಈ ವಿವಸ್ವಂತನು ಪುತ್ರಪ್ರಾಪ್ತಿಗೋಸ್ಕರವಾಗಿ ಧರ್ಮಾಸಕ್ತನೂ, ಸೂರ್ಯನನ್ನು ಪೂಜಿಸುವುದರಲ್ಲಿ ಆಸಕ್ತನೂ ಆಗಿ, ಸೂರ್ಯದೇವನ ಸೇವೆ

**ಸುಶೀಲಾ ನಾಮ ವಿಖ್ಯಾತಾ ಪತಿಸೇವಾರ್ಥಮಾಗತಾ ।**
**ಸ ವ್ರತೀ ರುದ್ರದೇವಸ್ಯ ದೃಷ್ಟ್ವಾ ತಾಂ ಮಧುರಾನನಾಂ ॥ ೨೪ ॥**

**ಬಲಾದ್ಗೃಹೀತ್ವಾ ತು ನಿಶಿ ಬುಭುಜೇ ಸ್ಮರವಿಹ್ವಲಃ ।**
**ಮೈಥುನಸ್ಯೈವ ದೋಷೇಣ ತಸ್ಯ ಕುಷ್ಠೋ ಮಹಾನಭೂತ್ ॥ ೨೫ ॥**

**ಲಿಂಗೇಂದ್ರಿಯಂ ಚ ಪತಿತಂ ಗುದಭ್ರಷ್ಟೋ ಮಹಾಂಗರುಕ್ ।**
**ಉಪದೇಶೇನ ಕೇನಾಪಿ ರವಿವಾರಸ್ಯ ವೈ ವ್ರತಂ ॥ ೨೬ ॥**

**ಸ ಚಕ್ರೇ ದ್ವಾದಶಂ ಪ್ರೇಮ್ಣಾ ನಿರಾಹಾರೋ ಯತೇಂದ್ರಿಯಃ ।**
**ತೇನ ವ್ರತಪ್ರಭಾವೇಣ ಸರ್ವಪೀಡಾ ಲಯಂ ಗತಾಃ ॥ ೨೭ ॥**

**ತದಾ ಶ್ರದ್ಧಾ ರವೌ ಪ್ರಾಪ್ತಾ ಪ್ರತ್ಯಹಂ ಸ ದ್ವಿಜೋತ್ತಮಃ ।**
**ಆದಿತ್ಯಹೃದಯಂ ಜಪ್ತ್ವಾ ಕಾಮರೂಪೋ ದ್ವಿಜೋಽಭವತ್ ॥ ೨೮ ॥**

---

ಮಾಡುತ್ತಿದ್ದನು. ಇವನಿಗೆ ಅಲಂಕಾರಪ್ರಿಯೆಯಾದ ಸುಶೀಲೆಯೆಂಬ ಪತ್ನಿ ಇದ್ದಳು. ಇವಳು ಶಿವರಾತ್ರೆಯದಿವಸ ಪತಿಸೇವೆಮಾಡುವುದಕ್ಕಾಗಿ ಆತನ ಸಮೀಪಕ್ಕೆ ಬಂದಳು.

೨೫. ರುದ್ರದೇವನ ವ್ರತವನ್ನು ಆಚರಿಸುತ್ತಿದ್ದ ಈ ವಿವಸ್ವಂತನು ಕಾಮ ಪೀಡಿತನಾಗಿ ಅರ್ಧರಾತ್ರಿಯಲ್ಲಿ ಸುಂದರಿಯಾದ ತನ್ನ ಪತ್ನಿಯನ್ನು ಬಲಾತ್ಕಾರದಿಂದ ಸೆಳೆದು ಅವಳಲ್ಲಿ ಭೋಗಿಸಿದನು.

೨೬. ಅಂತಹ ದಿನ ಈರೀತಿ ವ್ರತವನ್ನತಿಕ್ರಮಿಸಿ ಸ್ತ್ರೀಸಂಗಮಾಡಿದ ದೋಷ ದಿಂದ ಅವನಿಗೆ ಅದ್ಭುತವಾದ ಕುಷ್ಠರೋಗಪ್ರಾಪ್ತಿಯಾಯ್ತು. ಅಲ್ಲದೆ ಲಿಂಗೇಂದ್ರಿಯವು ಬಿದ್ದುಹೋಯ್ತು, ಗುದಪ್ರದೇಶದಲ್ಲಿ ಮಹಾ ಅಂಗರೋಗವ್ರಣವುಂಟಾಯಿತು.

೨೭. ಹೀಗಾಗಲು ಆ ವಿಸ್ವಂತನು ದೊಡ್ಡವರ ಉಪದೇಶದಿಂದ ಭಾನುವಾರ ವ್ರತವನ್ನು ಹಿಡಿದು, ನಿರಾಹಾರನಾಗಿ ಪ್ರೀತಿಯಿಂದ ಹನ್ನೆರಡು ಭಾನುವಾರ ಜಿತೇಂದ್ರಿಯನಾಗಿ ಆಚರಿಸಿದನು. ಈ ವ್ರತದ ಮಹಿಮೆಯಿಂದ ಇವನಿಗೆ ಉಂಟಾಗಿದ್ದ ದುಃಖಗಳೆಲ್ಲವೂ ನಿವಾರಣೆಯಾದುವು.

೨೮. ಆಗ ವಿವಸ್ವಂತನಿಗೆ ಸೂರ್ಯದೇವನಲ್ಲಿ ನಂಬಿಕೆಯುಂಟಾಯಿತು. ಅನಂತರ ಆ ಬ್ರಾಹ್ಮಣೋತ್ತಮನು ಪ್ರತಿದಿನವೂ ಆದಿತ್ಯಹೃದಯಮಂತ್ರವನ್ನು ಜಪಿಸಿ ಮನ್ಮಥನಂತೆ ಸುಂದರವಾದ ರೂಪನ್ನು ಪಡೆದನು.

ನಾರೀಭಿರ್ಭರ್ತ್ಸಿತಃ ಪೂರ್ವಂ ಸೋಽಥ ಕಾಮಿನೀಯಾಚಿತಃ ।
ಬ್ರಹ್ಮಚರ್ಯವ್ರತಂ ಕೃತ್ವಾ ಬ್ರಹ್ಮಧ್ಯಾನಪರೋಽಭವತ್ ॥ ೭೯ ॥

ಶತಾಯುರ್ಬ್ರಾಹ್ಮಣೋ ಭೂತ್ವಾ ಜ್ಞಾನವಾನ್ರೋಗವರ್ಜಿತಃ ।
ತ್ಯಕ್ತ್ವಾ ಪ್ರಾಣಾನ್ರವಿರ್ಭೂತ್ವಾ ಸೂರ್ಯಮಂಡಲಮಧ್ಯಗಾತ್ ॥ ೮೦ ॥

ಕಾರ್ತಿಕೇ ಮಾಸಿ ಲಬ್ಧ್ವಾಬ್ದಂ ಪ್ರಕಾಶಂ ಕೃತವಾನ್ನಭಃ ।
ತಂ ಚ ಸೂರ್ಯಂ ಮಹೇಂದ್ರಸ್ತ್ವಂ ಪೂಜಯಾಶು ಸುರೈಃ ಸಹ ॥ ೮೧ ॥

॥ ಸೂತ ಉವಾಚ ॥

ಇತಿ ಶ್ರುತ್ವಾ ಮಹೇಂದ್ರಸ್ತು ಮಾಸಮಾತ್ರಂ ಹಿ ಭಾಸ್ಕರಂ ।
ಪೂಜಯಿತ್ವಾ ವಿಧಾನೇನ ಪೂರ್ಣಿಮಾಯಾಂ ದದರ್ಶ ಹ ॥ ೮೨ ॥

---

೭೯. ಹಿಂದೆ ಇವನು ಕುಷ್ಠರೋಗವನ್ನು ಹೊಂದಿದ್ದಾಗ ಇವನನ್ನು ತಿರಸ್ಕರಿಸಿದ್ದ ಸ್ತ್ರೀಯರೆಲ್ಲರೂ ಈಗ ಇವನೊಡನೆ ವಿಹರಿಸಲು ತಾವಾಗಿಯೇ ಅಪೇಕ್ಷಿಸಿದರು. ಆದರೆ ಇವನು ಅದಕ್ಕೆ ಸಮ್ಮತಿಸದೆ ಬ್ರಹ್ಮಚರ್ಯವ್ರತವನ್ನು ಆಚರಿಸಿ ಬ್ರಹ್ಮಧ್ಯಾನಪರನಾದನು.

೮೦. ಇದರಿಂದ ಈ ಬ್ರಾಹ್ಮಣೋತ್ತಮನು ಜ್ಞಾನಿಯೂ, ರೋಗಹೀನನೂ ಆಗಿ, ನೂರುವರ್ಷಗಳಕಾಲ ಭೂಮಂಡಲದಲ್ಲಿದ್ದು ಅನಂತರ ಮೃತನಾಗಿ ಸೂರ್ಯಮಂಡಲವನ್ನು ಪ್ರವೇಶಿಸಿ ಸಾಕ್ಷಾತ್ ಸೂರ್ಯನೇ ಆದನು.

೮೧. ಈ ವಿವಸ್ವಂತನು ಕಾರ್ತಿಕಮಾಸದಲ್ಲಿ ಸೂರ್ಯಮಂಡಲದಲ್ಲಿ ಪ್ರವೇಶಿಸಿ ಒಂದುವರ್ಷಕಾಲ ತಾನೂ ಸೂರ್ಯಪದವಿಯನ್ನು ಅನುಭವಿಸಿ ಅಂತರಿಕ್ಷವನ್ನು ಪ್ರಕಾಶಗೊಳಿಸಿದನು. “ಎಲೈ ದೇವೇಂದ್ರನೇ! ನೀನು ಆ ಸೂರ್ಯನನ್ನು ದೇವತೆಗಳೊಡಗೂಡಿ ಆರಾಧಿಸಿ ಇಷ್ಟಾರ್ಥವನ್ನು ಪಡೆ” ಎಂದು ಹೇಳಿದನು.

೮೨. ಸೂತಮುನಿವರ್ಯನು ಕಥೆಯನ್ನು ಮುಂದುವರಿಸುತ್ತಾನೆ—ಬೃಹಸ್ಪತ್ಯಾಚಾರ್ಯರು ಹೇಳಿದಂತೆ ಮಹೇಂದ್ರನು ಸೂರ್ಯದೇವನನ್ನು ಹೀಗೆ ಒಂದುತಿಂಗಳಕಾಲ ಕ್ರಮವಾಗಿ ಪೂಜಿಸಿ ಪೂರ್ಣಿಮಾ ದಿವಸ ಅವನನ್ನು ದರ್ಶನಮಾಡಿದನು.

ಉವಾಚ ಶಕ್ರಂ ಸ ರವಿರ್ದೇವಕಾರ್ಯಂ ಕರೋಮ್ಯಹಂ ।
ಭಟ್ಟೈರ್ವಿದ್ಯಾಮಯೈರ್ಧೂರ್ತೈಃ ಸೂತ್ರಪಾಠಶ್ಚ ಖಂಡಿತಃ ॥ ೮೩ ॥

ಧಾತುಪಾಠೋಽನ್ಯಪಠಿತೋ ಭ್ರಂಶಾರ್ಥಾಃ ಸ್ವರವರ್ಣಕಾಃ ।
ಜಿತ್ವಾ ತಾನ್ಭಟ್ಟಪಾಷಂಡಾನ್ವೇದಮುದ್ಧಾರಯಾಮಿ ಭೋಃ ॥ ೮೪ ॥

ಇತ್ಯುಕ್ತ್ವಾ ಸ ಗತಃ ಕಾಶ್ಯಾಂ ಗೇಹೇ ವೈ ವೇದಶರ್ಮಣಃ ।
ದೀಕ್ಷಿತಾನ್ವಯಭೂತಸ್ಯ ನಾಮ್ನಾ ಕಾರ್ಯಗುಣೋಽಭವತ್ ॥ ೮೫ ॥

ದ್ವಾದಶಾಬ್ದವಪುರ್ಭೂತ್ವಾ ಸರ್ವಶಾಸ್ತ್ರವಿಶಾರದಃ ।
ಶಿವಮಾರಾಧಯಾಮಾಸ ವಿಶ್ವನಾಥಂ ಶಿವಾಪ್ರಿಯಂ ॥ ೮೬ ॥

---

೮೩. ಸೂರ್ಯದೇವನು ಇಂದ್ರನು ಮಾಡಿದ ಸ್ತುತಿ ಪೂಜಾದಿಗಳಿಗೆ ಪ್ರಸನ್ನನಾಗಿ ಇಂದ್ರನನ್ನು ಕುರಿತು “ಎಲೈ ದೇವರಾಜನೇ! ನಾನು ದೇವತೆಗಳ ಕಾರ್ಯವನ್ನು ನೆರವೇರಿಸುವೆನು. ವಿದ್ಯಾವಂತರಾದ ಕೆಲವು ವಾಚಕಭಟ್ಟರು ಪಾಣಿನೀಯ ಸೂತ್ರ ಪಾಠಗಳನ್ನು ಖಂಡಿಸಿರುವರು.

೮೪. ಪಾಣಿನಿ ಹೇಳಿದ ಧಾತುಪಾಠವನ್ನು ಬಿಟ್ಟು ಬೇರೆ ಧಾತುಪಾಠವನ್ನು ಓದುತ್ತಿರುವರು. ಸ್ವರ ವರ್ಣ ಇವುಗಳು ವ್ಯತ್ಯಾಸವಾಗಿ ವಿರುದ್ಧಾರ್ಥವುಂಟುಮಾಡುತ್ತಿವೆ ಆದ್ದರಿಂದ ನಾನು ಭೂಮಿಯಲ್ಲಿ ಅವತರಿಸಿ ಈ ಪಾಷಂಡರಾದ ಭಟ್ಟರನ್ನು ಜಯಿಸಿ ವೇದಗಳನ್ನು ಉದ್ಧಾರಮಾಡುವೆನು.”

೮೫. ಎಂದು ಹೇಳಿ ಸೂರ್ಯನು ಕಾಶಿಯಲ್ಲಿ ದೀಕ್ಷಿತವಂಶಸಂಭೂತನಾದ ವೇದಶರ್ಮನ ಮನೆಯಲ್ಲಿ ಕಾರ್ಯಗುಣನೆಂಬ ಹೆಸರಿನಿಂದ ಅವನ ಪುತ್ರನಾಗಿ ಜನಿಸಿದನು.

೮೬. ಈ ಕಾರ್ಯಗುಣನು ಹನ್ನೆರಡು ವರ್ಷದವನಾಗಿದ್ದಾಗಲೇ ಸಕಲಶಾಸ್ತ್ರಗಳಲ್ಲೂ ಪಾಂಡಿತ್ಯವನ್ನು ಪಡೆದು ಪಾರ್ವತೀಪತಿಯೂ ಜಗದೊಡನೆಯೂ ಆದ ಪರಮೇಶ್ವರನನ್ನು ವಿಧಿವಿಧಾನದಿಂದ ಪೂಜಿಸಿದನು.

ತ್ರಿವರ್ಷಾಂತೇ ಚ ಭಗವಾಂಸ್ತಸ್ಮೈ ಜ್ಞಾನಂ ಮಹದ್ದದೌ ।
ತಸ್ಯ ಜ್ಞಾನಪ್ರಭಾವೇಣ ವ್ಯಕ್ತಮವ್ಯಕ್ತಮುತ್ತಮಂ ॥ ೮೭ ॥

ಜ್ಞಾತಂ ಕಾರ್ಯಗುಣೇನೈವ ದೀಕ್ಷಿತೇನ ತದಾ ಹೃದಿ ।
ಅವ್ಯಕ್ತೇ ತು ಯದಾ ಬುದ್ಧಿಃ ಸಾ ವಿದ್ಯಾ ದ್ವಾದಶಾಂಗಿನೀ ॥ ೮೮ ॥

ವ್ಯಕ್ತೇಽಹಂಕಾರಭೂತೇ ಚ ಬುದ್ಧಿರ್ಜ್ಞೇಯಾ ಬುಧೈರಜಾ ।
ಅವಿದ್ಯಾ ನಾಮ ವಿಖ್ಯಾತಾ ಷೋಡಶಾಂಗಸ್ವರೂಪಿಣೀ ॥ ೮೯ ॥

ಅವ್ಯಕ್ತಂ ತು ಪರಂ ಬ್ರಹ್ಮ ವ್ಯಕ್ತಂ ಶಬ್ದಮಯಂ ಸ್ಮೃತಂ ।
ಅಹಂಕಾರೋ ಲೋಕಕರೋ ಹಿ ವ್ಯಕ್ತೋಽಷ್ಟದಶಾಂಗಕಃ ॥ ೯೦ ॥

ವೃಷರೂಪಧರೋ ಮುಖ್ಯೋ ನಂದಿಯಾನಃ ಸ್ಮೃತೋ ಬುಧೈಃ ।
ಶೃಂಗಾಣಿ ತಸ್ಯ ಚತ್ವಾರಿ ತ್ರಿಪಾದೋ ದ್ವಿಶಿರಾ ವೃಷಃ ॥ ೯೧ ॥

---

೮೭-೮೮. ಈ ರೀತಿ ಮೂರುವರ್ಷ ಆಚರಿಸಲು ಭಗವಂತನಾದ ಈಶ್ವರನು ಆ ಕಾರ್ಯಗುಣನಿಗೆ ಒಳ್ಳೆಯ ಜ್ಞಾನವನ್ನು ಕರುಣಿಸಿದನು. ಆ ಜ್ಞಾನಮಹಿಮೆಯಿಂದ ಕಾರ್ಯಗುಣನಿಗೆ ಶ್ರೇಷ್ಠವಾದ ವ್ಯಕ್ತ ಅವ್ಯಕ್ತಸ್ವರೂಪಗಳು ತಿಳಿದುವು. ಬುದ್ಧಿಯು ಮನಸ್ಸಿನೊಡನೆ ಸೇರಿ ಅವ್ಯಕ್ತಸ್ವರೂಪದಲ್ಲಿದ್ದಾಗ ಅದೇ ವಿದ್ಯೆಯೆನಿಸಿ ಹನ್ನೆರಡು ವಿಭಾಗಗಳಿಂದ ಕೂಡಿರುವುದು.

೮೯. ಮನಸ್ಸು ವ್ಯಕ್ತಸ್ವರೂಪವನ್ನು ತಾಳಿದಾಗ, ಅಹಂಕಾರಸ್ವರೂಪವಾದ ಈ ವ್ಯಕ್ತಜ್ಞಾನವು, ನಿತ್ಯವೂ ಅವಿದ್ಯೆ ಎಂಬ ಹೆಸರಿನಿಂದ ಪ್ರಸಿದ್ಧಿ ಪಡೆದು ಹದಿನಾರು ಅವಯವಗಳನ್ನು ಹೊಂದುತ್ತದೆ.

೯೦. ಅವ್ಯಕ್ತವು ಸಾಕ್ಷಾತ್ ಪರಬ್ರಹ್ಮಸ್ವರೂಪವು. ವ್ಯಕ್ತವು ಶಬ್ದಸ್ವರೂಪವು ಎಂದು ಹೇಳಿದೆ. ಅಹಂಕಾರಸ್ವರೂಪವೂ ಲೋಕವ್ಯವಹಾರೋಪಯೋಗಿಯೂ ಆದ ಈ ವ್ಯಕ್ತವು ಹದಿನೆಂಟು ಅವಯವಗಳುಳ್ಳದ್ದು.

೯೧. ಈ ವ್ಯಕ್ತವೇ ವೃಷಭರೂಪವನ್ನು ಧರಿಸಿದಾಗ ಶ್ರೇಷ್ಠನಾದ ನಂದಿಯಾನನೆಂದು ಪಂಡಿತರು ಹೇಳುವರು. ಈ ನಂದಿಯಾನನು ನಾಲ್ಕು ಕೊಂಬುಗಳೂ, ಮೂರುಕಾಲುಗಳೂ, ಎರಡು ತಲೆಗಳೂ ಉಳ್ಳ ವೃಷಭರೂಪಿಯಾಗಿದ್ದಾನೆ.

**ಸಪ್ತಹಸ್ತಸ್ತ್ರಿಧಾ ಬದ್ಧೋ ನಿತ್ಯಶುದ್ಧೋ ಮುಖೇ ಸ್ಥಿತಃ ।**
**ಸುಬಂತಶ್ಚ ತಿಙನ್ತಶ್ಚ ಕೃದಂತಶ್ಚಾವ್ಯಯಸ್ತಥಾ ॥ ೨೨ ॥**

**ದ್ವಾದ್ವೌ ಶೃಂಗೌ ಚ ಶಿರಸೋರ್ನಂದಿಯಾನಸ್ಯ ವೈ ಸ್ಮೃತೌ ।**
**ಭೂತಂ ಭವ್ಯಂ ಭವಚ್ಚೈವ ತ್ರಯಃ ಪಾದಾ ಹಿ ತಸ್ಯ ವೈ ॥ ೯೩ ॥**

**ರೂಢಿಶ್ಚ ಯೋಗರೂಢಿಶ್ಚ ಶಬ್ದೌ ತಸ್ಯ ಶಿರೋದ್ವಯಂ ।**
**ಕರ್ತಾ ಕರ್ಮ ಚ ಕರಣಂ ಸಂಪ್ರದಾನಂ ವಿಭಾಗತಃ ॥ ೯೪ ॥**

**ಸಂಬಂಧಶ್ಚಾಧಿಕಾರಶ್ಚ ಭುಜಾಸ್ತಸ್ಯ ವೃಷಸ್ಯ ವೈ ।**
**ವಾಕ್ಯಂ ಸ್ವರಾನ್ವಿತಂ ಜ್ಞೇಯಂ ವಿಭಕ್ತ್ಯಂತಂ ಪದಂ ಸ್ಮೃತಂ ॥ ೯೫ ॥**

**ತಾಭ್ಯಾಂ ಬದ್ಧಶ್ಚ ಸ ವೃಷೋ ನಂದಿಯಾನಾಯ ತೇ ನಮಃ ।**
**ತಸ್ಯೋಪರಿ ಸ್ಥಿತಂ ನಿತ್ಯಮವ್ಯಕ್ತಂ ಲಿಂಗರೂಪಿ ಯತ್ ॥ ೯೬ ॥**

---

೯೨. ಏಳು ಹಸ್ತ (ತೋಳು) ಗಳುಳ್ಳವನೂ, ಮೂರರಿಂದ ಬಂಧಿಸಲ್ಪಟ್ಟವನೂ, ನಿತ್ಯಶುದ್ಧನೂ ಆಗಿರುವನು. ಎರಡು ಮುಖದಲ್ಲಿ ಸುಬಂತ, ತಿಙಂತ, ಕೃದಂತ, ಮತ್ತು ಅವ್ಯಯ ಇವುಗಳು ಇರುವವು.

೯೩. ಒಂದು (ಮುಖಕ್ಕೆ) ತಲೆಗೆ ಎರಡು ಕೊಂಬುಗಳಂತೆ ಈ ಸುಬಂತಾದಿಗಳು ನಾಲ್ಕೂ ಎರಡು ತಲೆಗಳ ಮೇಲಿರುವ ನಾಲ್ಕು ಕೊಂಬುಗಳ ಸ್ವರೂಪವಾಗಿರುವವು. ಭೂತ, ಭವಿಷ್ಯತ್, ವರ್ತಮಾನ ಈ ಮೂರುಕಾಲಗಳೇ ನಂದಿಯಾನನ ಮೂರು ಪಾದಗಳಾಗಿವೆ.

೯೪. ರೂಢಿ ಯೋಗರೂಢಿ ಎಂಬ ಎರಡು ಶಬ್ದಗಳೇ ಇವನ ಎರಡು ತಲೆಗಳು. ಕರ್ತೃ, ಕರ್ಮ, ಕರಣ, ಸಂಪ್ರದಾನ (ವಿಭಾಗ), ಅಪಾದಾನ, ಸಂಬಂಧ, ಅಧಿಕರಣ ಎಂಬ ಈ ಏಳೂ ಆ ವೃಷಭರೂಪಿಯಾದ ನಂದಿಯಾನನ ಏಳು ಭುಜಗಳು.

೯೫. ವಾಕ್ಯವು ಸ್ವರದಿಂದ ಕೂಡಿರುವುದು. ವಿಭಕ್ತಿ ಪ್ರತ್ಯಯಾಂತವಾದುದೇ ಪದವೆನಿಸುವುದು. ಈ ಪದ ವಾಕ್ಯಗಳಿಂದ ಈ ವೃಷಭವು ಬಂಧಿಸಲ್ಪಟ್ಟಿರುವುದು.

೯೬. ಇಂತಹ ವೃಷರೂಪಿಯಾದ ಎಲೈ ನಂದಿಯಾನನೇ! ನಿನಗೆ ನಮಸ್ಕಾರ. ಈ ವೃಷರೂಪಿಯಾದ ನಂದಿಯಾನನ ಮೇಲೆ ನಿತ್ಯವೂ ಲಿಂಗರೂಪವಾದ ಅವ್ಯಕ್ತವು ಕೂತಿರುವುದು.

ಜಾತಶ್ಚ ವೃಷಲಿಂಗಾಭ್ಯಾಂ ಸೋಽಹಂಕಾರೋ ಹರಿಃ ಸ್ವಯಂ ।
ನಾರಾಯಣಃ ಷೋಡಶಾತ್ಮಾ ಬಹುಮೂರ್ತಿರಮೂರ್ತಿಕಃ ॥ ೯೭ ॥

ಇತಿ ಜ್ಞಾನಂ ಹೃದಿ ಪ್ರಾಪ್ಯ ತದಾ ಸಿದ್ಧಾಂತಕೌಮುದೀಂ ।
ಜಿತ್ವಾ ಭಟ್ಟಾಂಶ್ಚ ಕಾರಾಶು ಭಟ್ಟೋಜಿಃ ಪ್ರಶ್ರುತೋಽಭವತ್ ॥ ೯೮ ॥

॥ ಜೀವ ಉವಾಚ ॥

ಪುರಾ ಕಾಂಚೀಪುರೇ ರಮ್ಯೇ ಗಣಕೋ ಬ್ರಾಹ್ಮಣೋತ್ತಮಃ ।
ಪುರೋಧಾಃ ಸತ್ಯದತ್ತಸ್ಯ ರಾಜ್ಞೋ ವೇದಪರಸ್ಯ ವೈ ॥ ೯೯ ॥

ಏಕದಾ ಗಣಕೋ ಧೀಮಾನ್ಸತ್ಯದತ್ತಮುವಾಚ ಹ ।
ಮುಹೂರ್ತೋಽಭಿಜಿದಾಖ್ಯೋಽಯಂ ಪುಷ್ಯನಕ್ಷತ್ರಸಂಯುತಃ ॥
ಹಾಟಂ ಕುರು ಮಹಾರಾಜ ಸಾಂಪ್ರತಂ ಬಹುವೃತ್ತಿದಂ ॥ ೧೦೦ ॥

---

೯೭. ಈ ವೃಷಭ(ಮತ್ತು ಲಿಂಗ (ಎಂದರೆ ವ್ಯಕ್ತ ಅವ್ಯಕ್ತ) ಗಳಿಂದ ಅಹಂಕಾರ ಸ್ವರೂಪನಾದ ಮಹಾವಿಷ್ಣುವು ಜನಿಸಿದನು. ಇವನೇ ಷೋಡಶಸ್ವರೂಪವುಳ್ಳವನೂ ಅನೇಕ ಮೂರ್ತಿಯುಳ್ಳವನೂ, ಮತ್ತು ಅಮೂರ್ತಿಯೂ ಎನಿಸಿ ನಾರಾಯಣನೆಂದು ಪ್ರಸಿದ್ಧನಾಗಿರುವನು.

೯೮. ಈರೀತಿಯಾದ ಜ್ಞಾನವನ್ನು ಮಹೇಶ್ವರನಿಂದ ಪಡೆದು ಪಾಷಂಡರಾದ ಭಟ್ಟರನ್ನೆಲ್ಲಾ ಜಯಿಸಿ "ಸಿದ್ಧಾಂತಕೌಮುದೀ" ಎಂಬ ಗ್ರಂಥವನ್ನು ರಚಿಸಿದನು. ಈ ಕಾರ್ಯಗುಣನು ಭಟ್ಟರನ್ನು ಜಯಿಸಿದುದರಿಂದ ಭಟ್ಟೋಜಿಯೆಂಬ ಹೆಸರೇ ಪ್ರಸಿದ್ಧಿಗೆ ಬಂದಿತು.

೯೯. ಹಿಂದೆ ಸುಂದರವಾದ ಕಾಂಚೀಪಟ್ಟಣದಲ್ಲಿ ಬ್ರಾಹ್ಮಣೋತ್ತಮನಾದ ಒಬ್ಬ ಜೋಯಿಸನಿದ್ದನು. ಅವನು ವೇದಗಳಲ್ಲಿ ಆಸಕ್ತನಾದ ಸತ್ಯದತ್ತನೆಂಬ ರಾಜನಿಗೆ ಮಂತ್ರಿಯಾಗಿದ್ದನು.

೧೦೦. ಒಂದು ದಿವಸ ಬುದ್ಧಿಶಾಲಿಯಾದ ಆ ಜೋಯಿಸನು ರಾಜನಾದ ಸತ್ಯದತ್ತನನ್ನು ಕುರಿತು " ಎಲೈ ರಾಜನೇ ! ಇದು ಪುಷ್ಯನಕ್ಷತ್ರಯುಕ್ತವಾದ ಅಭಿಜಿನ್ಮುಹೂರ್ತವಾಗಿದೆ. ಈ ಶುಭಯೋಗದಲ್ಲಿ ಅನೇಕ ವ್ಯಾಪಾರಗಳು ನಡೆಯಲು ಅನುಕೂಲಿಸುವಂತೆ ಒಂದು ಜಾತ್ರೆಯನ್ನು ನಡೆಯಿಸು " ಎಂದನು.

ಇತಿ ಶ್ರುತ್ವಾ ತಥಾ ಕೃತ್ವಾ ಡಿಂಡಿಮಧ್ವನಿನಾ ಪುರೇ ।
ನರಾನಾಜ್ಞಾಪಯಾಮಾಸ ತಚ್ಛೃಣುಷ್ವ ಸುರೋತ್ತಮ ॥ ೧೦೧ ॥

ಅಕ್ರೀತಂ ಯಸ್ಯ ವೈ ವಸ್ತು ಹಾಟೇಽಸ್ಮಿನ್ವೈಶ್ಯಕೋವಿದೈಃ ।
ಮಯಾ ಕ್ರೀತಂ ಚ ತಜ್ಜ್ಞೇಯಂ ಸತ್ಯಮೇತದ್ವಚೋ ಮಮ ॥ ೧೦೨ ॥

ಇತಿ ಶ್ರುತ್ವಾ ಶೂದ್ರಜನಾಶ್ಚಕ್ರುರ್ನಾನಾವಿಧಂ ವಸು ।
ವೈಶ್ಯೈಸ್ಸರ್ವಂ ತದಾ ಕ್ರೀತಂ ಮಹಾನ್ಹಾಟೋ ಹಿ ಸೋಽಭವತ್ ॥ ೧೦೩ ॥

ಏಕದಾ ಲೋಹಕಾರಶ್ಚ ದಾರಿದ್ರ್ಯಂ ಲೋಹರೂಪಿಣಂ ।
ಕೃತ್ವಾ ಹಾಟಮುಪಾಗಮ್ಯ ಶತಮುದ್ರಾಮಯಾಚತ ॥ ೧೦೪ ॥

ಅಕ್ರೀತಂ ಪುರುಷಂ ರಾಜಾ ಜ್ಞಾತ್ವಾ ಲೋಹದರಿದ್ರಕಮ್ ।
ಕ್ರೀತಂ ತಂ ಶತಮುದ್ರಾಭಿರ್ಗೃಹೀತ್ವಾ ಗೇಹಮಾಗಮತ್ ॥ ೧೦೫ ॥

---

೧೦೧-೧೦೨. ಈ ಮಾತನ್ನು ಕೇಳಿ ರಾಜನು ಹಾಗೆಯೇ ಜಾತ್ರೆಯನ್ನು ಏರ್ಪಡಿಸಿ ತನ್ನ ಪಟ್ಟಣದಲ್ಲೆಲ್ಲಾ ಡಂಗೂರ ಹೊಡೆಸುವ ಮೂಲಕ ಜನಗಳಿಗೆ ಆಜ್ಞಾಪಿಸಿದನು. " ಈ ಜಾತ್ರೆಯಲ್ಲಿ ನೆರೆದಿರುವ ಪದಾರ್ಥಗಳಲ್ಲಿ ವೈಶ್ಯಶ್ರೇಷ್ಠರು ಯಾರೂ ಕ್ರಯಕ್ಕೆ ತೆಗೆದುಕೊಳ್ಳಲಾರದೆ ಇರುವ ಪದಾರ್ಥಗಳಿದ್ದರೆ ನಾನು ತೆಗೆದು ಕೊಳ್ಳುವೆನು ಇದು ಸತ್ಯ " ಎಂದು ಡಂಗೂರ ಹೊಡೆಸಿದನು.

೧೦೩. ಇದನ್ನು ಕೇಳಿ ಶೂದ್ರರೆಲ್ಲರೂ ಅನೇಕ ವಸ್ತುಗಳನ್ನು ಆ ಜಾತ್ರೆಗೆ ತೆಗೆದುಕೊಂಡು ಬಂದರು. ಆಗ ಅವುಗಳನ್ನೆಲ್ಲಾ ಆ ಊರಿನ ವೈಶ್ಯರು ಕೊಂಡು ಕೊಂಡರು. ಇದರಿಂದ ಆ ಸಮಾರಂಭವು ಒಂದು ದೊಡ್ಡ ಜಾತ್ರೆಯೇ ಆಯಿತು.

೧೦೪. ಈ ಸಂದರ್ಭದಲ್ಲಿ ಒಬ್ಬ ಕಮ್ಮಾರನು (ಲೋಹಕಾರನು) ದಾರಿದ್ರ್ಯವನ್ನು ಲೋಹದ ಬೊಂಬೆಯ ಆಕಾರವುಳ್ಳಂತೆ ರಚಿಸಿ ಅದನ್ನು ಆ ಜಾತ್ರೆಗೆ ತೆಗೆದು ಕೊಂಡು ಬಂದು ಇಟ್ಟು ನೂರು ಮುದ್ರೆ (ರೂಪಾಯಿ) ಗಳನ್ನು ಬೆಲೆ ಕೇಳಿದನು.

೧೦೫. ಆಗ ಕಮ್ಮಾರನ ಬಳಿಗೆ ಯಾರೂ ಬಂದು ವ್ಯಾಪಾರವನ್ನು ಮಾಡಲಿಲ್ಲ. ಆಗ ರಾಜನು ತನ್ನ ನಿಯಮದಂತೆ ಕಮ್ಮಾರನಿಗೆ ನೂರು ರೂಪಾಯಿ ಕೊಟ್ಟು ಆ ದರಿದ್ರನ ಲೋಹದ ಬೊಂಬೆಯನ್ನು ಕೊಂಡುಕೊಂಡು ತನ್ನ ಮನೆಗೆ ತೆಗೆದು ಕೊಂಡು ಹೋದನು. ಅನಂತರ ಆ ದರಿದ್ರಕನನ್ನು ಕೋಶಾಗಾರದಲ್ಲಿ ಇರಿಸಿದನು.

ಕೋಶಾಗಾರೇ ತದಾ ರಾಜ್ಞಾ ಸ್ಥಾಪಿತೋsಭೂದ್ದರಿದ್ರಕಃ ।
ನಿಶೀಥೇ ತಮ ಉದ್ಭೂತೇ ಕರ್ಮ ಧರ್ಮಶ್ಚ ಮಾ ತಥಾ ॥
ಭೂಪಗೇಹಾತ್ಸಮಾಗತ್ಯ ಪಶ್ಯತಸ್ತಸ್ಯ ನಿರ್ಗತಾಃ ॥ ೧೦೬ ॥

ತತ್ಪಶ್ಚಾತ್ಸತ್ಯಪುರುಷೋ ರಾಜಾನಮಿದಮಬ್ರವೀತ್ ।
ದರಿದ್ರೋ ಯತ್ರ ಭೂಪಾಲ ತತ್ರ ಕರ್ಮಪರೋ ನ ಹಿ ॥
ಕರ್ಮಣಾ ರಹಿತೋ ಧರ್ಮೋ ಭೂತಲೇ ನ ಸ್ಥಿರೋ ಭವೇತ್ ॥ ೧೦೭ ॥

ಧರ್ಮೇಣ ರಹಿತಾ ಲಕ್ಷ್ಮೀರ್ನ ಶೋಭೇತ ಕದಾಚನ ।
ಅಹಂ ಲಕ್ಷ್ಮ್ಯಾ ವಿಹೀನಶ್ಚ ನ ತಿಷ್ಠಾಮಿ ಕದಾಚನ ॥ ೧೦೮ ॥

ಇತ್ಯುಕ್ತ್ವಾ ಗಂತುಮಿಚ್ಛಂತಂ ಗೃಹೀತ್ವಾ ಕರಯೋರ್ನೃಪಃ ।
ನಮ್ರೀಭೂತೋ ವಚಃ ಪ್ರಾಹ ಶೃಣು ಸತ್ಯ ಮಮ ಪ್ರಿಯ ॥ ೧೦೯ ॥

ನ ತ್ಯಾಜ್ಯೋ ಹಿ ಮಯಾ ದೇವ ಭವಾನ್ ಕಿಂ ಗಂತುಮರ್ಹತಿ ।
ಇತಿ ಶ್ರುತ್ವಾ ತು ವಚನಂ ಸತ್ಯದೇವೋ ಗೃಹೇಗಮತ್ ॥ ೧೧೦ ॥

---

೧೦೬. ಆದಿವಸ ಕತ್ತಲೆಯಾಗುತ್ತಲೆ ಕರ್ಮಪುರುಷ, ಧರ್ಮಪುರುಷ, ಮತ್ತು ಲಕ್ಷ್ಮಿ ಈ ಮೂರುಮಂದಿಯೂ, ರಾಜನು ನೋಡುತ್ತಿರುವಂತೆಯೇ ರಾಜನ ಮನೆಯಿಂದ ಹೊರಟುಹೋದರು.

೧೦೭. ಅನಂತರ ಸತ್ಯಪುರುಷನು ರಾಜನ ಬಳಿಗೆ ಬರಲು ಎಲೈ ರಾಜನೇ ! ದಾರಿದ್ರ್ಯವಿದ್ದೆಡೆ (ದರಿದ್ರ ಪುರುಷನಿದ್ದೆಡೆ) ಕರ್ಮಪುರುಷನಿರಲಾರನು. ಕರ್ಮವಿಲ್ಲದೆ ಧರ್ಮವು ಭೂಮಿಯಲ್ಲಿ ಶಾಶ್ವತವಾಗಿ ನಿಲ್ಲಲಾರದು.

೧೦೮. ಧರ್ಮವನ್ನು ಬಿಟ್ಟ ಲಕ್ಷ್ಮಿಯು ಎಂದಿಗೂ ಪ್ರಕಾಶಿಸಲಾರಳು. ಲಕ್ಷ್ಮಿ ಇಲ್ಲದೆ ಸತ್ಯಪುರುಷನಾದ ನಾನೂ ಇರುವುದಿಲ್ಲ.

೧೦೯-೧೧೦. ಈ ಪ್ರಕಾರ ಹೇಳಿ ಹೊರಡಲುದ್ಯುಕ್ತನಾಗಿರುವ ಆ ಸತ್ಯ ಪುರುಷನ ಕೈಗಳನ್ನು ಹಿಡಿದುಕೊಂಡು ಆ ರಾಜನು ವಿನಯದಿಂದ "ಎಲೈ ನನಗೆ ಪ್ರಿಯನಾದ ಸತ್ಯಪುರುಷನೇ! ಕೇಳು, ನಾನು ನಿನ್ನನ್ನು ಬಿಟ್ಟು ಇರಲಾರೆನು. ಹೀಗಿರು ವಾಗ ನೀನು ಹೋಗಲುದ್ಯುಕ್ತನಾಗಿರುವೆ, ಇದು ನ್ಯಾಯವೇ ? " ಎಂದು ಹೇಳಲು, ಆ ರಾಜನ ಮಾತನ್ನು ಕೇಳಿ ಸತ್ಯಪುರುಷನು ಪುನಃ ರಾಜನ ಮನೆಗೆ ಬಂದನು.

**ತತ್ಪಶ್ಚಾಚ್ಚ ಸ್ವಯಂ ಲಕ್ಷ್ಮೀಸ್ತದ್ಗೇಹೇ ಗಂತುಮುದ್ಯತಾ ।**
**ತಾಮಾಹ ಭೂಪತಿರ್ಧೀರೋ ದೇವಿ ತ್ವಂ ಚಂಚಲಾ ಸದಾ ॥ ೧೧೧ ॥**

**ಅಚಲಾ ಭವ ಭೋ ಮಾತಸ್ತರ್ಹಿ ಮನ್ಮಂದಿರೇ ವ್ರಜ ।**
**ಇತಿ ಶ್ರುತ್ವಾ ವರಂ ದತ್ವಾ ನೃಪಗೇಹಂ ಯಯೌ ತದಾ ॥ ೧೧೨ ॥**

**ಪುರೋಧಸಂ ತಂ ಗಣಕಂ ಸಮಾಹೂಯ ನೃಪೋತ್ತಮಃ ।**
**ಲಕ್ಷಸ್ವರ್ಣಂ ದದೌ ತಸ್ಮೈ ಕಥಿತ್ವಾ ಸರ್ವಕಾರಣಂ ॥ ೧೧೩ ॥**

**ಪುತ್ರಜನ್ಮನಿ ಕಾಲೇ ತು ಸಂಪ್ರಾಪ್ತಂ ತೇನ ವೈ ಧನಂ ।**
**ವ್ಯಯಂ ಕೃತ್ವಾ ಧನಂ ಸರ್ವಂ ಪೋಷಯಾಮಾಸ ಬಾಲಕಂ ॥ ೧೧೪ ॥**

---

೧೧೧. ಸತ್ಯಪುರುಷನು ಹಿಂದಿರುಗಿಬರಲು ಆವನ ಹಿಂದೆ ಲಕ್ಷ್ಮಿಯೂ ಬರುವುದಕ್ಕೆ ಉದ್ಯುಕ್ತಳಾದಳು. ಆಗ ರಾಜನು ಆವಳನ್ನು ನೋಡಿ "ಅಮ್ಮಾ ಲಕ್ಷ್ಮಿದೇವಿಯೇ ! ನೀನು ಯಾವಾಗಲೂ ಚಂಚಲೆಯು.

೧೧೨. "ಎಲೌ ತಾಯಿಯೇ ! ನೀನು ಶಾಶ್ವತವಾಗಿ ನನ್ನಬಳಿ ನೆಲಸುವುದಾದರೆ ನೀನು ನನ್ನ ಮನೆಗೆ ಬಾ" ಎಂದು ಹೇಳಲು, ಆಗ ಲಕ್ಷ್ಮಿದೇವಿಯು ಹಾಗೆಯೇ ಆಗಲೆಂದು ಆ ರಾಜನಿಗೆ ವರಕೊಟ್ಟು ಅರಮನೆಯನ್ನು ಪ್ರವೇಶಿಸಿ ಅಲ್ಲಿ ಸ್ಥಿರವಾಗಿ ನೆಲಸಿದಳು.

೧೧೩. ಆಗ ಆ ರಾಜನು ತನ್ನ ಮಂತ್ರಿಯಾದ ಆ ಜೋಯಿಸನನ್ನು ಕರೆಯಿಸಿ ಅವನಿಗೆ ಈ ಎಲ್ಲಾ ಸಮಾಚಾರವನ್ನೂ ವಿಶದವಾಗಿ ತಿಳಿಸಿ ಒಂದುಲಕ್ಷ ಸುವರ್ಣ ಮುದ್ರೆಯನ್ನು ಅವನಿಗೆ ಕೊಟ್ಟನು.

೧೧೪. ಈ ದ್ರವ್ಯವು ಆ ಬ್ರಾಹ್ಮಣನಿಗೆ ಪುತ್ರಜನನದ ವೇಳೆಗೆ ಸರಿಯಾಗಿ ಒದಗಿತು. ಆ ಬ್ರಾಹ್ಮಣನು ಆ ಸುವರ್ಣವನ್ನೆಲ್ಲಾ ಖರ್ಚುಮಾಡಿ ಆ ಬಾಲಕನನ್ನು ಚನ್ನಾಗಿ ಪೋಷಣೆಮಾಡಿದನು.

ಪೂಷಾ ನಾಮ ತತೋ ಜಾತಂ ಮಾರ್ಗಶೀರ್ಷೇ ಶುಭೇ ದಿನೇ ।
ಸ ತು ಸೂರ್ಯಂ ಸಮಾರಾಧ್ಯ ಜ್ಯೋತಿಃಶಾಸ್ತ್ರಪರಃ ಸುತಃ ॥ ೧೧೫ ॥

ಸೂರ್ಯೇ ತು ಮೋಕ್ಷಮಗಮದ್ದೇವದೇವಪ್ರಸಾದತಃ ।
ತಸ್ಮಾತ್ತ್ವಂ ಮಾರ್ಗಮಾಸೇ ವೈ ರವಿಂ ದೇವೇಂದ್ರ ಪೂಜಯ ॥ ೧೧೬ ॥

॥ ಸೂತ ಉವಾಚ ॥

ದೇವೇಂದ್ರಪೂಜನಾತ್ಸೂರ್ಯಃ ಸಮಾಗತ್ಯ ತದಾ ಸ್ವಯಂ ।
ಪೂಷಾ ನಾಮ ವಚೋ ದೇವಾನುವಾಚ ಮಧುರಸ್ವರಂ ॥ ೧೧೭ ॥

ಉಜ್ಜಯಿನ್ಯಾಮಹಂ ದೇವಾ ಯಾಸ್ಯೇ ರುದ್ರಪಶೋರ್ಗೃಹೇ ।
ನಾಮ್ನಾ ಚ ಮಿಹಿರಾಚಾರ್ಯೋ ಜ್ಯೋತಿಃಶಾಸ್ತ್ರಪ್ರವರ್ತಕಃ ॥ ೧೧೮ ॥

ಇತ್ಯುಕ್ತ್ವಾ ಭಗವಾನ್ ಪೂಷಾ ಪುತ್ರೋ ಜಾತೋ ದ್ವಿಜಸ್ಯ ವೈ ।
ಮೂಲಗಂಡಾಂತವಿಷಯೇಽಭಿಜಿದ್ಯೋಗೇ ಶುಭಂಕರೇ ॥ ೧೧೯ ॥

---

೧೧೫. ಇವನಿಗೆ ಪೂಷಾ ಎಂದು ಹೆಸರಿಟ್ಟನು. ಈ ಬಾಲಕನು ಮಾರ್ಗಶಿರ ಮಾಸದಲ್ಲಿ ಶುಭಕರವಾದ ಒಂದು ದಿವಸ ಸೂರ್ಯದೇವನನ್ನು ಪೂಜಿಸಿ ಜ್ಯೋತಿಶಾಸ್ತ್ರ ನಿಪುಣನಾಗಿ ಕೊನೆಗೆ ದೇವದೇವನಾದ ಸೂರ್ಯನ ಮಹಿಮೆಯಿಂದ ಸೂರ್ಯನಲ್ಲೇ ಐಕ್ಯನಾಗಿ ಮೋಕ್ಷವನ್ನು ಹೊಂದಿದನು.

೧೧೬. ಆದುದರಿಂದ "ಎಲೈ ಇಂದ್ರನೇ! ನೀನೂ ಮಾರ್ಗಶಿರ ಮಾಸದಲ್ಲಿ ಸೂರ್ಯದೇವನನ್ನು ಪೂಜಿಸು" ಎಂದು ಬೃಹಸ್ಪತ್ಯಾಚಾರ್ಯನು ದೇವೇಂದ್ರನಿಗೆ ಹೇಳಿದನು. ಸೂತಮುನಿವರ್ಯನು ಕಥೆಯನ್ನು ಮುಂದುವರಿಸುತ್ತಾನೆ.

೧೧೭-೧೧೮. ಗುರುಗಳಾದ ಬೃಹಸ್ಪತ್ಯಾಚಾರ್ಯರ ಅಪ್ಪಣೆಯಂತೆ ದೇವೇಂದ್ರನು ಸೂರ್ಯದೇವನನ್ನು ಪೂಜಿಸಲು ಆಗ ಪೂಷಾನಾಮಕನಾದ ಸೂರ್ಯನು ಪ್ರತ್ಯಕ್ಷನಾಗಿ ಬಂದು ದೇವತೆಗಳನ್ನು ಕುರಿತು "ಎಲೈ ದೇವತೆಗಳಿರಾ! ನಾನು ಉಜ್ಜಯಿನಿಯಲ್ಲಿ ರುದ್ರಪಶುವೆಂಬ ಬ್ರಾಹ್ಮಣನ ಮನೆಯಲ್ಲಿ ಮಿಹಿರಾಚಾರ್ಯನೆಂಬ ಹೆಸರಿನಿಂದ ಅವತರಿಸಿ ಜ್ಯೋತಿಃಶಾಸ್ತ್ರಪ್ರವರ್ತಕನಾಗುವೆನು" ಎಂದನು.

೧೧೯. ಪೂಷಾನಾಮಕ ಸೂರ್ಯನು ಈ ಪ್ರಕಾರ ಹೇಳಿ ಅದೇರೀತಿ ಅಭಿಜಿದ್ಯೋಗ ಸಹಿತವಾದ ಮೂಲಾನಕ್ಷತ್ರದ ದಿವಸ ಆ ಬ್ರಾಹ್ಮಣನಿಗೆ ಮಗನಾಗಿ ಹುಟ್ಟಿದನು.

ಜಾತಮಾತ್ರಂ ಚ ತಂ ಪುತ್ರಂ ಪಿತಾ ಕಾಷ್ಠಕಟಾಹಕೇ ।
ಧೃತ್ವಾ ಕ್ಷಿಪ್ತ್ವಾ ನದೀಮಧ್ಯೇ ನಿಶೀಥೇ ಸಮವಾಹಯತ್ ॥ ೧೨೦ ॥

ಸಮುದ್ರಮಗಮತ್ಪುತ್ರೋ ರಾಕ್ಷಸೀಭಿಶ್ಚ ರಕ್ಷಿತಃ ।
ಲಂಕಾಮಾಗಮ್ಯ ತತ್ರೈವ ಜ್ಯೋತಿಃಶಾಸ್ತ್ರಮಧೀತವಾನ್ ॥ ೧೨೧ ॥

ಜಾತಕಂ ಫಲಿತಂ ಚೈವ ಮೂಲಪ್ರಶ್ನಂ ತಥಾದಿತಃ ।
ಪಠಿತ್ವಾ ರಾಕ್ಷಸೇಂದ್ರಂ ಚ ವಿಭೀಷಣಮುಪಾಗತಂ ॥ ೧೨೨ ॥

ಭಕ್ತರಾಭ ನಮಸ್ತುಭ್ಯಂ ವಿಭೀಷಣ ಹರಿಪ್ರಿಯ ।
ಆಹೃತೋ ರಾಕ್ಷಸೀಭಿಶ್ಚ ತ್ವಾಮಹಂ ಶರಣಂ ಗತಃ ॥ ೧೨೩ ॥

---

೧೨೦. ಆ ಹುಡುಗನು ಹುಟ್ಟಿದ ಕ್ಷಣದಲ್ಲಿಯೇ ತಂದೆಯು ಇವನನ್ನು ಮರದ ತೊಟ್ಟಿಯಲ್ಲಿ ಇರಿಸಿ ಅರ್ಧರಾತ್ರಿಯಲ್ಲಿ ನಡುಹೊಳೆಯಲ್ಲಿ ತೇಲಿಬಿಟ್ಟನು.

೧೨೧. ಈ ಬಾಲಕನು ಹಾಗೆಯೇ ನದಿಯಲ್ಲಿ ತೇಲಿಕೊಂಡು ಹೋಗಿ ಸಮುದ್ರಕ್ಕೆ ಸೇರಿದನು. ಅಲ್ಲಿ ರಾಕ್ಷಸ ಸ್ತ್ರೀಯರು ಈ ಬಾಲಕನನ್ನು ತೆಗೆದುಕೊಂಡು ಹೋಗಿ ಸಲಹಿದರು. ಅನಂತರ ಈ ಬಾಲಕನು ಲಂಕಾಪಟ್ಟಣವನ್ನು ಸೇರಿ ಅಲ್ಲಿಯೇ ಜ್ಯೋತಿಃಶಾಸ್ತ್ರವನ್ನು ಕಲಿತನು.

೧೨೨. ಇವನು ಜಾತಕಭಾಗ, ಫಲಭಾಗ, ಮೂಕಪ್ರಶ್ನಭಾಗ, ಇವೇ ಮೊದಲಾದುವನ್ನು ಮೊದಲಿನಿಂದ ಚೆನ್ನಾಗಿ ಓದಿಕೊಂಡು ಒಂದಸಲ ರಾಕ್ಷಸರಾಜನಾದ ವಿಭೀಷಣನ ಸಮೀಪಕ್ಕೆ ಬಂದನು.

೧೨೩. ಅಲ್ಲಿ ವಿಭೀಷಣನನ್ನು ಕುರಿತು "ವಿಷ್ಣುಪ್ರಿಯನೂ ಭಕ್ತಶ್ರೇಷ್ಠನೂ ಆದ ಎಲೈ ರಾಕ್ಷಸರಾಜನೇ! ನಿನಗೆ ನಮಸ್ಕಾರ. ನನ್ನನ್ನು ರಾಕ್ಷಸಸ್ತ್ರೀಯರು ಇಲ್ಲಿಗೆ ಕರೆತಂದಿರುವರು. ಈಗ ನಾನು ನಿನ್ನನ್ನು ಶರಣುಹೊಂದಿರುವೆನು" ಎಂದು ಹೇಳಿದನು.

ಇತಿ ಶ್ರುತ್ವಾ ಚ ನೃಪೋ ವೈಷ್ಣವಂ ದ್ವಿಜಮುತ್ತಮಂ ।
ಮತ್ವಾ ಸಂಪ್ರೇಷಯಾಮಾಸ ಯತ್ರ ತಜ್ಜನ್ಮಭೂಮಿಕಾ ॥ ೧೨೪ ॥

ಮ್ಲೇಚ್ಛೈರ್ವಿನಾಶಿತಂ ಯತ್ತು ವೇದಾಂಗಂ ಜ್ಯೋತಿಷಾಂ ಗತಿಃ ।
ಪುನರುದ್ಧಾರಿತಂ ತೇನ ತ್ರಿಧಾಭೂತಂ ಸನಾತನಂ ॥ ೧೨೫ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ಚತುರ್ಥಖಂಡೇ
ಕಲಿಯುಗೀಯೇತಿಹಾಸಸಮುಚ್ಚಯೇ ಮಧ್ವಾಚಾರ್ಯ, ಶ್ರೀಧರಾ
ಚಾರ್ಯ, ವಿಷ್ಣುಸ್ವಾಮಿ, ವಾಣೀಭೂಷಣ, ಭಟ್ಟೋಜೀದೀಕ್ಷಿತ,
ವರಾಹಮಿಹಿರಾಚಾರ್ಯೋತ್ಪತ್ತಿವರ್ಣನೋ
ನಾಮ ಅಷ್ಟಮೋಽಧ್ಯಾಯಃ.



---

೧೨೪. ಈ ಮಾತನ್ನು ಕೇಳಿ ಆ ವಿಭೀಷಣನು ಬ್ರಾಹ್ಮಣಶ್ರೇಷ್ಠನಾದ ಇವನು ವೈಷ್ಣವನೆಂದು ತಿಳಿದು ಅವನನ್ನು ಅವನು ಹುಟ್ಟಿದ ಊರಿಗೆ ಕಳುಹಿಸಿಕೊಟ್ಟನು.

೧೨೫. ಮ್ಲೇಚ್ಛರು ನಾಶಮಾಡಿದ್ದ ವೇದಾಂಗವಾದ ಜಾತಕ, ಫಲ, ಪ್ರಶ್ನ ರೂಪವಾದ ಮೂರುಭಾಗಗಳುಳ್ಳ ಪುರಾತನವಾದ ಈ ಜ್ಯೋತಿಃಶಾಸ್ತ್ರವನ್ನು ಈ ವರಾಮಿಹಿರನು ಪುನಃ ಉದ್ಧಾರಮಾಡಿದನು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ನಾಲ್ಕನೆಯ ಖಂಡದಲ್ಲಿ ಕಲಿಯುಗದ
ಇತಿಹಾಸ ಸಮುದಾಯದಲ್ಲಿ ಮಧ್ವಾಚಾರ್ಯ, ಶ್ರೀಧರಾಚಾರ್ಯ, ವಿಷ್ಣುಸ್ವಾಮಿ,
ವಾಣೀಭೂಷಣ, ಭಟ್ಟೋಜೀದೀಕ್ಷಿತ, ವರಾಹಮಿಹಿರಾಚಾರ್ಯ ಇವರ
ಉತ್ಪತ್ತಿ ವರ್ಣನೆ ಎಂಬ ಎಂಟನೆಯ ಅಧ್ಯಾಯವು
ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಪ್ರತಿಸರ್ಗಪರ್ವಣಿ ಚತುರ್ಥಖಂಡೇ
# ನವಮೋಽಧ್ಯಾಯಃ

---

॥ ಸೂತ ಉವಾಚ ॥

ಇತ್ಯುಕ್ತ್ವಾ ಭಗವಾನ್‌ಜೀವಃ ಸೂರ್ಯಮಾಹಾತ್ಮ್ಯಮುತ್ತಮಂ ।
ಪ್ರಯಾಗೇ ತು ಪುನರ್ದೇವಾನುವಾಚ ವಚಸಾಂ ಪತಿಃ ॥ ೧ ॥

ಪ್ರತಿಷ್ಠಾನಪುರೇ ರಮ್ಯೇ ಸೂರ್ಯೋ ಜಾತೋ ಹರಾಜ್ಞಯಾ ।
ಪುರಾ ತ್ರೇತಾಯುಗಾಂತೇ ಚ ತಚ್ಛೃಣುಷ್ವ ಸುರೋತ್ತಮ ॥ ೨ ॥

ತ್ರೇತಾಂತೇ ಸಿಂಹಲದ್ವೀಪೇ ಪರೀಕ್ಷಿತನೃಪೋಽಭವತ್ ।
ವೇದಧರ್ಮಪರೋ ನಿತ್ಯಂ ದೇವತಾತಿಥಿಪೂಜಕಃ ॥ ೩ ॥

---

## ಒಂಭತ್ತನೆಯ ಅಧ್ಯಾಯ

೧. ಸೂತಮುನಿವರ್ಯನು ಹೇಳುತ್ತಾನೆ—ಪೂಜ್ಯತಮನೆನಿಸಿದ ಬೃಹಸ್ಪತ್ಯಾಚಾರ್ಯರು ದ್ವಾದಶಾದಿತ್ಯನು, ಮಹಾತ್ಮರಾಗಿ ಭೂಲೋಕದಲ್ಲಿ ಜನ್ಮವೆತ್ತಿದ ವೃತ್ತಾಂತವನ್ನು ಈ ರೀತಿಹೇಳಿ, ಆ ಪ್ರಯಾಗಕ್ಷೇತ್ರದಲ್ಲಿದ್ದ ದೇವತೆಗಳನ್ನು ಕುರಿತು ಶ್ರೇಷ್ಠವಾದ ಸೂರ್ಯನ ಮಹಿಮೆಯನ್ನು ಮತ್ತೆ ಹೇಳಿದನು.

೨. " ಎಲೈ ಇಂದ್ರನೇ ! ಹಿಂದೆ ತ್ರೇತಾಯುಗದ ಕೊನೆಯಲ್ಲಿ ಉತ್ತಮವಾದ ಪ್ರತಿಷ್ಠಾನಪುರದಲ್ಲಿ ಸೂರ್ಯನು ಈಶ್ವರನ ಅಪ್ಪಣೆಯಿಂದ ಅವತರಿಸಿದನು. ಆ ಕಥೆಯನ್ನು ಹೇಳುತ್ತೇನೆ ಕೇಳು.

೩. ತ್ರೇತಾಯುಗದ ಕೊನೆಯಲ್ಲಿ ಸಿಂಹಲದ್ವೀಪದಲ್ಲಿ ಪರೀಕ್ಷಿತನೆಂಬ ರಾಜನಿದ್ದನು. ಅವನು ಯಾವಾಗಲೂ ವೇದೋಕ್ತಧರ್ಮನಿರತನೂ ದೇವತೆಗಳ ಮತ್ತು ಅಥಿತಿಗಳ ಪೂಜೆಯಲ್ಲಿ ಆಸಕ್ತನೂ ಆಗಿದ್ದನು.

ಕನ್ಯಾ ಭಾನುಮತೀ ತಸ್ಯ ಸೂರ್ಯವ್ರತಪರಾಯಣಾ ।
ಭಕ್ತಿಭಾವೇನ ಸವಿತಾ ಪ್ರತ್ಯಹಂ ತದ್ಗೃಹೇ ಸ್ವಯಂ ॥ ೪ ॥

ತಯಾ ಕೃತಂ ಶುಭಂ ಭಕ್ಷ್ಯಂ ಮಧ್ಯಾಹ್ನೇ ಭುಕ್ತವಾನ್ಪ್ರಭುಃ ।
ರವಿವಾರೇ ಕದಾಚಿತ್ಸಾ ನಲಿನೀಸಾಗರಂ ಪ್ರತಿ ॥ ೫ ॥

ಸ್ನಾನಾರ್ಥಮಾಗತಾ ಕನ್ಯಾ ತದಾ ನಾರದ ಆಗತಃ ।
ದೃಷ್ಟ್ವಾ ಮನೋರಮಾಂ ಬಾಲಾಮೇಕಾಕೀಂ ಜಲಮಧ್ಯಗಾಂ ॥ ೬ ॥

ಗೃಹೀತ್ವಾ ವಸನಂ ತಸ್ಯಾ ವಚನಂ ಪ್ರಾಹ ನಿರ್ಭಯಃ ।
ಪಾಣಿಂ ಗೃಹಾಣ ಮೇ ಸುಭ್ರೂಸ್ತ್ವದ್ದೃಷ್ಟ್ವಾ ವಶಮಾಗತಃ ॥ ೭ ॥

ಇತ್ಯುಕ್ತವಂತಂ ತು ಮುನಿಂ ಕುಮಾರೀ ನಮ್ರಕಂಧರಾ ।
ಉವಾಚ ಶೃಣು ದೇವರ್ಷೇ ಕನ್ಯಾ ಹಂ ತ್ವಂ ಸುತಪ್ರದಃ ॥ ೮ ॥

---

೪. ಆ ರಾಜನಿಗೆ ಸೂರ್ಯಪೂಜೆಯಲ್ಲಿ ನಿರತಳಾದ ಭಾನುಮತಿ ಎಂಬ ಹೆಸರಿನ ಕನ್ಯೆಯು ಇದ್ದಳು.

೫. ಅವಳು ಅತಿ ಭಕ್ತಿಯಿಂದ ಪ್ರತಿದಿನವೂ ತನ್ನ ಮನೆಯಲ್ಲಿ ಸಿದ್ಧಮಾಡಿದ ಉತ್ತಮವಾದ ಭಕ್ಷ್ಯಗಳನ್ನು ಸೂರ್ಯನು ಮಧ್ಯಾಹ್ನದವೇಳೆ ಸಾಕ್ಷಾತ್ತಾಗಿ ಬಂದು ಸ್ವೀಕರಿಸುತ್ತಿದ್ದನು.

೬. ಒಂದಾನೊಂದು ಭಾನುವಾರದದಿವಸ ಆ ಕನ್ಯೆಯು ಸ್ನಾನಮಾಡುವುದಕ್ಕಾಗಿ ನಳಿನೀಸಾಗರಕ್ಕೆ ಬಂದಳು. ಆಗ ನಾರದಮುನಿಗಳೂ ಅಲ್ಲಿಗೆ ಬಂದರು. ನೀರಿನಲ್ಲಿಳಿದು ನಿಂತ ಆಕೆ ಮನೋಹರಳಾಗಿ ಕಾಣುತ್ತಿದ್ದಳು.

೭. ಹಾಗೆ ಕಾಣುವ ಏಕಾಕಿಯಾದ ಆ ಬಾಲಕಿಯನ್ನು ನೋಡಿ ಅವರು ನಿರ್ಭಯವಾಗಿ ಅವಳ ಬಟ್ಟೆಯ ಸೆರಗನ್ನು ಹಿಡಿದು ಈರೀತಿಯಾಗಿ ಮಾತನಾಡಿದರು. "ಎಲೈ ಲಕ್ಷಣವಾದ ಹುಬ್ಬುಳ್ಳ ಸುಂದರೀ! ನೀನು ನನ್ನನ್ನು ಲಗ್ನಮಾಡಿಕೊ. ನಿನ್ನನ್ನು ಕಂಡಾಗಿನಿಂದ ನಾನು ನಿನ್ನ ರೂಪಕ್ಕೆ ಮರುಳಾಗಿದ್ದೇನೆ" ಎಂದರು.

೮. ಈ ಮಾತನ್ನು ಕೇಳಿ ಕನ್ಯೆಯು ತಲೆಬಾಗಿಸಿದವಳಾಗಿ ಮುನಿಗಳನ್ನು ಕುರಿತು "ಎಲೈ ದೇವಮುನಿಗಳೇ! ನಾನು ಕನ್ಯೆಯು. ನೀವಾದರೋ ಸಂತಾನೋತ್ಪತ್ತಿ ಮಾಡಲು ಇಷ್ಟವುಳ್ಳವರಾಗಿದ್ದೀರಿ."

ಭವಾನ್ದೇವಾಂಗನಾಭಿಶ್ಚ ಪ್ರಾರ್ಥಿತಃ ಸ್ವರ್ಗಮಂಡಲೇ ।
ಕ್ವ ಚ ವೈ ಮೇನಕಾ ರಂಭಾ ಕ್ವಾಹಂ ಮನುಜಯೋನಿಜಾ ॥ ೯ ॥

ನವದ್ವಾರೇಷು ದೇಹೇಸ್ಮಿನ್ ದುರ್ಗಂಧಾಃ ಸಂಸ್ಥಿತಾಃ ಸದಾ ।
ನೈವ ದೇವಾಂಗನಾಂಗೇ ವೈ ತಸ್ಮಾತ್ತುಭ್ಯಂ ನಮೋನಮಃ ॥ ೧೦ ॥

ಇತಿ ಶ್ರುತ್ವಾ ವಚಸ್ತಸ್ಯಾ ಲಜ್ಜಿತೋ ನಾರದಸ್ತದಾ ।
ಮಹಾದೇವಮುಪಾಗಮ್ಯ ಚೋಕ್ತವಾನ್ಸರ್ವಕಾರಣಂ ॥ ೧೧ ॥

ಕುಷ್ಠೀಭೂತಂ ಮುನಿಂ ದೃಷ್ಟ್ವಾ ಶಂಕರೋ ಲೋಕಶಂಕರಃ ।
ತುಷ್ಟಾವ ಭಾಸ್ಕರಂ ದೇವಂ ತದಾ ಪ್ರಾದುರಭೂತ್ಪ್ರಭುಃ ॥ ೧೨ ॥

ನಾರದಸ್ಯ ಶುಭಂ ದೇಹಂ ಕೃತ್ವಾ ಶಿವಮುವಾಚ ಹ ।
ಆಜ್ಞಾಂ ದೇಹಿ ಮಹಾದೇವ ತವಾಶಾಂ ಪೂರಯಾಮ್ಯಹಂ ॥ ೧೩ ॥

೯. "ಸ್ವರ್ಗಲೋಕದಲ್ಲಿ ದೇವತಾಸ್ತ್ರೀಯರು ನಿಮ್ಮನ್ನು ಪ್ರಾರ್ಥಿಸಿ ಕರೆಯುತ್ತಾರೆ. ಅಂತಹ ಮೇನಕಾ, ರಂಭಾ, ಮೊದಲಾದವರೆಲ್ಲಿ? ಮನುಷ್ಯಯೋನಿಯಲ್ಲಿ ಹುಟ್ಟಿದ ನಾನೆಲ್ಲಿ?

೧೦. "ಈ ಮನುಷ್ಯ ಶರೀರದಲ್ಲಿ ಯಾವಾಗಲೂ ನವದ್ವಾರಗಳಲ್ಲಿಯೂ ದುರ್ವಾಸನೆಯು ಇರುತ್ತದೆ. ದೇವತೆಗಳ ಶರೀರದಲ್ಲಿ ಆ ದುರ್ಗಂಧವು ಇರುವುದಿಲ್ಲ. ಆದುದರಿಂದ ನಿಮಗೆ ನಮಸ್ಕಾರ ಮಾಡುತ್ತೇನೆ" ಎಂದಳು.

೧೧. ಈ ಮಾತನ್ನು ಕೇಳಿ ನಾರದರು ನಾಚಿಗೆಗೊಂಡರು. ಅವರ ಈ ಕೃತ್ಯದಿಂದ ಕುಷ್ಠರೋಗತಲೆದೋರಿತು. ಕೂಡಲೆ ಈಶ್ವರನಲ್ಲಿಗೆ ಹೋಗಿ ನಡೆದ ಸಮಾಚಾರವನ್ನೆಲ್ಲಾ ಹೇಳಿದರು.

೧೨. ಲೋಕಗಳಿಗೆ ಸುಖವನ್ನುಂಟುಮಾಡುವ ಆ ಈಶ್ವರನು ಕುಷ್ಠರೋಗದಿಂದ ಕೂಡಿದ ನಾರದಮುನಿಗಳನ್ನು ನೋಡಿ ಸೂರ್ಯನನ್ನು ಪ್ರಾರ್ಥಿಸಿದನು. ಆಗ ಸೂರ್ಯನಾರಾಯಣನು ಪ್ರತ್ಯಕ್ಷನಾದನು.

೧೩. ಆ ಸೂರ್ಯನು ನಾರದರ ಮೈಯನ್ನು ಎಂದಿನಂತೆ ಸರಿಮಾಡಿ ಈಶ್ವರನನ್ನು ಕುರಿತು "ಎಲೈ ಮಹಾದೇವನೇ! ನನಗೆ ಅಪ್ಪಣೆಮಾಡು. ನಿನ್ನ ಇಷ್ಟವನ್ನು ನಾನು ಪೂರ್ತಿಗೊಳಿಸುತ್ತೇನೆ" ಎಂದನು.

ಇತ್ಯುಕ್ತಂ ತಂ ಶಿವಃ ಪ್ರಾಹ ದ್ವಿಜೋ ಭೂತ್ವಾ ಭವಾನ್ ಭುವಿ ।
ಗೃಹಾಣ ನೃಪತೇಃ ಕನ್ಯಾಂ ರವಿಣಾ ತು ತಥಾ ಕೃತಂ ॥ ೧೪ ॥

ಸವಿತಾ ಭಾನುಮತ್ಯಾ ಚ ಸಾರ್ಧಂ ಕೃತ್ವಾ ತಪೋನ್ವಹಂ ।
ಸೂರ್ಯಲೋಕಂ ಪುನಃ ಪ್ರಾಪ್ತ ಸ್ಸ ಪೌಷೇ ಚ ಪ್ರಕಾಶಕೃತ್ ॥ ೧೫ ॥

ತಂ ಭಜಾಶು ಮಹೇಂದ್ರ ತ್ವಂ ದೇವಕಾರ್ಯಂ ಪ್ರಸಾಧಯ ।

॥ ಸೂತ ಉವಾಚ ॥

ಇತಿ ಶ್ರುತ್ವಾ ಗುರೋರ್ವಾಕ್ಯಂ ಮಹೇಂದ್ರಶ್ಚ ಸುರೈಃ ಸಹ ॥
ಸವಿತಾರಂ ಪೌಷಮಾಸೇ ತುಷ್ಟಾವ ಶುಭಪೂಜನೈಃ ॥ ೧೬ ॥

ತದಾ ಪ್ರಸನ್ನೋ ಭಗವಾನ್ದೇವಾನಾಹ ಶುಭಂ ವಚಃ ।
ಅಹಂ ಕಾಶ್ಯಾಂ ಭವಾಮ್ಯದ್ಯ ನಾಮ್ನಾ ಧನ್ವಂತರಿಃ ಸ್ವಯಂ ॥ ೧೭ ॥

---

೧೪. ಹೀಗೆ ಹೇಳುತ್ತಿರುವ ಸೂರ್ಯನನ್ನು ಕುರಿತು ಈಶ್ವರನು "ನೀನು ಬ್ರಾಹ್ಮಣನಾಗಿ ಭೂಮಿಯಲ್ಲಿ ಹುಟ್ಟಿ ರಾಜನಮಗಳಾದ ಭಾನುಮತಿಯನ್ನು ಲಗ್ನವಾಗು" ಎಂದನು. ಸೂರ್ಯನು ಆ ಪ್ರಕಾರವೇ ಮಾಡಿದನು.

೧೫. ಸೂರ್ಯನು ಬ್ರಾಹ್ಮಣನಾಗಿ ಜನಿಸಿ ಭಾನುಮತಿಯಿಂದೊಡಗೂಡಿ ಯಾವಾಗಲೂ ತಪಸ್ಸುಮಾಡುತ್ತಿದ್ದು ಸೂರ್ಯಲೋಕವನ್ನು ಹೊಂದಿದನು ಅವನೇ ಪುಷ್ಯಮಾಸದಲ್ಲಿ ಪ್ರಕಾಶಿಸುವನು. "ಎಲೈ ದೇವೇಂದ್ರನೇ ! ನೀನೂ ಸೂರ್ಯನನ್ನು ಆರಾಧಿಸಿ ದೇವತೆಗಳ ಕಾರ್ಯವನ್ನು ನೆರವೇರಿಸು" ಎಂದನು.

೧೬. ಸೂತಮುನಿವರ್ಯನು ಹೇಳುತ್ತಾನೆ—ಹೀಗೆ ಹೇಳಿದ ಬೃಹಸ್ಪತ್ಯಾಚಾರ್ಯನ ಮಾತನ್ನು ಕೇಳಿ ಇಂದ್ರನು ದೇವತೆಗಳಿಂದೊಡಗೂಡಿ ಪುಷ್ಯಮಾಸದಲ್ಲಿ ಸೂರ್ಯನನ್ನು ವೈಭವದಿಂದ ಪೂಜಿಸಿ ಸ್ತೋತ್ರಮಾಡಿದನು.

೧೭. ಆಗ ಪೂಜ್ಯನಾದ ಸೂರ್ಯನು ಪ್ರತ್ಯಕ್ಷನಾಗಿ ದೇವತೆಗಳನ್ನು ಕುರಿತು ಈ ಮಾತುಗಳನ್ನು ಹೇಳಿದನು. "ನಾನು ಕಾಶಿಯಲ್ಲಿ ಧನ್ವಂತರಿಯೆಂಬ ಹೆಸರಿನಿಂದ ಹುಟ್ಟುತ್ತೇನೆ"

ರೋಗೈಶ್ಚ ಪೀಡಿತಾನ್ಲೋಕಾನ್ ಕಲಿನಾ ನಿರ್ಮಿತೈರ್ಭುವಿ ।
ಶಮಯಿಷ್ಯಾಮಿ ತತ್ರೋಽಸ್ಯ ದೇವಕಾರ್ಯಂ ಭವಿಷ್ಯತಿ ॥ ೧೮ ॥

ಇತ್ಯುಕ್ತ್ವಾ ಭಗವಾನ್ ಸೂರ್ಯಃ ಕಾಶೀನಗರಮಾಗತಃ ।
ಕಲ್ಪದತ್ತಸ್ಯ ವಿಪ್ರಸ್ಯ ಪುತ್ರೋ ಭೂತ್ವಾ ಮಹೀತಲೇ ॥ ೧೯ ॥

ಸುಶ್ರುತಂ ರಾಜಪುತ್ರಂ ಚ ವಿಪ್ರವೃದ್ಧಸಮನ್ವಿತಂ ।
ಶಿಷ್ಯಂ ಕೃತ್ವಾ ಪ್ರಸನ್ನಾತ್ಮಾ ಕಲ್ಪವೇದಮಚೀಕರತ್ ॥ ೨೦ ॥

ರೋಗೈಶ್ಚ ಕ್ಷಯಿತಂ ದೇಹಂ ಕಾಲ್ಪಮೇತತ್ಸ್ಮೃತಂ ಬುಧೈಃ ।
ತಸ್ಯ ಜ್ಞಾನಂ ಚ ತಂತ್ರೇಽಸ್ಮಿನ್ಕಲ್ಪವೇದೋ ಹ್ಯತಃ ಸ್ಮೃತಃ ॥ ೨೧ ॥

ಧನ್ವಂತರಿಸ್ಸ ಭಗವಾನ್ಪ್ರಸಿದ್ಧೋಽಭೂತ್ಕಲೌ ಯುಗೇ ।
ಯಸ್ಯ ದರ್ಶನಮಾತ್ರೇಣ ರೋಗಾ ನಶ್ಯಂತಿ ತತ್ಕ್ಷಣಾತ್ ॥ ೨೨ ॥

---

೧೮. " ಆ ಕಾಶಿಯಲ್ಲಿ ವಾಸಮಾಡುತ್ತಾ ಭೂಮಂಡಲದಲ್ಲಿ ಕಲಿಯು ನಿರ್ಮಿಸಿದ ನಾನಾ ರೋಗಗಳಿಂದ ಪೀಡಿತರಾದವರನ್ನು ಗುಣಪಡಿಸುತ್ತೇನೆ. ಈ ಮೂಲಕ ದೇವತೆಗಳ ಕೆಲಸವೂ ನೆರವೇರುತ್ತದೆ " ಎಂದನು.

೧೯–೨೦. ಹೀಗೆ ಹೇಳಿ ಪೂಜ್ಯನಾದ ಸೂರ್ಯನು ಭೂಲೋಕದಲ್ಲಿ ಕಾಶೀನಗರಕ್ಕೆ ಬಂದು ಕಲ್ಪದತ್ತನೆಂಬ ಬ್ರಾಹ್ಮಣನ ಮಗನಾಗಿ ಹುಟ್ಟಿದನು. ಸರ್ವದಾ ಬ್ರಾಹ್ಮಣರು ಮುದುಕರು ಇವರಿಂದ ಕೂಡಿರುವ ಸುಶ್ರುತನೆಂಬ ರಾಜಪುತ್ರನನ್ನು ಶಿಷ್ಯನನ್ನಾಗಿ ಮಾಡಿಕೊಂಡು ಸಂತೋಷದಿಂದ ಕಲ್ಪ (ಆಯುಃ) ವೇದವನ್ನು ರಚಿಸಿದನು.

೨೧. ರೋಗದಿಂದ ಕ್ಷೀಣವಾಗುವ ಗುಣವುಳ್ಳ ಈ ಶರೀರವನ್ನು ಜ್ಞಾನಿಗಳು ಕಲ್ಪವೆಂದು ಹೇಳುತ್ತಾರೆ. ಈ ತಂತ್ರದಲ್ಲಿ ಅದರ ತಿಳುವಳಿಕೆ ಇರುವುದರಿಂದ ಇದನ್ನು ಕಲ್ಪವೇದವೆಂದು ಹೇಳುತ್ತಾರೆ.

೨೨. ಆ ಪೂಜ್ಯನಾದ ಧನ್ವಂತರಿಯು ಕಲಿಯುಗದಲ್ಲಿ ಬಹು ಪ್ರಸಿದ್ಧನಾದನು. ಆ ಧನ್ವಂತರಿಯ ದರ್ಶನಮಾತ್ರದಿಂದಲೇ ರೋಗಗಳೆಲ್ಲವೂ ನಾಶವಾಗುತ್ತಿದ್ದುವು.

**ಸುಶ್ರುತಃ ಕಲ್ಪವೇದಂ ತಂ ಧನ್ವಂತರಿವಿನಿರ್ಮಿತಂ ।**
**ಪಠಿತ್ವಾ ಚ ಶತಾಧ್ಯಾಯಂ ಸೌಶ್ರುತಂ ತಂತ್ರಮಾಕರೋತ್ ॥ ೨೩ ॥**

**॥ ಬೃಹಸ್ಪತಿರುವಾಚ ॥**

**ಪುರಾ ಪಂಪಾಪುರೇ ರಮ್ಯೇ ಹೇಲೀ ನಾಮ್ನಾ ದ್ವಿಜೋಽಭವತ್ ।**
**ಚತುಷ್ಷಷ್ಟಿಕಲಾಭಿಜ್ಞೋ ರವಿಪೂಜನತತ್ಪರಃ ॥ ೨೪ ॥**

**ತ್ಯಕ್ತ್ವಾ ಪ್ರತಿಗ್ರಹಂ ವೃತ್ತಿಂ ಕಾರುವೃತ್ತಿಂ ಗೃಹೀತವಾನ್ ।**
**ಕೃತ್ವಾ ವಸ್ತ್ರಕಲಂ ಲೌಹಂ ತಥಾ ಚಿತ್ರಕಲಂ ಪುನಃ ॥ ೨೫ ॥**

**ಧಾತುಮೂರ್ತಿಕಲಂ ಚೈವ ಸರ್ವಕಾರುಕಲಂ ತಥಾ ।**
**ಪಂಚಸಾಹಸ್ರಮುದ್ರಾಭಿರಾಕ್ರೀಣನ್ಕಾರುಕೋಽಭವತ್ ॥ ೨೬ ॥**

**ಕಲ ಏಕೋ ಮಾಸಮಾತ್ರೇ ಕಾಲೇ ತೇನೈವ ನಿರ್ಮಿತಃ ।**
**ತದ್ಧನೇನ ರವಿಂ ದೇವಂ ಯಜ್ಞೈರ್ಮಾಘೇ ಹಿ ಸೋಽರ್ಚಯತ್॥ ೨೭ ॥**

---

೨೩. ಸುಶ್ರುತನು ಧನ್ವಂತರಿಯಿಂದ ರಚಿತವಾದ ಆ ಕಲ್ಪವೇದವನ್ನು ಓದಿ ಒಂದುನೂರು ಅಧ್ಯಾಯವುಳ್ಳ ಸೌಶ್ರುತವೆಂಬ ತಂತ್ರಗ್ರಂಥವನ್ನು ಬರೆದನು.

೨೪. ಬೃಹಸ್ಪತ್ಯಾಚಾರ್ಯನು ಹೇಳುತ್ತಾನೆ — ಪೂರ್ವದಲ್ಲಿ ಪಂಪಾಪುರವೆಂಬ ಗ್ರಾಮದಲ್ಲಿ ಹೇಲೀ ಎಂಬ ಹೆಸರುಳ್ಳ ಬ್ರಾಹ್ಮಣನಿದ್ದನು. ಆತನು ಅರವತ್ತನಾಲ್ಕು ಕಲೆಗಳಲ್ಲಿ ನಿಪುಣನೂ, ಸೂರ್ಯಾರ್ಚನೆಯಲ್ಲಿ ಆಸಕ್ತನೂ ಆಗಿದ್ದನು.

೨೫-೨೬. ಆತನು ದಾನತೆಗೆದುಕೊಳ್ಳುವ ವೃತ್ತಿಯನ್ನು ಬಿಟ್ಟು ಶಿಲ್ಪವೃತ್ತಿಯನ್ನು ಅವಲಂಬಿಸಿದ್ದನು. ವಸ್ತ್ರಕಲೆ, ಲೋಹಕಲೆ, ಚಿತ್ರಕಲೆ ಪಂಚಲೋಹಗಳಿಂದ ಮೂರ್ತಿಗಳನ್ನು ನಿರ್ಮಿಸುವಕಲೆ, ಮುಂತಾದ ಸಕಲವಿಧವಾದ ಕಲಾಕೌಶಲ್ಯ ವಸ್ತುಗಳನ್ನೂ ಮಾಡಿ ಅವುಗಳನ್ನು ಐದುಸಾವಿರ ನಾಣ್ಯಗಳಬೆಲೆಗೆ ಮಾರುತ್ತ ಉತ್ತಮನಾದ ಶಿಲ್ಪಿಎನಿಸಿದ್ದನು.

೨೭. ಅವನಿಂದ ರಚಿತವಾದ ಕಲೆಯು ಒಂದುತಿಂಗಳಲ್ಲಿ ಎಲ್ಲೆಲ್ಲೂ ಪ್ರಸಿದ್ಧವಾಯ್ತು. ಅದರಿಂದ ಉತ್ಪತ್ತಿಯಾದ ಹಣದಿಂದ ಮಾಘಮಾಸದಲ್ಲಿ ಯಜ್ಞವನ್ನಾಚರಿಸುವ ಮೂಲಕವಾಗಿ ಸ್ವಾಮಿಯಾದ ಸೂರ್ಯನನ್ನು ಅರ್ಚಿಸಿದನು.

ವಿಶ್ವಕರ್ಮಾ ರವಿಃ ಸಾಕ್ಷಾನ್ಮಾಘಮಾಸೇ ಪ್ರಕಾಶಕಃ
ಹೇಲಿನೋ ಬಹುಲೈರ್ಯಜ್ಞೈಸ್ಸಂತುಷ್ಟಃ ಪ್ರತ್ಯಹಂ ಪ್ರಭುಃ ।
ಪಂಪಾಸರೋವರೇ ರಮ್ಯೇ ನಿರ್ಮಿತಃ ಸ್ತಂಭ ಉತ್ತಮಃ ॥ ೨೮ ॥

ಜ್ಯೋತೀರೂಪೋ ಮಹಾರಮ್ಯಸ್ತತ್ರ ಪ್ರಾಪ್ತೋ ರವಿಃ ಸ್ವಯಂ ।
ಮಧ್ಯಾಹ್ನೇ ಹೇಲಿನಾ ದತ್ತಂ ಭೋಜನಂ ದೈವತಪ್ರಿಯಂ ॥ ೨೯ ॥

ಭುಕ್ತ್ವಾ ಸ ಪ್ರತ್ಯಹಂ ಸ್ವಾಮೀ ಮಾಸಿಮಾಸಿ ದಿವಾಕರಃ ।
ತ್ರೈಲೋಕ್ಯಂ ಭಾವಯಾಂಚಕ್ರೇ ಸರ್ವದೇವಮಯೋ ಹರಿಃ ॥ ೩೦ ॥

ಸಹಸ್ರಾಯುರ್ದ್ವಿಜೋ ಭೂತ್ವಾ ತ್ಯಕ್ತ್ವಾ ಪ್ರಾಣಾನ್ರವಿಃ ಸ್ವಯಂ ।
ಭೂತ್ವಾ ಮಂಡಲಮಧ್ಯಾಸ್ಯ ಮಾಘಮಾಸಮತೋಷಯತ್ ॥
ತಂ ಸೂರ್ಯಂ ಭಜ ದೇವೇಂದ್ರ ಸ ತೇ ಕಾರ್ಯಂ ಕರಿಷ್ಯತಿ ॥ ೩೧ ॥

॥ ಸೂತ ಉವಾಚ ॥

ಇತಿ ಶ್ರುತ್ವಾ ಗುರೋರ್ವಾಕ್ಯಂ ವಾಸವೋ ದೈವತೈಃ ಸಹ ।
ಸೂರ್ಯಮಾರಾಧಯಾಮಾಸ ವಿಶ್ವಕರ್ಮಾಣಮುತ್ತಮಂ ॥ ೩೨ ॥

---

೨೮-೩೦. ವಿಶ್ವಕರ್ಮನಾಮಕನಾದ ಸಾಕ್ಷಾತ್ ಸೂರ್ಯನು ಮಾಘಮಾಸದ ಅಧಿಪತಿಯು. ಈ ಹೇಲಿಯೆಂಬ ಬ್ರಾಹ್ಮಣನು ನಿತ್ಯವೂ ತಪ್ಪದೆ ಮಾಡುವ ಅನೇಕ ಯಜ್ಞಗಳಿಂದ ಸೂರ್ಯನು ಸಂತುಷ್ಟನಾಗಿ ಮನೋಹರವಾದ ಪಂಪಾಸರೋವರದಲ್ಲಿ ನಿರ್ಮಿಸಿದ್ದ ಸ್ತಂಭಕ್ಕೆ ತೇಜೋರೂಪದಿಂದ ಮಹಾಪ್ರಕಾಶಕನಾಗಿ ಬರುತ್ತಿದ್ದನು. ಹೀಗೆ ಬಂದು ಮಧ್ಯಾಹ್ನ ಕಾಲದಲ್ಲಿ ದೇವತೆಗಳಿಗೆ ಸಂತೋಷವನ್ನುಂಟುಮಾಡುವಂತೆ ಹೇಲಿಯು ನಿವೇದಿಸಿದ ಆ ನಿವೇದನವನ್ನು ನಿತ್ಯವೂ ಸ್ವೀಕರಿಸುತ್ತಿದ್ದನು. ಸರ್ವದೇವಮಯನಾದ ಆ ಸೂರ್ಯನು ಪ್ರತಿತಿಂಗಳಲ್ಲೂ ಮೂರುಲೋಕಗಳನ್ನೂ ಸುತ್ತುತ್ತಿದ್ದನು.

೩೧. ಆ ಬ್ರಾಹ್ಮಣನು ಸಹಸ್ರ ವರ್ಷಗಳು ಬದುಕಿದ್ದು ದೇಹತ್ಯಾಗಮಾಡಿ ಕೂಡಲೇ ಸೂರ್ಯಮಂಡಲವನ್ನು ಸೇರಿ ಮಾಘಮಾಸದಲ್ಲಿ ಪ್ರಕಾಶಿಸಿದನು. "ಎಲೈ ಇಂದ್ರನೇ! ನೀನೂ ಸಹ ಆ ಸೂರ್ಯನನ್ನು ಆರಾಧಿಸು. ಆ ಸೂರ್ಯನು ನಿನ್ನ ಇಷ್ಟಾರ್ಥಗಳನ್ನು ನಡೆಸಿಕೊಡುತ್ತಾನೆ" ಎಂದನು.

೩೨. ಪುನಃ ಸೂತಮುನಿವರ್ಯನು ಹೇಳುತ್ತಾನೆ.—ಹೀಗೆ ಹೇಳಿದ ಬೃಹಸ್ಪತ್ಯಾಚಾರ್ಯರ ಮಾತನ್ನು ಕೇಳಿ ಇಂದ್ರನು ದೇವತೆಗಳೊಂದೊಡಗೂಡಿ ವಿಶ್ವಕರ್ಮಸಂಜ್ಞಕನಾದ ಸೂರ್ಯನನ್ನು ಆರಾಧಿಸಿದನು.

ತದಾ ಪ್ರಸನ್ನೋ ಭಗವಾಂಸ್ತ್ವಷ್ಟಾ ತುಷ್ಟಿಕರೋ ಜನಾನ್ ।
ಸುರಾನಾಹ ವಚೋ ರಮ್ಯಂ ಶೃಣುಧ್ವಂ ಸುರಸತ್ತಮಾಃ ॥ ೩೩ ॥

ಬಿಲ್ವಗ್ರಾಮೇ ವಂಗದೇಶೇ ಸಂಭವಾಮಿ ನಿರುಕ್ತಕೃತ್ ।
ಜಯದೇವ ಇತಿ ಖ್ಯಾತಃ ಕವೀನಾಂ ಹಿ ಶಿರೋಮಣಿಃ ॥ ೩೪ ॥

ಇತ್ಯುಕ್ತ್ವಾ ಭಗವಾನ್ಸೂರ್ಯೋ ವಂಗದೇಶಮುಪಾಯಯೌ ।
ಗೇಹೇ ಕಂದುಕಿನೋ ಜಾತೋ ಬ್ರಾಹ್ಮಣಸ್ಯ ಮಹೀತಲೇ ॥ ೩೫ ॥

ಸ ಪಂಚಾಬ್ದವಪುರ್ಭೂತ್ವಾ ಪಿತೃಮಾತೃಪರಾಯಣಃ ।
ದ್ವಾದಶಾಬ್ದಂ ಮಹಾಸೇವಾ ತತ್ರ ತೇನ ತಯೋಃ ಕೃತಾ ॥ ೩೬ ॥

ಮೃತಿಮಂತೌ ಚ ಪಿತರೌ ಪ್ರೇತಕೃತ್ಯೇನ ತರ್ಪಿತೌ ।
ಜಯದೇವೇನ ತೌ ನಾಕಂ ಗಯಾಶ್ರಾದ್ಧೇ ಹಿ ಜಗ್ಮತುಃ ॥ ೩೭ ॥

---

೩೩. ಆಗ ಸಕಲ ಜನರಿಗೂ ಸಂತೋಷವನ್ನುಂಟುಮಾಡುವ ಪೂಜ್ಯನಾದ ತ್ವಷ್ಟೃವು ಪ್ರತ್ಯಕ್ಷನಾಗಿ ದೇವತೆಗಳನ್ನು ಕುರಿತು ಮಧುರವಾದ ಈ ಮಾತುಗಳನ್ನಾಡುವನಾಗಿ "ಎಲೈ ದೇವತೆಗಳೇ! ಕೇಳಿರಿ."

೩೪. "ನಾನು ವಂಗದೇಶದಲ್ಲಿ ಬಿಲ್ವಗ್ರಾಮವೆಂಬಲ್ಲಿ ಜಯದೇವನೆಂಬ ಹೆಸರಿನಿಂದ ಜನಿಸಿ ನಿರುಕ್ತವೆಂಬ ಗ್ರಂಥವನ್ನು ರಚಿಸಿ ಕವಿಶ್ರೇಷ್ಠನೆನಿಸುತ್ತೇನೆ" ಎಂದನು.

೩೫. ಹೀಗೆ ಹೇಳಿ ಪೂಜ್ಯನಾದ ಸೂರ್ಯದೇವನು ವಂಗದೇಶದಲ್ಲಿ ಪ್ರಸಿದ್ಧನಾದ ಕಂದುಕಿ ಎಂಬ ಬ್ರಾಹ್ಮಣನ ಮನೆಯಲ್ಲಿ ಹುಟ್ಟಿದನು.

೩೬. ಅವನು ಐದುವರ್ಷದವನಾಗಿದ್ದಾಗಲೇ ತಂದೆತಾಯಿಗಳ ಶುಶ್ರೂಷೆಯಲ್ಲಿ ನಿರತನಾದನು. ಹೀಗೆ ಹನ್ನೆರಡು ವರ್ಷಗಳಕಾಲ ಅಲ್ಲಿ ಅವನು ಆ ತಂದೆತಾಯಿಗಳಿಗೆ ಮಹಾಸೇವೆಯನ್ನು ಮಾಡುತ್ತಿದ್ದನು.

೩೭. ಕಾಲಕ್ರಮದಲ್ಲಿ ಮೃತರಾದ ತಂದೆತಾಯಿಗಳಿಗೆ ಪ್ರೇತಕರ್ಮಗಳನ್ನಾಚರಿಸಿ ತೃಪ್ತಿಪಡಿಸಿದನು. ಈ ಜಯದೇವನು ನೆರವೇರಿಸಿದ ಗಯಾಶ್ರಾದ್ಧದಿಂದ ಅವರು ಸ್ವರ್ಗವನ್ನು ಸೇರಿದರು.

**ಜಯದೇವಸ್ತದಾ ವಿಪ್ರೋ ಭೂತ್ವಾ ವೈರಾಗ್ಯವಾನ್‌ಭುವಿ ।**
**ತತ್ರಸ್ಥಾನೇ ಮಹಾರಮ್ಯೇ ವನೇ ವಾಸಮಕಾರಯತ್ ॥ ೩೮ ॥**

**ತ್ರಿವಿಂಶಾಬ್ದೇ ತತಃ ಪ್ರಾಪ್ತೇ ಕೇನಚಿನ್ಮಧುರಾನನಾ ।**
**ಬ್ರಾಹ್ಮಣೇನ ಶುಭಾ ಕನ್ಯಾ ಜಗನ್ನಾಥಾಯ ಚಾರ್ಪಿತಾ ॥ ೩೯ ॥**

**ಅರ್ಚಾವಸಾನೇ ಭಗವಾನನಿರುದ್ಧಸ್ಸನಾತನಃ ।**
**ದಾರುಬ್ರಹ್ಮಮಯಃ ಸಾಕ್ಷಾದಾಹ ತಂ ಸ್ವೇನ ಸ್ವೈ ವಚಃ ॥ ೪೦ ॥**

**ಶೃಣು ತ್ವಂ ಭೋಃ ಸತ್ಯವ್ರತ ಜಯದೇವೋ ವಪುರ್ಮಮ ।**
**ಪದ್ಮಾವತೀಂ ಸುತಾಂ ತಸ್ಮೈ ನಿವೇದಯ ಮಮಾಜ್ಞಯಾ ॥ ೪೧ ॥**

**ಇತ್ಯುಕ್ತಸ್ಸ ದ್ವಿಜಸ್ತೂರ್ಣಂ ದೃಷ್ಟ್ವಾ ವೈರಾಗರೂಪಿಣಂ ।**
**ತತ್ರ ಸ್ಥಾಪ್ಯ ನಿಜಾಂ ಕನ್ಯಾಂ ಸ್ವಗೇಹಾಯ ಮುದಾ ಯಯೌ ॥ ೪೨ ॥**

---

೩೮. ಆಗ ವಿಪ್ರೋತ್ತಮನಾದ ಜಯದೇವನು ವೈರಾಗ್ಯಸಂಪನ್ನನಾಗಿ ಅಲ್ಲಿಯೇ ಒಂದು ವನದಲ್ಲಿ ಮನೋಹರವಾದ ಸ್ಥಳದಲ್ಲಿ ವಾಸಮಾಡತೊಡಗಿದನು.

೩೯. ಹೀಗೆ ಆ ಜಯದೇವನು ಇಪ್ಪತ್ತುಮೂರು ವರ್ಷಗಳನ್ನು ಕಳೆದನು. ಯಾವನೋ ಒಬ್ಬ ಬ್ರಾಹ್ಮಣನು ಸಲಕ್ಷಣಳೂ, ಸುಂದರವಾದ ಮುಖವುಳ್ಳವಳೂ ಆದ ತನ್ನ ಕನ್ಯೆಯನ್ನು ತಂದು ಸ್ವಾಮಿಯಾದ ಜಗನ್ನಾಥನಿಗೆ ಅರ್ಪಿಸಿದನು.

೪೦. ಪೂಜೆಯು ಮುಗಿದನಂತರ ಷಡ್ಗುಣೈಶ್ವರ್ಯಸಂಪನ್ನನೂ, ಸನಾತನನೂ, ಅನಿರುದ್ಧನೂ, ಬ್ರಹ್ಮವೃಕ್ಷದಿಂದ ರಚಿತನೂ ಆದ ದೇವನು ಪ್ರತ್ಯಕ್ಷನಾಗಿ ಆ ಬ್ರಾಹ್ಮಣನನ್ನು ಕುರಿತು ಈ ಮುಂದೆ ಹೇಳುವಂತೆ ಮಾತನ್ನಾಡಿದನು.

೪೧. " ಎಲೈ ಸತ್ಯವ್ರತನೇ! ಕೇಳು ಜಯದೇವನೆಂಬವನು ಸಾಕ್ಷಾತ್ ನನ್ನ ಸ್ವರೂಪನೇ ಎನಿಸಿದ್ದಾನೆ. ನೀನು ನಿನ್ನ ಮಗಳಾದ ಪದ್ಮಾವತಿಯನ್ನು ನನ್ನ ಅಪ್ಪಣೆಯ ಪ್ರಕಾರ ಜಯದೇವನಿಗೆ ಕೊಡು " ಎಂದು ಹೇಳಿದನು.

೪೨. ಸ್ವಾಮಿಯು ಹೀಗೆ ಹೇಳುತ್ತಲೆ ಆ ಬ್ರಾಹ್ಮಣನು ಶೀಘ್ರವಾಗಿ ಜಯದೇವನಿದ್ದ ಸ್ಥಳಕ್ಕೆ ಬಂದು, ವೈರಾಗ್ಯದಿಂದ ಯೋಗಾರೂಢನಾಗಿರುವ ಜಯದೇವನನ್ನು ನೋಡಿ, ತನ್ನ ಕನ್ಯೆಯನ್ನು ಅವನ ಸಮೀಪದಲ್ಲಿಯೇ ಬಿಟ್ಟು ಸಂತೋಷದಿಂದ ತನ್ನ ಮನೆಗೆ ಹಿಂದಿರುಗಿದನು.

ಸಾ ತು ಪದ್ಮಾವತೀ ಕನ್ಯಾ ಮತ್ವಾ ತಂ ಸುಂದರಂ ಪತಿಂ ।
ತತ್ಸೇವಾಂ ಸಾ ಮುದಾ ಯುಕ್ತಾ ಚಕಾರ ಬಹುವಾರ್ಷಿಕಂ ॥ ೪೩ ॥

ನಿರುಕ್ತಂ ವೈದಿಕಂ ಚಾಂಗಂ ಕೃತವಾನ್ಸ ಸಮಾಧಿನಾ ।
ವರ್ಣಾಗಮೋ ಗವೇಂದ್ರಾದೌ ಸಿಂಹೇ ವರ್ಣವಿಪರ್ಯಯಃ ॥ ೪೪ ॥

ಷೋಡಶಾದೌ ವಿಕಾರಶ್ಚ ವರ್ಣನಾಶಃ ಪೃಷೋದರೇ ॥
ವರ್ಣವಿಕಾರನಾಶಾಭ್ಯಾಂ ಧಾತೋರತಿಶಯೇನ ಯಃ ।
ಯೋಗಸ್ತದ್ಯುಚ್ಯತೇ ಪ್ರಾಜ್ಞೈರ್ಮಯೂರಭ್ರಮರಾದಿಷು ॥ ೪೫ ॥

ಏವಂ ಪಂಚವಿಧಾನ್ಯೇವ ನಿರುಕ್ತಾನಿ ಸ್ಮೃತಾನಿ ವೈ ।
ಶೂದ್ರೈಶ್ಚ ನಾಗವಂಶೀಯೈರ್ಭ್ರಂಶಿತಾನಿ ಕಲೌ ಯುಗೇ ॥ ೪೬ ॥

---

೪೩. ಆ ಪದ್ಮಾವತಿ (ಕನ್ಯೆ) ಯು ಸುಂದರನಾದ ಜಯದೇವನನ್ನೇ ಪತಿಯೆಂದು ತಿಳಿದು ಸಂತೋಷದಿಂದ ಬಹು ವರ್ಷಗಳವರೆಗೂ ಅವನ ಸೇವೆಯನ್ನು ಮಾಡುತ್ತಿದ್ದಳು.

೪೪. ಆ ಜಯದೇವನು ಸಮಾಧಿಯಲ್ಲಿದ್ದುಕೊಂಡೇ ವೇದಾಂಗವಾದ ನಿರುಕ್ತ ಸೂತ್ರವನ್ನು ರಚಿಸಿದನು. "ಗವೇಂದ್ರ" ಮೊದಲಾದ ಶಬ್ದಗಳಲ್ಲಿ ಹೊಸ ವರ್ಣವು ಆಗಮವಾಗಿ ಬರುವಿಕೆ; ಸಿಂಹ, ಬ್ರಹ್ಮ ಮೊದಲಾದ ಶಬ್ದಗಳಲ್ಲಿ ಉಚ್ಚಾರಣೆಯು ಒಂದೇ ರೀತಿಯಾಗಿದ್ದರೂ ವರ್ಣ ವ್ಯತ್ಯಾಸವಾಗಿರುವಿಕೆ, ಷೋಡಶ ಮೊದಲಾದ ಶಬ್ದಗಳಲ್ಲಿ ವರ್ಣಗಳ ವಿಕಾರವಾಗುವಿಕೆ, ಪೃಷೋದರಾದಿ ಶಬ್ದಗಳಲ್ಲಿ ವರ್ಣ ನಾಶವಾಗುವುದು.

೪೫. ವರ್ಣವಿಕಾರ, ವರ್ಣನಾಶ, ವರ್ಣದ ಆಗಮ ವರ್ಣವಿಪರ್ಯಯ ಇವುಗಳೂ ಧಾತುವಿನ ಸಂಬಂಧವು ಮಯೂರ ಭ್ರಮರಾದಿಗಳಲ್ಲಿರುವುದು ರೂಢಿಯೆಂದು ಪಂಡಿತರು ಹೇಳುತ್ತಾರೆ.

೪೬. ಹೀಗೆ ನಿರುಕ್ತಗಳು ಐದು ವಿಧಗಳಾಗಿ ರಚಿತವಾಗಿದ್ದುವು. ಕಲಿಯುಗದಲ್ಲಿ ನಾಗವಂಶದಲ್ಲಿ ಹುಟ್ಟಿದ ಶೂದ್ರರಿಂದ ಇವು ಅಪಭ್ರಂಶ ಹೊಂದಿದುವು.

**ಜಿತ್ವಾ ಪ್ರಾಕೃತಭಾಷಾಯಾಃ ಕರ್ತ್ರೂನ್ಮೂಢಾನ್ಕಲಿಪ್ರಿಯಾನ್ ।**
**ಶುದ್ಧಂ ಹಿ ಪಾಣಿನಿಃ ಶಾಸ್ತ್ರಂ ಚಕಾರ ಸುರಹೇತವೇ　　　　॥ ೪೭ ॥**

**ಏಕದಾ ತು ಕಲಿರ್ಧೂರ್ತೋ ಹೃದಿಸ್ಥಶ್ಚೌರಕರ್ಮಣಾಂ ।**
**ನೃಪದತ್ತಂ ದ್ವಿಜಸ್ಯೈವ ಲುಂಠಯಿತ್ವಾ ಧನಂ ಬಹು　　　　॥ ೪೮ ॥**

**ಪದ್ಮಾವತೀಂ ಸತೀಂ ಮತ್ವಾ ತ್ಯಕ್ತ್ವಾ ತದ್ವೈ ಗತೋ ಗೃಹಂ ।**
**ಹಸ್ತೌ ಪಾದೌ ದ್ವಿಜಸ್ಯೈವ ಕಲಿಶ್ಚೌರೈಃ ಸಮಾಚ್ಛಿನತ್　　　　॥ ೪೯ ॥**

**ತದಾ ತು ದುಃಖಿತಾ ದೇವೀ ಗರ್ತಮಧ್ಯೇ ಸ್ಥಿತಂ ಪತಿಂ ।**
**ನಿಷ್ಕಾಸ್ಯ ಬಹುಧಾಲಪ್ಯಾಪೀಡ್ಯ ಹಸ್ತೇನ ಚಾಹರತ್　　　　॥ ೫೦ ॥**

**ಏಕಸ್ಮಿನ್ದಿವಸೇ ರಾಜಾ ಮೃಗಯಾರ್ಥಮುಪಾಗತಃ ।**
**ಅಹಸ್ತಪಾದಂ ಚ ಮುನಿಂ ಜಯದೇವಂ ದದರ್ಶ ಹ　　　　॥ ೫೧ ॥**

---

೪೭. ಕಲಿಪ್ರಿಯರೂ, ಪ್ರಾಕೃತಭಾಷಾಕರ್ತೃಗಳೂ ಆದ ಮೂಢರನ್ನೆಲ್ಲಾ ಪಾಣಿನಿಯು ಜಯಿಸಿ ಶುದ್ಧವಾದ ವ್ಯಾಕರಣಶಾಸ್ತ್ರವನ್ನು ದೇವತೆಗಳಿಗಾಗಿ ಎಂದರೆ ದೇವಭಾಷಾನಿರೂಪಣಾರ್ಥವಾಗಿ ಮಾಡಿದನು.

೪೮-೪೯. ಧೂರ್ತನಾದ ಕಲಿಯು ಒಂದಾನೊಂದು ಸಮಯದಲ್ಲಿ ಕಳ್ಳರ ಮನಸ್ಸಿನಲ್ಲಿ ಪ್ರವೇಶಿಸಿ ರಾಜನು ಜಯದೇವನಿಗೆ ಕೊಟ್ಟಿದ್ದ ಸಮಸ್ತ ದ್ರವ್ಯವನ್ನೂ ಅಪಹರಿಸುವಂತೆ ಮಾಡಿದನು. ಕೂಡಲೇ ಪದ್ಮಾವತಿಯು ಮಹಾಪತಿವ್ರತೆಯೆಂಬುದನ್ನು ತಿಳಿದು ಅದನ್ನು ಅಲ್ಲಿಯೇ ಬಿಟ್ಟುಹೋಗಬೇಕೆಂದು ಮನಸ್ಸು ಹುಟ್ಟಿಸಿದನು. ಆದರೆ ಕಲಿಯು ಜಯದೇವನ ಕಾಲುಗಳನ್ನು ಕತ್ತರಿಸಿ ಹಳ್ಳದೊಳಕ್ಕೆ ನೂಕುವಂತೆ ಕಳ್ಳರಿಗೆ ಬುದ್ಧಿ ಹುಟ್ಟಿಸಿದನು.

೫೦. ಆಗ ಹಳ್ಳದ ಮಧ್ಯದಲ್ಲಿ ಬಿದ್ದಿರುವ ಪತಿಯನ್ನು ಪದ್ಮಾವತಿಯು ನೋಡಿ ಮೇಲಕ್ಕೆ ತೆಗೆದು ಬಹಳ ದುಃಖಪಡುತ್ತಾ ಆತನನ್ನು ತನ್ನ ಕೈಯಿಂದ ಎತ್ತಿಕೊಂಡು ಬಂದಳು.

೫೧. ಒಂದಾನೊಂದು ದಿನ ರಾಜನು ಬೇಟೆಯಾಡುವುದಕ್ಕಾಗಿ ಆ ವನಕ್ಕೆ ಬಂದನು ಅಲ್ಲಿ ಕೈಕಾಲಿಲ್ಲದೆ ತೊಂದರೆಪಡುತ್ತಿದ್ದ ಈ ಜಯದೇವಮುನಿಯನ್ನು ನೋಡಿದನು.

ಸ ಪೃಷ್ಟಸ್ತೇನ ತತ್ರೈವ ಕೃತಂ ಕೇನ ತವೇದೃಶಂ
ಸ ಹೋವಾಚ ಮಹಾರಾಜ ಹಸ್ತಪಾದವಿಹೀನಕಃ ।
ಕರ್ಮಣ್ಯಾಹಮಿಹ ಪ್ರಾಪ್ತೋ ನ ಕೇನಾಪಿ ಕೃತಂ ಖಲು ॥ ೫೨ ॥

ಇತಿ ಶ್ರುತ್ವಾ ಧರ್ಮಪಾಲೋ ನೃಪತಿಸ್ತಂ ದ್ವಿಜೋತ್ತಮಂ ।
ಸಪತ್ನೀಕಂ ಚ ಶಿಬಿಕಾಮಾರೋಪ್ಯ ಸ್ವಗೃಹಂ ಯಯೌ ॥ ೫೩ ॥

ತಸ್ಯ ದೀಕ್ಷಾಂ ನೃಪಃ ಪ್ರಾಪ್ಯ ಧರ್ಮಶಾಲಾಮಕಾರಯತ್ ।
ಕದಾಚಿದ್ವೈಷ್ಣವಾ ಭೂತಾ ತೇ ಚೌರಾಃ ಕಲಿನಿರ್ಮಿತಾಃ
ಧರ್ಮಪಾಲಗೃಹಂ ಪ್ರಾಪ್ಯ ರಾಜಾನಮಿದಮಬ್ರುವನ್ ॥ ೫೪ ॥

ವಯಂ ಹಿ ಶಾಸ್ತ್ರನಿಪುಣಾಸ್ತವ ಗೇಹಮುಪಾಗತಾಃ ।
ಅಸ್ಮಾಭಿರ್ನಿರ್ಮಿತಂ ಭೋಜ್ಯಂ ಸ್ವಯಂ ವಿಷ್ಣುಃ ಶಿಲಾಮಯಃ
ಸಂಭುಂಕ್ತೇ ಪ್ರತ್ಯಹಂ ಪ್ರೀತ್ಯಾ ತತ್ಪಶ್ಯ ನೃಪಸತ್ತಮ ॥ ೫೫ ॥

---

೫೨. ಆ ಜಯದೇವನನ್ನು ಕುರಿತು ರಾಜನು "ನಿನಗೆ ಈ ದುರವಸ್ಥೆಯನ್ನುಂಟು ಮಾಡಿದವರಾರು" ಎಂದು ಕೇಳಿದನು. ಆಗ ಅವನು "ಎಲೈ ಮಹಾರಾಜನೇ! ನನ್ನ ಪೂರ್ವಜನ್ಮದ ಪಾಪಕರ್ಮದಿಂದ ನಾನು ಕೈಕಾಲಿಲ್ಲದವನಾಗಿರುತ್ತೇನೆ. ಯಾರಿಂದಲೂ ಈ ಅವಸ್ಥೆಯು ಉಂಟಾಗಲಿಲ್ಲ" ಎಂದು ಉತ್ತರವನ್ನಿತ್ತನು.

೫೩. ರಾಜನಾದ ಧರ್ಮಪಾಲನು ಈ ಮಾತನ್ನು ಕೇಳಿ ಹೆಂಡತಿಸಮೇತನಾದ ಅವನನ್ನು ಪಲ್ಲಕ್ಕಿಯಲ್ಲಿ ಕುಳ್ಳಿರಿಸಿಕೊಂಡು ತನ್ನ ಮನೆಗೆ ಕರೆದುಕೊಂಡು ಬಂದನು.

೫೪. ರಾಜನು ಅವನಿಂದ ದಿವ್ಯದೀಕ್ಷೆಯನ್ನು ಸ್ವೀಕರಿಸಿ ಒಂದು ಧರ್ಮಶಾಲೆಯನ್ನು ಮಾಡಿಸಿದನು. ಒಂದಾನೊಂದು ಕಾಲದಲ್ಲಿ ಕಲಿಯಿಂದ ಪ್ರೇರಿತರಾದ ಕಳ್ಳರು ವೈಷ್ಣವರಂತೆ ವೇಷವನ್ನು ಧರಿಸಿಕೊಂಡು ಧರ್ಮಪಾಲನ ಮನೆಗೆ ಬಂದು ರಾಜನನ್ನು ಕುರಿತು ಈರೀತಿಯಾಗಿ ಹೇಳಿದರು.

೫೫. "ಎಲೈ ರಾಜಶ್ರೇಷ್ಠನೇ! ಶಾಸ್ತ್ರದಲ್ಲಿ ನಿಪುಣರಾದ ನಾವು ನಿನ್ನ ಮನೆಗೆ ಈಗ ಬಂದಿದ್ದೇವೆ. ನಮ್ಮಿಂದ ನಿರ್ಮಿತವಾದ ವಿಷ್ಣುವಿನ ಶಿಲಾಪ್ರತಿಮೆಯು ನಿತ್ಯವೂ ಆಹಾರಸೇವನೆ ಮಾಡುವುದನ್ನು ನೀನು ಪ್ರತ್ಯಕ್ಷವಾಗಿ ನೋಡು" ಎಂದು ಹೇಳಿದರು.

ಇತ್ಯುಕ್ತ್ವಾ ಕಲಿಭಕ್ತಾಸ್ತೇ ವಿಷ್ಣುರೂಪಂ ಚತುರ್ಭುಜಂ ।
ನೃಪಾಯ ದರ್ಶಯಾಮಾಸುರ್ಭುಕ್ತವಂತಂ ಸ್ವಮಾಯಯಾ ॥ ೫೬ ॥

ವಿಸ್ಮಿತೋ ಧರ್ಮಪಾಲಶ್ಚ ಜಯದೇವಮುವಾಚ ಹ ।
ಗುರೋ ಮದ್ಭವನೇ ಪ್ರಾಪ್ತಾ ವೈಷ್ಣವಾ ವಿಷ್ಣುತತ್ಪರಾಃ ॥
ಅದೀದೃಶನ್‌ಹರಿಂ ಸಾಕ್ಷಾತ್ತಸ್ಮಾತ್ತ್ವಂ ಶೀಘ್ರಮಾವ್ರಜ ॥ ೫೭ ॥

ಇತಿ ಶ್ರುತ್ವಾ ದ್ವಿಜಃ ಪ್ರಾಪ್ತೋ ವಿಸ್ಮಿತೋಽಭೂತ್ತಥಾ ನೃಪಃ ।
ತದಾ ತು ತಂ ಹಿ ಪಾಖಂಡಾ ಭೂಪಮೂಚುರ್ವಿಹಸ್ಯ ತೇ ॥ ೫೮ ॥

ಅಸೌ ವಿಪ್ರಶ್ಚ ನೃಪತೇ ಗೌಡದೇಶೇ ನಿವಾಸಿನಃ ।
ಸೂದೋ ಭಕ್ಷ್ಯಕರಸ್ತಸ್ಯ ಕದಾಚಿದ್ಧನಲೋಭತಃ ॥ ೫೯ ॥

---

೫೬. ಹೀಗೆ ಹೇಳಿ ಆ ಕಲಿಯ ಶಿಷ್ಯರು ನಾಲ್ಕು ತೋಳುಗಳುಳ್ಳ ವಿಷ್ಣು ಮೂರ್ತಿಯನ್ನು ತಮ್ಮ ಮಾಯೆಯಿಂದ ಊಟಮಾಡುತ್ತಿರುವಂತೆ ರಚಿಸಿ ರಾಜನಿಗೆ ತೋರಿಸಿದನು.

೫೭. ಧರ್ಮಪಾಲನೂ ಕೂಡ ಅದನ್ನು ನೋಡಿ ಆಶ್ಚರ್ಯಗೊಂಡು ಜಯದೇವನನ್ನು ಕುರಿತು "ಗುರುವೇ ! ನನ್ನ ಮನೆಗೆ ವಿಷ್ಣುಭಕ್ತಿಯುತರಾದ ವೈಷ್ಣವರು ಬಂದಿದಾರೆ. ಅವರು ಸಾಕ್ಷಾದ್ವಿಷ್ಣುವನ್ನು ನನಗೆ ತೋರಿಸಿದರು. ಆದುದರಿಂದ ನೀವೂ ಜಾಗ್ರತೆಯಾಗಿ ಬಂದು ಸ್ವಾಮಿಯನ್ನು ನೋಡಿ" ಎಂದನು.

೫೮. ಹೀಗೆ ಹೇಳಿದ ರಾಜನ ಮಾತನ್ನು ಕೇಳಿ ಆ ಬ್ರಾಹ್ಮಣನು ಕೂಡಲೇ ಅಲ್ಲಿಗೆ ಬಂದು ಅದನ್ನು ನೋಡಿ ಆಶ್ಚರ್ಯಗೊಂಡನು. ರಾಜನೂ ಕೂಡ ಅತ್ಯಂತ ಆಶ್ಚರ್ಯಯುಕ್ತನಾದನು. ಆಗ ಪಾಷಂಡಿಗಳಾದ ಕಳ್ಳರು ನಗುತ್ತ ರಾಜನನ್ನು ಕುರಿತು ಹೇಳಿದರು.

೫೯-೬೦. "ಎಲೈ ರಾಜನೇ ! ಈ ಬ್ರಾಹ್ಮಣನು ಗೌಡದೇಶದಲ್ಲಿ ವಾಸ ಮಾಡುವ ಒಬ್ಬನ ಮನೆಯ ಅಡಿಗೆಯವನು. ನಾನಾ ಭಕ್ಷ್ಯಗಳನ್ನು ಮಾಡುವವನು. ಪಾಪಿಯಾದ ಇವನು ದುಡ್ಡಿನ ಆಶೆಯಿಂದ ಒಂದುದಿನ ಆ ಯಜಮಾನನಿಗೆ ಸಿದ್ಧ

ಗರಲಂ ಮಿಶ್ರಿತಂ ಭಕ್ಷ್ಯೇ ತೇನ ಪಾಖಂಡರೂಪಿಣಾ ।
ಜ್ಞಾತ್ವಾ ರಾಜಾ ತು ತಂ ವಿಪ್ರಂ ಶೂಲಮಧ್ಯೇ ಹ್ಯರೋಪಯತ್ ॥ ೬೦ ॥

ಏತಸ್ಮಿನ್ನಂತರೇ ರಾಜನ್ವಯಂ ತತ್ರ ಸಮಾಗತಾಃ ।
ಆಗಸ್ಕೃತಂ ದ್ವಿಜಂ ಮತ್ವಾ ದತ್ವಾ ಜ್ಞಾನಾನ್ಯನೇಕಶಃ ॥
ಶೂಲಾತ್ತಂ ಹಿ ಸಮುತ್ತಾರ್ಯ ಹಸ್ತೌ ಪಾದೌ ನೃಪೋಽಚ್ಛಿನತ್ ॥ ೬೧ ॥

ಅಸ್ಮಾಕಂ ಶಿಷ್ಯಭೂತೋ ಹಿ ರಾಜಾಽಸ್ಮಾಭಿಃ ಪ್ರಬೋಧಿತಃ ।
ಇತ್ಯುಕ್ತಮಾತ್ರೇ ವಚನೇ ದುಃಖಿತಾಭೂಚ್ಚ ದಾರಿತಾ ॥ ೬೨ ॥

ಚೌರಾಂಸ್ತಾನ್‌ಸಾ ಹಿ ಪಾತಾಲೇ ಚಕಾರ ಸುರರಕ್ಷಿತಾನ್ ।
ಜಯದೇವಸ್ತಥಾ ಭೂತಾನ್‌ದೃಷ್ಟ್ವಾ ಚೌರಾನ್‌ರುರೋದ ಹ ॥ ೬೩ ॥

ಕ್ರಂದಮಾನೇ ದ್ವಿಜೇ ತಸ್ಮಿನ್‌ಹಸ್ತಾಂಘ್ರೀ ಪ್ರಕೃತಿಂ ಗತೌ ।
ವಿಸ್ಮಿತಂ ನೃಪತಿಂ ತತ್ರ ಸರ್ವಂ ಹೇತುಮವರ್ಣಯತ್ ॥ ೬೪ ॥

---

ಮಾಡಿದ ಭಕ್ಷ್ಯದಲ್ಲಿ ವಿಷವನ್ನು ಬೆರಸಿದನು. ಈ ವಿಚಾರವನ್ನು ತಿಳಿದು ಆ ದೇಶದ ರಾಜನು ಇವನನ್ನು ಶೂಲಕ್ಕೆ ಏರಿಸಲು ಆಜ್ಞೆ ಮಾಡಿದನು.''

೬೧. "ಎಲೈ ರಾಜನೇ ! ಇದೇ ಸಮಯದಲ್ಲಿ ನಾವು ಅಲ್ಲಿಗೆ ಹೋದೆವು. ಈ ಬ್ರಾಹ್ಮಣನು ಅಪರಾಧಮಾಡಿರುವುದನ್ನು ತಿಳಿದು ದೊರೆಗೆ ಅನೇಕ ರೀತಿ ಜ್ಞಾನೋಪದೇಶಮಾಡಲಾಗಿ, ನಮ್ಮ ಶಿಷ್ಯನಾದ ಆ ರಾಜನು ನಾವು ಎಷ್ಟೋ ಬಗೆಯಿಂದ ಹೇಳಿದ ಮೇಲೆ ಅವನಿಗೆ ಆ ಶಿಕ್ಷೆಯನ್ನು ತಪ್ಪಿಸಿ ಕೈಕಾಲುಗಳನ್ನು ಕಡಿದುಹಾಕಿಸಿದನು.'' ಎಂದು ಸುಳ್ಳನ್ನೇ ಸಾಧಿಸಿದರು.

೬೨-೬೪. ಹೀಗೆ ಹೇಳಿದೊಡನೆಯೇ ಆತನ ಪತ್ನಿಯು ಅತ್ಯಂತ ದುಃಖಿತೆಯಾದಳು. ಮತ್ತು ತನ್ನ ಪಾತಿವ್ರತ್ಯಮಹಿಮೆಯಿಂದ ಆ ಕಳ್ಳರನ್ನು ಪಾತಾಳಲೋಕದಲ್ಲಿ ಸುರರಿಂದ ಕಾಯಲ್ಪಡುವಂತೆ ಮಾಡಿದಳು. ಕಳ್ಳರಿಗೆ ಆ ಪ್ರಕಾರ ತೊಂದರೆಯುಂಟಾದುದನ್ನು ನೋಡಿ ಜಯದೇವನು ಗಟ್ಟಿಯಾಗಿ ಅತ್ತನು ಆ ಜಯದೇವನು ಈ ರೀತಿಯಾಗಿ ಗೋಳಾಡುತ್ತಿರಲು ಕತ್ತರಿಸಿಹೋಗಿದ್ದ ಅವನ ಕೈಕಾಲುಗಳೆಲ್ಲ ಮೊದಲಿನಂತೆಯೇ ಆದುವು. ಇದನ್ನು ನೋಡಿ ಆಶ್ಚರ್ಯಗೊಂಡ ರಾಜನನ್ನು ಕುರಿತು ಆ ಬ್ರಾಹ್ಮಣನು ಹಿಂದೆ ನಡೆದ ಸಕಲ ವೃತ್ತಾಂತವನ್ನೂ ಆ ರಾಜನಿಗೆ ತಿಳಿಸಿದನು

ಶ್ರುತ್ವಾ ರಾಜಾ ಪ್ರಸನ್ನಾತ್ಮಾ ಜಯದೇವಮುಖೋದ್ಭವಂ ।
ಗೀತಗೋವಿಂದಮೇವಾಶು ಪಠಿತ್ವಾ ಮೋಕ್ಷಮಾಗಮತ್ ॥ ೬೫ ॥

ಇತಿ ತೇ ಕಥಿತಂ ವಿಪ್ರ ಜಯದೇವೋ ಯಥಾಭವತ್ ।
ಕೃಷ್ಣ ಚೈತನ್ಯಚರಿತಂ ಯಥಾಜಾತಂ ಶೃಣುಷ್ವ ತತ್ ॥ ೬೬ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಪ್ರತಿಸರ್ಗಪರ್ವಣಿ ಚತುರ್ಥಖಂಡೇ
ಕಲಿಯುಗೀಯೇತಿಹಾಸಸಮುಚ್ಚಯೇ ಧನ್ವಂತರಿ, ಸುಶ್ರುತ,
ಜಯದೇವ ಸಮುತ್ಪತ್ತಿವರ್ಣನೋ ನಾಮ ನವಮೋಽಧ್ಯಾಯಃ.



---

೬೫. ಅದನ್ನು ಕೇಳಿ ಸಮಾಧಾನಹೊಂದಿದ ರಾಜನು ಜಯದೇವನ ಮುಖಾರವಿಂದದಿಂದ ಬಂದ (ಜಯದೇವನು ಹೇಳಿದ) ಗೀತಗೋವಿಂದವನ್ನು ಪಠನಮಾಡಿ ಮೋಕ್ಷವನ್ನು ಹೊಂದಿದನು.

೬೬. "ಎಲೈ ಬ್ರಾಹ್ಮಣನೇ ! ಜಯದೇವನು ಹೇಗೆ ಹುಟ್ಟಿದನೆಂಬುದನ್ನು ಈ ಪ್ರಕಾರವಾಗಿ ನಿನಗೆ ಹೇಳಿದನು. ಇನ್ನು ಕೃಷ್ಣಚೈತನ್ಯರ ಚರಿತ್ರ ವೃತ್ತಾಂತವನ್ನು ಯಥಾಸ್ಥಿತವಾಗಿ ಹೇಳುತ್ತೇನೆ. ಅದನ್ನು ಕೇಳು" ಎಂದನು.

ಎಂಬಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಪ್ರತಿಸರ್ಗಪರ್ವದ ನಾಲ್ಕನೆಯ ಖಂಡದ
ಕಲಿಯುಗದ ಇತಿಹಾಸ ಸಮುದಾಯದಲ್ಲಿ ಧನ್ವಂತರಿ, ಸುಶ್ರುತ, ಜಯದೇವ
ಇವರ ಉತ್ಪತ್ತಿವರ್ಣನೆಯೆಂಬ ಒಂಬತ್ತನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಪ್ರತಿಸರ್ಗಪರ್ವಣಿ ಚತುರ್ಥಖಂಡೇ

## ದಶಮೋಽಧ್ಯಾಯಃ

---

॥ ಜೀವ ಉವಾಚ ॥

ವಿಷ್ಣುಶರ್ಮಾ ಪುರಾ ಕಶ್ಚಿದ್ವಿಪ್ರೋ ಭೂದ್ವೇದಪಾರಗಃ ।
ಸರ್ವದೇವಮಯಂ ವಿಷ್ಣುಂ ಪೂಜಯಿತ್ವಾ ಪ್ರಸನ್ನಧೀಃ ॥ ೧ ॥

ಅನ್ಯೈಸ್ಸುರೈಶ್ಚ ಸಂಪೂಜ್ಯೋ ಬಭೂವ ಹರಿಪೂಜನಾತ್ ।
ಭಿಕ್ಷಾವೃತ್ತಿಪರೋ ನಿತ್ಯಂ ಪತ್ನೀಮಾನ್ ಪುತ್ರವರ್ಜಿತಃ ॥ ೨ ॥

---

## ಹತ್ತನೆಯ ಅಧ್ಯಾಯ

೧. ಬೃಹಸ್ಪತ್ಯಾಚಾರ್ಯರು ಕಥೆಯನ್ನು ಮುಂದುವರಿಸಿ ಹೇಳುತ್ತಾರೆ.— ಪೂರ್ವದಲ್ಲಿ ವೇದಾಧ್ಯಯನಸಂಪನ್ನನೂ, ನಿರ್ಮಲವಾದ ಬುದ್ಧಿಯುಳ್ಳವನೂ ಆದ ವಿಷ್ಣುಶರ್ಮನೆಂಬ ಒಬ್ಬ ಬ್ರಾಹ್ಮಣನು ಇದ್ದನು. ಅವನು ಸಕಲ ದೇವತಾಸ್ವರೂಪನಾದ ವಿಷ್ಣುವನ್ನು ಆರಾಧಿಸಿದನು.

೨. ಆ ಹರಿಯ ಪೂಜಾಪ್ರಭಾವದಿಂದ ಇತರ ದೇವತೆಗಳಿಂದಲೂ ಕೂಡ ಗೌರವವನ್ನು ಹೊಂದಿದನು. ಆತನು ಹೆಂಡತಿಯೊಡನೆ ಪ್ರತಿದಿನವೂ ಭಿಕ್ಷಾವೃತ್ತಿಯನ್ನು ಮಾಡುತ್ತಾ ಇದ್ದನು. ಆತನಿಗೆ ಮಕ್ಕಳಿರಲಿಲ್ಲ.

**ಕದಾಚಿತ್ತಸ್ಯ ಗೇಹೇ ವೈ ವ್ರತೀ ಕಶ್ಚಿತ್ಸಮಾಗತಃ ।**
**ದ್ವಿಜಪತ್ನೀಂ ತದೈಕಾಕೀಂ ಭಕ್ತಿನಮ್ರಾಂ ದರಿದ್ರಿಣೀಂ ॥**
**ದೃಷ್ಟ್ವೋವಾಚ ಮಹಾಭಾಗಃ ಸ ಸ್ಪರ್ಶಾಢ್ಯೋ ದಯಾಪರಃ ॥ ೩ ॥**

**ಅನೇನ ಸ್ಪರ್ಶಮಣಿನಾ ಲೋಹಧಾತುಶ್ಚ ಕಾಂಚನಂ ।**
**ಭವೇತ್ತಸ್ಮಾನ್ಮಹಾಸಾಧ್ವಿ ತ್ರಿದಿನಾಂತಂ ಗೃಹಾಣ ತಂ ॥ ೪ ॥**

**ಸ್ನಾತ್ವಾ ತಾವತ್ಸರಯ್ವಾಂ ಚಾಯಾಸ್ಯಾಮಿ ತೇಽಂತಿಕಂ ಮುದಾ ।**
**ಇತ್ಯುಕ್ತ್ವಾ ಸ ಯಯೌ ವಿಪ್ರೋ ಬ್ರಾಹ್ಮಣೀ ಬಹು ಕಾಂಚನಂ ॥**
**ಕೃತ್ವಾ ಲಕ್ಷ್ಮೀಂ ಸಮಾಪ್ಯಾಸೀದ್ವಿಷ್ಣುಶರ್ಮಾ ತದಾಗಮತ್ ॥ ೫ ॥**

**ಬಹುಸ್ವರ್ಣಯುತಾಂ ಪತ್ನೀಂ ದೃಷ್ಟ್ವೋವಾಚ ಹರಿಪ್ರಿಯಃ ।**
**ಗಚ್ಛ ನಾರಿ ಮದಾಘೂರ್ಣೇ ಯತ್ರ ವೈ ರಸಿಕೋ ಜನಃ ॥ ೬ ॥**

---

೩. ಒಂದಾನೊಂದುದಿನ ಆ ವಿಷ್ಣುಶರ್ಮನ ಮನೆಗೆ ಒಬ್ಬಾನೊಬ್ಬ ಸಂನ್ಯಾಸಿಯು ಬಂದನು. ದಯಾವಂತನಾದ ಅವನಲ್ಲಿ ಒಂದು ಸ್ಪರ್ಶಮಣಿಯಿದ್ದಿತು. ಏಕಾಂಗಿಯೂ, ಭಕ್ತಿಯಿಂದ ಕೂಡಿದವಳೂ, ದರಿದ್ರಳೂ ಆದ ಆ ಬ್ರಾಹ್ಮಣಪತ್ನಿಯನ್ನು ನೋಡಿ ಪುಣ್ಯಶೀಲನಾದ ಆ ಸಂನ್ಯಾಸಿಯು ಮಾತಾಡತೊಡಗಿದನು.

೪. "ಎಲೌ ಪತಿವ್ರತಾಶಿರೋಮಣಿಯೇ! ಈ ಸ್ಪರ್ಶಮಣಿಯಿಂದ ಚಿನ್ನದ ನಾಣ್ಯಗಳುಂಟಾಗುತ್ತವೆ. ಆದುದರಿಂದ ಇದನ್ನು ಮೂರುದಿನಗಳವರೆಗೂ ನಿನ್ನಲ್ಲಿ ಇಟ್ಟುಕೊಂಡಿರು."

೫. ಅಷ್ಟರಲ್ಲಿ ನಾನು ಸರಯೂನದಿಯಲ್ಲಿ ಸ್ನಾನಮಾಡಿಕೊಂಡು ನಿಮ್ಮ ಮನೆಗೆ ಬರುತ್ತೇನೆ" ಹೀಗೆಂದು ಹೇಳಿ ಆ ಸಂನ್ಯಾಸಿಯು ಹೊರಟು ಹೋದನು. ಬ್ರಾಹ್ಮಣನ ಹೆಂಡತಿಯು ಆ ಮಣಿಯಿಂದ ತುಂಬಾ ಚಿನ್ನವನ್ನು ಉತ್ಪನ್ನಮಾಡಿಕೊಂಡು ಐಶ್ವರ್ಯವಂತೆಯಾಗಿದ್ದಳು. ಅಷ್ಟರಲ್ಲಿಯೇ ವಿಷ್ಣುಶರ್ಮನು ಮನೆಗೆ ಬಂದನು.

೬. ವಿಷ್ಣುಭಕ್ತನಾದ ಅವನು ಚಿನ್ನದ ಆಭರಣಗಳಿಂದ ಶೋಭಿಸುವ ತನ್ನ ಹೆಂಡತಿಯನ್ನು ನೋಡಿ "ಎಲೇ ಮದಿಸಿರುವ ಹೆಂಗಸೇ! ರಸಿಕಪುರುಷರಿರುವ ಸ್ಥಳಕ್ಕೆ ಹೋಗು."

ಅಹಂ ವಿಷ್ಣುಪರೋ ದೀನಶ್ಚೌರಭೀತಃ ಸದೈವ ಹಿ ।
ಮಧುಮತ್ತಾಂ ಕಥಂ ತ್ವಾಂ ವೈ ಗೃಹೀತುಂ ಭುವಿ ಚ ಕ್ಷಮಃ ॥ ೭ ॥

ಇತಿ ಶ್ರುತ್ವಾ ವಚೋ ಘೋರಂ ಪತಿಭೀತಾ ಪತಿವ್ರತಾ ।
ಸಸ್ವರ್ಣಂ ಸ್ಪರ್ಶಕಂ ತಸ್ಮೈ ದತ್ವಾ ಸೇವಾಪರಾಭವತ್ ॥ ೮ ॥

ದ್ವಿಜೋಽಪಿ ಘುರ್ಘುರಾಮಧ್ಯೇ ತದ್ದ್ರವ್ಯಂ ಬಲತೋಽಕ್ಷಿಪತ್ ।
ತ್ರಿದಿನಾಂತೇ ಚ ಸ ಯತಿಸ್ತತ್ರಾಗತ್ಯ ಮುದಾನ್ವಿತಃ ॥
ಉವಾಚ ಬ್ರಾಹ್ಮಣೀಂ ದೀನಾಂ ಸ್ವರ್ಣಂ ಕಿಂ ನ ಕೃತಂ ತ್ವಯಾ ॥ ೯ ॥

ಸಾಹ ಭೋ ಮತ್ಪತಿಶ್ಶುದ್ಧೋ ಗೃಹೀತ್ವಾ ಸ್ಪರ್ಶಕಂ ರುಷಾ ।
ಘುರ್ಘುರೇ ಚ ನಿಚಿಕ್ಷೇಪ ತತೋಽಹಂ ವಹ್ನಿಪಾಕಿನೀ ॥
ನಿರ್ಲೋಹೋ ವರ್ತತೇ ವಿಪ್ರಸ್ತತಃ ಪ್ರಭೃತಿ ಹೇ ಗುರೋ ॥ ೧೦ ॥

---

೭. "ನಾನು ಯಾವಾಗಲೂ ವಿಷ್ಣುಭಕ್ತನೂ, ಕಳ್ಳರ ಹೆದರಿಕೆಯುಳ್ಳವನೂ, ದರಿದ್ರನೂ ಆಗಿರುವೆನು. ಮದ್ಯಪಾನಮಾಡಿದವರಂತೆ ಮದಿಸಿದ ನಿನ್ನನ್ನು ಸ್ವೀಕರಿಸಲು ಈ ಭೂಮಿಯಲ್ಲಿ ಆ ರಸಿಕಜನರೇ ಸಮರ್ಥರು. ನಾನು ಸಮರ್ಥನಲ್ಲ" ಎಂದನು.

೮. ಪತಿಯು ಈರೀತಿ ಹೇಳಿದ ಕಠಿಣವಾದ ಮಾತನ್ನು ಕೇಳಿ ಪತಿವ್ರತೆಯೂ ಪತಿಗೆ ಭಯಪಡುವವಳೂ ಆದ ಆ ಹೆಂಗಸು ಆ ಸಮಸ್ತ ಚಿನ್ನವನ್ನೂ ಸ್ಪರ್ಶಮಣಿಯನ್ನೂ ತನ್ನ ಪತಿಯು ವಶಕ್ಕೆ ಸಮರ್ಪಿಸಿ ಅವನ ಸೇವೆಯಲ್ಲಿ ನಿರತಳಾದಳು.

೯. ಆ ಬ್ರಾಹ್ಮಣನಾದರೋ ಆ ಮಣಿಯನ್ನು ಮುಳ್ಳುಗಳ ಪೊದೆಯ ಮಧ್ಯಕ್ಕೆ ರಭಸದಿಂದ ಎಸೆದನು. ಮೂರುದಿನಗಳನಂತರ ಆ ಯತಿಯು ಸತ್ಪಾತ್ರದಲ್ಲಿ ಉಪಕಾರ ಮಾಡಿದೆನೆಂಬ ಸಂತೋಷದಿಂದ ಅಲ್ಲಿಗೆ ಬಂದು ದೀನಳಾದ ಬ್ರಾಹ್ಮಣಿಯನ್ನು ಕಂಡು ಆಕೆಯನ್ನು ಕುರಿತು "ನೀನು ಚಿನ್ನವನ್ನು ಮಾಡಲಿಲ್ಲವೇ?" ಎಂದು ಕೇಳಿದನು.

೧೦. ಆ ಮಾತನ್ನು ಕೇಳಿ ಆ ಬ್ರಾಹ್ಮಣನ ಹೆಂಡತಿಯು "ಎಲೈ ಯತಿಯೇ! ಪರಿಶುದ್ಧನಾದ ನನ್ನ ಗಂಡನು ಸ್ಪರ್ಶಮಣಿಯನ್ನು ತೆಗೆದುಕೊಂಡು ಕೋಪದಿಂದ ಮುಳ್ಳಿನ ಮಧ್ಯದಲ್ಲಿ ಎಸೆದನು. ಬಳಿಕ ನಾನು ಆ ವೈಭವನ್ನು ತೊರೆದು ಒಲೆಯ ಮುಂದೆ ಕುಳಿತು ಅಡಿಗೆಯನ್ನು ಮಾಡುತ್ತಿರುತ್ತೇನೆ. ಎಲೈ ಗುರುವೇ! ಅಂದಿನಿಂದಲೂ ನನ್ನ ಪತಿಯು ಲೋಹಶೂನ್ಯನಾಗಿರುತ್ತಾನೆ" ಎಂದು ಹೇಳಿದಳು.

ಇತಿ ಶ್ರುತ್ವಾ ತು ವಚನಂ ಸ ಯತಿರ್ವಿಸ್ಮಯಾನ್ವಿತಃ ।
ಸ್ಥಿತ್ವಾ ದಿನಾಂತೇ ತಂ ವಿಪ್ರಮುವಾಚ ಬಹು ಭರ್ತ್ಸಯನ್ ॥ ೧೧ ॥

ದರಿದ್ರೋ ಭಿಕ್ಷುಕಶ್ಚಾಸಿ ಭವಾನ್ದೈವೇನ ಮೋಹಿತಃ ।
ದೇಹಿ ಮೇ ಸ್ಪರ್ಶಕಂ ಶೀಘ್ರಂ ನೋ ಚೇತ್ಪ್ರಾಣಾಂಸ್ತ್ಯಜಾಮ್ಯಹಂ ॥ ೧೨ ॥

ಇತ್ಯುಕ್ತವಂತಂ ಯತಿನಂ ವಿಷ್ಣುಶರ್ಮಾ ತದಾಽಬ್ರವೀತ್ ।
ಗಚ್ಛ ತ್ವಂ ಘರ್ಘರಾಕೂಲೇ ತತ್ರ ವೈ ಸ್ಪರ್ಶಕಸ್ತವ ॥ ೧೩ ॥

ಇತ್ಯುಕ್ತ್ವಾ ಯತಿನಾ ಸಾರ್ಧಂ ಗೃಹೀತ್ವಾ ಕಂಟಿಕಾನ್ಬಹೂನ್ ।
ಯತೀನೇ ದರ್ಶಯಾಮಾಸ ಸ್ಪರ್ಶಕಾನಿವ ಕಂಟಿಕಾನ್ ॥ ೧೪ ॥

---

೧೧. ಈ ಮಾತನ್ನು ಕೇಳಿ ಆ ಯತಿಯು ಬಹಳ ಆಶ್ಚರ್ಯದಿಂದ ಕೂಡಿ ಆಹೊತ್ತು ಅಲ್ಲಿಯೇ ಇದ್ದು, ಸಾಯಂಕಾಲ ಆ ಬ್ರಾಹ್ಮಣನನ್ನು ಬಹಳವಾಗಿ ಗದ್ದರಿಸುತ್ತಾ ಹೇಳ ತೊಡಗಿದನು.

೧೨. "ಎಲೈ ಬ್ರಾಹ್ಮಣನೇ! ನೀನು ದೈವದಿಂದ ಭ್ರಾಂತಿಗೊಳಿಸಲ್ಪಟ್ಟವನಾಗಿ ದರಿದ್ರನೂ, ಭಿಕ್ಷುಕನೂ ಆಗಿರುತ್ತೀಯೆ. ಈಗ ಜಾಗ್ರತೆಯಾಗಿ ನನ್ನ ಸ್ಪರ್ಶಮಣಿಯನ್ನು ಕೊಡು. ಇಲ್ಲದಿದ್ದರೆ ನಾನು ಇಲ್ಲಿಯೇ ಪ್ರಾಣವನ್ನು ಬಿಡುವೆನು" ಎಂದು ಹೇಳಿದನು.

೧೩. ಹೀಗೆ ಹೇಳುತ್ತಿರುವ ಯತಿಯನ್ನು ಕುರಿತು ವಿಷ್ಣುಶರ್ಮನು "ಆ ಮುಳ್ಳುಗಿಡದ ಪಕ್ಕಕ್ಕೆ ಹೋಗಿ ನೋಡು; ಅಲ್ಲಿ ನಿನ್ನ ಸ್ಪರ್ಶಮಣಿಯು ಇದೆ" ಎಂದನು.

೧೪. ಹೀಗೆ ಹೇಳಿ ಆ ಯತಿಯೊಂದಿಗೆ ಅಲ್ಲಿಗೆ ಹೋಗಿ ಪೊದೆಯ ಮುಳ್ಳುಗಳನ್ನು ತೆಗೆದುಹಾಕಿ ಸ್ಪರ್ಶಮಣಿಯಂತೆ ಆಗಿರುವ ಆ ಮುಳ್ಳುಗಳನ್ನು ಯತಿಗೆ ತೋರಿಸಿದನು.

ತದಾ ತು ಸ ಯತೀ ವಿಪ್ರಂ ನತ್ವಾ ಪ್ರೋವಾಚ ನಮ್ರಧೀಃ ।
ಮಯಾ ವೈ ದ್ವಾದಶಾಬ್ದಾಂತಂ ಸಮ್ಯಗಾರಾಧಿತಃ ಶಿವಃ ॥
ತತಃ ಪ್ರಾಪ್ತಂ ಶುಭಂ ರತ್ನಂ ತತ್ತು ತ್ವದ್ದರ್ಶನೇನ ವೈ ॥ ೧೫ ॥

ಸ್ಪರ್ಶಕೋ ಬಹುಧಾ ಪ್ರಾಪ್ತೋ ಮಯಾ ಲೋಭಾತ್ಮನಾ ದ್ವಿಜ ।
ಇತ್ಯಾಭಾಷ್ಯ ಶುಭಂ ಜ್ಞಾನಂ ಪ್ರಾಪ್ತೋ ಮೋಕ್ಷಮವಾಪ್ತವಾನ್ ॥ ೧೬ ॥

ವಿಷ್ಣುಶರ್ಮಾ ಸಹಸ್ರಾಬ್ದಮುಷಿತ್ವಾ ಜಗತೀತಲೇ ।
ಸೂರ್ಯಮಾರಾಧ್ಯ ವಿಧಿವದ್ವಿಷ್ಣೋರ್ಮೋಕ್ಷಮವಾಪ್ತವಾನ್ ॥ ೧೭ ॥

ಸ ದ್ವಿಜೋ ವೈಷ್ಣವಂ ತೇಜೋ ಧೃತ್ವಾ ವೈ ಮಾಸಿ ಫಾಲ್ಗುನೇ ।
ತ್ರೈಲೋಕ್ಯಮತಪತ್ಸ್ವಾಮೀ ದೇವಕಾರ್ಯಪರಾಯಣಃ ॥ ೧೮ ॥

---

೧೫. ಆಗ ಆ ಯತಿಯು ಬ್ರಾಹ್ಮಣನಿಗೆ ವಿನಯದಿಂದ ನಮಸ್ಕಾರಮಾಡಿ ಹೀಗೆ ಹೇಳಿದನು. "ಎಲೈ ಬ್ರಾಹ್ಮಣನೇ! ನಾನು ಹನ್ನೆರಡು ವರ್ಷಗಳವರೆಗೆ ಈಶ್ವರನನ್ನು ಚೆನ್ನಾಗಿ ಪೂಜಿಸಿದೆನು. ಅವನಿಂದ ಉತ್ತಮವಾದ ಈ ಒಂದು ರತ್ನವನ್ನು ಮಾತ್ರ ಸಂಪಾದಿಸಿದೆನು."

೧೬. "ಆ ಸ್ಪರ್ಶಮಣಿಯು ಲೋಭದಿಂದಕೂಡಿದ ನಾನು ನಿನ್ನ ದರ್ಶನದಿಂದ ಈಗ ಅದನ್ನು ಅನೇಕವಾಗಿ ಹೊಂದಿದೆನು" ಎಂದು ಹೇಳಿ ದಿವ್ಯಜ್ಞಾನವನ್ನು ಪಡೆದು ಮೋಕ್ಷವನ್ನು ಹೊಂದಿದನು.

೧೭. ವಿಷ್ಣುಶರ್ಮನು ಸಾವಿರವರ್ಷಗಳವರೆಗೆ ಭೂಮಿಯಲ್ಲಿದ್ದು ನಿಯಮದಿಂದ ಸೂರ್ಯನನ್ನು ಪೂಜಿಸಿ ವಿಷ್ಣುಸಾನ್ನಿಧ್ಯದಲ್ಲಿರಬಹುದಾದ ಮೋಕ್ಷವನ್ನು ಪಡೆದನು.

೧೮. ಆ ಬ್ರಾಹ್ಮಣನೇ ವೈಷ್ಣವ ತೇಜಸ್ಸನ್ನು ಪಡೆದು ಸೂರ್ಯನಂತೆ ಪ್ರಕಾಶಿಸಿ ದೇವಕಾರ್ಯದಲ್ಲಿ ನಿರತನೆನಿಸಿ ಫಾಲ್ಗುನಮಾಸಕ್ಕೆ ಅಧಿಪನಾಗಿ ಮೂರುಲೋಕಗಳನ್ನೂ ತಪಿಸುತ್ತಾನೆ ಎಂದನು.

॥ ಸೂತ ಉವಾಚ ॥

ಇತ್ಯುಕ್ತ್ವಾ ಭಗವಾನ್ಜೀವಃ ಪುನಃ ಪ್ರಾಹ ಶಚೀಪತಿಂ ।
ಫಾಲ್ಗುನೇ ಮಾಸಿ ತಂ ಸೂರ್ಯಂ ಸಮಾರಾಧ್ಯ ಸುಖೀ ಭವ ॥ ೧೯ ॥

ಇತ್ಯುಕ್ತೋ ಗುರುಣಾ ದೇವೋ ಧ್ಯಾತ್ವಾ ಸರ್ವಮಯಂ ಹರಿಂ ।
ಪೂಜನೈರ್ಬಹುಧಾಕಾರೈರ್ದೇವದೇವಮಪೂಜಯತ್ ॥ ೨೦ ॥

ತದಾ ಪ್ರಸನ್ನೋ ಭಗವಾನ್ಸಮಭೂತ್ಸೂರ್ಯಮಂಡಲಾತ್ ।
ಚತುರ್ಭುಜೋ ಹಿ ರಕ್ತಾಂಗೋ ಯಥಾ ಯಕ್ಷಸ್ತಥೈವ ಸಃ ॥
ಪಶ್ಯತಾಂ ಸರ್ವದೇವಾನಾಂ ಶಕ್ರದೇಹಮುಪಾಗಮತ್ ॥ ೨೧ ॥

ತತ್ತೇಜಸಾ ತದಾ ಶಕ್ರಃ ಸ್ವಾಂತರ್ಲೀಯ ಸ್ವಕಂ ವಪುಃ ।
ಅಯೋನಿಸ್ಸ ದ್ವಿಜೋ ಭೂತ್ವಾ ಶಚೀ ದೇವೀ ತಥೈವ ಸಾ ॥ ೨೨ ॥

---

೧೯. ಸೂತಮುನಿವರ್ಯನು ಹೇಳುತ್ತಾನೆ—ಪೂಜ್ಯನಾದ ಬೃಹಸ್ಪತಿಯು ಇಂದ್ರನನ್ನು ಕುರಿತು ಈ ರೀತಿಯಾಗಿ ಈತನ ಮಹಿಮೆಯನ್ನು ಹೇಳಿ ಅನಂತರ ಅವನನ್ನು ಕುರಿತು "ಫಾಲ್ಗುಣಮಾಸದಲ್ಲಿ ನೀನು ಆ ಸೂರ್ಯನನ್ನು ಆರಾಧಿಸಿ ಸುಖಿಯಾಗು" ಎಂದು ಹೇಳಿದನು.

೨೦. ಹೀಗೆ ಬೃಹಸ್ಪತ್ಯಾಚಾರ್ಯರು ಹೇಳಲಾಗಿ ಇಂದ್ರನು ಸರ್ವಸ್ವರೂಪನೂ, ಪರಮಾತ್ಮನೂ, ದೇವದೇವನೂ, ಆದ ಶ್ರೀ ವಿಷ್ಣುವನ್ನು ಧ್ಯಾನಮಾಡಿ ನಾನಾವಿಧವಾಗಿ ಪೂಜೆಮಾಡಿ ಭಜಿಸಿದನು.

೨೧. ಆಗ ಸಂತುಷ್ಟನಾದ ಪರಮಾತ್ಮನು ನಾಲ್ಕುತೋಳುಗಳುಳ್ಳವನೂ, ಕೆಂಪಾದ ಶರೀರವುಳ್ಳವನೂ, ಆಗಿ ಸೂರ್ಯಮಂಡಲದಿಂದ ಹೊರಟು ಪ್ರತ್ಯಕ್ಷನಾದನು. ಮತ್ತು ಕುಬೇರನಿಗೆ ಸಮಾನನಾದ ಅವನು ಸಕಲ ದೇವತೆಗಳು ನೋಡುತ್ತಿರುವಂತೆಯೇ ಇಂದ್ರನ ಶರೀರದಲ್ಲಿ ಸೇರಿಕೊಂಡನು.

೨೨. ಕೂಡಲೆ ಇಂದ್ರನು ಸೂರ್ಯನ ತೇಜಸ್ಸಿನಿಂದ ತನ್ನ ದೇಹವನ್ನು ಮರೆಸಿಕೊಂಡು ಅಯೋನಿಜನಾದ ಬ್ರಾಹ್ಮಣನಾದನು. ಶಚೀದೇವಿಯೂ ಕೂಡ ಹಾಗೆಯೇ ಬ್ರಾಹ್ಮಣಿಯಾದಳು.

ತದಾ ತೌ ಮಿಥುನೀಭೂತೌ ವೈಷ್ಣವಾಗ್ನಿಪ್ರಪೀಡಿತೌ ।
ರೇಮಾತೇ ವರ್ಷಪರ್ಯಂತಂ ಗಂಗಾಕೂಲೇ ಮಹಾವನೇ ॥ ೨೩ ॥

ಅಥಾದ್ಗರ್ಭಂ ತದಾ ದೇವೀ ಶಚೀ ತು ದ್ವಿಜರೂಪಿಣೀ ।
ಭಾದ್ರಶುಕ್ಲೇ ಗುರೌ ವಾರೇ ದ್ವಾದಶ್ಯಾಂ ಬ್ರಾಹ್ಮಮಂಡಲೇ ॥ ೨೪ ॥

ಪ್ರಾದುರಾಸಿಂತ್ಸ್ವಯಂ ವಿಷ್ಣುರ್ಧೃತ್ವಾ ಸರ್ವಕಲಾಂ ಹರಿಃ ।
ಚತುರ್ಭುಜಶ್ಚ ರಕ್ತಾಂಗೋ ರವಿಕುಂಭಸಮಪ್ರಭಃ ॥ ೨೫ ॥

ತದಾ ರುದ್ರಾಶ್ಚ ವಸವೋ ವಿಶ್ವೇದೇವಾ ಮರುದ್ಗಣಾಃ ।
ಸಾಧ್ಯಾಶ್ಚ ಭಾಸ್ಕರಾಃ ಸಿದ್ಧಾಸ್ತುಷ್ಟುವುಸ್ತಂ ಸನಾತನಂ ॥ ೨೬ ॥

॥ ದೇವಾ ಊಚುಃ ॥

ಕುಲಿಶಧ್ವಜಪದ್ಮಗದಾಂಕುಶಯುತಂ ।
ಚರಣಂ ತವ ನಾಥ ಮಹಾಭರಣಂ ॥

---

೨೩. ಆಗ ದಂಪತಿಗಳಾದ ಅವರಿಬ್ಬರೂ ವೈಷ್ಣವ ತೇಜಸ್ಸಿನಿಂದಕೂಡಿ ಗಂಗಾ ನದಿಯ ದಡದ ಮಹಾರಣ್ಯದಲ್ಲಿ ಒಂದುವರ್ಷದವರೆಗೂ ಕ್ರೀಡಿಸಿದರು.

೨೪-೨೫. ಆಗ ಬ್ರಾಹ್ಮಣಿಯಾದ ಶಚೀದೇವಿಯು ಗರ್ಭವನ್ನು ಧರಿಸಿದಳು. ಸಾಕ್ಷಾತ್‌ವಿಷ್ಣುಪರಮಾತ್ಮನು ನಾಲ್ಕು ತೋಳುಗಳುಳ್ಳವನೂ, ಕೆಂಪಾದ ಶರೀರವುಳ್ಳ ವನೂ, ಸೂರ್ಯಬಿಂಬಕ್ಕೆ ಸಮಾನವಾದ ಕಾಂತಿಯುಳ್ಳವನೂ, ಸಕಲ ಕಲಾಪರಿ ಪೂರ್ಣನೂ, ಆಗಿ ಭಾದ್ರಪದ ಶುಕ್ಲ ದ್ವಾದಶೀ ಗುರುವಾರದ ದಿನ ಬ್ರಹ್ಮಮಂಡಲದಲ್ಲಿ ಅವತರಿಸಿದನು.

೨೬. ಆಗ ಏಕಾದಶರುದ್ರರು, ಅಷ್ಟವಸುಗಳು, ವಿಶ್ವೇದೇವರು, ಸಪ್ತಮರುತ್ತು ಗಳು, ಸಾಧ್ಯರು, ದ್ವಾದಶಾದಿತ್ಯರು, ಸಿದ್ಧರು ಇವರೆಲ್ಲರೂ ನಾಶರಹಿತನಾದ ಆ ಪರಮಾತ್ಮನನ್ನು ಸ್ತೋತ್ರಮಾಡಿದರು.

೨೭. ದೇವತೆಗಳು ಹೇಳಿದ ಸ್ತೋತ್ರದ ಅರ್ಥವು ಈ ಪ್ರಕಾರ ಇದೆ. ಎಲೈ ಸ್ವಾಮಿಯೇ ! ವಜ್ರಾಯುಧ, ಪತಾಕೆ, ಕಮಲ, ಗದೆ ಮತ್ತು ಅಂಕುಶ ಇವುಗಳ

ರಮಣಂ ಮುನಿಭಿರ್ವಿಧಿಶಂಭುಯುತಂ ।
ಪ್ರಣಮಾಮ ವಯಂ ಭವಭೀತಿಹರಂ ॥ ೨೭ ॥

ದರಚಕ್ರಗದಾಂಬುಜಶಂಖಧರಃ ।
ಸುರಶತ್ರುಕಠೋರಶರೀರಹರಃ ॥
ಸಚರಾಚರಲೋಕಭರಕ್ಷಪಲಃ ।
ಖಲನಾಶಕರಸ್ಸುರಕಾರ್ಯಕರಃ ॥ ೨೮ ॥

ನಮಸ್ತೇ ಶಚೀನಂದನಾನಂದಕಾರಿ ।
ಮಹಾಪಾಪಸಂತಾಪದುರ್ಲಾಪಹಾರಿನ್ ॥
ಸುರಾರೀನ್ನಿಹತ್ಯಾಶು ಲೋಕಾಧಿಧಾರಿನ್ ।
ಸ್ವಭಕ್ತ್ಯಾಘಜಾತಾಂಗಕೋಟಿಪ್ರಹಾರಿನ್ ॥ ೨೯ ॥

---

ಚಿಹ್ನೆಗಳಿಂದ ಪ್ರಕಾಶಮಾನವೂ, ಮುನಿಗಳಿಗೆ ಆಶ್ರಯವೂ, ಉತ್ತಮ ಅಲಂಕಾರ ಯುಕ್ತವೂ, ಹರಿಹರಾಂಶದಿಂದ ಕೂಡಿದುದೂ, ಸಂಸಾರದ ಭಯವನ್ನು ಹೋಗಲಾಡಿಸುವುದೂ ಆದ ನಿನ್ನ ಪಾದಕ್ಕೆ ನಾವು ನಮಸ್ಕರಿಸುತ್ತೇವೆ.

೨೮. ನೀನು ಶುಭ್ರವಾದ ಶಂಖ, ಚಕ್ರ, ಗದೆ, ಪದ್ಮ ಇವನ್ನು ಧರಿಸಿದ ತೋಳುಗಳುಳ್ಳವನೂ, ರಾಕ್ಷಸರ ಕ್ರೂರದೇಹಗಳನ್ನು ನಾಶಪಡಿಸುವವನೂ, ಚರಾಚರಾತ್ಮಕವಾದ ಲೋಕಗಳನ್ನು ರಕ್ಷಿಸುವವನೂ, ಅತಿಚಂಚಲನೂ, ದುಷ್ಟನಾಶಕನೂ, ದೇವತೆಗಳ ಕಾರ್ಯವನ್ನು ನೆರವೇರಿಸತಕ್ಕವನೂ (ಆಗಿರುತ್ತೀಯೆ.)

೨೯. ಎಲೈ ಆನಂದದಾಯಕನಾದ ಶಚೀಪುತ್ರನೇ ! ಮಹಾಪಾಪಗಳನ್ನೂ ಸಂಕಟಗಳನ್ನೂ ಕೆಟ್ಟಮಾತುಗಳಿಂದುಂಟಾದ ಪಾಪಗಳನ್ನೂ ನಾಶಪಡಿಸುವವನೇ ! ರಾಕ್ಷಸರನ್ನು ನಾಶಮಾಡಿ ಶೀಘ್ರವಾಗಿ ಭೂಲೋಕವನ್ನು ಧರಿಸಿದವನೇ ! ಪಾಪರಾಶಿಯಿಂದೊಡಗೂಡಿದ ಕೋಟಿಶರೀರಗಳನ್ನು ನಿನ್ನ ಭಕ್ತಿಮಾತ್ರದಿಂದ ಪ್ರಹರಿಸಿದವನೇ !

ತ್ವಯಾ ಹಂಸರೂಪೇಣ ಸತ್ಯಂ ಪ್ರಪಾಲ್ಯಂ ।
ತ್ವಯಾ ಯಜ್ಞರೂಪೇಣ ವೇದಃ ಪ್ರರಕ್ಷ್ಯಃ ॥
ಸ ವೈ ಯಜ್ಞರೂಪೋ ಭವಾನ್‌ಲೋಕಧಾರೀ ।
ಶಚೀನಂದನಃ ಶಕ್ರಶರ್ಮಪ್ರಸಕ್ತಃ ॥ ೩೦ ॥

ಅನರ್ಪಿತಚರೋಚಿರಾತ್ಕರುಣಯಾವತೀರ್ಣಃ ಕಲೌ ।
ಸಮರ್ಪಯಿತುಮುನ್ನತೋಜ್ಜ್ವಲರಸಾಂ ಸ್ವಭಕ್ತಿಶ್ರಿಯಂ ॥
ಹರೇಃ ಪುನರಸುಂದರದ್ಯುತಿಕದಂಬಸಂದೀಪಿತಃ ।
ಸದಾ ಸ್ಫುರತು ನೋ ಹೃದಯಕಂದರೇ ಶಚೀನಂದನಃ ॥ ೩೧ ॥

ವಿಸರ್ಜತಿ ನರಾನ್ಭವಾನ್ಕರುಣಯಾ ಪ್ರಪಾಲ್ಯ ಕ್ಷಿತೌ ।
ನಿವೇದಯಿತುಮುದ್ಭವಃ ಪರಾತ್ಪರಂ ಸ್ವಕೀಯಂ ಪದಂ ॥
ಕಲೌ ದಿತಿಜಸಂಭವಾಧಿವ್ಯಥಾಬ್ಧಿಸುರಮಗ್ನಗಾನ್ ।
ಸಮುದ್ಧರ ಮಹಾಪ್ರಭೋ ಕೃಷ್ಣಚೈತನ್ಯ ಶಚೀಸುತ ॥ ೩೨ ॥

---

೩೦. ಹಂಸರೂಪನಾಗಿ ನೀನು ಸತ್ಯವನ್ನು ಪರಿಪಾಲಿಸಬೇಕು. ಯಜ್ಞರೂಪನಾದ ನೀನು ವೇದವನ್ನು ರಕ್ಷಿಸಬೇಕು. ಅಂಥಾ ಯಜ್ಞರೂಪನೂ ಲೋಕಗಳನ್ನು ಧರಿಸಿದವನೂ ಆದ ನೀನು ಇಂದ್ರನ ಕಲ್ಯಾಣಕ್ಕಾಗಿ ಶಚೀಪುತ್ರನಾಗಿರುತ್ತೀಯೆ.

೩೧. ದೇವತೆಗಳಿಂದ ಪೂಜಿಸಲ್ಪಡುವ ಪಾದವುಳ್ಳವನೂ, ರಸಭರಿತವಾಗಿರುವ ನಿನ್ನ ಭಕ್ತಿಯೆಂಬ ಸಂಪತ್ತನ್ನು ಕೊಡುವುದಕ್ಕಾಗಿ ದಯೆಯಿಂದ ಕಲಿಯುಗದಲ್ಲಿ ಅವತಾರಮಾಡಿದವನೂ, ಪರಮಾತ್ಮನಾದ ಹರಿಯ ದಿವ್ಯಕಾಂತಿಯ ಸಮೂಹದಿಂದ ಪ್ರಕಾಶಮಾನನೂ ಆದ, ಶಚೀಪುತ್ರನು ಯಾವಾಗಲೂ ನಮ್ಮ ಹೃದಯವೆಂಬ ಗುಹೆಯಲ್ಲಿ ಪ್ರಕಾಶಿಸಲಿ.

೩೨. ಶಚೀಪುತ್ರನಾದ ಕೃಷ್ಣಚೈತನ್ಯಮಹಾಪ್ರಭುವೇ! ನೀನು ದಯೆಯಿಂದ ಮನುಷ್ಯರನ್ನು ಭೂಮಿಯಲ್ಲಿ ಸೃಷ್ಟಿಸಿ ಅವರನ್ನು ಕಾಪಾಡುತ್ತಾ ಅವರಿಗೆ ಉತ್ತಮೋತ್ತಮವಾದ ನಿನ್ನ ಪದವಿಯು ದೊರೆಯುವ ಮಾರ್ಗತೋರಿಸುವುದಕ್ಕಾಗಿ ಕಲಿಯುಗದಲ್ಲಿ ಅವತಾರಮಾಡಿರುವೆ. ಕಲಿಯುಗದಲ್ಲಿ ದೈತ್ಯರಿಂದುಂಟಾದ ಕಷ್ಟಗಳು ರೋಗಗಳು ಮತ್ತು ವ್ಯಥೆಗಳು ಎಂಬ ಸಮುದ್ರದಲ್ಲಿ ಮುಳುಗಿರುವವರನ್ನು ಉದ್ಧಾರ ಮಾಡುವವನಾಗು.

ಮಾಧುರ್ಯೈರ್ಮಧುಭಿಸ್ಸುಗಂಧವದನಃಸ್ವರ್ಣಾಂಬುಜಾನಾಂ ವನಂ।
ಕಾರುಣ್ಯಾಮೃತನಿರ್ಝರೈರುಪಚಿತಃ ಸತ್ಪ್ರೇಮಹೇಮಾಚಲಃ ॥
ಭಕ್ತಾಂಭೋಧರಧಾರಿಣೀ ವಿಜಯಿನೀ ನಿಷ್ಪಂಕಸಪ್ತಾವಲೀ ।
ದೇವೋ ನಃ ಕುಲದೈವತಂ ವಿಜಯತೇ ಚೈತನ್ಯ ಕೃಷ್ಣೋ ಹರಿಃ ॥೩೩॥

ದೇವಾರಾತಿಜನ್ಯೈರಧರ್ಮಜನಿತೈಸ್ಸಂಪೀಡಿತೇಯಂ ಮಹೀ ।
ಸಂಕುಚ್ಯಾಶು ಕಲೌ ಕಲೇವರಮಿದಂ ಬೀಜಾಯ ಹಾ ವರ್ತತೇ ॥
ತ್ವನ್ನಾಮ್ನೈವ ಸುರಾರಯೋ ವಿದಲಿತಾಃ ಪಾತಾಲಗಾಃ ಪೀಡಿತಾಃ ।
ಮ್ಲೇಚ್ಛಾ ಧರ್ಮಪರಾಃ ಸುರೇಶನಮನಾಸ್ತಸ್ಮೈ ನಮೋ ವ್ಯಾಪಿನೇ
॥ ೩೪ ॥

---

೩೩. ಮಾಧುರ್ಯಯುಕ್ತವಾದ ಮಧುಪಿನಿಂದ ಸುವಾಸನಾಮಯವಾದ ಮುಖವುಳ್ಳವನೂ, ಸುವರ್ಣದ ಕಮಲವನದಂತಿರುವವನೂ, ಕರುಣೆ ಎಂಬ ಅಮೃತದ ಪ್ರಭಾವದಿಂದ ಅಭಿವೃದ್ಧಿಗೊಂಡಿರುವ ಉತ್ತಮ ಪ್ರೀತಿಗೆ ಮೇರುಪರ್ವತ ಸದೃಶನಾದವನೂ, ಜಯಶೀಲರಾದ ಭಕ್ತರೆಂಬ ಮೇಘಪಂಕ್ತಿಗಳನ್ನು ಧರಿಸಿದ ನಿಶ್ಚಲವಾದ ದೊಡ್ಡ ಮೇಘದಂತಿರುವವನೂ, ನಮ್ಮ ಕುಲದೇವನೂ ಸಾಕ್ಷಾತ್ ವಿಷ್ಣುವೂ ಆದ ಶ್ರೀ ಕೃಷ್ಣಚೈತನ್ಯನು ಸರ್ವೋತ್ಕೃಷ್ಟನಾಗಲಿ.

೩೪. ತಮ್ಮ ಪಾಪಕರ್ಮಗಳಿಂದ ರಾಕ್ಷಸರಾಗಿ ಜನಿಸಿ, ದೇವತೆಗಳಿಗೆ ವಿರೋಧಿಗಳಾಗಿ ಇವರು ಈ ಭೂಮಿಯನ್ನು ಅನೇಕ ವಿಧದಿಂದ ಹಿಂಸೆಗೊಳಿಸುತ್ತಿರುವರು. ಇದರಿಂದ ಭೂದೇವಿಯು ವಿಶಾಲವಾದ ತನ್ನ ಶರೀರವನ್ನು ಕಲಿಯುಗದಲ್ಲಿ ಜಾಗ್ರತೆ ಸಂಕೋಚಮಾಡಿಕೊಂಡು ನಿನ್ನ ಉತ್ಪತ್ತಿಗೋಸ್ಕರವೇ ಇಲ್ಲಿಯವರೆಗೂ ಕಷ್ಟಗಳನ್ನು ಅನುಭವಿಸುತ್ತಿದ್ದಳು. ಈಗ ನೀನು ಅವತರಿಸಿರಲಾಗಿ ನಿನ್ನ ಹೆಸರನ್ನು ಕೇಳಿದ ಮಾತ್ರದಿಂದಲೇ ರಾಕ್ಷಸರೆಲ್ಲರೂ ನಾಶರಾದರು. ಪಾತಾಳಲೋಕದಲ್ಲಿದ್ದ ದೈತ್ಯರೂ ಕೂಡ ಭಯಪೀಡಿತರಾದರು. ಅಧರ್ಮನಿರತರಾದ ಮ್ಲೇಚ್ಛರೂ ಕೂಡ ದೇವೇಂದ್ರನಿಗೆ ನಮಸ್ಕಾರಮಾಡುವಂತಾದರು. ಇಂಥಾ ಸರ್ವವ್ಯಾಪಕನಾದ ನಿನಗೆ ನಮಸ್ಕಾರ (ಎಂದು ಸ್ತುತಿಸಿದರು.)

॥ ಸೂತ ಉವಾಚ ॥

ಇತ್ಯಭಿಷ್ಟೂಯ ಪುರುಷಂ ಯಜ್ಞೇಶಂ ಚ ಶಚೀಪತಿಂ ।
ಬೃಹಸ್ಪತಿಮುಪಾಗಮ್ಯ ದೇವಾ ವಚನಮಬ್ರುವನ್ ॥ ೩೫ ॥

ವಯಂ ರುದ್ರಾ ಮಹಾಭಾಗ ಇಮೇ ಚ ವಸವೋಽಶ್ವಿನೌ ।
ಕೇನ ಕೇನಾಂಶಕೇನೈವ ಜನಿಷ್ಯಾಮೋ ಮಹೀತಲೇ ॥
ತತ್ಸರ್ವಂ ಕೃಪಯಾ ದೇವ ವಕ್ತುಮರ್ಹತಿ ನೋ ಭವಾನ್ ॥ ೩೬ ॥

॥ ಬೃಹಸ್ಪತಿರುವಾಚ ॥

ಅಹಂ ವಃ ಕಥಯಿಷ್ಯಾಮಿ ಶೃಣುಧ್ವಂ ಸುರಸತ್ತಮಾಃ ।
ಪುರಾ ಪೂರ್ವಭವೇ ಚಾಸೀನ್ಮೃಗವ್ಯಾಧೋ ದ್ವಿಜಾಧಮಃ ॥
ಧನುರ್ಬಾಣಧರೋ ನಿತ್ಯಂ ಮಾರ್ಗೇ ವಿಪ್ರವಿಹಿಂಸಕಃ ॥ ೩೭ ॥

ಹತ್ವಾ ದ್ವಿಜಾನ್ಮಹಾಮೂಢಸ್ತೇಷಾಂ ಯಜ್ಞೋಪವೀತಕಂ ।
ಗೃಹೀತ್ವಾ ಹೇಲಯಾ ದುಷ್ಟೋ ಮಹಾಕ್ರೋಶಸ್ತು ತತ್ಕೃತಃ ॥ ೩೮ ॥

---

೩೫ ಸೂತಮುನಿವರ್ಯನು ಮುಂದುವರಿಸಿ ಹೇಳುತ್ತಾನೆ.—ಈ ಪ್ರಕಾರವಾಗಿ ದೇವತೆಗಳು ಯಜ್ಞಾಧಿಪತಿಯಾದ ಪರಮಪುರುಷನನ್ನೂ, ಇಂದ್ರನನ್ನೂ, ಸ್ತೋತ್ರ ಮಾಡಿ, ಬೃಹಸ್ಪತ್ಯಾಚಾರ್ಯರ ಸಮೀಪಕ್ಕೆ ಬಂದು ಈರೀತಿಯಾಗಿ ವಿಜ್ಞಾಪಿಸಿದರು.

೩೬. "ಸ್ವಾಮಿ! ನಾವೂ, ರುದ್ರರೂ, ಈ ವಸುಗಳೂ, ಅಶ್ವಿನೀದೇವತೆಗಳೂ ಕೂಡ ಯಾವಯಾವ ರೂಪಿನಿಂದ ಭೂಮಿಯಲ್ಲಿ ಅವತರಿಸಬೇಕು ? ಅದೆಲ್ಲವನ್ನೂ ನೀನು ದಯೆಯಿಂದ ನಮಗೆ ಹೇಳಬೇಕು" ಎಂದರು.

೩೭. ಈ ಮಾತನ್ನು ಕೇಳಿ ಬೃಹಸ್ಪತ್ಯಾಚಾರ್ಯನು ಹೇಳುತ್ತಾನೆ—ಎಲೈ ದೇವತೆಗಳೇ! ನಾನು ನಿಮಗೆ ಹೇಳುತ್ತೇನೆ ಕೇಳಿರಿ. ಹಿಂದೆ ತ್ರೇತಾಯುಗದಲ್ಲಿ ಬ್ರಾಹ್ಮಣಾಧಮನೊಬ್ಬನು ಮೃಗಬೇಟೆಯಲ್ಲಿ ನಿರತನಾಗಿ ಬಿಲ್ಲುಬಾಣಗಳನ್ನು ಹಿಡಿದು ಯಾವಾಗಲೂ ದಾರಿಯನ್ನು ಕಾಯುತ್ತಾ ಮಾರ್ಗಸ್ಥರಾದ ಬ್ರಾಹ್ಮಣರನ್ನು ಹಿಂಸಿಸುತ್ತಾ ಇದ್ದನು.

೩೮. ಮಹಾಮೂಢನೂ, ದುಷ್ಟನೂ ಆದ ಅವನು ಬ್ರಾಹ್ಮಣರು ಸಿಕ್ಕಿದರೆ ಅವರ ಜನಿವಾರಗಳನ್ನು ತೆಗೆದುಕೊಂಡು ಹಾಸ್ಯಮಾಡಿ ಗರ್ಜಿಸುತ್ತಾ ಅವರನ್ನು ಕೊಂದುಹಾಕುತ್ತಿದ್ದನು.

ಬ್ರಾಹ್ಮಣಸ್ಯ ಚ ಯದ್ದ್ರವ್ಯಂ ಸುಧೋಪಮಮನುತ್ತಮಂ ।
ಮಧುರಂ ಕ್ಷತ್ರಿಯಸ್ಯೈವ ವೈಶ್ಯಸ್ಯಾನ್ನಸಮಂ ಸ್ಮೃತಂ　　　　॥ ೩೯ ॥

ಶೂದ್ರಸ್ಯ ವಸ್ತು ರುಧಿರಮಿತಿ ಜ್ಞಾತ್ವಾ ದ್ವಿಜಾಧಮಃ ।
ಸ ಜಘಾನ ತ್ರಿವರ್ಣಾಂಶ್ಚ ಬ್ರಾಹ್ಮಣಾನ್ಬಹುಲಾನ್ಖಲಃ　　　　॥ ೪೦ ॥

ದ್ವಿಜನಾಶಾತ್ಸುರಾಸ್ಸರ್ವೇ ಭಯಭೀತಾಸ್ಸಮಂತತಃ ।
ಪರಮೇಷ್ಠಿನಮಾಗಮ್ಯ ಕಥಾಂಶ್ಚಕ್ರುಶ್ಚ ಕಾರಣಂ　　　　॥ ೪೧ ॥

ಶ್ರುತ್ವಾ ಚ ದುಃಖಿತೋ ಬ್ರಹ್ಮಾ ಸಪ್ತರ್ಷೀನ್ಪ್ರಾಹ ಲೋಕಗಾನ್ ।
ಉದ್ದೇಶಂ ಕುರು ತತ್ರೈವ ಗತ್ವಾ ತಸ್ಯ ದ್ವಿಜೋತ್ತಮ　　　　॥ ೪೨ ॥

---

೩೯. ಬ್ರಾಹ್ಮಣನ ದ್ರವ್ಯವು ಅತಿ ಶ್ರೇಷ್ಠವೂ ಅಮೃತಕ್ಕೆ ಸಮಾನವೂ ಆದುದು. ಕ್ಷತ್ರಿಯನ ಧನವು ಮಧುರವಾದುದು. ವೈಶ್ಯನ ದ್ರವ್ಯವು ಅನ್ನಕ್ಕೆ ಸಮಾನವಾದುದು.

೪೦. ಶೂದ್ರನ ದ್ರವ್ಯವು ರಕ್ತಕ್ಕೆ ಸಮಾನವಾದುದು. ಹೀಗೆಂದು ತಿಳಿದು ಕೊಂಡು ಕ್ರೂರಿಯಾದ ಆ ಬ್ರಾಹ್ಮಣಾಧಮನು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಎಂಬ ಮೂರುವರ್ಣದವರನ್ನೂ ಪಿಡಿಸುವನು. ಅದರಲ್ಲೂ ಹೆಚ್ಚಾಗಿ ಬ್ರಾಹ್ಮಣರನ್ನೇ ಧ್ವಂಸಮಾಡುತ್ತಿದ್ದನು.

೪೧. ಹೀಗೆ ಎಲ್ಲಾ ಕಡೆಯಲ್ಲೂ ಬ್ರಾಹ್ಮಣರು ನಾಶವಾಗುತ್ತಿರುವುದನ್ನು ನೋಡಿ ಎಲ್ಲಾ ದೇವತೆಗಳೂ ಹೆದರಿ ಬ್ರಹ್ಮನ ಬಳಿಗೆ ಬಂದು ಬ್ರಾಹ್ಮಣರ ನಾಶದ ಪರಿಯನ್ನೂ ಅದಕ್ಕೆ ಕಾರಣವನ್ನೂ ವಿಜ್ಞಾಪಿಸಿದರು.

೪೨. ಈ ಮಾತನ್ನು ಕೇಳಿ ದುಃಖಗೊಂಡ ಬ್ರಹ್ಮನು ಸಕಲ ಲೋಕ ಸಂಚಾರಿಗಳಾದ ಮರೀಚ್ಯಾದಿಸಪ್ತರ್ಷಿಗಳನ್ನು ನೋಡಿ ಅವರಲ್ಲಿ ಪ್ರಮುಖನಾದ ಮರೀಚಿಯನ್ನು ಕುರಿತು “ ಎಲೈ ಬ್ರಾಹ್ಮಣೋತ್ತಮನೇ! ಆ ವ್ಯಾಧನಿರುವ ಸ್ಥಳಕ್ಕೆ ಹೋಗಿ ಅವನಿಗೆ ಒಳ್ಳೆಯ ಬುದ್ಧಿಯನ್ನುಂಟುಮಾಡು ” ಎಂದು ಹೇಳಿದನು.

ಇತಿ ಶ್ರುತ್ವಾ ಮರೀಚಿಸ್ತು ವಶಿಷ್ಠಾದಿಭಿರನ್ವಿತಃ ।
ತತ್ರ ಗತ್ವಾ ಸ್ಥಿತಾಸ್ಸರ್ವೇ ಮೃಗವ್ಯಾಧಸ್ಯ ವೈ ವನೇ ॥ ೪೩ ॥

ಮೃಗವ್ಯಾಧಸ್ತು ತಾನ್‌ದೃಷ್ಟ್ವಾ ಧನುರ್ಬಾಣಧರೋ ಬಲೀ ।
ಉವಾಚ ವಚನಂ ಘೋರಂ ಹನಿಷ್ಯೇಽಹಂ ಚ ವೋದ್ಯವೈ ॥ ೪೪ ॥

ಮರೀಚಾದ್ಯಾ ವಿಹಸ್ಯಾಹುಃ ಕಿಮರ್ಥಂ ಹಂತುಮುದ್ಯತಃ ।
ಕುಲಾರ್ಥಂ ವಾತ್ಮನೋಽರ್ಥಂ ವಾ ಶೀಘ್ರಂ ವದ ಮಹಾಬಲ ॥ ೪೫ ॥

ಇತ್ಯುಕ್ತಸ್ತಾನ್‌ದ್ವಿಜಃ ಪ್ರಾಹ ಕುಲಾರ್ಥಂ ಚಾತ್ಮನೋ ಹಿತೇ ।
ಹನ್ಮಿ ಯುಷ್ಮಾನ್‌ಧನೈರ್ಯುಕ್ತಾನ್‌ಬ್ರಾಹ್ಮಣಾಂಶ್ಚ ವಿಶೇಷತಃ ॥ ೪೬ ॥

---

೪೩. ಈ ಮಾತನ್ನು ಕೇಳಿ ಮರೀಚಿಮುನಿಯು ವಸಿಷ್ಠಾದಿಗಳೊಡಗೂಡಿ ಹೊರಟನು. ಹೀಗೆ ಎಲ್ಲರೂ ಆ ಮೃಗವ್ಯಾಧನಿರುವ ವನಕ್ಕೆ ಹೋಗಿ ಅಲ್ಲಿಯೇ ಕೆಲವುಕಾಲ ನಿಂತರು.

೪೪. ಬಲಿಷ್ಠನಾದ ಆ ವ್ಯಾಗವ್ಯಾಧನಾದರೋ ಈ ಮುನಿಗಳನ್ನು ನೋಡಿ ಬಿಲ್ಲುಬಾಣಗಳನ್ನು ಹಿಡಿದುಕೊಂಡು ಬಂದು ಅವರನ್ನು ಕುರಿತು " ನಿಮ್ಮನ್ನು ಈಗಲೇ ಕೊಲ್ಲುತ್ತೇನೆ " ಎಂಬದಾಗಿ ಕ್ರೂರವಾದ ಮಾತುಗಳನ್ನಾಡಿದನು

೪೫ ಮರೀಚಿ ಮೊದಲಾದ ಮುನಿಗಳು ಆ ಮಾತಿಗೆ ನಗುತ್ತಾ " ಎಲೈ ಬಲಿಷ್ಠನಾದ ಧನುರ್ಧರನೇ ! ನೀನು ನಮ್ಮನ್ನು ಕೊಲ್ಲಲು ಪ್ರಯತ್ನಮಾಡಿರುವುದು ನಿನ್ನ ಮನೆಯವರ ಅನುಕೂಲಕ್ಕಾಗಿಯೋ ? ಅಥವಾ ನಿನಗಾಗಿಯೋ ? ಎಂಬುದನ್ನು ಜಾಗ್ರತೆ ಹೇಳು " ಎಂದರು.

೪೬. ಹೀಗೆ ಹೇಳಿದ ಅವರ ಮಾತನ್ನು ಕೇಳಿ ಆ ಬ್ರಾಹ್ಮಣಾಧಮನು ಮುನಿಗಳನ್ನು ಕುರಿತು "ವಂಶರಕ್ಷಣೆಗಾಗಿಯೂ ನನ್ನ ಹಿತಕ್ಕಾಗಿಯೂ ಧನವಂತರನ್ನು ಕೊಲ್ಲುವೆನು. ಅದರಲ್ಲಿಯೂ ಬ್ರಾಹ್ಮಣರಾದ ನಿಮ್ಮನ್ನು ಕೊಂದೇ ಕೊಲ್ಲುತ್ತೇನೆ" ಎಂದು ಹೇಳಿದನು

ಶ್ರುತ್ವಾ ತಮಾಹುಸ್ತೇ ವಿಪ್ರಾ ಗಚ್ಛ ಶೀಘ್ರಂ ಧನುರ್ಧರ ।
ವಿಪ್ರಹತ್ಯಾಕೃತಂ ಪಾಪಂ ಭುಂಜೀಯಾತ್ಕೋ ವಿಚಾರಯ ॥ ೪೭ ॥

ಇತಿ ಶ್ರುತ್ವಾ ತು ಘೋರಾತ್ಮಾ ತೇಷಾಂ ದೃಷ್ಟ್ವಾ ಸುನಿರ್ಮಲಃ ।
ಗತ್ವಾ ವಂಶಜನಾನಾಹ ಭೂರಿ ಪಾಪಂ ಮಯಾರ್ಜಿತಂ ॥ ೪೮ ॥

ತತ್ಪಾತಕಂ ಭವದ್ಭಿಶ್ಚ ಗ್ರಹಣೀಯಂ ಧನಂ ಯಥಾ ।
ತೇ ತು ಶ್ರುತ್ವಾ ದ್ವಿಜಂ ಪ್ರಾಹುರ್ನ ವಯಂ ಪಾಪಭೋಗಿನಃ ॥ ೪೯ ॥

ಸಾಕ್ಷೀಯಂ ಭೂಮಿರಚಲಾ ಸಾಕ್ಷೀ ಸೂರ್ಯೋಽಯಮುತ್ತಮಃ ।
ಇತಿ ಶ್ರುತ್ವಾ ಮೃಗವ್ಯಾಧೋ ಮುನೀನಾಹ ಕೃತಾಂಜಲಿಃ ॥ ೫೦ ॥

---

೪೭. ಅವನ ಆ ಮಾತನ್ನು ಕೇಳಿ ಮುನಿಗಳು ಅವನನ್ನು ಕುರಿತು "ಎಲೈ ಧನುರ್ಧಾರಿಯೇ ನಿನ್ನ ಮನೆಗೆ ಹೋಗಿ ಬ್ರಾಹ್ಮಣರ ಹತ್ಯೆಯಿಂದುಟಾಗುವ ಪಾಪವನ್ನು ನಿನ್ನ ಕುಲದವರ್‍ಯಾರಾದರೂ ಅನುಭವಿಸುತ್ತಾರೆಯೇ ಎಂಬುದನ್ನು ವಿಚಾರ ಮಾಡಿಕೊಂಡು ಬೇಗ ಬಾ" ಎಂದು ಹೇಳಿಕಳುಹಿಸಿದರು.

೪೮-೪೯. ಈ ಮಾತನ್ನು ಕೇಳಿ ಆ ಕ್ರೂರಿಯು ಆ ಮುನಿಗಳ ಸಂದರ್ಶನದಿಂದ ಪರಿಶುದ್ಧಹೃದಯನಾಗಿ ಕೂಡಲೇ ಮನೆಗೆ ಹೋಗಿ ತನ್ನ ಮನೆಯವರನ್ನು ಕುರಿತು "ಈ ವಸ್ತುಸಂಪಾದನೆಯ ಸಂದರ್ಭದಲ್ಲಿ ನಾನು ಬಹಳ ಪಾಪಕಾರ್ಯಗಳನ್ನು ಮಾಡಿರುತ್ತೇನೆ. ನೀವುಗಳು ನಾನು ತಂದ ದ್ರವ್ಯವನ್ನು ತೆಗೆದುಕೊಳ್ಳುವಂತೆ ನನಗೆ ಪ್ರಾಪ್ತವಾಗುವ ಆ ಪಾಪವನ್ನೂ ತೆಗೆದುಕೊಳ್ಳಬೇಕು" ಎಂದನು. ಅವರು ಆ ಮಾತನ್ನು ಕೇಳಿ ಅವನನ್ನು ಕುರಿತು ನಾವು "ನಿನ್ನ ಪಾಪವನ್ನನುಭವಿಸತಕ್ಕವರಲ್ಲ."

೫೦. "ಇದಕ್ಕೆ ಅಚಲಳಾದ ಈ ಭೂದೇವಿಯೂ ಸರ್ವಶ್ರೇಷ್ಠನಾದ ಸೂರ್ಯನೂ ಸಾಕ್ಷಿಗಳಾಗಿರುತ್ತಾರೆ" ಎಂದರು. ಈ ಮಾತನ್ನು ಕೇಳಿ ಮೃಗವ್ಯಾಧನು ಹಿಂದಿರುಗಿ ಋಷಿಗಳಿದ್ದೆಡೆಗೆ ಬಂದು ಕೈಗಳನ್ನು ಜೋಡಿಸಿಕೊಂಡು ಮುನಿಗಳನ್ನು ಕುರಿತು ಹೇಳತೊಡಗಿ

ಯಥಾ ಪಾಪಂ ಕ್ಷಯಂ ಯಾತಿ ತಥಾ ಮಾಜ್ಞಾತುಮರ್ಹಥ ।
ಇತ್ಯುಕ್ತಾಸ್ತೇನ ತೇ ಪ್ರಾಹುಃ ಶೃಣು ತ್ವಂ ಮಂತ್ರಮುತ್ತಮಂ ॥ ೫೧ ॥

ರಾಮ ನಾಮ ಹಿ ತಜ್ಜ್ಞೇಯಂ ಸರ್ವಾಘೌಘವಿನಾಶನಂ ।
ಯಾವತ್ತ್ವತ್ಪಾರ್ಶ್ವಮಾಯಾಮಸ್ತಾವತ್ತ್ವಂ ಜಪ ಚೋತ್ತಮಂ ॥ ೫೨ ॥

ಇತ್ಯುಕ್ತ್ವಾ ತೇ ಗತಾ ವಿಪ್ರಾಸ್ತೀರ್ಥಾತ್ತೀರ್ಥಾಂತರಂ ಪ್ರತಿ ।
ಮರಾಮರಾಮರೇತ್ಯೇವಂ ಸಹಸ್ರಾಬ್ದಂ ಜಜಾಪ ಹ ॥ ೫೩ ॥

ಜಪಪ್ರಭಾವಾದಭವದ್ವನಮುತ್ಪಲಸಂಕುಲಂ ।
ತತ್ಸ್ಥಾನಮುತ್ಪಲಾರಣ್ಯಂ ಪ್ರಸಿದ್ಧಮಭವದ್ಭುವಿ ॥ ೫೪ ॥

ತತಃ ಸಪ್ತರ್ಷಯಃ ಪ್ರಾಪ್ತಾ ವಲ್ಮೀಕಾತ್ತಂ ನಿರಾಕೃತಂ ।
ದೃಷ್ಟ್ವಾ ಶುದ್ಧಂ ತದಾ ವಿಪ್ರಮೂಚುಸ್ತೇ ವಿಸ್ಮಯಾನ್ವಿತಾಃ ॥ ೫೫ ॥

---

೫೧. "ಎಲೈ ಮುನಿವರ್ಯರೇ ! ಇದುವರೆಗೆ ನಾನು ಮಾಡಿದ ಪಾಪವು ನಾಶವಾಗುವ ಹಾಗೆ ನನಗೆ ಪ್ರಾಯಶ್ಚಿತ್ತವನ್ನು ಅಪ್ಪಣೆಮಾಡಿರಿ" ಎಂದನು. ಅವನು ಹೀಗೆ ಹೇಳುತ್ತಲೆ ಮುನಿಗಳು "ಎಲೈ ಧನುರ್ಧಾರಿಯೇ ! ಕೇಳು ರಾಮನಾಮವೆಂಬುದು ಉತ್ತಮವಾದ ಮಂತ್ರವೆಂದು ತಿಳಿದುಕೋ"

೫೨. "ಅದು ಸಕಲ ಪಾಪರಾಶಿಗಳನ್ನೂ ನಾಶಮಾಡತಕ್ಕದ್ದು. ನಾವು ತೀರ್ಥಯಾತ್ರೆಗೆ ಹೋಗಿ ಅಲ್ಲಿಂದ ಇದೇ ಮಾರ್ಗವಾಗಿ ಹಿಂದಿರುಗಿ ಬರುತ್ತೇವೆ. ನಾವು ಬರುವವರೆಗೂ ನೀನು ಉತ್ತಮವಾದ ರಾಮಮಂತ್ರವನ್ನು ಜಪಮಾಡುತ್ತಿರು"

೫೩. ಹೀಗೆಂದು ಹೇಳಿ ಆ ಮುನಿಗಳು ನಾನಾ ತೀರ್ಥಗಳನ್ನು ಕುರಿತು ಪ್ರಯಾಣಮಾಡಿದರು. ಮೃಗವ್ಯಾಧನು ಒಂದುಸಾವಿರವರ್ಷಗಳ ಪರ್ಯಂತ ಮರಾಮರಾಮರಾ ಎಂಬದಾಗಿ ಜಪಮಾಡುತ್ತಿದ್ದನು.

೫೪. ಈ ಜಪದ ಮಹಾತ್ಮೆಯಿಂದ ಆ ಕಾಡೆಲ್ಲವೂ ಕಮಲದಿಂದ ತುಂಬಿಹೋಯಿತು. ಈ ಕಾರಣದಿಂದ ಆ ಸ್ಥಳವು ಭೂಲೋಕದಲ್ಲಿ ಉತ್ಪಲಾರಣ್ಯವೆಂದು ಪ್ರಸಿದ್ಧವಾಯಿತು.

೫೫. ಒಂದುಸಾವಿರ ವರ್ಷಗಳಾದನಂತರ ಆ ಋಷಿಗಳು ಹಿಂದಿರುಗಿ ಅಲ್ಲಿಗೆ ಬಂದರು. ಹುತ್ತಬೆಳೆದು ಮುಚ್ಚಿಹೋದ ಮೃಗವ್ಯಾಧನನ್ನು ನೋಡಿ ಆಶ್ಚರ್ಯದಿಂದ ಕೂಡಿದವರಾಗಿ ಪರಿಶುದ್ಧನಾದ ಆ ಬ್ರಾಹ್ಮಣನನ್ನು ಕುರಿತು ಮಾತಾಡತೊಡಗಿದರು.

ವಲ್ಮೀಕಾನ್ನಿಸ್ಸೃತೋ ಯಸ್ಮಾತ್ತಸ್ಮಾದ್ವಾಲ್ಮೀಕಿರುತ್ತಮಃ ।
ತವ ನಾಮ ಭವೇದ್ವಿಪ್ರ ತ್ರಿಕಾಲಜ್ಞ ಮಹಾಮತೇ ॥ ೫೬ ॥

ಏವಮುಕ್ತ್ವಾ ಯಯುರ್ಲೋಕಂ ಸ ತು ರಾಮಾಯಣಂ ಮುನಿಃ ।
ಕಲ್ಪಾಷ್ಟಾದಶಯುಕ್ತಂ ಹಿ ಶತಕೋಟಿಪ್ರವಿಸ್ತರಂ ॥ ೫೭ ॥

ಚಕಾರ ನಿರ್ಮಲಂ ಪದ್ಯೈಃ ಸರ್ವಾಘೌಘವಿನಾಶನಂ ।
ತತ್ಪಶ್ಚಾತ್ಸ ಶಿವೋ ಭೂತ್ವಾ ತತ್ರ ವಾಸಮಕಾರಯತ್ ॥ ೫೮ ॥

ಅದ್ಯಾಪಿ ಸಂಸ್ಥಿತಃ ಸ್ವಾಮೀ ಮೃಗವ್ಯಾಧಃ ಸನಾತನಃ ।
ಶೃಣುಧ್ವಂ ಚ ಸುರಾಃ ಸರ್ವೇ ತಚ್ಚರಿತ್ರಂ ಹರಪ್ರಿಯಂ ॥ ೫೯ ॥

ವೈವಸ್ವತೇಽಂತರೇ ಪ್ರಾಪ್ತೇ ಚಾದ್ಯೇ ಸತ್ಯಯುಗೇ ಶುಭೇ ।
ಬ್ರಹ್ಮಾಗತ್ಯೋತ್ಪಲಾರಣ್ಯಂ ತತ್ರ ಯಜ್ಞಂ ಚಕಾರ ಹ ॥ ೬೦ ॥

---

೫೬. "ಭೂತ ಭವಿಷ್ಯತ್ತು ವರ್ತಮಾನಕಾಲಗಳ ವಿಷಯವನ್ನು ತಿಳಿದವನೂ, ಹೆಚ್ಚಾದ ಬುದ್ಧಿಯುಳ್ಳವನೂ ಆದ ಎಲೈ ಬ್ರಾಹ್ಮಣನೇ! ಏಳು, ಬಾ, ಹುತ್ತದಿಂದ ಈಚೆಗೆ ಬಂದೆಯಾದ ಕಾರಣ ನಿನಗೆ ಇನ್ನುಮೇಲೆ ವಾಲ್ಮೀಕಿ ಎಂಬ ಉತ್ತಮವಾದ ಹೆಸರಾಗಲಿ."

೫೭-೫೮. ಹೀಗೆಂದು ಹೇಳಿ ಆ ಮರೀಚ್ಯಾದಿ ಮುನಿಗಳು ತಮ್ಮ ಲೋಕಕ್ಕೆ ಹೊರಟು ಹೋದರು. ಆ ವಾಲ್ಮೀಕಿಮುನಿಯಾದರೋ ಹದಿನೆಂಟು ಕಲ್ಪಗಳಲ್ಲಿ ನಡೆದುದೂ, ಪರಿಶುದ್ಧವೂ, ಪದ್ಯಮಯವೂ, ಸಕಲ ಪಾಪರಾಶಿಯನ್ನು ನಾಶಮಾಡ ತಕ್ಕುದೂ ಆಗಿ, ನೂರುಕೋಟಿ ಗ್ರಂಥವಿಸ್ತಾರವುಳ್ಳ ರಾಮಾಯಣವನ್ನು ರಚಿಸಿದನು. ಅಲ್ಲಿಂದ ಮುಂದೆ ಅವನು ಶಿವನಾಗಿ ಅಲ್ಲಿಯೇ ನೆಲಸಿದನು.

೫೯. ಇಂದಿಗೂ ಕೂಡ ಶಿವರೂಪನಾದ ಮೃಗವ್ಯಾಧನು ನಾಶರಹಿತನಾಗಿ ಅಲ್ಲಿಯೇ ಇರುತ್ತಾನೆ. ಎಲೈ ದೇವತೆಗಳಿರಾ! ಈಶ್ವರನಿಗೆ ಅತ್ಯಂತ ಇಷ್ಟವಾದ ರಾಮ ಚರಿತ್ರೆಯನ್ನು ನೀವೆಲ್ಲರೂ ಕೇಳಿರಿ.

೬೦. ವೈವಸ್ವತಮನ್ವಂತರವು ಪ್ರಾಪ್ತವಾಗಲು ಶುಭಕರವಾದ ಆದಿ ಕೃತಯುಗ ದಲ್ಲಿ ಬ್ರಹ್ಮನು ಈ ಉತ್ಪಲಾರಣ್ಯಕ್ಕೆ ಬಂದು ಅಲ್ಲಿ ಯಾಗವನ್ನು ಮಾಡಿದನು.

ತದಾ ಸರಸ್ವತೀ ದೇವೀ ನದೀ ಭೂತ್ವಾ ಸಮಾಗತಾ ।
ತದ್ದರ್ಶನಾತ್ಸ್ವಯಂ ಬ್ರಹ್ಮಾ ಮುಖತೋ ಬ್ರಾಹ್ಮಣಂ ಶುಭಂ ॥ ೬೧ ॥

ಬಾಹುಭ್ಯಾಂ ಕ್ಷತ್ರಿಯಂ ಚೈವ ಚೋರುಭ್ಯಾಂ ವೈಶ್ಯಮುತ್ತಮಂ ।
ಪದ್ಭ್ಯಾಂ ಶೂದ್ರಂ ಶುಭಾಚಾರಂ ಜನಯಾಮಾಸ ವೀರ್ಯವಾನ್ ॥ ೬೨ ॥

ದ್ವಿಜರಾಜಸ್ತಥಾ ಸೋಮಶ್ಚಂದ್ರಮಾ ನಾಮತೋ ದ್ವಿಜಃ ।
ಲೋಕೇ ಸರ್ವಾತಪಃ ಸೂರ್ಯಃ ಕಶ್ಯಂ ವೀರ್ಯಂ ಹಿ ಪಾತಿ ಯಃ ॥ ೬೩ ॥

ಕಶ್ಯಪೋ ಹಿ ದ್ವಿತೀಯೋಽಸೌ ಮರೀಚಿಸ್ತು ತತೋಽಭವತ್ ।
ರತ್ನಾನಾಮಾಕರೋ ಯೋ ವೈ ಸ ಹಿ ರತ್ನಾಕರಃ ಸ್ಮೃತಃ ॥ ೬೪ ॥

ಲೋಕಾನ್ಧರತಿ ಯೋ ದ್ರವ್ಯೈಃ ಸ ತು ಧರ್ಮೋ ಹಿ ನಾಮತಃ ।
ಗಂಭೀರಶ್ಚಾಸ್ತಿ ಸದೃಶಃ ಕೋಶೋ ಯಸ್ಯ ಸರಿತ್ಪತಿಃ ॥ ೬೫ ॥

---

೬೧-೬೨. ಆಗ ಸರಸ್ವತೀದೇವಿಯು ನದಿಯಾಗಿ ಅಲ್ಲಿಗೆ ಬಂದಳು. ಅವಳನ್ನು ನೋಡಿದೊಡನೆಯೇ ವೀರ್ಯವಂತನಾದ ಬ್ರಹ್ಮನು ತಾನಾಗಿಯೇ ತನ್ನ ಮುಖದಿಂದ ಮಂಗಳಕರರಾದ ಬ್ರಾಹ್ಮಣರನ್ನೂ, ತೋಳುಗಳಿಂದ ಶೂರರಾದ ಕ್ಷತ್ರಿಯರನ್ನೂ, ತೊಡೆಗಳಿಂದ ಉತ್ತಮರಾದ ವೈಶ್ಯರನ್ನೂ, ಕಾಲುಗಳಿಂದ ಶುಭಾಚಾರವಂತರಾದ ಶೂದ್ರರನ್ನೂ ಸೃಷ್ಟಿಸಿದನು.

೬೩. ಸೋಮನೂ ಕೂಡ ಚಂದ್ರಮನೆಂಬ ಹೆಸರಿನಿಂದ ಬ್ರಾಹ್ಮಣನಾಗಿ ದ್ವಿಜರಾಜನೆನಿಸಿಕೊಂಡನು. ಲೋಕದಲ್ಲಿ ಸಕಲರಿಗೂ ಆತಪಕರನಾದ ಸೂರ್ಯ ನಾರಾಯಣನು ಕಶ್ಯವೆಂಬ ವೀರ್ಯವನ್ನು ಪಾಲನೆಮಾಡುತ್ತಾನಾದ್ದರಿಂದ ಕಶ್ಯಪ ನೆಂದು ಹೆಸರು ಪಡೆದನು.

೬೪ ಅವನ ಅನಂತರದಲ್ಲಿ ಆದ ಮರೀಚಿಯು ಎರಡನೆಯವನು. ರತ್ನ ಗಳಿಗೆಲ್ಲಾ ಗಣಿಯಾದಂಥಾ ಸಮುದ್ರಕ್ಕೆ ರತ್ನಾಕರನೆಂಬ ಹೆಸರುಂಟಾಯಿತು.

೬೫. ಪ್ರಪಂಚವನ್ನೆಲ್ಲಾ ಸಕಲ ದ್ರವ್ಯಗಳಿಂದ ಪೋಷಿಸುವವನನ್ನು ಧರ್ಮ ನೆಂಬ ಹೆಸರಿನಿಂದ ವ್ಯವಹರಿಸುವರು. ಅವನ ಕೋಶವು ಗಂಭೀರವಾಗಿಯೂ ಅವನ ಗೌರವಕ್ಕೆ ಸದೃಶವಾಗಿಯೂ ಇರುವುದರಿಂದ ಅವನು ಸರಿತ್ಪತಿ ಎನಿಸುವನು.

ಲೋಕಾನ್ದಕ್ಷತಿ ಯಃ ಕೃತ್ಯೈಃ ಸ ತು ದಕ್ಷಃ ಪ್ರಜಾಪತಿಃ ।
ಬ್ರಹ್ಮಣೋಂಗಾಚ್ಚ ತೇ ಜಾತಾಸ್ತಸ್ಮಾದ್ವೈ ಬ್ರಾಹ್ಮಣಾಃ ಸ್ಮೃತಾಃ ॥ ೬೬ ॥

ವರ್ಣಧರ್ಮೇಣ ತೇ ಸರ್ವೇ ವರ್ಣಾತ್ಮಾನಶ್ಚ ವೈ ಕ್ರಮಾತ್ ।
ದಕ್ಷಸ್ಯ ಮನಸೋ ಜಾತಾಃ ಕನ್ಯಾಃ ಪಂಚಶತಂ ತತಃ ॥
ವಿಷ್ಣುಮಾಯಾಪ್ರಭಾವೇಣ ಕಲಾಭೂತಾಃ ಸ್ಥಿತಾ ಭುವಿ ॥ ೬೭ ॥

ತದಾ ತು ಭಗವಾನ್ಬ್ರಹ್ಮಾ ಸೋಮಾಯಾಶ್ವಿನಿಮಂಡಲಂ ।
ಸಪ್ತವಿಂಶದ್ಗಣಂ ಶ್ರೇಷ್ಠಂ ದದೌ ಲೋಕವಿವೃದ್ಧಯೇ ॥ ೬೮ ॥

ಕಶ್ಯಪಾಯಾದಿತಿಗಣಂ ಕ್ಷತ್ರರೂಪಂ ತ್ರಯೋದಶಂ ।
ಧರ್ಮಾಯ ಕೀರ್ತಿಪ್ರಭೃತೀರ್ದದೌ ಸ ಚ ಮಹಾಮುನಿಃ ॥ ೬೯ ॥

ನಾನಾವಿಧಾನಿ ಸೃಷ್ಟಾನಿ ಚಾಽಸನ್ವೈವಸ್ವತೇಽಂತರೇ ।
ತೇಷಾಂ ಪತಿಸ್ಸ್ವಯಂ ದಕ್ಷೋಽಭೂದ್ವಿಧೇರಾಜ್ಞಯಾ ಭುವಿ ॥ ೭೦ ॥

---

೬೬. ಯಾವನು ತನ್ನ ಕಾರ್ಯಗಳಿಂದ ಲೋಕಗಳನ್ನು ಶಿಕ್ಷಿಸುವನೋ ಅವನು ದಕ್ಷಬ್ರಹ್ಮನೆನಿಸಿದನು. ಇವರೆಲ್ಲರೂ ಬ್ರಹ್ಮನ ಶರೀರದಿಂದ ಹುಟ್ಟಿದವರಾದ ಕಾರಣ ಬ್ರಾಹ್ಮಣರೆಂದೆನಿಸಿದರು.

೬೭ ಅವರೆಲ್ಲರೂ ವರ್ಣಾಶ್ರಮ ಧರ್ಮಗಳನ್ನು ಪಾಲಿಸುತ್ತಾ ವರ್ಣ ಸ್ವರೂಪರೇ ಆದರು. ಅನಂತರ ದಕ್ಷಬ್ರಹ್ಮನ ಮನಸ್ಸಂಕಲ್ಪದಿಂದ ಐನೂರು ಮಂದಿ ಕನ್ಯೆಯರು ಹುಟ್ಟಿದರು. ಅವರೆಲ್ಲರೂ ವಿಷ್ಣು ಮಾಯಾಪ್ರಭಾವದಿಂದ ಕಲಾರೂಪ ರಾಗಿ ಭೂಮಿಯಲ್ಲಿದ್ದರು.

೬೮. ಆಗ ಪೂಜ್ಯನಾದ ಬ್ರಹ್ಮನು ಲೋಕಾಭಿವೃದ್ಧಿಗಾಗಿ ಶ್ರೇಷ್ಠವಾದ ಅಶ್ವಿನ್ಯಾದಿ ಇಪ್ಪತ್ತೇಳು ನಕ್ಷತ್ರಮಂಡಲಗಳನ್ನು ಚಂದ್ರನಿಗೆ ಕೊಟ್ಟನು

೬೯. ಆ ಮಹಾಮುನಿಯಾದ ಬ್ರಹ್ಮನು ಕ್ಷತ್ರರೂಪವಾದ ಹದಿಮೂರು ಅದಿತಿಗಣವನ್ನು ಕಶ್ಯಪರಿಗೂ, ಸ್ಥಿರಕೀರ್ತಿಯೇ ಮುಂತಾದುವುಗಳನ್ನು ಧರ್ಮನಿಗೂ ಕೊಟ್ಟನು.

೭೦. ವೈವಸ್ವತಮನ್ವಂತರದಲ್ಲಿ ಭೂಲೋಕದಲ್ಲಿ ಬ್ರಹ್ಮನ ಆಜ್ಞೆಯಿಂದ ಅನೇಕಾನೇಕವಿಧವಾದ ಸೃಷ್ಟಿಗಳಾದುವು. ಅವುಗಳಿಗೆಲ್ಲ ಸಾಕ್ಷಾತ್ ಈ ದಕ್ಷನೇ ಯಜಮಾನನಾದನು.

ತತ್ರ ವಾಸಂ ಸ್ವಯಂ ದಕ್ಷಃ ಕೃತವಾನ್ಯಜ್ಞತತ್ಪರಃ ।
ಸರ್ವೇ ದೇವಗಣಾ ದಕ್ಷಂ ನಮಸ್ಕೃತ್ಯ ಚರಂತಿ ಹಿ ॥ ೭೧ ॥

ಭೂತನಾಥೋ ಮಹಾದೇವೋ ನ ನನಾಮ ಕದಾಚನ ।
ತದಾ ಕ್ರುದ್ಧಃ ಸ್ವಯಂ ದಕ್ಷಃ ಶಿವಭಾಗಂ ನ ದತ್ತವಾನ್ ॥ ೭೨ ॥

ಮೃಗವ್ಯಾಧಃ ಶಿವಃ ಕ್ರುದ್ಧೋ ವೀರಭದ್ರೋ ಬಭೂವ ಹ ।
ತ್ರಿಶಿರಾಶ್ಚ ತ್ರಿನೇತ್ರಶ್ಚ ತ್ರಿಪದಸ್ತತ್ರ ಚಾಗತಃ ॥ ೭೩ ॥

ತೇನೈವ ಪೀಡಿತಾ ದೇವಾ ಮುನಯಃ ಪಿತರೋಽಭವನ್ ।
ತದಾ ವೈ ಯಜ್ಞಪುರುಷೋ ಭಯಭೀತಃ ಸಮಂತತಃ ॥ ೭೪ ॥

ಮೃಗಭೂತೋ ಯಯೌ ತೂರ್ಣಂ ದೃಷ್ಟ್ವಾ ವ್ಯಾಧಃ ಶಿವೋಽಭವತ್ ।
ರುದ್ರವ್ಯಾಧೇನ ಸ ಮೃಗೋ ವಿಭಿನ್ನಾಂಗೋ ಬಭೂವ ಹ ॥ ೭೫ ॥

---

೭೧ ಯಜ್ಞಕರ್ಮದಲ್ಲಿ ನಿರತನಾದ ದಕ್ಷನು ಆ ಉತ್ಪಲಾರಣ್ಯದಲ್ಲಿ ವಾಸ ಮಾಡುತ್ತಿದ್ದನಷ್ಟೆ. ಎಲ್ಲಾ ದೇವತೆಗಳೂ ಅಲ್ಲಿಗೆ ಬಂದು ಯಜ್ಞದೀಕ್ಷಿತನಾದ ದಕ್ಷಬ್ರಹ್ಮನಿಗೆ ನಮಸ್ಕಾರಮಾಡಿ ಹೋಗುತ್ತಿದ್ದರು.

೭೨ ಭೂತನಾಥನಾದ ಆ ಮಹಾದೇವನು ಮಾತ್ರ ಯಾವಾಗಲೂ ಬಂದು ದಕ್ಷಬ್ರಹ್ಮನಿಗೆ ನಮಸ್ಕಾರ ಮಾಡಲಿಲ್ಲ. ಆಗ ಕೋಪಗೊಂಡ ದಕ್ಷಬ್ರಹ್ಮನು ತಾನು ಮಾಡುತ್ತಿದ್ದ ಯಾಗದಲ್ಲಿ ಶಿವನಿಗೆ ಹವಿರ್ಭಾಗವನ್ನು ಕೊಡಲಿಲ್ಲ.

೭೩ ಆಗ ಉತ್ಪಲಾರಣ್ಯದಲ್ಲಿ ನೆಲಸಿದ್ದ ಮೃಗವ್ಯಾಧರೂಪಿಯಾದ ಶಿವನು ಭಯಂಕರವಾದ ವೀರಭದ್ರಸ್ವರೂಪವನ್ನು ತಾಳಿ, ಮೂರುತಲೆಗಳು, ಮೂರುಕಣ್ಣುಗಳು, ಮೂರುಕಾಲುಗಳು ಸಹ ಉಳ್ಳವನಾಗಿ ಆ ದಕ್ಷಬ್ರಹ್ಮನ ಯಾಗಶಾಲೆಗೆಬಂದನು.

೭೪. ಹಾಗೆ ಬಂದ ವೀರಭದ್ರನು ಅಲ್ಲಿದ್ದ ದೇವತೆಗಳನ್ನೂ, ಮುನಿಗಳನೂ, ಆರ್ಯಮಾದಿ ಪಿತೃದೇವತೆಗಳನ್ನೂ ಪೀಡಿಸತೊಡಗಿದನು.

೭೫. ಆಗ ಯಾಗಕರ್ಮವನ್ನು ನಡೆಯಿಸುತ್ತಿದ್ದ ಯಜಮಾನನು ಬಹಳ ಹೆದರಿ ಸುತ್ತಲೂ ನೋಡಿ ಮೃಗರೂಪವನ್ನು ಧರಿಸಿ ಓಡಿಹೋದನು. ಇದನ್ನು ನೋಡಿ ರುದ್ರನು ವ್ಯಾಧನಾಗಿ ಬೆನ್ನಟ್ಟಿದನು. ರುದ್ರರೂಪಿಯಾದ ವ್ಯಾಧನು ಮೃಗರೂಪಿಯಾದ ಯಜಮಾನನ್ನು ಕತ್ತರಿಸಿ ಹಾಕಿದನು.

ತದಾ ತು ಭಗವಾನ್ ಬ್ರಹ್ಮಾ ತುಷ್ಟಾವ ಮಧುರಸ್ವರೈಃ ।
ಸಂತುಷ್ಟಶ್ಚ ಮೃಗವ್ಯಾಧೋ ಯಜ್ಞಂ ಪೂರ್ಣಮಕಾರಯತ್ ॥ ೭೬ ॥

ತುಲಾರಾಶಿಸ್ಥಿತೇ ಭಾನೌ ತಂ ರುದ್ರಂ ಚಂದ್ರಮಂಡಲೇ ।
ಸ್ಥಾಪಯಿತ್ವಾ ಸ್ವಯಂ ಬ್ರಹ್ಮಾ ಸಪ್ತವಿಂಶದ್ದಿನಾತ್ಮಕೇ ॥ ೭೭ ॥

ಪ್ರಯಯೌ ಸಪ್ತಲೋಕಂ ವೈ ಸ ರುದ್ರಶ್ಚಂದ್ರರೂಪವಾನ್ ॥
ಇತಿ ಶ್ರುತ್ವಾ ವೀರಭದ್ರೋ ರುದ್ರಃ ಸಂಹೃಷ್ಟಮಾನಸಃ ।
ಸ್ವಾಂಶಂ ದೇಹಾತ್ಸಮುತ್ಪಾದ್ಯ ದ್ವಿಜಗೇಹಮಚೋದಯತ್ ॥ ೭೮ ॥

ವಿಪ್ರಭೈರವದತ್ತಸ್ಯ ಗೇಹಂ ಗತ್ವಾ ಸ ವೈ ಶಿವಃ ।
ತತ್ಪುತ್ರೋಽಭೂತ್ಕಲೌ ಘೋರೇ ಶಂಕರೋ ನಾಮ ವಿಶ್ರುತಃ ॥ ೭೯ ॥

---

೭೬. ಆಗ ಪೂಜ್ಯನೂ ಷಡ್ಗುಣೈಶ್ವರ್ಯಸಂಪನ್ನನೂ ಆದ ಬ್ರಹ್ಮನು, ಮನೋಹರವಾದ ವಾಣಿಯಿಂದ ಶಿವನನ್ನು ಸ್ತೋತ್ರಮಾಡಿದನು. ಅದರಿಂದ ಸಂತೋಷಗೊಂಡ ಮೃಗವ್ಯಾಧನು ದಕ್ಷನ ಯಜ್ಞವನ್ನು ಪೂರ್ತಿಗೊಳಿಸಿದನು.

೭೭. ಸೂರ್ಯನು ತುಲಾರಾಶಿಯಲ್ಲಿರುವಾಗ ಬ್ರಹ್ಮನು ಆ ರುದ್ರನನ್ನು ಚಂದ್ರಮಂಡಲದಲ್ಲಿ ಸ್ಥಾಪಿಸಿ, ಇಪ್ಪತ್ತೇಳುದಿನಗಳು ಪೂಜಿಸಿ, ಸಪ್ತಲೋಕಸಂಚಾರಕ್ಕಾಗಿ ಹೋದನು.

೭೮. ಆಗ ಆ ರುದ್ರನು ಚಂದ್ರರೂಪವನ್ನು ಧರಿಸಿದ್ದನು. ಇದನ್ನು ಕೇಳಿದ ವೀರಭದ್ರರೂಪನಾದ ರುದ್ರನು ಸಂತೋಷಗೊಂಡು ತನ್ನ ಶರೀರದಿಂದ ತನ್ನಂಶವನ್ನು ತೆಗೆದು ಭೈರವದತ್ತನೆಂಬ ಬ್ರಾಹ್ಮಣನ ಮನೆಯಲ್ಲಿ ಜನಿಸುವಂತೆ ಮಾಡಿದನು.

೭೯. ಆ ಶಿವಾಂಶವು ಘೋರವಾದ ಕಲಿಯುಗದಲ್ಲಿ ಭೈರವದತ್ತನೆಂಬ ವಿಪ್ರನ ಮನೆಯಲ್ಲಿ ಅವನ ಮಗನಾಗಿ ಜನಿಸಿ ಶಂಕರನೆಂದು ಭೂಲೋಕದಲ್ಲಿ ಪ್ರಸಿದ್ಧನಾದನು.

ಸ ಬಾಲಶ್ಚ ಗುಣೀ ವೇತ್ತಾ ಬ್ರಹ್ಮಚಾರೀ ಬಭೂವ ಹ ।
ಕೃತ್ವಾ ಶಂಕರಭಾಷ್ಯಂ ಚ ಶೈವಮಾರ್ಗಮದರ್ಶಯತ್ ॥ ೮೦ ॥

ತ್ರಿಪುಂಡ್ರಶ್ಚಾಕ್ಷಮಾಲಾ ಚ ಮಂತ್ರಃ ಪಂಚಾಕ್ಷರಃ ಶುಭಃ ।
ಶೈವಾನಾಂ ಮಂಗಲಕರಃ ಶಂಕರಾಚಾರ್ಯನಿರ್ಮಿತಃ ॥ ೮೧ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಪ್ರತಿಸರ್ಗಪರ್ವಣಿ ಚತುರ್ಥಖಂಡೇ ಕಲಿಯುಗೀಯೇತಿಹಾಸಸಮುಚ್ಚಯೇ ಕೃಷ್ಣಚೈತನ್ಯ, ಶಂಕರಾಚಾರ್ಯ ಸಮುತ್ಪತ್ತಿವರ್ಣನಂ ನಾಮ ದಶಮೋಽಧ್ಯಾಯಃ



---

೮೦. ಆ ಬಾಲಕನು ಸದ್ಗುಣವಂತನೂ, ಸಕಲ ಶಾಸ್ತ್ರಜ್ಞನೂ, ಬ್ರಹ್ಮಚಾರಿಯೂ, ಆಗಿದ್ದು ಶಂಕರಭಾಷ್ಯವೆಂಬ ಗ್ರಂಥವನ್ನು ಬರೆದು ಶಿವಭಕ್ತಿಮಾರ್ಗವನ್ನು ತೋರಿಸಿದನು.

೮೧. ಶಂಕರಾಚಾರ್ಯರಿಂದ ಉಕ್ತವಾಗಿರುವ ತ್ರಿಪುಂಡ್ರವೂ, ರುದ್ರಾಕ್ಷಮಾಲಾಧಾರಣೆಯೂ, ಪಂಚಾಕ್ಷರೀ ಮಂತ್ರಜಪಗಳೂ ಕೂಡ ಶೈವರಿಗೆ ಮಂಗಳಕರಗಳು. ಎಂದು ಹೇಳಿದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಪ್ರತಿಸರ್ಗಪರ್ವದ ನಾಲ್ಕನೆಯ
ಖಂಡದಲ್ಲಿ ಕಲಿಯುಗದ ಇತಿಹಾಸಸಮುದಾಯದಲ್ಲಿ ಶ್ರೀ ಕೃಷ್ಣ
ಚೈತನ್ಯ, ಶಂಕರಾಚಾರ್ಯ ಇವರ ಉತ್ಪತ್ತಿವರ್ಣನೆಯೆಂಬ
ಹತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಪ್ರತಿಸರ್ಗಪರ್ವಣಿ ಚತುರ್ಥಖಂಡೇ

## ಏಕಾದಶೋಽಧ್ಯಾಯಃ

---

॥ ಬೃಹಸ್ಪತಿರುವಾಚ ॥

**ಪುರಾ ತು ನೈಮಿಷಾರಣ್ಯೇ ವಿಪ್ರಶ್ಚಾಜಗರೋಽಭವತ್ ।**
**ವೇದಾಂತಶಾಸ್ತ್ರನಿಪುಣೋ ಜ್ಞಾನವಾಞ್ಛಂಭುಪೂಜಕಃ ॥ ೧ ॥**

**ದ್ವಾದಶಾಬ್ದಾಂತರೇ ರುದ್ರಸ್ತುಷ್ಟೋಽಭೂತ್ಪಾರ್ಥಿವಾರ್ಚನಾತ್ ।**
**ತದಾಗತ್ಯ ದದೌ ಜ್ಞಾನಂ ಜೀವನ್ಮೋಕ್ಷತ್ವಮಾಗತಃ ॥ ೨ ॥**

**ಸಂಕರ್ಷಣಂ ಸಮಾರಾಧ್ಯ ತಜ್ಜ್ಞಾನೇನ ದ್ವಿಜೋತ್ತಮಃ ।**
**ತುಷ್ಟಾವ ಪುಷ್ಕಲಾಭಿಶ್ಚ ಸ್ತುತಿಭಿಃ ಪರಮೇಶ್ವರಂ ॥ ೩ ॥**

---

### ಹನ್ನೊಂದನೆಯ ಅಧ್ಯಾಯ

೧. ಬೃಹಸ್ಪತ್ಯಾಚಾರ್ಯರು ಹೇಳುತ್ತಾರೆ—ಪೂರ್ವಕಾಲದಲ್ಲಿ ನೈಮಿಷಾರಣ್ಯದಲ್ಲಿ ವೇದಾಂತಶಾಸ್ತ್ರದ ಸಾರವನ್ನು ತಿಳಿದವನೂ, ಜ್ಞಾನಿಯೂ, ಈಶ್ವರನ ಪೂಜೆ ಮಾಡುವವನೂ ಆದ ಅಜಗರನೆಂಬ ಒಬ್ಬ ಬ್ರಾಹ್ಮಣನಿದ್ದನು

೨ ಅವನು ಹನ್ನೆರಡು ವರ್ಷಗಳವರೆಗೆ ಪಾರ್ಥಿವಲಿಂಗದ ಪೂಜೆಯನ್ನು ಮಾಡಿದನು. ಅವನ ಸೇವೆಯಿಂದ ಈಶ್ವರನು ಸಂತೋಷಗೊಂಡನು. ಆದುದರಿಂದ ಅವನು ಪ್ರತ್ಯಕ್ಷನಾಗಿ ಇವನಿಗೆ ದಿವ್ಯಜ್ಞಾನವನ್ನು ಕೊಟ್ಟನು. ಆದರಿಂದ ಆ ಬ್ರಾಹ್ಮಣನು ಜೀವನ್ಮುಕ್ತನಾದನು.

೩. ಆ ಬ್ರಾಹ್ಮಣೋತ್ತಮನು ತನಗೆ ಉಂಟಾದ ದಿವ್ಯಜ್ಞಾನದಿಂದ ಸಂಕರ್ಷಣ ಮೂರ್ತಿಯನ್ನು ಆರಾಧನೆಮಾಡಿ ದಿವ್ಯವಾದ ಸ್ತೋತ್ರಗಳಿಂದ ಪರಮೇಶ್ವರನನ್ನು ಸ್ತುತಿಸಿದನು.

॥ ಅಜಗರ ಉವಾಚ ॥

ಸದ್ದೈವ್ಯಂ ಪ್ರಧಾನಂ ಪರಂ ಜ್ಯೋತಿರೂಪಂ ।
ನಿರಾಕಾರಮವ್ಯಕ್ತಮಾನಂದನಿತ್ಯಂ ॥
ತ್ರಿಧಾ ತತ್ತು ಜಾತಂ ತ್ರಿಲಿಂಗೈಕ್ಯಭಿನ್ನಂ ।
ಪುಮಾನ್‌ಸತ್ವರೂಪೋ ರಜೋರೂಪನಾರೀ ॥
ತಯೋರ್ಯತ್ತು ಶೇಷಂ ತಮೋರೂಪಮೇವ ।
ತತಶ್ಶೇಷನಾಮ್ನೇ ನಮಸ್ತೇ ನಮಸ್ತೇ ॥ ೪ ॥

ರಜಶ್ಚಾದಿಭೂತೋ ಗುಣಸ್ಸೈವ ಮಾಯಾ ।
ತಥಾ ಮಧ್ಯಭೂತೋ ನರಸ್ಸತ್ತ್ವರೂಪಂ ॥
ತಥೈವಾಂತಭೂತೋ ನಪುಂಸ್ಕಂ ತಮೋವತ್ ।
ಸದೈವಾದ್ಯ ನಾಗೇಶ ತುಭ್ಯಂ ನಮಸ್ತೇ ॥ ೫ ॥

ನರಾಧಾರರೂಪೋ ಭವಾನ್‌ಕಾಲಕರ್ತಾ ।
ನರಾಕರ್ಷಣಸ್ತ್ವಂ ಹಿ ಸಂಕರ್ಷಣಶ್ಚ ॥
ರಮಂತೇ ಮುನೀಶಾಸ್ತ್ವಯಿ ಬ್ರಹ್ಮಧಾಮ್ನಿ ।

೩. ಆ ಅಜಗರನು ಸ್ತೋತ್ರಮಾಡತೊಡಗಿ "ದೈವಶಕ್ತಿಯುತನೂ, ಸರ್ವಕ್ಕೂ ಮುಖ್ಯನೂ, ಪರಂಜ್ಯೋತಿಸ್ವರೂಪನೂ, ನಿತ್ಯನೂ, ನಿರಾಕಾರನೂ, ಅವ್ಯಕ್ತ ಸ್ವರೂಪನೂ, ಆನಂದಮಯನೂ ಆದ ನೀನು ಮೂರು ಲಿಂಗದ ಐಕ್ಯತೆಯಿಂದ ಭಿನ್ನನಾಗಿರುವೆ. ನಿನ್ನ ಸತ್ವಗುಣಯುಕ್ತವಾದ ರೂಪವೇ ಪುರುಷನು. ರಜೋಗುಣ ಯುಕ್ತವಾದ ರೂಪೇ ಸ್ತ್ರೀಯು. ಇವೆರಡಕ್ಕಿಂತ ಬೇರೆಯಾಗಿ ತಮೋಗುಣಾತ್ಮಕ ವಾದ ರೂಪೇ ನಪುಂಸಕವು. ಆದುದರಿಂದ ಶೇಷನೆಂಬ ಹೆಸರನ್ನು ಧರಿಸಿರುವ ನಿನಗೆ ನಮಸ್ಕಾರ.

೫ ಮೊದಲನೆಯದಾದ ರಜೋಗುಣವೇ ಮಾಯೆಯು. ಮಧ್ಯಭೂತವಾದ ಸತ್ವಗುಣವೇ ಪುರುಷನು. ಕೊನೆಯದಾದ ತಮೋಗುಣವೇ ನಪುಂಸಕರೂಪವೂ ಆಗಿದೆ. ಸರ್ವಕ್ಕೂ ಆದಿಭೂತನಾದ ನಾಗರಾಜನೇ! ನಿನಗೆ ಸರ್ವದಾ ನಮಸ್ಕಾರಗಳು.

೬. ಕಾಲಕ್ಕೆ ಅಧಿಪತಿಯಾದ ನೀನು ಸಕಲ ಮನುಜರಿಗೂ ಆಧಾರನಾಗಿರುವೆ. ಮತ್ತು ನೀನು ಜನಗಳ ಪಾಪವನ್ನು ಸಂಪೂರ್ಣವಾಗಿ ಹೋಗಲಾಡಿಸಿ ಜನರನ್ನು

ನಮಸ್ತೇನಮಸ್ತೇ ಪುನಸ್ತೇ ನಮೋಽಸ್ತು ॥
ನರಾಂಗೇಷು ಚಾಧಾರಭೂತಾ ಶಿವಾ ಯಾ ।
ಸ್ಮೃತಾ ಯೋಗನಿದ್ರಾ ಹಿ ಶಕ್ತಿಸ್ತ್ವದೀಯಾ ॥ ೬ ॥

॥ ಜೀವ ಉವಾಚ ॥

ಏವಂ ಹಿ ಸಂಸ್ತುತೋ ದೇವೋ ದ್ವಿಜಂ ಚಾಜಗರಂ ಪ್ರಭುಃ ।
ಸಾಯುಜ್ಯಂ ಕೃತವಾನ್ ಸ್ವಾಂಗೇ ರುದ್ರಃ ಸರ್ಪೋ ಹಿ ಸೋಽಭವತ್ ॥ ೭ ॥

ಫಣಾಸಹಸ್ರಸಹಿತೋ ಗೌರಾಂಗೋ ಗೌರವಿಗ್ರಹಃ ।
ಕ್ಷೀರಾಬ್ಧೌ ಮಂದಿರಂ ಯಸ್ಯ ಬಭೂವ ಚ ಗುಣಾಕರಂ ॥ ೮ ॥

ತಂ ಸರ್ಪಾಖ್ಯಂ ಮಹಾರುದ್ರಂ ಪ್ರತ್ಯಾಗತ್ಯಾತ್ಮಭೂಃ ಸ್ವಯಂ ।
ಕರ್ಕರಾಶಿಸ್ಥಿತೇ ಸೂರ್ಯೇ ಚಂದ್ರೇ ಭಗಣಮಂಡಲೇ ॥ ೯ ॥

---

ನಿನ್ನ ಸಮೀಪಕ್ಕೆ ಸೆಳೆಯುತ್ತೀಯೆ. ಬ್ರಹ್ಮಸ್ವರೂಪನಾದ ನಿನ್ನಲ್ಲಿ ಮುನಿಗಳೆಲ್ಲರೂ ವಿಹರಿಸುತ್ತಾರೆ. ಮನುಜರ ಶರೀರಕ್ಕೆ ಆಧಾರಭೂತಳಾದ ಶಕ್ತಿದೇವತೆಯು ನಿನ್ನ ಆತ್ಮಶಕ್ತಿಯಾದ ಯೋಗನಿದ್ರಾಸ್ವರೂಪಳೆಂದು ಹೇಳುತ್ತಾರೆ. ಇಂಥಾ ನಿನಗೆ ನಮಸ್ಕಾರ" ಎಂದನು.

೭. ಬೃಹಸ್ಪತ್ಯಾಚಾರ್ಯರು ಮುಂದುವರಿಸಿ ಹೇಳುತ್ತಾರೆ—"ಹೀಗೆ ಅಜಗರನು ಸ್ತೋತ್ರಮಾಡಿದನಂತರ ಸ್ವಾಮಿಯಾದ ರುದ್ರನು ಆ ಬ್ರಾಹ್ಮಣನಿಗೆ ತನ್ನ ಶರೀರದಲ್ಲಿ ಐಕ್ಯವಾಗುವ ರೀತಿ ಸಾಯುಜ್ಯವನ್ನು ಕೊಟ್ಟನು. ಅನಂತರ ಅವನು ಸರ್ಪನಾದನು.

೮. ಸಾವಿರ ಹೆಡೆಗಳುಳ್ಳವನೂ ಬಿಳುಪಾದ ಶರೀರವುಳ್ಳವನೂ ಆದ ಶೇಷನು ಕ್ಷೀರಸಮುದ್ರವೆಂಬ ಉತ್ತಮವಾದ ಸ್ಥಾನವನ್ನು ಪಡೆದುಕೊಂಡನು.

೯. ಸೂರ್ಯನು ಕರ್ಕಾಟಕ ರಾಶಿಯಲ್ಲಿರುವಾಗ ಬ್ರಹ್ಮನು ತಾನಾಗಿಯೇ ಬಂದು ಆ ಸರ್ಪರೂಪನಾದ ಮಹಾರುದ್ರನನ್ನು ನಕ್ಷತ್ರಮಂಡಲದಲ್ಲಿರುವ ಚಂದ್ರನಲ್ಲಿ ಸ್ಥಾಪಿಸಿದನು.

ತಂ ರುದ್ರಂ ಸ್ಥಾಪಯಾಮಾಸ ಚಂದ್ರಮಾಃ ಸ ತು ಚಾಽಭವತ್
ಇತಿ ಶ್ರುತ್ವಾ ಶೇಷನಾಗೋ ರುದ್ರಃ ಶ್ರೀಗುರುಭಾಷಿತಂ ॥ ೧೦ ॥

ವಚನಂ ಸ ಪ್ರಸನ್ನಾತ್ಮಾ ತೇಜ ಉತ್ಪಾದ್ಯ ವೈ ಮುಖಾತ್ ॥
ವಿಂಧ್ಯಾದ್ರೌ ಜನಯಾಮಾಸ ದೇವದತ್ತದ್ವಿಜಾಲಯೇ ॥ ೧೧ ॥

ಗಿರಿಶರ್ಮಾ ಸ ವೈ ವಿಪ್ರೋ ವಿಜಿತ್ಯ ವಿದುಷಾಂ ಗಣಾನ್ ।
ಕಾಶೀಪುರೀಂ ಸಮಾಯಾತಃ ಶಿಷ್ಯೋಽಭೂಚ್ಛಂಕರಸ್ಯ ವೈ ॥ ೧೨ ॥

ಇತಿ ತೇ ಕಥಿತಂ ವಿಪ್ರ ಯಥಾ ರುದ್ರೋ ಬಭೂವ ಹ ।
ಪುನಃ ಶೃಣು ಕಥಾಂ ವಿಪ್ರ ಯಥಾ ಜೀವೇನ ಭಾಷಿತಾಂ ॥ ೧೩ ॥

॥ ಜೀವ ಉವಾಚ ॥

ಪ್ರಯಾಗೇ ಚ ಪುರಾ ಹ್ಯಾಸೀದ್ಬ್ರಾಹ್ಮಣೋ ಹರಿಸೇವಕಃ ।
ದಾರಿದ್ರ್ಯಾರ್ತೋ ಮಂದಭಾಗ್ಯೋ ನೈರ್ಋತೋ ನಾಮ ವಿಶ್ರುತಃ ॥ ೧೪ ॥

---

೧೦-೧೧. ಆದುದರಿಂದ ಅವನು ಚಂದ್ರಮನಾದನು" ಎಂದನು. ಬೃಹಸ್ಪತ್ಯಾಚಾರ್ಯರ ಈ ಮಾತನ್ನು ಕೇಳಿ ಶೇಷನಾಗರೂಪಿಯಾದ ರುದ್ರನು ಸಂತುಷ್ಟನಾಗಿ ತನ್ನ ಮುಖದಿಂದ ಒಂದು ತೇಜಸ್ಸನ್ನು ಉತ್ಪಾದನೆಮಾಡಿ ಆ ಅಂಶದಿಂದ ವಿಂಧ್ಯಪರ್ವತ ಪ್ರಾಂತ್ಯದ ರಾಜ್ಯದಲ್ಲಿರುವ ದೇವದತ್ತನೆಂಬ ಬ್ರಾಹ್ಮಣನ ಮನೆಯಲ್ಲಿ ಜನಿಸಿದನು.

೧೨. ಹೀಗೆ ಜನಿಸಿ ಪ್ರಬುದ್ಧನಾಗಿ ಗಿರಿಶರ್ಮನೆಂದು ಪ್ರಸಿದ್ಧನಾದ ಆ ಬ್ರಾಹ್ಮಣನು ತನ್ನ ಪಾಂಡಿತ್ಯದಿಂದ ವಿದ್ವಾಂಸರ ಸಮೂಹಗಳನ್ನೆಲ್ಲಾ ಜಯಿಸಿ ಕಾಶೀಪಟ್ಟಣಕ್ಕೆ ಬಂದು ಅಲ್ಲಿ ಶಂಕರಾಚಾರ್ಯರ ಶಿಷ್ಯನಾದನು.

೧೩. ಎಲೈ ಬ್ರಾಹ್ಮಣನೇ! ರುದ್ರನು ಈರೀತಿಯಾಗಿ ಆನಂದಗಿರಿಯಾಗಿ ಅವತರಿಸಿದುದನ್ನು ಹೇಳಿದೆನು. ಬೃಹಸ್ಪತ್ಯಾಚಾರ್ಯರು ಹೇಳಿದ ಮತ್ತೊಂದು ಕಥೆಯನ್ನು ಅವರ ಮಾತಿನಲ್ಲೇ ಹೇಳುತ್ತೇನೆ ಕೇಳು.

೧೪. ಬೃಹಸ್ಪತ್ಯಾಚಾರ್ಯರು ಹೇಳುತ್ತಾರೆ—ಪೂರ್ವಕಾಲದಲ್ಲಿ ಪ್ರಯಾಗವೆಂಬ ಕ್ಷೇತ್ರದಲ್ಲಿ ಅದೃಷ್ಟಹೀನನೂ ದಾರಿದ್ರ್ಯಪೀಡಿತನೂ ಆದ ನೈಋತನೆಂಬ ಬ್ರಾಹ್ಮಣನು ವಿಷ್ಣುಭಕ್ತನೆನಿಸಿ ಪ್ರಖ್ಯಾತನಾಗಿದ್ದನು.

ಮಹಾಕಷ್ಟೇನ ತಸ್ಯೈವ ಭಿಕ್ಷಾ ಪ್ರಾಪ್ತಾ ದಿನಾಂತಕೇ ।
ಸ್ವೈರ್ಯತಃ ಪುತ್ರಪತ್ನೀಕೋ ದಾರಿದ್ರ್ಯಾತುರೋ ದಿನೇದಿನೇ ॥ ೧೫ ॥

ಏಕದಾ ನಾರದೋ ಯೋಗೀ ಸಂಪ್ರಾಪ್ತೋ ವೈಷ್ಣವಪ್ರಿಯಃ ।
ಪೂಜಿತಸ್ತೇನ ವಿಪ್ರೇಣ ವಿಷ್ಣುಲೋಕಮುಪಾಯಯೌ ॥ ೧೬ ॥

ದೃಷ್ಟ್ವಾ ನಾರಾಯಣಂ ದೇವಂ ನಮಸ್ಕೃತ್ಯ ಪುನಃಪುನಃ ।
ವಚನಂ ಪ್ರಾಹ ನಮ್ರಾತ್ಮಾ ಸದೈವ ಭಗವತ್ಪ್ರಿಯಃ ॥ ೧೭ ॥

ಭಗವನ್‌ಯೇ ಸುರಾಃ ಸರ್ವೇ ಸದಾ ತ್ವತ್ಪೂಜನೇ ರತಾಃ ।
ತೇಷಾಂ ಭಕ್ತಾಶ್ಚ ಯೇ ಭೂಮೌ ಧನಧಾನ್ಯಸಮನ್ವಿತಾಃ ॥ ೧೮ ॥

---

೧೫. ಬಹುಕಷ್ಟದಿಂದ ಅವನು ಭಿಕ್ಷೆಬೇಡುತ್ತಾ ಸಾಯಂಕಾಲದವೇಳೆಗೆ ದೊರೆತ ಸ್ವಲ್ಪ ವಸ್ತುವನ್ನೇ ತರುತ್ತಿದ್ದನು. ಇದು ಅವನ ಸಂಸಾರಕ್ಕೆ ಸಾಲದು. ಹೀಗೆ ಪತ್ನೀಪುತ್ರರಿಂದೊಂಡಗೂಡಿ ಸ್ವೈರುತನು ದಿನೇದಿನೇ ದಾರುಣವಾದ ದಾರಿದ್ರ್ಯ ದುಃಖದಿಂದ ಪೀಡಿತನಾಗಿರುತ್ತಿದ್ದನು.

೧೬. ಒಂದುದಿನ ವಿಷ್ಣುಭಕ್ತನಾದ ನಾರದಮುನಿಯು ಅವನ ಮನೆಗೆ ಬಂದನು. ಆಗ ಈ ಸ್ವೈಖುತನು ಅವನನ್ನು ಸತ್ಕರಿಸಿದನು. ಇವನು ಮಾಡಿದ ಪೂಜೆಯನ್ನು ಸ್ವೀಕರಿಸಿ ಸಂತೋಷಪಟ್ಟು ಆ ನಾರದನು ವೈಕುಂಠಕ್ಕೆ ಹೊರಟನು.

೧೭. ಯಾವಾಗಲೂ ಪರಮಾತ್ಮನ ಪ್ರೀತಿಗೆ ಪಾತ್ರನಾದ ಆ ನಾರದ ಮಹಾಮುನಿಯು ಅಲ್ಲಿ ಸ್ವಾಮಿಯಾದ ನಾರಾಯಣನನ್ನು ದರ್ಶನಮಾಡಿ ಅನೇಕಸಾರಿ ನಮಸ್ಕಾರಮಾಡಿ ವಿನಯದಿಂದ ಈರೀತಿ ಹೇಳಿದನು.

೧೮. "ಎಲೈ ಷಡ್ಗುಣೈಶ್ವರ್ಯಸಂಪನ್ನನಾದ ಪರಮಾತ್ಮನೇ! ನಿನ್ನನ್ನು ಪೂಜಿಸುವುದರಲ್ಲಿ ಆಸಕ್ತರಾಗಿ ಸ್ವರ್ಗದಲ್ಲಿರುವ ಸಮಸ್ತ ದೇವತೆಗಳೂ, ಭೂಲೋಕದಲ್ಲಿರುವ ಅವರ ಭಕ್ತರೂ ಕೂಡ ಧನಧಾನ್ಯಸಮೃದ್ಧಿಯಿಂದ ಕೂಡಿರುತ್ತಾರೆ."

ತ್ವದ್ಭಕ್ತಾಶ್ಚ ಮಯಾ ದೃಷ್ಟಾ ದಾರಿದ್ರ್ಯಾರ್ತಾಃ ಸದಾ ಭುವಿ ।
ಕಿಮರ್ಥಂ ಬ್ರೂಹಿ ಮೇ ಸ್ವಾಮಿಞ್ಜನಾರ್ದನ ನಮೋಽಸ್ತು ತೇ ॥ ೧೯ ॥

ಇತ್ಯುಕ್ತೋ ನಾರದೇನೈವ ಭಗವಾನ್ ಭಕ್ತವತ್ಸಲಃ ।
ತಮಾಹ ವಚನಂ ರಮ್ಯಂ ತಚ್ಛೃಣು ತ್ವಂ ಸುರೋತ್ತಮ ॥ ೨೦ ॥

ಮದ್ಭಕ್ತೋ ಭಗವಾನ್ ಬ್ರಹ್ಮಾ ದೃಷ್ಟ್ವಾ ನಾರಾಯಣಪ್ರಿಯಾನ್ ।
ಜನಾಂಶ್ಚ ಸ್ವವಶೀಕೃತ್ಯ ಲೋಕಕಾರ್ಯಂ ಕರೋತಿ ಹಿ ॥ ೨೧ ॥

ಧರ್ಮೋಽಧರ್ಮಸ್ತೇನ ಕೃತೋ ಧರ್ಮೋ ವೇದಮಯಃ ಸ್ಮೃತಃ ।
ಸಪ್ತಲೋಕಾಶ್ಚ ಧರ್ಮಸ್ಯ ನಿರ್ಮಿತಾಸ್ತೇನ ಧೀಮತಾ ॥ ೨೨ ॥

---

೧೯. "ಹೀಗಿರುವಲ್ಲಿ ನಿನ್ನ ಭಕ್ತರು ಭೂಲೋಕದಲ್ಲಿ ದಾರಿದ್ರ್ಯದಿಂದ ಪೀಡಿತರಾಗಿರುವುದನ್ನು ನಾನು ನೋಡಿದೆನು. ಎಲೈ ಜನಾರ್ದನನೇ! ನಿನಗೆ ನಮಸ್ಕಾರ. ಈರೀತಿ ಆ ಭಕ್ತರಿಗೆ ದಾರಿದ್ರ್ಯ ಉಂಟಾಗಲು ಕಾರಣವೇನು ಎಂಬುದನ್ನು ತಿಳಿಸು" ಎಂದನು.

೨೦. ಭಕ್ತರಲ್ಲಿ ಪ್ರೀತಿಯುಳ್ಳವನೂ, ಪೂಜ್ಯನೂ ಆದ ಪರಮಾತ್ಮನನ್ನು ನಾರದನು ಈರೀತಿ ಪ್ರಶ್ನೆಮಾಡಲು ನಾರಾಯಣನು ಅವನನ್ನು ಕುರಿತು ಉತ್ತಮವಾದ ಒಂದು ಮಾತನ್ನು ಹೇಳಿದನು. ಎಲೈ ಬ್ರಾಹ್ಮಣನೇ! ಆ ಮಾತನ್ನು ಕೇಳು.

೨೧. "ನನ್ನ ಭಕ್ತನೂ ಷಡ್ಗುಣೈಶ್ವರ್ಯಸಂಪನ್ನನೂ ಆದ ಬ್ರಹ್ಮನು ನಾರಾಯಣಪ್ರಿಯರಾದ ಜನರನ್ನು ನೋಡಿ ಅವರನ್ನು ತನ್ನ ಅಧೀನರನ್ನಾಗಿ ಮಾಡಿಕೊಂಡು ಲೋಕದ ಕಾರ್ಯಗಳನ್ನು ನಿರ್ವಾಹಮಾಡುತ್ತಾನೆ."

೨೨. "ಧರ್ಮ, ಅಧರ್ಮಗಳನ್ನು ಅವನು ವಿಧಾಯಕಮಾಡಿರುತ್ತಾನೆ. ಧರ್ಮವೆಂದರೆ ವೇದಮಯವಾದುದು. ಬುದ್ಧಿವಂತನಾದ ಆ ಬ್ರಹ್ಮನು ಧರ್ಮಸಂಸ್ಥಾಪನೆಗಾಗಿ ಏಳುಲೋಕಗಳನ್ನೂ ಸೃಷ್ಟಿಸಿದನು."

ಭೂರ್ಭುವಃ ಸ್ವೋ ಮಹಶ್ಚೈವ ಜನಶ್ಚೈವ ತಪಸ್ತಥಾ ।
ಸತ್ಯಂ ತಥೈವ ಕ್ರಮತೋ ನೃಣಾಂ ದ್ವಿಗುಣದಂ ಸುಖಂ ॥ ೨೩ ॥

ಅಧರ್ಮೋ ವೇದರಹಿತೋ ಭುವಿ ಶಬ್ದಾನ್ಯಕರ್ತೃಕಃ ।
ಯೇ ಶಬ್ದಾಶ್ಚ ಮಹಾವಾಣ್ಯಾ ದೂಷಿತಾಸ್ತೇ ಹಿ ಲೋಕಗಾಃ ॥ ೨೪ ॥

ವೇದೇತರಾ ಪಾಪಮಯಾ ದೈತ್ಯವೃದ್ಧಿಕರಾಃ ಸದಾ ।
ಅಧರ್ಮಃ ಸ ತು ವಿಜ್ಞೇಯಃ ಸಪ್ತಲೋಕಾಶ್ಚ ತಸ್ಯ ವೈ ॥ ೨೫ ॥

ಭೂಮಿಗರ್ತೇಷು ವಿಧಿನಾ ನಿರ್ಮಿತಾಃ ಸುಖದಾಯಕಾಃ ।
ಅತಲಂ ವಿತಲಂ ಚೈವ ಸುತಲಂ ಚ ತಲಾತಲಂ ॥
ಮಹಾತಲಂ ರಸಾ ಚೈವ ಪಾತಾಲಂ ಚಾನ್ಯಧರ್ಮಜಂ ॥ ೨೬ ॥

---

೨೩. ಭೂಲೋಕ, ಭುವರ್ಲೋಕ, ಸುವರ್ಲೋಕ, ಮಹೋಲೋಕ, ಜನೋಲೋಕ, ತಪೋಲೋಕ, ಸತ್ಯಲೋಕ ಎಂಬಿವೇ. ಆ ಏಳು ಊರ್ಧ್ವಲೋಕಗಳು. ಈ ಲೋಕಗಳು ಕ್ರಮವಾಗಿ ಒಂದಕ್ಕಿಂತ ಮತ್ತೊಂದು ಅಲ್ಲಲ್ಲಿನ ನಿವಾಸಿಗಳಾದ ಮನುಷ್ಯರಿಗೆ ಎರಡರಷ್ಟು ಸೌಖ್ಯವನ್ನುಂಟುಮಾಡತಕ್ಕವುಗಳು.

೨೪. ಭೂಲೋಕದಲ್ಲಿ ಬೇರೆಯವರಿಂದ ವಿಧಾಯಕಮಾಡಲ್ಪಟ್ಟು ವೇದ ಮಾರ್ಗರಹಿತವಾದುವುಗಳೂ, ವೇದಮಾರ್ಗರೀತಿ ದೂಷಿತವೆನಿಸಿ ಲೋಕದಲ್ಲಿ ಪ್ರಚಾರ ದಲ್ಲಿರುವವುಗಳೂ ಅಧರ್ಮವೆನಿಸುವುವು.

೨೫. ವೇದಬಾಹಿರವೂ ಪಾಪಪೂರಿತವೂ ಆದ ಮಾರ್ಗಗಳು ಯಾವಾಗಲೂ ರಾಕ್ಷಸರಿಗೆ ವೃದ್ಧಿಯನ್ನುಂಟುಮಾಡುವುವು. ಅವುಗಳನ್ನೇ ಅಧರ್ಮಗಳೆಂದು ತಿಳಿಯ ಬೇಕು. ಈ ಅಧರ್ಮಮಾರ್ಗಿಗಳಿಗೆ ಸುಖಕರವಾಗುವುದಕ್ಕಾಗಿ ಬ್ರಹ್ಮನು ಏಳು ಅಧೋಲೋಕಗಳನ್ನು ಭೂಮಿಯ ಕೆಳಭಾಗದಲ್ಲಿ ನಿರ್ಮಾಣಮಾಡಿರುತ್ತಾನೆ.

೨೬. ಅತಲ, ವಿತಲ, ಸುತಲ, ತಲಾತಲ, ಮಹಾತಲ, ರಸಾತಲ, ಪಾತಾಲ ಎಂಬ ಏಳೂ ಅಧೋಲೋಕಗಳು. ಇವುಗಳು ಅನ್ಯಧರ್ಮಿಗಳಿಗಾಗಿ ಗೊತ್ತಾದುವುಗಳು.

ಅನ್ಯಧರ್ಮೋ ಹ್ಯಧರ್ಮಶ್ಚ ದೇವಾಸ್ತ್ವನ್ಯೇ ಹಿ ತೇಽಸುರಾಃ ।
ಧರ್ಮಪಕ್ಷಾಃ ಸುರಾ ಜ್ಞೇಯಾ ಅಸುರಾಶ್ಚಾನ್ಯಧರ್ಮಜಾಃ ॥ ೨೭ ॥

ತಯೋರ್ವಿಹೀನೋ ಯೋ ಧರ್ಮೋ ದೇವೈರ್ದೈತ್ಯೈಶ್ಚ ದೂಷಿತಃ ।
ವಿಧರ್ಮಃ ಸ ತು ವಿಜ್ಞೇಯಸ್ತತ್ರ ಲೋಕಾ ವ್ಯಥಾಕುಲಾಃ ॥ ೨೮ ॥

ತಾಮಿಸ್ರಮಂಧತಾಮಿಸ್ರಂ ಕುಂಭೀಪಾಕಶ್ಚ ರೌರವಂ ।
ಮಹಾರೌರವಮೇವಾಪಿ ತಥಾ ಮೂರ್ತಿರಯಸ್ತಥಾ ॥ ೨೯ ॥

ಇಕ್ಷುಯಂತ್ರಂ ಶಾಲ್ಮಲಂ ಚ ಹ್ಯಸಿಪತ್ರವನಂ ತಥಾ ।
ಜ್ಞೇಯಮಿತ್ಯೇವ ರಚಿತಂ ವಿಧಿನಾ ಚೈಕವಿಂಶತಿಃ ॥ ೩೦ ॥

ಬ್ರಹ್ಮಾಂಡೋಽಯಂ ಲೋಕಮಯಃ ಪರಂ ತಸ್ಮಾಚ್ಚ ಮತ್ಪದಂ ।
ಮದ್ಭಕ್ತಾ ಭೂತಲೇ ಯೇ ವೈ ತೇ ಗಚ್ಛಂತಿ ಪರಂ ಪದಂ ॥ ೩೧ ॥

---

೨೭ ಅನ್ಯಧರ್ಮವೆಂದರೆ ಅಧರ್ಮವು. ದೇವತೆಗಳ ಧರ್ಮಕ್ಕಿಂತ ಬೇರೆಯಾದ ಅನ್ಯಧರ್ಮಾಶ್ರಯವುಳ್ಳವರು ರಾಕ್ಷಸರು ; ದೇವತೆಗಳು ಧರ್ಮಪಕ್ಷದವರು ; ರಾಕ್ಷಸರು ಅನ್ಯಧರ್ಮಿಗಳು. (ಅಧರ್ಮಿಗಳು) ಎಂದು ತಿಳಿಯಬೇಕು.

೨೮. ಇವೆರಡಕ್ಕಿಂತಲೂ ಭಿನ್ನವಾಗಿ ದೇವತೆಗಳಿಂದಲೂ ರಾಕ್ಷಸರಿಂದಲೂ ಸಹ ದೂಷಿತವಾದ ಧರ್ಮವನ್ನು ವಿಧರ್ಮವೆಂದು ತಿಳಿಯಬೇಕು. ಅವನ್ನು ಅವಲಂಬಿಸುವುದರಿಂದ ಜನರು ವ್ಯಥೆಯನ್ನನುಭವಿಸುವರು.

೨೯-೩೦. ಇಂಥವರಿಗಾಗಿ ತಾಮಿಸ್ರ, ಅಂಧತಾಮಿಸ್ರ, ಕುಂಭೀಪಾಕ, ರೌರವ, ಮಹಾರೌರವ, ಇಕ್ಷುಯಂತ್ರ, ಮೂರ್ತಿರಯ, ಶಾಲ್ಮಲ, ಅಸಿಪತ್ರವನ ಮುಂತಾದ ಇಪ್ಪತ್ತೊಂದು ನರಕಲೋಕಗಳನ್ನು ಬ್ರಹ್ಮನು ಸೃಷ್ಟಿಮಾಡಿದ್ದಾನೆ. ತಿಳಿಯಿತೇ ?

೩೧. ಸಮಸ್ತ ಲೋಕಮಯವಾದ ಈ ಬ್ರಹ್ಮಾಂಡವು ಶ್ರೇಷ್ಠವಾದುದು. ಅದಕ್ಕಿಂತ ಪರಮಪದವು ಇನ್ನೂ ಶ್ರೇಷ್ಠವಾದುದು. ಭೂಲೋಕದಲ್ಲಿ ಯಾರು ನನ್ನ ಭಕ್ತರಾಗಿರುತ್ತಾರೋ ಅವರು ಅಂಥ ಪರಮಪದ (ವೈಕುಂಠ) ವನ್ನು ಹೊಂದುತ್ತಾರೆ.

ದೇವಭಕ್ತಾಶ್ಚ ಯೇ ಲೋಕಾಃ ಸಪ್ತಲೋಕಾನ್ವ್ರಜಂತಿ ತೇ ।
ಯೇ ತು ವೈ ತಾಮಸಾ ಲೋಕಾ ದೈತ್ಯಪೂಜನತತ್ಪರಾಃ ॥
ತೇ ಗಚ್ಛಂತಿ ಮಹೀಲೋಕಾನತಲಾದಿಮಯಾಂಸ್ತಥಾ ॥ ೩೨ ॥

ಪಾತಾಲಾದ್ಯೋಜನಂ ಲಕ್ಷಮಧೋಲೋಕಃ ಪ್ರಕೀರ್ತಿತಃ ।
ವಿಧರ್ಮತತ್ಪರಾಃ ಲೋಕಾಸ್ತೇ ಗಚ್ಛಂತಿ ಹ್ಯಧೋಗತಿಂ ॥
ಅತೋ ವೈ ವಿಧಿನಾ ಭ್ರಷ್ಟಾ ಮದ್ಭಕ್ತಾಶ್ಚ ದರಿದ್ರಗಾಃ ॥ ೩೩ ॥

ಯೇ ಮದ್ಭಕ್ತಾಃಸುರಾನ್ಪೂರ್ವಂ ಪೂಜಯಿತ್ವಾ ಭಜಂತಿ ಮಾಂ ।
ಲಕ್ಷ್ಮೀವಂತಶ್ಚ ತೇ ಜ್ಞೇಯಾ ಭುಕ್ತಿಮುಕ್ತಿಪರಾಯಣಾಃ ॥ ೩೪ ॥

ಪ್ರಯಾಗೇ ನೈರ್ಋತೋ ವಿಪ್ರಸ್ತ್ಯಕ್ತ್ವಾ ದೇವಾನ್ಮಮ ಪ್ರಿಯಾನ್ ।
ಭಜತ್ಯನನ್ಯಭಾವೇನ ತಸ್ಮಾತ್ಸ ಹಿ ದರಿದ್ರವಾನ್ ॥ ೩೫ ॥

---

೩೨. ದೇವತೆಗಳಲ್ಲಿ ಭಕ್ತಿಯುಳ್ಳ ಜನರು ಸಪ್ತಊರ್ಧ್ವಲೋಕಗಳನ್ನು ಹೊಂದುತ್ತಾರೆ ತಾಮಸರಾಗಿ ದೈತ್ಯರ ಪೂಜೆಯಲ್ಲಿ ನಿರತರಾಗಿರುವ ಮಾನವರು ಭೂಮಿಯ ಅಧೋಭಾಗದಲ್ಲಿರುವ ಅತಲವೇ ಮೊದಲಾದ ಲೋಕಗಳನ್ನು ಹೊಂದುತ್ತಾರೆ.

೩೩ ಪಾತಾಳಲೋಕದಿಂದ ಕೆಳಗೆ ಒಂದುಲಕ್ಷ ಯೋಜನ ದೂರದಲ್ಲಿ ಅಧೋಲೋಕವೆಂಬುದಿರುತ್ತದೆ. ವಿಧರ್ಮದಲ್ಲಿ ಆಸಕ್ತರಾದವರು ಆ ಅಧೋಲೋಕ ವನ್ನು ಹೊಂದುತ್ತಾರೆ. ಆದುದರಿಂದಲೇ ನಿಯಮವನ್ನು ಮೀರಿದವರು ನನ್ನ ಭಕ್ತರಾದಾಗ್ಯೂ ಕೂಡ ದಾರಿದ್ರ್ಯವನ್ನು ಹೊಂದುತ್ತಾರೆ

೩೪. ನನ್ನಲ್ಲಿ ಭಕ್ತರಾದವರು ಮೊದಲು ದೇವತೆಗಳನ್ನು ಪೂಜೆಮಾಡಿ ಅನಂತರ ನನ್ನನ್ನು ಪೂಜಿಸುವ ನಿಯಮವನ್ನು ಅನುಸರಿಸಿದರೆ ಐಶ್ವರ್ಯವಂತರೂ, ಸುಖಭಾಗಿಗಳೂ, ಮೋಕ್ಷವನ್ನು ಪಡೆಯತಕ್ಕವರೂ ಆಗುತ್ತಾರೆ. ಎಂದು ತಿಳಿಯ ಬೇಕು

೩೫ ಪ್ರಯಾಗದಲ್ಲಿರುವ ಆ ನೈರುತನೆಂಬ ಬ್ರಾಹ್ಮಣನು ನನ್ನ ಪ್ರೀತಿಗೆ ಪಾತ್ರರಾದ ದೇವತೆಗಳನ್ನು ಬಿಟ್ಟು, ಅನನ್ಯಭಕ್ತಿಯಿಂದ ನನ್ನನ್ನೇ ಭಜಿಸುತ್ತಾನೆ. ಆದುದರಿಂದ ಅವನು ದರಿದ್ರನಾಗಿರುತ್ತಾನೆ.

ದೇವೈರ್ದತ್ತಂ ಹಿ ಯದ್ದ್ರವ್ಯಂ ಭೋಕ್ತವ್ಯಂ ಸರ್ವದಾ ಜನೈಃ ।
ಮಯಾ ದತ್ತಂ ಹಿ ಯದ್ವಸ್ತು ಬ್ರಹ್ಮಾಂಡೇ ನಾಸ್ತಿ ನಾರದ ॥
ಅತೋ ಮದಾಜ್ಞಯಾ ವಿಪ್ರ ದೇಹಿ ತಸ್ಮೈ ವರಂ ಶುಭಂ ॥ ೩೬ ॥

ಇತ್ಯುಕ್ತೋ ನಾರದೋ ಯೋಗೀ ಹರಿಣಾ ವಿಶ್ವಕಾರಿಣಾ ।
ದ್ವಿಜಪತ್ನೀ ಸ್ಥಿತಾ ಗೇಹೇ ತತ್ರ ಪ್ರಾಪ್ಯ ವಚೋಽಬ್ರವೀತ್ ॥ ೩೭ ॥

ವರಂ ವರಯ ಹೇ ಸಾಧ್ವಿ ತ್ವಯಾ ಯದ್ವಾಂಛಿತಂ ಹೃದಿ ।
ಸಾಹ ದೇಹಿ ವರಂ ಸ್ವಾಮಿನ್ ಭೂಪರಾಜ್ಞೀ ಭವಾಮ್ಯಹಂ ॥ ೩೮ ॥

ಇತ್ಯುಕ್ತ್ವಾ ವಚನಂ ತತ್ರ ದಿವ್ಯರೂಪಾ ಬಭೂವ ಸಾ ।
ಆಗತಸ್ತತ್ರ ನೃಪತಿರ್ಗೃಹೀತ್ವಾ ಗೇಹಮಾಯಯೌ ॥ ೩೯ ॥

---

೩೬ ದೇವತೆಗಳು ದಯಪಾಲಿಸಿದ ಪದಾರ್ಥವನ್ನು ಸರ್ವಕಾಲದಲ್ಲೂ ಜನಗಳು ಉಪಯೋಗಿಸಬಹುದು. ಎಲೈ ನಾರದನೇ! ನಾನು ಕೊಡಬಹುದಾದ ಪರಮಪದವೆಂಬವಸ್ತುವು ಈ ಬ್ರಹ್ಮಾಂಡದಲ್ಲಿಯೇ ಇಲ್ಲ. ಆದುದರಿಂದ ನೀನು ನನ್ನ ಅಪ್ಪಣೆಯ ಪ್ರಕಾರ ಅಲ್ಲಿಗೆ ಹೋಗಿ ಆ ಬ್ರಾಹ್ಮಣನಿಗೆ ಒಳ್ಳೆಯ ವರವನ್ನು ಕೊಡು." ಎಂದು ಹೇಳಿದನು.

೩೭. ಜಗತ್ಕರ್ತೃವಾದ ಪರಮಾತ್ಮನು ಈರೀತಿ ಹೇಳಿದನಂತರ; ಯೋಗಿಯಾದ ನಾರದಮುನಿಯು ಭೂಲೋಕಕ್ಕೆ ಬಂದು, ಆ ಬ್ರಾಹ್ಮಣನ ಪತ್ನಿಯು ಒಬ್ಬಳೇ ಮನೆಯಲ್ಲಿರುವಾಗ ಆಕೆಯನ್ನು ಕುರಿತು ಈ ಮಾತನ್ನು ಹೇಳಿದನು.

೩೮. "ಅಮ್ಮಾ ಪತಿವ್ರತಾಶಿರೋಮಣಿಯೇ! ನಿನ್ನ ಮನಸ್ಸಿಗೆ ಇಷ್ಟವಾದ ವರವನ್ನು ಕೇಳು" ಎಂದನು. ಆಗ ಆ ಬ್ರಾಹ್ಮಣನ ಪತ್ನಿಯು "ಎಲೈ ಸ್ವಾಮಿಯೇ! ನಾನು ರಾಜನ ಪಟ್ಟದರಾಣಿಯಾಗುವಂತೆ ವರವನ್ನು ಕೊಡಿ" ಎಂದು ಕೇಳಿದಳು.

೩೯. ಹೀಗೆ ಕೇಳುತ್ತಲೇ ಆ ಬ್ರಾಹ್ಮಣನ ಹೆಂಡತಿಯು ದಿವ್ಯವಾದ ರೂಪವನ್ನು ಹೊಂದಿದಳು. ಆ ವೇಳೆಗೆ ಅಲ್ಲಿಗೆ ರಾಜನು ಬಂದು ಅವಳನ್ನು ತನ್ನ ಅರಮನೆಗೆ ಕರೆದುಕೊಂಡು ಹೊರಟು ಹೋದನು.

ಸಾಯಂಕಾಲೇ ತು ಸಂಪ್ರಾಪ್ತೇ ದ್ವಿಜಸ್ತತ್ರ ಸಮಾಗತಃ ।
ನಾರದಸ್ತಂ ವಚಃ ಪ್ರಾಹ ಶೃಣು ವಿಪ್ರ ಹರಿಪ್ರಿಯ ॥ ೪೦ ॥

ವರದಾನಾಚ್ಚ ತೇ ಪತ್ನೀ ಭೂಪರಾಜ್ಞೀ ಹಿ ವರ್ತತೇ ।
ತ್ವಯಾ ಕಿಂ ವಾಂಛಿತಂ ವಸ್ತು ಮತ್ತಃ ಪ್ರಾಪ್ಯ ಸುಖೀ ಭವ ॥ ೪೧ ॥

ಇತಿ ಶ್ರುತ್ವಾ ದೈವವಶೋ ವಚಃ ಪ್ರಾಹ ರುಷಾನ್ವಿತಃ ।
ಕ್ರೋಷ್ಟ್ರೀ ಭವೇಚ್ಚ ಮತ್ಪತ್ನೀ ದೇಹಿ ವಿಪ್ರ ವರಂ ಮಮ ॥ ೪೨ ॥

ಇತ್ಯುಕ್ತವಚನಾತ್ಕ್ರೋಷ್ಟ್ರೀ ಸಾ ಬಭೂವ ದ್ವಿಜಪ್ರಿಯಾ ।
ಏತಸ್ಮಿನ್ನಂತರೇ ಪ್ರಾಪ್ತಸ್ತತ್ಪುತ್ರೋ ಗುರುಪೂಜಕಃ ॥ ೪೩ ॥

ಶ್ರುತ್ವಾ ತತ್ಕಾರಣಂ ಸರ್ವಂ ನಾರದಂ ಸ ವಚೋಽಬ್ರವೀತ್ ।
ಮಮ ಮಾತಾ ಯಥಾ ಸ್ವಾಮಿಂಸ್ತಥಾ ಶೀಘ್ರಂ ವರಾದ್ಭವೇತ್ ॥ ೪೪ ॥

---

೪೦. ಸಾಯಂಕಾಲವಾಗುತ್ತಲೆ ಬ್ರಾಹ್ಮಣನು ಮನೆಗೆ ಬಂದನು. ನಾರದ ಮುನಿಯು ಅವನನ್ನು ಕುರಿತು "ಎಲೈ ವಿಷ್ಣುಭಕ್ತನಾದ ಬ್ರಾಹ್ಮಣನೇ ! ಕೇಳು."

೪೧. "ನನ್ನ ವರದಾನದಿಂದ ನಿನ್ನ ಪತ್ನಿಯು ರಾಜನಪಟ್ಟಣದ ರಾಣಿಯಾಗಿದ್ದಾಳೆ. ನಿನಗೆ ಇಷ್ಟವಾದ ವಸ್ತುವನ್ನು ಕೇಳಿಕೊ, ನಾನು ಕೊಡುವೆನು. ಅದನ್ನು ಪಡೆದು ಸುಖವಾಗಿರು. ಎಂದು ಹೇಳಿದನು

೪೨. ಹೀಗೆಂದ ಮಾತನ್ನು ಕೇಳಿ ವಿಧಿವಶದಿಂದ ಆ ಬ್ರಾಹ್ಮಣನು ಕೋಪಗೊಂಡವನಾಗಿ "ಎಲೈ ಮುನಿಯೇ ! ನನ್ನ ಪತ್ನಿಯು ಹೆಣ್ಣುನರಿಯಾಗುವಂತೆ ನನಗೆ ವರವನ್ನು ಕೊಡು" ಎಂದನು.

೪೩. ಬ್ರಾಹ್ಮಣನು ಹೀಗೆ ಹೇಳಿದೊಡನೆಯೇ ರಾಣಿಯಾಗಿದ್ದ ಆ ಬ್ರಾಹ್ಮಣಿಯು ಹೆಣ್ಣುನರಿಯಾದಳು. ಇಷ್ಟರಲ್ಲಿಯೇ ಗುರುಭಕ್ತನಾದ ಅವನ ಮಗನು ಅಲ್ಲಿಗೆ ಬಂದನು.

೪೪. ಅವನು ಹೀಗಾಗುವುದಕ್ಕೆ ಕಾರಣವೇನೆಂಬುವನ್ನು ತಿಳಿದು ನಾರದರನ್ನು ಕುರಿತು ಹೀಗೆ ಹೇಳಿದನು. "ಸ್ವಾಮಿ ನನ್ನ ತಾಯಿಯು ಹೇಗೆ ಆಗುತ್ತಾಳೆಯೋ ನಾನೂ ಹಾಗೆಯೇ ಆಗುವಂತೆ ವರವನ್ನು ಕೊಡಿ" ಎಂದು ಕೇಳಿಕೊಂಡನು.

ಏತತ್ರಿಭಿರ್ವರೈಃ ಪ್ರಾಪ್ತಂ ದೈವಮಾಯಾವಿಮೋಹಿತೈಃ ।
ತದಾ ತು ನಾರದೋ ದುಃಖೀ ನೈಋರ್ತಂ ಪ್ರಾಹ ವೈ ವಚಃ ॥ ೪೫ ॥

ಬ್ರಹ್ಮಾಂಡೋಽಯಂ ದೇವಮಯೋ ಭವಸ್ತಸ್ಯ ಮಹೇಶ್ವರಃ ।
ಅತೋ ಭವಂ ಭಜಾಶು ತ್ವಂ ಸ ತೇ ಕಾರ್ಯಂ ಕರಿಷ್ಯತಿ ॥ ೪೬ ॥

ಇತ್ಯುಕ್ತವಚನೋ ವಿಪ್ರೋ ಭವಂ ತಂ ಪಾರ್ಥಿವಾರ್ಚನೈಃ ।
ತುಷ್ಟಾವ ಪರಯಾ ಭಕ್ತ್ಯಾ ವರ್ಷಮಾತ್ರಂ ಹಿ ನೈಋರ್ತಃ ॥ ೪೭ ॥

ತದಾ ಪ್ರಸನ್ನೋ ಭಗವಾನ್ಮಹೇಶೋ ಭಕ್ತವತ್ಸಲಃ ।
ಕುಬೇರಸದೃಶಂ ದಿವ್ಯಂ ದದೌ ತಸ್ಮೈ ಮಹದ್ಧನಂ ॥ ೪೮ ॥

ತದ್ಧನೇನ ಸ ವೈ ವಿಪ್ರೋ ಧರ್ಮಕಾರ್ಯಂ ಚಕಾರ ಹ ।
ಪ್ರಸಿದ್ಧೋಽಭೂನ್ಮಹೀಪೃಷ್ಠೇ ನಾಮ್ನಾ ಪುಣ್ಯಜನೋ ಧನೈಃ ॥ ೪೯ ॥

---

೪೫. ಹೀಗೆ ದೈವಮಾಯಾಮೋಹಿತರಾದ ಆ ಮೂವರೂ ವರದಿಂದ ಈ ಪ್ರಕಾರವಾದ ದುಃಖವನ್ನು ಹೊಂದಿದರು. ಆಗ ನಾರದನು ವ್ಯಸನಾಕ್ರಾಂತನಾಗಿ ನೈಋತನನ್ನು ಕುರಿತು.

೪೬. "ಅಯ್ಯಾ ವಿಪ್ರನೇ! ಈ ಬ್ರಹ್ಮಾಂಡವು ದೇವಮಯವಾದುದು. ಅದಕ್ಕೆ ಈಶ್ವರನು ಅಧಿಪತಿಯು; ಆದುದರಿಂದ ನೀನು ಈಶ್ವರನನ್ನು ಭಜನೆಮಾಡು. ಅವನು ನಿನ್ನ ಇಷ್ಟವನ್ನು ನೆರವೇರಿಸುತ್ತಾನೆ" ಎಂದು ಹೇಳಿದನು.

೪೭ ಹೀಗೆ ಹೇಳಿದ ನಾರದರ ಮಾತನ್ನು ಕೇಳಿ ಆ ನೈಋತವಿಪ್ರನು ಪಾರ್ಥಿವಾರ್ಚನಾವಿಧಾನದಿಂದ ಈಶ್ವರನನ್ನು ಭಕ್ತಿಪೂರ್ವಕವಾಗಿ ಒಂದುವರ್ಷಕಾಲ ಆರಾಧನೆ ಮಾಡಿದನು

೪೮. ಆಗ ಷಡ್ಗುಣೈಶ್ವರ್ಯಸಂಪನ್ನನೂ, ಭಕ್ತರಲ್ಲಿ ಪ್ರೀತಿಯುಳ್ಳವನೂ, ಆದ ಪರಮೇಶ್ವರನು ಸಂತುಷ್ಟನಾಗಿ ಆ ಬ್ರಾಹ್ಮಣನಿಗೆ ಕುಬೇರನ ಧನಕ್ಕೆ ಸಮನಾದ ದ್ರವ್ಯರಾಶಿಯನ್ನು ಕೊಟ್ಟನು.

೪೯. ಆ ಬ್ರಾಹ್ಮಣನು ಆ ದ್ರವ್ಯದಿಂದ ಅನೇಕಾನೇಕ ಧರ್ಮಕಾರ್ಯಗಳನ್ನು ಮಾಡಿದನು. ಮತ್ತು ಆ ಧರ್ಮಪ್ರಭಾವದಿಂದ ಭೂಮಿಯಲ್ಲಿ ಪುಣ್ಯಜನನೆಂದು ಪ್ರಖ್ಯಾತಿಹೊಂದಿದನು

ಶಿವಭಕ್ತಿಪ್ರಭಾವೇಣ ಪ್ರಾಪ್ಯ ದ್ರವ್ಯಮಕಂಟಕಂ ।
ಸಹಸ್ರಾಬ್ದವಪುರ್ಭೂತ್ವಾ ತ್ಯಕ್ತ್ವಾ ಪ್ರಾಣಾನ್ದಿವಂ ಯಯೌ ॥ ೫೦ ॥

ವೃಷರಾಶಿಸ್ಥಿತೇ ಸೂರ್ಯೇ ರಾಜಾ ಚಂದ್ರಸ್ಯ ಸೋಽಭವತ್ ।
ನೈಋರ್ತೋ ನಾಮ ವಿಖ್ಯಾತೋ ರುದ್ರಃ ಸರ್ವಜನಪ್ರಿಯಃ ॥ ೫೧ ॥

ಇತಿ ಶ್ರುತ್ವಾ ನೈಋರ್ತಸ್ತು ಭೃಗುವರ್ಯ ಗುರೂದಿತಂ ।
ಸ್ವಾಂಶಾದ್ಭೂತಲಮಾಗಮ್ಯ ಗಿರಿನಾಲಗಿರೌ ವನೇ ॥ ೫೨ ॥

ಯೋಗಿನಃ ಸಿದ್ಧಸಾಂಖ್ಯಸ್ಯ ಪುತ್ರೋಽಭೂದ್ವನವಾಸಿನಃ ।
ವನಶರ್ಮೇತಿ ವಿಖ್ಯಾತೋ ವೇದಶಾಸ್ತ್ರಪರಾಯಣಃ ॥ ೫೩ ॥

ದ್ವಾದಶಾಬ್ದವಪುರ್ಭೂತ್ವಾ ಜಿತ್ವಾ ವಿದ್ವಜ್ಜನಾನ್ಬಹೂನ್ ।
ಕಾಶೀಮಾಗಮ್ಯ ತತ್ವಾರ್ಥೀ ಶಂಕರಾಚಾರ್ಯಮುತ್ತಮಂ ॥ ೫೪ ॥

---

೫೦ ಶಿವಭಕ್ತಿಯ ಪ್ರಭಾವದಿಂದ ನಿಷ್ಕಂಟಕವಾಗಿ ಆ ದ್ರವ್ಯವನ್ನನುಭವಿಸುತ್ತಾ ಸಾವಿರವರ್ಷಗಳವರೆಗೂ ಜೀವಿಸಿದ್ದು ಶರೀರ ತ್ಯಾಗಮಾಡಿ ಸ್ವರ್ಗಕ್ಕೆ ಹೋದನು.

೫೧. "ನೈಋತನೆಂದು ಪ್ರಖ್ಯಾತನೂ, ಎಲ್ಲಾ ಜನಗಳ ಪ್ರೀತಿಗೆ ಪಾತ್ರನೂ, ರುದ್ರಸ್ವರೂಪನೂ ಆದ ಆ ಬ್ರಾಹ್ಮಣನನ್ನು ಸೂರ್ಯನು ವೃಷಭರಾಶಿಯಲ್ಲಿರುವಾಗ ಚಂದ್ರಮಂಡಲಕ್ಕೆ ಅಧಿಪತಿಯನ್ನಾಗಿ ಮಾಡಿದನು" ಎಂದು ಹೇಳಿದರು

೫೨-೫೩. ಆಯ್ಯಾ ಭೃಗುವರ್ಯನೇ ! ಗುರುವರ್ಯರಾದ ಬೃಹಸ್ಪತ್ಯಾಚಾರ್ಯರ ಈ ಮಾತನ್ನು ಕೇಳಿ, ನೈಋತನು ತನ್ನ ಅಂಶದಿಂದ ಭೂಮಿಯಲ್ಲಿ ಅವತರಿಸಿ ಗಿರಿನಾಲ ಪರ್ವತದ ವನದಲ್ಲಿ ವನವಾಸಿಯಾದ ಸಿದ್ಧಸಾಂಖ್ಯನೆಂಬ ಯೋಗಿಯ ಮಗನಾಗಿ ಜನಿಸಿ ವನಶರ್ಮನೆಂದು ಪ್ರಸಿದ್ಧನೂ, ವೇದಶಾಸ್ತ್ರನಿಪುಣನೂ, ಆದನು.

೫೪. ವನಶರ್ಮನು ಹನ್ನೆರಡು ವರ್ಷದವನಾಗಿರುವಾಗಲೇ ಪಂಡಿತನಾಗಿ ಅನೇಕ ವಿದ್ವಾಂಸರನ್ನು ವಾದದಲ್ಲಿ ಜಯಿಸಿ ಕಾಶಿಗೆ ಬಂದು ಆತ್ಮತತ್ವವನ್ನು ತಿಳಿಯಲಪೇಕ್ಷೆಯುಳ್ಳವನಾಗಿ ಶ್ರೇಷ್ಠರಾದ ಶಂಕರಾಚಾರ್ಯರನ್ನು ದರ್ಶನಮಾಡಿ ಅವರಿಗೆ ನಮಸ್ಕಾರಮಾಡಿ ಅವರ ಶಿಷ್ಯನಾದನು.

ಪ್ರಣಮ್ಯ ತಸ್ಯ ಶಿಷ್ಯೋಽಭೂದ್ವನಶರ್ಮಾ ವಿಶಾರದಃ ।

॥ ಬೃಹಸ್ಪತಿರುವಾಚ ॥

ವಸುಶರ್ಮಾ ದ್ವಿಜಃ ಕಶ್ಚಿನ್ಮಾಹಿಷ್ಮತ್ಯಾಂ ಪುರಾಽಭವತ್ ।
ಶಿವವ್ರತಪರೋ ನಿತ್ಯಂ ಪುತ್ರಾರ್ಥೀ ಪಾರ್ಥಿವಾರ್ಚಕಃ ॥ ೫೫ ॥

ಚತುರ್ವಿಂಶತಿವರ್ಷಾಣಿ ಪೂಜತಸ್ತಸ್ಯ ಧೀಮತಃ ।
ವ್ಯತೀತಾನಿ ಸುರಾಸ್ತತ್ರ ನ ಪ್ರಸನ್ನೋಽಭವಚ್ಛಿವಃ ॥ ೫೬ ॥

ತದಾ ತು ದುಃಖಿತೋ ವಿಪ್ರೋ ವಹ್ನಿಂ ಪ್ರಜ್ವಾಲ್ಯ ಭೈರವಂ ।
ಜುಹಾವ ಸ್ವಾಂಗಮಾಂಸಾನಿ ಮುಖತಶ್ಚರಣಾಂತಕಂ ॥ ೫೭ ॥

ನ ಪ್ರಸನ್ನೋಽಭವದ್ರುದ್ರಸ್ತದಾ ವಿಪ್ರಃ ಶುಚಾನ್ವಿತಃ ।
ಗೃಹೀತ್ವಾ ಚೋತ್ತಮಂ ಮೇಷಂ ಸಂಸ್ಕಾರಂ ಕೃತವಾಞ್ಛುಚಿಃ ॥
ತೇನ ಮೇಷೇಣ ಸಹಿತೋ ಜ್ವಲದಗ್ನೌ ಸಮಾಯಯೌ ॥ ೫೮ ॥

---

೫೫. ಬೃಹಸ್ಪತ್ಯಾಚಾರ್ಯರು ಹೇಳುತ್ತಾರೆ—ಪೂರ್ವಕಾಲದಲ್ಲಿ ಮಾಹಿಷ್ಮತಿ ಎಂಬ ಪಟ್ಟಣದಲ್ಲಿ, ಯಾವಾಗಲೂ ಶಿವಪ್ರೀತ್ಯರ್ಥವಾದ ವ್ರತನಿರತನೂ, ಪಾರ್ಥಿವ ಲಿಂಗವನ್ನು ಪೂಜೆಮಾಡುವವನೂ, ಪುತ್ರಾಪೇಕ್ಷೆಯುಳ್ಳವನೂ, ಆದ ವಸುಶರ್ಮನೆಂಬೊಬ್ಬ ಬ್ರಾಹ್ಮಣನಿದ್ದನು.

೫೬. ಎಲೈ ದೇವತೆಗಳಿರಾ! ಜ್ಞಾನಿಯಾದ ಆ ವಸುಶರ್ಮನು ಇಪ್ಪತ್ತನಾಲ್ಕು ವರ್ಷಕಾಲ ತಪ್ಪದೆ ಶಿವಪೂಜೆಯನ್ನು ಮಾಡಿದರೂ ಈಶ್ವರನು ಪ್ರತ್ಯಕ್ಷನಾಗಲಿಲ್ಲ.

೫೭ ಆಗ ಅತ್ಯಂತ ದುಃಖಗೊಂಡ ಆ ಬ್ರಾಹ್ಮಣನು ಅಗ್ನಿಪ್ರತಿಷ್ಠೆಮಾಡಿ ಅದು ಭಯಂಕರವಾಗಿ ಪ್ರಜ್ವಲಿಸುವಂತೆಮಾಡಿ ತನ್ನ ಶರೀರದಲ್ಲಿ ತಲೆಯಿಂದ ಹಿಡಿದು ಕಾಲಿನವರೆಗೂ ಇರುವ ಮಾಂಸವನ್ನು ಕತ್ತರಿಸಿ ಹೋಮಮಾಡಿದನು.

೫೮. ಅದರಿಂದಲೂ ಈಶ್ವರನು ಪ್ರತ್ಯಕ್ಷನಾಗದಿರಲು ಆಗ ಬ್ರಾಹ್ಮಣನು ಬಹಳ ದುಃಖಗೊಂಡು ಉತ್ತಮವಾದ ಆಡನ್ನು ತಂದನು. ಬಳಿಕ ತಾನೂ ಶುಚಿರ್ಭೂತನಾಗಿ ಅದಕ್ಕೂ ಸಂಸ್ಕಾರಮಾಡಿದನು. ಬಳಿಕ ಆ ಆಡಿನೊಂದಿಗೆ ತಾನೂ ಉರಿಯುತ್ತಿರುವ ಅಗ್ನಿಕುಂಡವನ್ನು ಪ್ರವೇಶಿಸಿದನು.

ಪ್ರಸನ್ನೋ ಭಗವಾನ್ರುದ್ರಸ್ತತ್ರಾಗತ್ಯ ಗಣೈರ್ಯುತಃ ।
ಸ್ವರೂಪಂ ದರ್ಶಯಾಮಾಸ ಶುದ್ಧಸ್ಫಟಿಕಸುಂದರಂ ॥
ವರಂ ಬ್ರೂಹಿ ವಚಃ ಪ್ರಾಹ ವಸುಶರ್ಮಾಣಮುತ್ತಮಂ ॥ ೫೯ ॥

ತಚ್ಛ್ರುತ್ವಾ ಸ ಪ್ರಸನ್ನಾತ್ಮಾ ನತ್ವಾ ಪಾರ್ವತಿವಲ್ಲಭಂ ।
ಪ್ರಶ್ರಯಾವನತೋ ಭೂತ್ವಾ ವಚನಂ ಪ್ರಾಹ ಶಂಕರಂ ॥ ೬೦ ॥

ದೇಹಿ ಮೇ ತನಯಂ ಸ್ವಾಮಿಞ್ಛರಣಾಗತವತ್ಸಲ ।
ಇತ್ಯುಕ್ತಶ್ಶಂಕರಸ್ತೇನ ವಿಹಸ್ಯೋವಾಚ ತಂ ದ್ವಿಜಂ ॥ ೬೧ ॥

ಪುತ್ರದಾತಾ ಸ್ವಯಂ ಬ್ರಹ್ಮಾ ಭಾಗ್ಯಕರ್ತಾ ಪರಾತ್ಪರಃ ।
ತುಭ್ಯಂ ಚ ಶತಜನ್ಮಾಂತಂ ತೇನ ಪುತ್ರೋ ನ ನಿರ್ಮಿತಃ ॥
ತಸ್ಮಾದಹಂ ಸುತಂ ಸ್ವಾಂಶಾತ್ತವ ವಿಪ್ರ ದದಾಮಿ ಭೋಃ ॥ ೬೨ ॥

---

೫೯. ಆಗ ಷಡ್ಗುಣೈಶ್ವರ್ಯಸಂಪನ್ನನಾದ ರುದ್ರನು ತನ್ನ ಗಣಗಳಿಂದೊಡಗೂಡಿ ಅಲ್ಲಿಗೆ ಬಂದು, ಶುಭ್ರಸ್ಫಟಿಕದಂತೆ ಸುಂದರವಾದ ತನ್ನ ರೂಪವನ್ನು ಪ್ರತ್ಯಕ್ಷವಾಗಿ ತೋರಿಸಿ ವಸುಶರ್ಮನನ್ನು ಕುರಿತು " ಅಯ್ಯಾ ! ನಿನಗೆ ಬೇಕಾದ ವರವನ್ನು ಕೇಳು " ಎಂಬದಾಗಿ ಹೇಳಿದನು.

೬೦. ಆ ಮಾತನ್ನು ಕೇಳಿ ಆ ಬ್ರಾಹ್ಮಣನು ಸಂತುಷ್ಟನಾಗಿ ಪಾರ್ವತೀಪತಿ ಯಾದ ಶಂಕರನನ್ನು ನಮಸ್ಕರಿಸಿ ಭಕ್ತಿಯಿಂದ ನಮ್ರನಾಗಿ ಮಾತನಾಡತೊಡಗಿ,

೬೧. " ಮರೆಹೊಕ್ಕವರಲ್ಲಿ ಪ್ರೀತಿಯುಳ್ಳ ಎಲೈ ಸ್ವಾಮಿಯೇ ! ನನಗೆ ಮಗ ನನ್ನು ಕೊಡು " ಎಂದನು. ಆ ವಸುಶರ್ಮನು ಹೀಗೆ ಹೇಳಲಾಗಿ ಶಂಕರನು ನಗುತ್ತಾ ಆ ಬ್ರಾಹ್ಮಣನನ್ನು ಕುರಿತು ಉತ್ತರಹೇಳತೊಡಗಿ,

೬೨. " ಅಯ್ಯಾ ದ್ವಿಜನೇ ! ಮಕ್ಕಳನ್ನು ಕೊಡತಕ್ಕವನು ಸಾಕ್ಷಾತ್ ಬ್ರಹ್ಮನು. ಐಶ್ವರ್ಯವನ್ನು ಕೊಡತಕ್ಕವನು ಸರ್ವಶ್ರೇಷ್ಠನಾದ ವಿಷ್ಣುವು. ಆ ಬ್ರಹ್ಮನು ನಿನಗೆ ಇನ್ನೂ ನೂರುಜನ್ಮಗಳವರೆಗೂ ಪುತ್ರನನ್ನು ನಿರ್ಮಿಸಿಲ್ಲ. ಎಲೈ ಬ್ರಾಹ್ಮಣನೇ ! ಸ್ಥಿತಿ ಹೀಗಿರುವುದರಿಂದ ನಾನು ನನ್ನ ಅಂಶದಿಂದ ನಿನಗೆ ಒಬ್ಬ ಪುತ್ರನನ್ನು ಕೊಡುತ್ತೇನೆ " ಎಂದನು.

ಇತ್ಯುಕ್ತ್ವಾ ಸ್ವಮುಖಾತ್ತೇಜೋ ನಿರಾಕೃತ್ಯ ಮಹೇಶ್ವರಃ ।
ತತ್ಪತ್ನ್ಯಾಂ ಜನಯಾಮಾಸ ಸಕಾಶಾದ್ವಸುಶರ್ಮಣಃ ॥ ೬೩ ॥

ದಶಮಾಸಾಂತರೇ ಜಾತಃ ಸುಪುತ್ರೋ ಮಧುರಾನನಃ ।
ಅಜಸ್ಯೈವ ಪದಶ್ಚೈಕೋ ದ್ವಿತೀಯೋ ನರವತ್ತತಃ ॥
ಅಜೈಕಪಾದ ಇತಿ ಸ ಪ್ರಸಿದ್ಧೋಽಭೂನ್ಮಹೀತಲೇ ॥ ೬೪ ॥

ಚತುಶ್ಶತಾಬ್ದವಪುಷಿ ಪ್ರಾಪ್ತೇ ತಸ್ಮಿನ್ಸುತೇ ಪ್ರಿಯೇ ।
ಸಂಪ್ರಾಪ್ತೋ ಭಗವಾನ್ಮೃತ್ಯುಸ್ತದಾ ರೋಗಗಣೈರ್ಯುತಃ ॥ ೬೫ ॥

ತಸ್ಯ ತೈರಭವದ್ಯುದ್ಧಮಜೈಕಚರಣಸ್ಯ ವೈ ॥ ೬೬ ॥

ವರ್ಷಮಾತ್ರೇಣ ತಾನ್ಸರ್ವಾಞ್ಜಿತ್ವಾ ಮಲ್ಲರಣೋತ್ಕಟಃ ।
ಮೃತ್ಯುಂಜಯಃ ಸ ವೈ ನಾಮ್ನಾ ಪ್ರಸಿದ್ಧೋಽಭೂನ್ಮಹೀತಲೇ ॥ ೬೭ ॥

---

೬೩. ಪರಮೇಶ್ವರನು ಹೀಗೆ ಹೇಳಿ ತನ್ನ ಮುಖದಿಂದ ತೇಜಸ್ಸನ್ನು ಸೆಳೆದು ವಸುಶರ್ಮನಿಗೆ ಕೊಟ್ಟನು. ಅನಂತರ ಅವನ ಪತ್ನಿಯು ಗರ್ಭಿಣಿಯಾದಳು.

೬೪ ಹತ್ತನೆಯ ತಿಂಗಳಲ್ಲಿ ಸುಂದರವಾದ ಮುಖವುಳ್ಳವನೂ, ಆಡಿನ ಕಾಲಿನಂತಿರುವ ಒಂದುಕಾಲೂ, ಮನುಷ್ಯನ ಕಾಲಿನಂತಿರುವ ಮತ್ತೊಂದುಕಾಲೂ, ಉಳ್ಳ ಸುಪುತ್ರನು ಹುಟ್ಟಿದನು. ಆದಕಾರಣ ಆ ಕುಮಾರನು ಭೂಮಿಯಲ್ಲಿ "ಅಜೈಕಪಾದ" ನೆಂಬ ಹೆಸರಿನಿಂದ ಪ್ರಸಿದ್ಧನಾದನು.

೬೫. ಆ ಪ್ರಿಯಪುತ್ರನಿಗೆ ನಾನೂರು ವರ್ಷಗಳಾಗಲು ಭಗವಾನ್ ಮೃತ್ಯುದೇವನು ರೋಗಗಣಗಳಿಂದೊಡಗೂಡಿ ಅಲ್ಲಿಗೆ ಬಂದನು.

೬೬. ಗಣಗಳಿಂದೊಡಗೂಡಿ ಬಂದ ಆ ಮೃತ್ಯುವಿಗೂ, ಅಜೈಕಪಾದನಿಗೂ, ಪ್ರಬಲವಾದ ಯುದ್ಧವು ನಡೆಯಿತು.

೬೭. ಅವನೊಡನೆ ಘೋರವಾದ ಮಲ್ಲಯುದ್ಧವನ್ನು ಮಾಡಿ ಒಂದುವರ್ಷದೊಳಗೆ ಮೃತ್ಯುವನ್ನು ಮತ್ತು ಅವನ ಗಣಗಳ ಸಹಿತ ಜಯಿಸಿ ಅಜೈಕಪಾದನು ಭೂಮಿಯಲ್ಲಿ ಮೃತ್ಯುಂಜಯನೆಂಬ ಹೆಸರಿನಿಂದ ಪ್ರಸಿದ್ಧನಾದನು.

ದುಃಖಿತೋ ಭಗವಾನ್ಮೃತ್ಯುಸ್ತೇನ ವಿಪ್ರೇಣ ನಿರ್ಜಿತಃ ।
ಪರಮೇಷ್ಠಿನಮಾಗಮ್ಯ ಕಥಯಾಮಾಸ ಕಾರಣಂ ॥ ೬೮ ॥

ತದಾ ತು ಭಗವಾನ್ಬ್ರಹ್ಮಾ ಸರ್ವದೇವಗಣೈರ್ಯುತಃ ।
ಕುಂಭಗೇ ದ್ಯುಮಣೌ ದೇವೇ ಚಂದ್ರಮಂಡಲಗಂ ನೃಪಂ ॥
ತಂ ದ್ವಿಜಂ ಚ ಚಕಾರಾಶು ರುದ್ರರೂಪಂ ಭಯಾಪಹಂ ॥ ೬೯ ॥

॥ ಸೂತ ಉವಾಚ ॥

ಇತಿ ಶ್ರುತ್ವಾ ಮಹಾದೇವಃ ಸ ವಿಪ್ರಶ್ಚ ತದಾಜಪಾದ್ ।
ಪುರೀಂ ಮಾಹಿಷ್ಮತೀಂ ಪ್ರಾಪ್ತಃ ಕಲಿಶುದ್ಧಿಕರಃ ಪ್ರಭುಃ ॥
ಪುರೀಶರ್ಮೇತಿ ವಿಖ್ಯಾತೋ ಯತಿದತ್ತಸ್ಯ ವೈ ಸುತಃ ॥ ೭೦ ॥

---

೬೮. ಆ ಬ್ರಾಹ್ಮಣನಿಂದ ಜಿತನಾದ ಆ ಮೃತ್ಯುವು ಬಹಳ ದುಃಖಗೊಂಡವನಾಗಿ ಬ್ರಹ್ಮನಲ್ಲಿಗೆ ಬಂದು ಸಕಲ ವೃತ್ತಾಂತವನ್ನೂ ತಿಳಿಸಿದನು.

೬೯. ಆಗ ಪೂಜ್ಯನಾದ ಬ್ರಹ್ಮನು ಜಾಗ್ರತೆಯಾಗಿ ಸಕಲ ದೇವಗಣಗಳಿಂದೊಡಗೂಡಿ ಬಂದು, ಸ್ವಾಮಿಯಾದ ಸೂರ್ಯನು ಕುಂಭರಾಶಿಯಲ್ಲಿರುವಾಗ ಸಮಸ್ತ ಭಯನಾಶಕನೂ, ರುದ್ರಸ್ವರೂಪನೂ ಆದ ಆ ಅಜೈಕಪದ ಬ್ರಾಹ್ಮಣನನ್ನು ಚಂದ್ರಮಂಡಲಕ್ಕೆ ಅಧಿಪತಿಯನ್ನಾಗಿ ಮಾಡಿದನು. ಎಂದು ಹೇಳಿದರು.

೭೦. ಸೂತಮುನಿವರ್ಯನು ಕಥೆಯನ್ನು ಮುಂದುವರಿಸುತ್ತಾನೆ—ಆಗ ಈ ಮಾತನ್ನು ಕೇಳಿ ಅಜೈಕಪಾದರೂಪಿಯಾದ ಮಹಾದೇವನು ಮಾಹಿಷ್ಮತೀ ಪಟ್ಟಣಕ್ಕೆ ಬಂದು ಅಲ್ಲಿ ಯತಿದತ್ತನೆಂಬವನ ಪುತ್ರನಾಗಿ ಜನಿಸಿ, ಪುರೀಶರ್ಮನೆಂದು ಹೆಸರು ಪಡೆದು ಕಲಿಪಾಪಗಳನ್ನು ಶುದ್ಧಿಮಾಡುವುದರಲ್ಲಿ ಸಮರ್ಥನೆನಿಸಿ ಪ್ರಸಿದ್ಧನಾದನು.

ಷೋಡಶಾಬ್ದವಪುರ್ಭೂತ್ವಾ ಜಿತ್ವಾ ವೇದಪರಾಯಣಾನ್ ।
ಶಂಕರಾಚಾರ್ಯಮಾಗಮ್ಯ ತಸ್ಯ ಶಿಷ್ಯೋ ಬಭೂವ ಹ ॥
ಇತಿ ತೇ ಕಥಿತಂ ವಿಪ್ರ ಯಥಾ ಮೃತ್ಯುಂಜಯೋಽಭವತ್ ॥ ೭೧ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಪ್ರತಿಸರ್ಗಪರ್ವಣಿ ಚತುರ್ಥಖಂಡೇ ಕಲಿಯುಗಿಯೇತಿಹಾಸಸಮುಚ್ಚಯೇ ಆನಂದಗಿರಿ, ವನಶರ್ಮ, ಪುರೀಶರ್ಮವರ್ಣನಂ ನಾಮೈಕಾದಶೋಽಧ್ಯಾಯಃ.



೭೧. ಆತನು ಹದಿನಾರು ವರ್ಷದವನಾಗಿ ವೇದಮಾತ್ರಶರಣರಾದವರನ್ನು ವಾದದಲ್ಲಿ ಜಯಿಸಿ, ಶಂಕರಾಚಾರ್ಯರಿದ್ದಲ್ಲಿಗೆ ಬಂದು ಅವರ ಶಿಷ್ಯನಾದನು. ಎಲೈ ಬ್ರಾಹ್ಮಣನೇ! ಆತನು ಮೃತ್ಯುಂಜಯನು ಹೇಗಾದನೆಂಬುದನ್ನು ನಿನಗೆ ಇಲ್ಲಿ ವಿವರವಾಗಿ ಹೇಳಿರುತ್ತೇನೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಪ್ರತಿಸರ್ಗಪರ್ವದಲ್ಲಿ ನಾಲ್ಕನೆಯ ಖಂಡದಲ್ಲಿ ಆನಂದಗಿರಿ, ವನಶರ್ಮ, ಪುರೀಶರ್ಮ ಇವರ ವೃತ್ತಾಂತ ವರ್ಣನೆಯೆಂಬ ಹನ್ನೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಪ್ರತಿಸರ್ಗಪರ್ವಣಿ ಚತುರ್ಥಖಂಡೇ

## ದ್ವಾದಶೋಽಧ್ಯಾಯಃ

---

॥ ಸೂತ ಉವಾಚ ॥

ಪುನಃ ಶೃಣು ಕಥಾಂ ರಮ್ಯಾಂ ಪ್ರಯಾಗೇ ಜೀವಭಾಷಿತಾಂ ।
ಹಿರ್ಬುರ್ನಾಮ ಪುರಾ ಚಾಸೀದ್ದಾನವೋ ಲೋಕಕಂಟಕಃ ॥ ೧ ॥

ನಿಕುಂಭಾನ್ವಯಸಂಭೂತಃ ಶಕ್ರತುಲ್ಯಪರಾಕ್ರಮಃ ।
ಸಹಸ್ರಾಬ್ದಂ ತಪಃ ಕೃತ್ವಾ ತಾಪಯಾಮಾಸ ವೈ ಸುರಾನ್ ॥ ೨ ॥

ತದಾ ಲೋಕಪತಿರ್ಬ್ರಹ್ಮಾ ಲೋಕರಕ್ಷಾರ್ಥಮುದ್ಯತಃ ।
ವರಂ ಬ್ರೂಹೀತಿ ವಚನಮುವಾಚ ದನುಜೇಶ್ವರಂ ॥ ೩ ॥

---

### ಹನ್ನೆರಡನೆಯ ಅಧ್ಯಾಯ

೧. ಸೂತಮುನಿವರ್ಯನು ಹೇಳುತ್ತಾನೆ—ಎಲೈ ಬ್ರಾಹ್ಮಣನೇ ! ಪ್ರಯಾಗ ಕ್ಷೇತ್ರದಲ್ಲಿ ಬೃಹಸ್ಪತ್ಯಾಚಾರ್ಯರು ಹೇಳಿದ ಮನೋಹರವಾದ ಕಥೆಯನ್ನು ನಾನು ಹೇಳುತ್ತೇನೆ ಕೇಳು. ಪೂರ್ವಕಾಲದಲ್ಲಿ ಲೋಕಕ್ಕೆಲ್ಲ ತೊಂದರೆಯನ್ನುಂಟು ಮಾಡುವ ಹಿರ್ಬುವೆಂಬ ಒಬ್ಬ ರಾಕ್ಷಸನಿದ್ದನು.

೨ ನಿಕುಂಭನೆಂಬ ರಾಕ್ಷಸನ ವಂಶದಲ್ಲಿ ಹುಟ್ಟಿದವನೂ, ಇಂದ್ರನಿಗೆ ಸಮಾನವಾದ ಪ್ರರಾಕ್ರಮವುಳ್ಳವನೂ, ಆದ ಆ ರಾಕ್ಷಸನು ಸಾವಿರವರ್ಷಗಳವರೆಗೆ ತಪಸ್ಸನ್ನು ಮಾಡಿ, ದೇವತೆಗಳಿಗೆಲ್ಲಾ ಬಹು ಸಂತಾಪವನ್ನುಂಟುಮಾಡಿದನು.

೩. ಆಗ ಲೋಕಾಧಿಪತಿಯಾದ ಬ್ರಹ್ಮನು ಲೋಕಗಳನ್ನು ರಕ್ಷಿಸುವುದಕ್ಕಾಗಿ ಅಲ್ಲಿಗೆ ಬಂದು, ಆ ರಾಕ್ಷಸೇಶ್ವರನನ್ನು ಕುರಿತು "ಅಯ್ಯಾ! ನಿನಗೆ ಬೇಕಾದ ವರವನ್ನು ಕೇಳು" ಎಂದನು.

ನಮಸ್ಕೃತ್ಯ ವಿಧಾತಾರಂ ವಚನಂ ಪ್ರಾಹ ನಮ್ರಧೀಃ ।
ಯದಿ ದೇಯೋ ವರಃಸ್ವಾಮಿಂಸ್ತ್ವಯಾ ವಿಶ್ವಕೃತಾ ವಿಭೋ ॥ ೪ ॥

ಮರಣಂ ನ ಚ ಮೇ ಭೂಯಾತ್ತ್ವತ್ಕೃತೈಶ್ಚ ಚರಾಚರೈಃ ।
ಇತ್ಯುಕ್ತಃ ಸ ತಥೇತ್ಯುಕ್ತ್ವಾ ಬ್ರಹ್ಮಲೋಕಮುಪಾಯಯೌ ॥ ೫ ॥

ದಾನವಃ ಸ ತು ರೌದ್ರಾತ್ಮಾ ಜಿತ್ವಾ ಸ್ವರ್ಗನಿವಾಸಿನಃ ।
ಆಹೂಯ ದಾನವಾನ್ದೈತ್ಯಾನ್ಸ್ವಿವರೇಭ್ಯಃಪ್ರಸನ್ನಧೀಃ ॥ ೬ ॥

ಸ್ವರ್ಗೇ ನಿವಾಸಯಾಮಾಸ ತೇ ದೇವಾ ಭೂತಲೀಕೃತಾಃ ।
ಲಕ್ಷಾಬ್ದಂ ಚ ಸುರಾಸ್ಸರ್ವೇ ಬುಭುಜುಃ ಪರಮಾಪದಃ ॥ ೭ ॥

ಏಕದಾ ನಾರದೋ ಧೀಮಾನ್ದೃಷ್ಟ್ವಾ ದೇವಾಂಸ್ತಥಾಗತಾನ್ ।
ವಚನಂ ಪ್ರಾಹ ಯೋಗಾತ್ಮಾ ಭಜಧ್ವಂ ಲೋಕಶಂಕರಂ ॥ ೮ ॥

---

೪-೫. ಆಗ ಆ ರಾಕ್ಷಸನು ಬ್ರಹ್ಮನಿಗೆ ನಮಸ್ಕಾರಮಾಡಿ ವಿನಯದಿಂದ "ಜಗತ್ಕರ್ತೃವಾದ ಎಲೈ ಸ್ವಾಮಿಯೇ! ನನಗೆ ನೀನು ವರವನ್ನು ಕೊಡುವುದಾದರೆ ನಿನ್ನಿಂದ ಸೃಷ್ಟವಾದ ಚರಾಚರ ಪ್ರಪಂಚದಲ್ಲಿರುವ ಯಾವುದರಿಂದಲೂ ನನಗೆ ಮರಣವಿಲ್ಲದಂತೆ ಅನುಗ್ರಹಿಸಬೇಕು" ಎಂದು ಕೇಳಿದನು. ಬ್ರಹ್ಮನು ಹಾಗೆಯೇ ಆಗಲೆಂದು ಹೇಳಿ ಬ್ರಹ್ಮಲೋಕಕ್ಕೆ ತೆರಳಿದನು.

೬. ಆ ರಾಕ್ಷಸನಾದರೋ ಭಯಂಕರರೂಪನಾಗಿ ಸ್ವರ್ಗವಾಸಿಗಳಾದ ದೇವತೆಗಳೆಲ್ಲರನ್ನೂ ಜಯಿಸಿ ಪಾತಾಳದ ಗವಿಯಿಂದ ದೈತ್ಯರನ್ನೂ ದಾನವರನ್ನೂ ಕರೆಯಿಸಿ ಸಂತೋಷದಿಂದ ಅವರೆಲ್ಲರನ್ನೂ ಸ್ವರ್ಗದಲ್ಲಿ ನೆಲೆಗೊಳಿಸಿದನು.

೭. ಅಲ್ಲಿದ್ದ ದೇವತೆಗಳು ಸ್ವರ್ಗವನ್ನು ಬಿಟ್ಟು ಭೂಲೋಕಕ್ಕೆ ಬಂದರು. ಹೀಗೆ ಒಂದುಲಕ್ಷವರ್ಷಗಳವರೆಗೆ ದೇವತೆಗಳು ಈ ದೊಡ್ಡ ಕಷ್ಟವನ್ನನುಭವಿಸಿದರು.

೮. ಬುದ್ಧಿವಂತನೂ, ಯೋಗಿವರ್ಯನೂ, ಆದ ನಾರದನು ಒಂದಾನೊಂದು ದಿನ ಈ ವಿಧವಾದ ದುರವಸ್ಥೆಯನ್ನು ಹೊಂದಿರುವ ದೇವತೆಗಳನ್ನು ಕುರಿತು "ಲೋಕಗಳಿಗೆ ಕಲ್ಯಾಣವನ್ನುಂಟುಮಾಡುವ ದೇವದೇವನನ್ನು ನೀವು ಭಜನೆ ಮಾಡಿರಿ."

ಸ ದೇವಶ್ಚ ಮಹಾದೇವೋ ಬ್ರಹ್ಮಾಂಡೇಶೋ ವಿಪತ್ತಿಹಾ ।
ಇತಿ ಶ್ರುತ್ವಾ ತು ವಚನಂ ತೇ ದೇವಾ ವಿಸ್ಮಯಾನ್ವಿತಾಃ ॥ ೯ ॥

ಪಾರ್ಥಿವೈಃ ಪೂಜಯಾಮಾಸುರ್ದೇವದೇವಮುಮಾಪತಿಂ ।
ಗತೈಕಾದಶವರ್ಷಾಶ್ಚ ತೇಷಾಂ ಪೂಜನಕಾರಿಣಾಂ ॥ ೧೦ ॥

ತದಾ ಪ್ರಸನ್ನೋ ಭಗವಾನ್ಮಹೇಶೋ ಲೋಕಶಂಕರಃ ।
ಜ್ಯೋತಿರ್ಲಿಂಗಮಯೋ ಭೂತ್ವಾ ಲೋಕಾಂಸ್ತ್ರೀನ್ಸಮದಾಹಯತ್ ॥ ೧೧ ॥

ಯೇ ತು ವೈ ದೇವಭಕ್ತಾಶ್ಚ ಶೇಷಾಶ್ಚಾಸನ್ಮಹಾಭಯೇ ।
ಅನ್ಯೇ ತು ದಾನವೈಸ್ಸಾರ್ಧಂ ಭಸ್ಮೀಭೂತಾ ಬಭೂವಿರೇ ॥ ೧೨ ॥

ಏತಸ್ಮಿನ್ನಂತರೇ ಬ್ರಹ್ಮಾ ವಿಷ್ಣುನಾ ಸಹ ಹರ್ಷಿತಃ ।
ತುಷ್ಟಾವ ಸ ಮಹಾರುದ್ರಂ ಸ್ತೋತ್ರೈಸ್ಸಾಮಸಮುದ್ಭವೈಃ ॥ ೧೩ ॥

---

೯. ಬ್ರಹ್ಮಾಂಡಗಳಿಗೆ ಅಧಿಪತಿಯೂ, ಆಪತ್ತನ್ನು ನಿವಾರಣೆ ಮಾಡುವವನೂ, ಆದ ಮಹಾದೇವನನ್ನು ಭಜಿಸಿರಿ " ಎಂಬದಾಗಿ ಹೇಳಿದನು. ಈ ಮಾತನ್ನು ಕೇಳಿ ಆ ದೇವತೆಗಳು ಆಶ್ಚರ್ಯಹೊಂದಿದರು.

೧೦ ಬಳಿಕ ಅವರೆಲ್ಲರೂ, ದೇವತೆಗಳಿಗೆ ದೇವನೂ, ಉಮಾಪತಿಯೂ, ಆದ ಪರಮೇಶ್ವರನನ್ನು ಪಾರ್ಥಿವಪೂಜಾವಿಧಾನದಿಂದ ಆರಾಧಿಸಿದರು. ಹನ್ನೊಂದು ವರ್ಷಗಳು ಕಳೆಯುವ ಪರ್ಯಂತ ತಪ್ಪದೆ ಹೀಗೆಯೇ ಪಾರ್ಥಿವಪೂಜೆಯನ್ನು ಮಾಡುತ್ತಿದ್ದರು.

೧೧ ಆಗ ಲೋಕಗಳಿಗೆ ಶುಭವನ್ನುಂಟುಮಾಡುವವನೂ, ಷಡ್ಗುಣೈಶ್ವರ್ಯಸಂಪನ್ನನೂ ಆದ ಮಹೇಶ್ವರನು ಅವರ ಪೂಜಾದಿಗಳಿಂದ ಸಂತುಷ್ಟನಾಗಿ ಅವರ ಸಂರಕ್ಷಣೆಗಾಗಿ ಜ್ಯೋತಿರ್ಮಯವಾದ ಲಿಂಗರೂಪವನ್ನು ಧರಿಸಿಕೊಂಡು ಮೂರು ಲೋಕಗಳನ್ನೂ ದಹಿಸಲಿಕ್ಕಾರಂಭಿಸಿದನು.

೧೨ ಆ ಮಹಾಭಯಕಾಲದಲ್ಲಿ ಯಾರು ದೇವಭಕ್ತರಾಗಿದ್ದರೋ ಅವರು ಮಾತ್ರ ಉಳಿದರು. ಉಳಿದವರೆಲ್ಲರೂ ರಾಕ್ಷಸರೊಂದಿಗೆ ಸುಟ್ಟು ಬೂದಿಯಾದರು.

೧೩. ಇಷ್ಟರಲ್ಲಿ ಬ್ರಹ್ಮನು ವಿಷ್ಣುವಿನೊಡಗೂಡಿ ಬಂದು ಸಂತೋಷಯುಕ್ತನಾಗಿ ಸಾಮಗಾನದಿಂದ ಕೂಡಿದ ಸ್ತೋತ್ರಗಳಿಂದ ಆ ಮಹಾರುದ್ರನನ್ನು ಸ್ತುತಿಸಿದನು.

ಮಿಥುನಸ್ಥೇ ದಿವಾನಾಥೇ ಶಶಿಮಂಡಲಭೂಪತಿಂ ।
ಹಿರ್ಬುಘ್ನಂ ಚ ಮಹಾರುದ್ರಂ ಚಕಾರ ಸುರಹೇತವೇ ॥ ೧೪ ॥

ಇತಿ ಶ್ರುತ್ವಾ ಸ ಹಿರ್ಬುಘ್ನೋ ದೇವಕಾರ್ಯಾರ್ಥಮುದ್ಯತಃ ।
ಹಿಮಾಲಯೇ ಗಿರೌ ರಮ್ಯೇ ಪುತ್ರೋಽಭೂತ್ಸಾಧ್ಯಕರ್ಮಣಃ ॥ ೧೫ ॥

ಪತಿರೂಪಃ ಕಲಾಭಿಜ್ಞೋ ಭಾರತೀಶ ಇತಿ ಶ್ರುತಃ ।
ಸ ಜಿತ್ವಾ ವಿದುಷಾಂ ವೃಂದಾನ್ಕಾಶೀನಗರಮಾಗತಃ ॥ ೧೬ ॥

ಶಂಕರಾಚಾರ್ಯಮಾಗಮ್ಯ ಶಿಷ್ಯೋಽಭೂತ್ತೇನ ನಿರ್ಜಿತಃ ।

॥ ಬೃಹಸ್ಪತಿರುವಾಚ ॥

ಮಯಪುತ್ರಃ ಸ್ಮೃತೋ ಮಾಯೀ ತಪೋಘೋರಂ ಚಕಾರ ಹ ॥ ೧೭ ॥

ಪದ್ಯೈಕೇನ ಸ್ಥಿತಃ ಸೂರ್ಯೇ ಸಹಸ್ರಾಬ್ದಂ ಪ್ರಯತ್ನತಃ ।
ಸ ಲೋಕಾಂಸ್ತಾಪಯಾಮಾಸ ತಪಸಾ ಲೋಕವಾಸಿನಃ ॥ ೧೮ ॥

---

೧೪. ಸೂರ್ಯನು ಮಿಥುನರಾಶಿಯಲ್ಲಿರುವಾಗ ದೇವತೆಗಳ ಸೌಖ್ಯಕ್ಕಾಗಿ ಮಹಾರುದ್ರಸ್ವರೂಪನಾದ ಹಿರ್ಬುಘ್ನನನ್ನು ಚಂದ್ರಮಂಡಲಕ್ಕೆ ಅಧಿಪತಿಯಾಗಿ ಮಾಡಿದನು.

೧೫. ಈ ಮಾತನ್ನು ಕೇಳಿ ಆ ಹಿರ್ಭುಘ್ನನು ದೇವತೆಗಳ ಕಾರ್ಯಸಾಧನೆ ಮಾಡಿಕೊಡಲು ಸಿದ್ಧನಾಗಿ ಮನೋಹರವಾದ ಹಿಮಾಲಯ ಪರ್ವತದಲ್ಲಿ ಸಾಧ್ಯ ಶರ್ಮನೆಂಬುವನ ಮಗನಾಗಿ ಜನಿಸಿದನು.

೧೬. ಭಾರತೀಶನೆಂದು ಪ್ರಸಿದ್ಧನಾದ ಅವನು ಸಕಲ ವಿದ್ವಾಂಸರನ್ನೂ ಜಯಿಸಿ, ಕಾಶೀಪಟ್ಟಣಕ್ಕೆ ಬಂದು ಶ್ರೀ ಶಂಕರಾಚಾರ್ಯರಿಂದ ಜಿತನಾಗಿ ಅವರ ಶಿಷ್ಯನಾದನು " ಎಂದು ಹೇಳಿದರು.

೧೭-೧೮. ಬಳಿಕ ಬೃಹಸ್ಪತ್ಯಾಚಾರ್ಯರು ಕಥೆಯನ್ನು ಮುಂದುವರಿಸಿ ಹೇಳುತ್ತಾರೆ—ಮಯನಿಗೆ ಮಾಯಿಯೆಂಬ ಮಗನಿದ್ದನು. ಅವನು ಬಹುಪ್ರಯತ್ನದಿಂದ ಒಂದೇಕಾಲಿನಲ್ಲಿ ನಿಂತುಕೊಂಡು ಸೂರ್ಯನನ್ನೇ ನೋಡುತ್ತಾ ಒಂದುಸಾವಿರವರ್ಷಗಳ ವರೆಗೆ ಭಯಂಕರವಾದ ತಪಸ್ಸನ್ನು ಮಾಡಿದನು. ಅವನ ತಪಸ್ಸಿನ ಪ್ರಭಾವದ ತಪೋಜ್ವಾಲೆಯು ಸಕಲ ಲೋಕಗಳನ್ನೂ ಆ ಲೋಕದಲ್ಲಿರುವವರನ್ನೂ ಸುಡುವುದಕ್ಕೆ ಪ್ರಾರಂಭಿಸಿತು.

ತದಾ ಪ್ರಸನ್ನೋ ಭಗವಾನ್ಪರಮೇಷ್ಠೀ ಪಿತಾಮಹಃ
ತ್ರಯೋ ಗ್ರಾಮಾಸ್ತತ್ಪ್ರಿಯಾರ್ಥೇ ಕ್ರಮಾದ್ವೈ ತೇನ ನಿರ್ಮಿತಾಃ ॥ ೧೯ ॥

ಸೌವರ್ಣಂ ಸ್ವರ್ಗಸದೃಶಂ ಪುರಂ ಷೋಡಶಯೋಜನಂ ।
ತದಧೋ ಯೋಜನಾಂತೇ ಚ ರಾಜತಂ ಚ ಭುವರ್ಮಯಂ ॥ ೨೦ ॥

ತದಧೋ ಯೋಜನಾಂತೇ ಚ ಭೂರ್ಲೋಕಮಿವ ಚಾಯಸಂ ।
ಏವಂ ಪುರನಿವಾಸಿನ್ಯೋ ದೈತ್ಯಾನಾಂ ಯೋಷಿತೋ ಮುದಾ ॥ ೨೧ ॥

ಶತಕೋಟಿಮಿತಾ ದೈತ್ಯಾ ಧರ್ಮಾತ್ಮಾನೋ ನಿವಾಸಿನಃ ।
ಗೃಹೀತ್ವಾ ಯಜ್ಞಭಾಗಂ ಚ ದೇವತುಲ್ಯಾ ಬಭೂವಿರೇ ॥ ೨೨ ॥

---

೧೯. ಪರಬ್ರಹ್ಮನಿರತನೂ, ಲೋಕಕ್ಕೆ ಪಿತಾಮಹನೂ, ಪೂಜ್ಯನೂ, ಆದ ಬ್ರಹ್ಮನು ಆ ತಪಶ್ಶಕ್ತಿಗೆ ಸಂತುಷ್ಟನಾಗಿ ಆ ಮಾಯೆಯು ಸಂತೋಷಾರ್ಥವಾಗಿ ಮೂರು ಪಟ್ಟಣಗಳನ್ನು ಕ್ರಮವಾಗಿ ನಿರ್ಮಾಣಮಾಡಿದನು.

೨೦. ಒಂದು ಪಟ್ಟಣವು, ಚಿನ್ನದಿಂದ ರಚಿತವಾಗಿ ಹದಿನಾರುಯೋಜನ ವಿಸ್ತಾರವುಳ್ಳದ್ದಾಗಿ ಸ್ವರ್ಗಕ್ಕೆ ಸಮಾನವಾಗಿದ್ದಿತು. ಅದರ ಕೆಳಭಾಗದಲ್ಲಿ ಒಂದು ಯೋಜನ ದೂರದಲ್ಲಿ ಒಂದುಪಟ್ಟಣವು ಬೆಳ್ಳಿಯಿಂದ ರಚಿತವಾಗಿ ಭುವರ್ಲೋಕಕ್ಕೆ ಸಮಾನವಾಗಿದ್ದಿತು.

೨೧. ಅದರ ಕೆಳಭಾಗದಲ್ಲಿ ಒಂದುಯೋಜನ ದೂರದಲ್ಲಿ ಒಂದುಪಟ್ಟಣವು ಕಬ್ಬಿಣದಿಂದ ರಚಿತವಾಗಿ ಭೂಲೋಕಕ್ಕೆ ಸಮಾನವಾಗಿದ್ದಿತು. ಇಂಥ ಪಟ್ಟಣಗಳಲ್ಲಿ ರಾಕ್ಷಸರ ಸ್ತ್ರೀಯರುಗಳು ಅತಿಸಂತೋಷದಿಂದ ವಾಸಮಾಡುತ್ತಿದ್ದರು.

೨೨. ನೂರುಕೋಟಿ ಸಂಖ್ಯೆಯ ರಾಕ್ಷಸರು ಧರ್ಮನಿರತರಾಗಿ ಅಲ್ಲಿ ವಾಸ ಮಾಡುತ್ತಾ ಅಲ್ಲಿನ ನಿವಾಸಿಜನರು ಯಜ್ಞದಲ್ಲಿ ಕೊಡುವ ಹವಿರ್ಭಾಗಗಳನ್ನು ದೇವತೆಗಳಿಗೆ ಸಿಕ್ಕಗೊಡದೆ ತಾವೇ ತೆಗೆದುಕೊಂಡು ದೇವತೆಗಳಿಗೆ ಸಮಾನರಾಗಿದ್ದರು.

ತದಾ ನಿರ್ಬಲಿನೋ ದೇವಾಃ ಕ್ಷುಧಯಾ ಪೀಡಿತಾಃ ಪ್ರಭುಂ ।
ಭಗವಂತಂ ಮಹಾವಿಷ್ಣುಂ ತುಷ್ಟುವುಃ ಪರಯಾ ಗಿರಾ ॥ ೨೩ ॥

ಚತುರ್ಯುಗಸಮೂಹಾನಾಂ ವರ್ಷಾಣಾಂ ಭಗವಾನ್ ಪ್ರಭೋ ।
ಅಧಿಕಾರವಿಹೀನಾಶ್ಚ ವರ್ತಂತೇ ಸ್ವರ್ಗಮಂಡಲೇ ॥ ೨೪ ॥

ತಾಮಸಾಂತರಮೇವಾಪಿ ಷೋಡಶ್ಚೈವ ಚತುರ್ಯುಗಂ ।
ವ್ಯತೀತಾನಿ ಮಹಾವಿಷ್ಣೋ ಮಾಯಿನಾಂ ದುಃಖಭಾಗಿನಾಂ ॥ ೨೫ ॥

ಇತಿ ಶ್ರುತ್ವಾ ವಚಸ್ತೇಷಾಂ ಭಗವಾನ್ ಮಧುಸೂದನಃ ।
ದೃಷ್ಟ್ವಾ ಸಂಸ್ಕೃತವಾರ್ತಾಯಾಂ ದೈತ್ಯಾನ್ಧರ್ಮಪರಾಯಣಾನ್ ॥ ೨೬ ॥

---

೨೩. ಆಗ ಬಲಹೀನರಾದ ದೇವತೆಗಳು ತಮಗೆ ಹವಿರ್ಭಾಗವು ದೊರೆಯದ ಕಾರಣ ಹಸಿವಿನಿಂದ ಬಳಲಿದವರಾಗಿ, ಸಕಲ ಲೋಕಗಳಿಗೆ ಅಧಿಪತಿಯೂ, ಷಡ್ಗುಣೈಶ್ವರ್ಯಸಂಪನ್ನನೂ ಆದ ಮಹಾವಿಷ್ಣುವನ್ನು ವೇದೋಕ್ತವಚನಗಳಿಂದ ಹೀಗೆ ಸ್ತೋತ್ರಮಾಡಿದರು.

೨೪. " ಎಲೈ ಷಡ್ಗುಣೈಶ್ವರ್ಯಸಂಪನ್ನನಾದ ಪ್ರಭುವೇ! ನಾಲ್ಕುಯುಗ ಪರಿಮಿತವಾದ ಕಾಲದಿಂದಲೂ ಸ್ವರ್ಗಲೋಕದಲ್ಲಿ ನಮ್ಮ ಅಧಿಕಾರವಿಲ್ಲವಾಗಿದೆ.

೨೫. " ಎಲೈ ಮಹಾವಿಷ್ಣುವೇ! ತಾಮಸಮನ್ವಂತರವೆಂಬ ಇದರಲ್ಲೂ ಹದಿನಾರು ಚತುರ್ಯುಗಗಳು ಕಳೆಯುತ್ತಾ ಬಂದಿವೆ. ಇಷ್ಟುದಿನವೂ ನಾವು ಆ ಮಾಯಾವಿಗಳಿಂದುಂಟಾದ ದುಃಖವನ್ನನುಭವಿಸುತ್ತಲೇ ಇದ್ದೇವೆ " ಎಂದರು.

೨೬. ಪೂಜ್ಯನೂ, ಮಧುವೆಂಬ ರಾಕ್ಷಸನನ್ನು ನಾಶಮಾಡಿದವನೂ ಆದ, ಪರಮಾತ್ಮನು, ದೇವತೆಗಳಾಡಿದ ಈ ಮಾತನ್ನು ಕೇಳಿದನು. ಅಲ್ಲದೆ ರಾಕ್ಷಸರ ಧರ್ಮನಿರತೆಯನ್ನೂ, ಸಂಸ್ಕಾರಮಾಡಲ್ಪಟ್ಟು ಪವಿತ್ರವಾದ ಹವಿರ್ಭಾಗದಿಂದ ಜೀವನ ನಡೆಸುತ್ತ ಇರುವುದನ್ನೂ ನೋಡಿದನು.

ಬೌದ್ಧರೂಪಃ ಸ್ವಯಂ ಜಾತಃ ಕಲೌ ಪ್ರಾಪ್ತೇ ಭಯಾನಕೇ ।
ಅಜಿನಸ್ಯ ದ್ವಿಜಸ್ಯೈವ ಸುತೋ ಭೂತ್ವಾ ಜನಾರ್ದನಃ ॥ ೨೭ ॥

ವೇದಧರ್ಮಪರಾನ್ವಿಪ್ರಾನ್ಮೋಹಯಾಮಾಸ ವೀರ್ಯವಾನ್ ।
ನಿರ್ವೇದಾಃ ಕರ್ಮರಹಿತಾಸ್ತ್ರಿವರ್ಣಾಸ್ತ್ವಾಮಸಾಂತರೇ ॥ ೨೮ ॥

ಷೋಡಶೇ ಚ ಕಲೌ ಪ್ರಾಪ್ತೇ ಬಭೂವುರ್ಯಜ್ಞವರ್ಜಿತಾಃ ।
ತದಾ ದೈತ್ಯಾ ರುಷಾವಿಷ್ಟಾಸ್ಸರ್ವೇ ತ್ರಿಪುರವಾಸಿನಃ ॥ ೨೯ ॥

ಮನುಜಾನ್ಪೀಡಯಾಮಾಸುರ್ನಿರ್ಯಜ್ಞಾನ್ವೇದವರ್ಜಿತಾನ್ ।
ಕ್ಷಯಂ ಜಗ್ಮುರ್ನರಾಸ್ಸರ್ವೇ ಕಲ್ಪಾಂತೇ ದೈತ್ಯಭಕ್ಷಿತಾಃ ॥ ೩೦ ॥

ಪುನಸ್ಸತ್ಯಯುಗೇ ಪ್ರಾಪ್ತೇ ಕೈಲಾಸೇ ಗುಹ್ಯಕಾಲಯೇ ।
ದೇವೈಶ್ಚಾರಾಧಿತಃ ಶಂಭುಸ್ಸರ್ವಲೋಕಶಿವಂಕರಃ ॥ ೩೧ ॥

---

೨೭. ಬಳಿಕ ಭಯಂಕರವಾದ ಕಲಿಯುಗವು ಪ್ರಾಪ್ತವಾಗುತ್ತಲೆ ಸಾಕ್ಷಾತ್ ಜನಾರ್ದನನು ಬೌದ್ಧರೂಪವನ್ನು ಅಜಿನನೆಂಬ ಬ್ರಾಹ್ಮಣನ ಮಗನಾಗಿ ಹುಟ್ಟಿದನು.

೨೮. ಆತನು ಪ್ರಬುದ್ಧನಾಗಿ ಮಹಾಪೌರುಷದಿಂದ ವೇದಧರ್ಮಯುಕ್ತರಾದ ಬ್ರಾಹ್ಮಣರನ್ನು ಮೋಹಗೊಳಿಸಿದನು. ಬ್ರಾಹ್ಮಣಾದಿ ಮೂರುವರ್ಣದವರೂ, ವೇದವಿಹೀನರೂ, ಕರ್ಮಹೀನರೂ ಆಗಿ ತಾಮಸಮನ್ವಂತರದಲ್ಲಿ ಹದಿನಾರನೆಯ ಕಲಿಯುಗವು ಪ್ರಾಪ್ತವಾಗಲು ಆತನ ಪ್ರತಿಭೆಯು ಹೆಚ್ಚಿ ಯಜ್ಞಮಾಡುವುದನ್ನೇ ವರ್ಜ್ಯಮಾಡಿದರು.

೨೯-೩೦. ಆಗ ಆ ಆತ್ರಿಪುರದಲ್ಲಿ ವಾಸಿಸುವ ಎಲ್ಲಾ ರಾಕ್ಷಸರೂ ಕೋಪಗೊಂಡು ವೇದವಿಹೀನರೂ ಯಜ್ಞಹೀನರೂ ಆದ ಮನುಷ್ಯರನ್ನು ಹಿಂಸಿಸತೊಡಗಿದರು. ಹೀಗೆ ಆ ಕಲ್ಪದ ಕೊನೆಯಹೊತ್ತಿಗೆ ಆ ಪಟ್ಟಣದಲ್ಲಿದ್ದ ಎಲ್ಲಾ ಮನುಷ್ಯರೂ ರಾಕ್ಷಸರಿಗೆ ಆಹುತಿಯಾಗಿ ನಾಶಹೊಂದಿದರು.

೩೧-೩೨. ಮತ್ತೆ ಸತ್ಯಯುಗವು (ಕೃತಯುಗವು) ಬಂದಿತು ಗುಹ್ಯಕರಸ್ಥಾನವಾದ ಕೈಲಾಸದಲ್ಲಿ ದೇವತೆಗಳು ಸಕಲಲೋಕಗಳಿಗೂ ಮಂಗಳವನ್ನುಂಟುಮಾಡುವ

ಜ್ಯೋತಿರ್ಲಿಂಗಂ ವಪುಃ ಕೃತ್ವಾ ತತ್ರ ತಸ್ಥೌ ಭಯಂಕರಃ ।
ಏತಸ್ಮಿನ್ನಂತರೇ ದೇವಾಃ ಪ್ರಸನ್ನಾಸ್ತಾಮಸಾಂತರೇ ॥ ೩೨ ॥

ಭೂಮೇಸ್ಸಾರಂ ಗೃಹೀತ್ವಾ ತೇ ರಥಂ ಕೃತ್ವಾ ವಿಧಾನತಃ ।
ಚಂದ್ರಭಾಸ್ಕರಯೋಸ್ಸಾರಾಚ್ಚಕ್ರೇ ಕೃತ್ವಾ ತಥೈವ ಚ ॥ ೩೩ ॥

ಸುಮೇರೋಶ್ಚ ತಥಾ ಸಾರಾತ್ಕೇತುಂ ಕೃತ್ವಾ ರಥಸ್ಯ ವೈ ।
ದದೌ ಶಿವಾಯ ಮಹತೇ ಯಾನಂ ಸ್ಯಂದನರೂಪಿ ತತ್ ॥ ೩೪ ॥

ತದಾ ಬ್ರಹ್ಮಾ ಸ್ವಯಂ ಪ್ರಾಪ್ಯ ಬಭೂವ ರಥಸಾರಥಿಃ ।
ವೇದಾಶ್ಚ ವಾಜಿನಶ್ಚಾಸನ್ದೇವದೇವಸ್ಯ ವೈ ರಥೇ ॥ ೩೫ ॥

ಲೋಕಾಲೋಕಗಿರೇಸ್ಸಾರೋ ಧನುಶ್ಚಾಸೀನ್ಮಹಾತ್ಮನಃ ।
ಘೋರಂ ಚಾಜಗವಂ ನಾಮ ಪ್ರಸಿದ್ಧಮಭವದ್ಧನುಃ ॥ ೩೬ ॥

---

ಶಿವನನ್ನು ಪೂಜಿಸಲಾಗಿ ಆ ಶಿವನು ಭಯಂಕರವಾದ ಜ್ಯೋತಿರ್ಲಿಂಗರೂಪನಾಗಿ ಅಲ್ಲಿ ಪ್ರತ್ಯಕ್ಷನಾದನು.

೩೨-೩೪. ಇಷ್ಟರಲ್ಲಿ ತಾಮಸಮನ್ವಂತರ ಮುಗಿಯುತ್ತಾ ಬರಲು, ದೇವತೆಗಳು ಸಂತುಷ್ಟರಾಗಿ ಭೂಮಿಯಸಾರವನ್ನು ತೆಗೆದುಕೊಂಡು ಅದರಿಂದ ವಿಧಿವಿಧಾನಪ್ರಕಾರ ರಥವನ್ನು ನಿರ್ಮಿಸಿದರು. ಚಂದ್ರಸೂರ್ಯರ ಸಾರಗಳಿಂದ ಹಾಗೆಯೇ ಎರಡು ಚಕ್ರಗಳನ್ನು ಮಾಡಿದರು. ಸುಮೇರುಪರ್ವತದ ಸಾರದಿಂದ ರಥದ ಧ್ವಜದಂಡವನ್ನು ಮಾಡಿದರು. ರಥರೂಪವಾದ ಆ ವಾಹನವನ್ನು ಮಹಾತ್ಮನಾದ ಶಿವನಿಗೆ ಕೊಟ್ಟರು.

೩೫. ಆಗ ಬ್ರಹ್ಮನು ತಾನೇ ಆ ರಥಕ್ಕೆ ಸಾರಥಿಯಾಗಿ ನಿಂತನು. ಆ ದೇವದೇವೇಶನ ರಥಕ್ಕೆ ನಾಲ್ಕುವೇದಗಳೇ ಕುದುರೆಗಳಾದುವು.

೩೬. ಲೋಕಾಲೋಕಪರ್ವತದ ಸಾರವು ಆ ಮಹಾತ್ಮನಿಗೆ ಧನುಸ್ಸಾಗಿ ಪರಿಣಮಿಸಿತು. ಭಯಂಕರವಾದ ಆ ಧನುಸ್ಸು ಅಜಗವವೆಂಬ ಹೆಸರಿನಿಂದ ಪ್ರಸಿದ್ಧಿಹೊಂದಿತು.

ಸಜ್ಯಂ ಚಕಾರ ಭಗವಾಂಸ್ತದ್ಧನುಃ ಕಠಿನಂ ಮಹತ್ ।
ಭಗ್ನೀಭೂತಮಭೂಚ್ಚಾಪಂ ದೇವದೇವಸ್ಯ ವೈ ರುಷಾ ॥ ೩೭ ॥

ವಿಸ್ಮಿತೋ ಭಗವಾನ್ವಿಷ್ಣುಸ್ಸಾರಂ ಸ್ವರ್ಗಸ್ಯ ವೈ ತದಾ ।
ಗೃಹೀತ್ವಾಶು ಧನುರ್ದಿವ್ಯಂ ಪಿನಾಕಂ ಸ ಚಕಾರ ಹ ॥ ೩೮ ॥

ಸಜ್ಯಂ ಜಾತಂ ಚ ರುದ್ರೇಣ ಪುಷ್ಟಿಭೂತಂ ಮಹದ್ಧನುಃ ।
ತದಾ ಬ್ರಹ್ಮರ್ಷಯಸ್ತುಷ್ಟಾಸ್ತುಷ್ಟುವುರ್ಮನಸಾ ಹರಂ ॥ ೩೯ ॥

ಪಿನಾಕೀತಿ ಚ ತನ್ನಾಮ್ನಾ ಪ್ರಸಿದ್ಧೋಽಭೂನ್ಮಹೇಶ್ವರಃ ।
ಗುಣಶ್ಚಾಪಸ್ಯ ವೈ ಶೇಷಃ ಶಕ್ರೋ ಬಾಣಸ್ತದಾಭವತ್ ॥ ೪೦ ॥

ಶರಪಕ್ಷೌ ವಹ್ನಿವಾಯೂ ಶಲ್ಯಂ ವಿಷ್ಣುಸ್ಸನಾತನಃ ।
ತೇನ ಬಾಣೇನ ದೈತ್ಯಾನಾಂ ಕೋಟಿಸಂಖ್ಯಾ ಮೃತಾ ಚ ಖೇ ॥ ೪೧ ॥

---

೩೭. ಷಡ್ಗುಣೈಶ್ವರ್ಯಸಂಪನ್ನನಾದ ಪರಮೇಶ್ವರನು ಬಹು ಕಠಿನವೂ ದೊಡ್ಡದೂ ಆದ ಆ ಧನುಸ್ಸಿಗೆ ಹೆದೆಏರಿಸತೊಡಗಿ, ಅದು ಬಹು ಕಠಿನವಾಗಿದ್ದುದರಿಂದ ದೇವದೇವನಿಗೆ ಕೋಪವುಂಟಾಗಿ ಜಗ್ಗಿಸಲು ಆ ಧನುಸ್ಸು ಮುರಿದುಹೋಯಿತು.

೩೮. ಆಗ ಷಡ್ಗುಣೈಶ್ವರ್ಯಸಂಪನ್ನನಾದ ವಿಷ್ಣುವು ಆಶ್ಚರ್ಯಗೊಂಡವನಾಗಿ ಸ್ವರ್ಗಲೋಕದ ಸಾರವನ್ನು ಶೇಖರಿಸಿ ಶೀಘ್ರದಲ್ಲಿಯೇ ಪಿನಾಕವೆಂಬ ದಿವ್ಯಧನುಸ್ಸನ್ನು ನಿರ್ಮಿಸಿದನು.

೩೯. ಗಟ್ಟಿಯಾದ ಆ ಬಿಲ್ಲಿಗೆ ರುದ್ರನು ಹೆದೆಯೇರಿಸಿದನು. ಆಗ ಸಂತೋಷ ಗೊಂಡ ಬ್ರಹ್ಮರ್ಷಿಗಳು ಮನಸ್ಸಿನಲ್ಲಿಯೇ ಪರಮೇಶ್ವರನನ್ನು ಸ್ತೋತ್ರಮಾಡಿದರು.

೪೦. ಆ ಬಿಲ್ಲಿಗೆ ಇದ್ದ ಪಿನಾಕ ಎಂಬ ಹೆಸರಿನಿಂದ ಪರಮೇಶ್ವರನೂ ಕೂಡ "ಪಿನಾಕಿ" ಎಂಬದಾಗಿ ಪ್ರಖ್ಯಾತನಾದನು. ಆದಿಶೇಷನು ಬಿಲ್ಲಿನ ಹೆದೆಯಾದನು. ಇಂದ್ರನು ಬಾಣವಾದನು.

೪೧. ಅಗ್ನಿಯೂ, ವಾಯುವೂ, ಬಾಣದ ರೆಕ್ಕೆಗಳಾದರು. ಸನಾತನನಾದ ವಿಷ್ಣು ಬಾಣದ ತುದಿಯು ಅಲಗಾಗಿ ಪರಿಣಮಿಸಿದನು. ಆ ಬಾಣದ ಏಟಿಗೆ ಸಿಕ್ಕಿ ಕೋಟಿ ಸಂಖ್ಯಾತರಾದ ರಾಕ್ಷಸರು ಆಕಾಶದಲ್ಲಿಯೇ ಸತ್ತುಹೋದರು.

ತ್ರಿಪುರಂ ದಾಹಯಾಮಾಸ ಮಾಯಿನಾ ಪಾಲಿತಂ ಶಿವಃ ।
ಭಸ್ಮೀಭೂತೇ ಪುರೇ ಘೋರೇ ತದಾ ಲೋಕಪತಿರ್ವಿಧಿಃ ॥ ೪೨ ॥

ಪಿನಾಕಿನಂ ಮಹಾರುದ್ರಂ ಮೀನರಾಶಿಸ್ಥಿತೇ ರವೌ ।
ಶಶಿನೋ ಮಂಡಲಸ್ಯೈವ ರಾಜಾನಂ ಸ ಚಕಾರ ತಂ ॥ ೪೩ ॥

ಸ್ವಾಧಿಕಾರಾಂಸ್ತದಾ ದೇವಾ ಅವಾಪುಸ್ತಾಮಸಾಂತರೇ ।
॥ ಸೂತ ಉವಾಚ ॥
ಇತಿ ಶ್ರುತ್ವಾ ಪಿನಾಕೀ ಚ ಸ್ವಮುಖಾತ್ಸ್ವಾಂಶಮುತ್ತಮಂ ॥ ೪೪ ॥

ಸಮುತ್ಪಾದ್ಯ ಹರದ್ವಾರೇ ಹಿಮಸಾನೌ ಚಕಾರ ಹ ।
ಮಚ್ಛಂದೋ ನಾಮ ತತ್ರೈವ ಯೋಗೀ ಶಂಭುಪರಾಯಣಃ ॥ ೪೫ ॥

ಗೋರಖಸ್ಯ ಗುರುರ್ಯೋ ವೈ ತನ್ಮುಖೇ ತೇಜ ಆವಿಶತ್ ।
ರಂಭಾ ನಾಮ್ನೈವ ತತ್ರೈವ ಸ್ವರ್ವೇಶ್ಯಾ ಕಾಮರೂಪಿಣೀ ॥ ೪೬ ॥

---

೪೨-೪೩. ಈರೀತಿ ಶಿವನು ಮಾಯಿಯಿಂದ ರಕ್ಷಿತವಾಗಿದ್ದ ಆತ್ರಿಪುರವನ್ನು ಸುಟ್ಟುಬಿಟ್ಟನು. ಘೋರವಾದ ತ್ರಿಪುರವು ಸುಟ್ಟು ಬೂದಿಯಾಲು, ಆಗ ಲೋಕಪತಿಯಾದ ಬ್ರಹ್ಮನು ಸೂರ್ಯನು ಮೀನರಾಶಿಯಲ್ಲಿರುವಾಗ ಪಿನಾಕಿನಿಯಾದ ಆ ಮಹಾರುದ್ರನನ್ನು ಚಂದ್ರಮಂಡಲಕ್ಕೆ ರಾಜನನ್ನಾಗಿ ಮಾಡಿದನು. ಹೀಗೆ ತಾಮಸ ಮನ್ವಂತರದ ಕೊನೆಯಲ್ಲಿ ದೇವತೆಗಳು ತಮ್ಮ ಅಧಿಕಾರಗಳನ್ನು ಮತ್ತೆ ಹೊಂದಿದರು ಎಂದು ಹೇಳಿದರು.

೪೪. ಸೂತಮುನಿವರ್ಯನು ಕಥೆಯನ್ನು ಮುಂದುವರಿಸಿ ಹೇಳುತ್ತಾನೆ— ಈ ಮಾತನ್ನು ಕೇಳಿ ಪಿನಾಕಿಯು ತನ್ನ ಮುಖದಿಂದ ಉತ್ತಮವಾದ ತೇಜೋಂಶವನ್ನು ಉತ್ಪಾದನೆಮಾಡಿದನು.

೪೫-೪೬. ಹಿಮವತ್ಪರ್ವತದ ತಪ್ಪಲಿನಲ್ಲಿರುವ ಹರಿದ್ವಾರಕ್ಷೇತ್ರದಲ್ಲಿ ವಾಸಿಸುವ ಯೋಗಿಯೂ, ಈಶ್ವರಪೂಜಕನೂ, ಗೋರಕನೆಂಬುವವನ ಗುರುವೂ, ಆದ ಮಚ್ಛಂದನೆಂಬ ಯೋಗೀಶ್ವರ ಬಾಯಿಯಲ್ಲಿ ಆ ತೇಜಸ್ಸಿನ ಅಂಶವು ಪ್ರವೇಶಿಸಿತು ಆ ಸಮಯದಲ್ಲಿ ಸ್ವರ್ಗಲೋಕದ ವೇಶ್ಯೆಯೂ, ಕಾಮರೂಪಿಣಿಯೂ, ಕಾಮಾರ್ತೆಯೂ, ಆದ ರಂಭೆ ಎಂಬುವಳು ಅವನ ದೃಷ್ಟಿಗೋಚರಳಾದಳು.

ಮುಚ್ಛಂದಂ ಚ ವಶೀಕೃತ್ಯ ಬುಭುಜೇ ಸ್ಮರವಿಹ್ವಲಾ ।
ತಯೋಸ್ಸಕಾಶಾದ್ದಿವ್ಯೋ ಜಾತಸ್ಸ ಪುತ್ರೋ ರುಚಿರಾನನಃ ॥ ೪೭ ॥

ನಾಥಶರ್ಮೇತಿ ವಿಖ್ಯಾತೋ ವಿದ್ವಾನ್ ಶ್ರೇಷ್ಠತರೋऽಭವತ್ ।
ಸ ಜಿತ್ವಾ ಪಂಡಿತಾನ್ಭೂಮೌ ಪುರೀಂ ಕಾಶೀಂ ಸಮಾಗತಃ ॥
ಶಂಕರಾಚಾರ್ಯವಿಜಿತಸ್ತಸ್ಯ ಶಿಷ್ಯೋ ಬಭೂವ ಹ ॥ ೪೮ ॥

॥ ಬೃಹಸ್ಪತಿರುವಾಚ ॥
ಚಾಕ್ಷುಷಾಂತರಸಂಪ್ರಾಪ್ತೇ ದ್ವಾದಶೇ ದ್ವಾಪರೇ ಯುಗೇ ॥ ೪೯ ॥

ಕ್ಷತ್ರಿಯೈಸ್ತಾಲಜಂಘೀಯೈರ್ಬ್ರಾಹ್ಮಣಾ ಭೃಗುವಂಶಜಾಃ ।
ವಿನಾಶಿತಾಃ ಕುರುಕ್ಷೇತ್ರೇ ಗೃಹೀತ್ವಾ ತದ್ಧನಂ ಬಹು ॥ ೫೦ ॥

ಬುಭುಜುರ್ಬಲವಂತಸ್ತೇ ದೈತ್ಯಪಕ್ಷಾ ಮಹಾಧಮಾಃ ।
ಕಸ್ಯಚಿತ್ತು ಮುನೇಃ ಪತ್ನೀ ಗುರ್ವಿಣೀ ಚ ಭಯಾನ್ವಿತಾ ॥ ೫೧ ॥

---

೪೭-೪೮. ಆ ರಂಭೆಯು ಕೂಡಲೇ ಮುಚ್ಛಂದನನ್ನು ವಶಮಾಡಿಕೊಂಡು ಅವನೊಡನೆ ಭೋಗಿಸಿದಳು. ಅವರ ಸಮಾಗಮದಿಂದ ಮನೋಹರವಾದ ಮುಖವುಳ್ಳ ಮಗನು ಹುಟ್ಟಿದನು. ನಾಥಶರ್ಮನೆಂಬ ಹೆಸರಿನಿಂದ ಪ್ರಖ್ಯಾತನಾದ ಅವನು ಕಾಲಕ್ರಮದಲ್ಲಿ ವಿದ್ವಾಂಸನೂ ಅತ್ಯಂತ ಶ್ರೇಷ್ಠನೂ ಆದನು. ಅವನು ಈ ಭರತ ಭೂಮಿಯಲ್ಲಿರುವ ಎಲ್ಲಾ ಪಂಡಿತರುಗಳನ್ನೂ ವಾದದಲ್ಲಿ ಜಯಿಸಿ ಕಾಶೀಪಟ್ಟಣಕ್ಕೆ ಬಂದು ಅಲ್ಲಿ ಶಂಕರಾಚಾರ್ಯರಿಂದ ಜಿತನಾಗಿ ಅವರ ಶಿಷ್ಯನಾದನು.

೪೯-೫೦. ಪುನಃ ಬೃಹಸ್ಪತ್ಯಾಚಾರ್ಯರು ಮುಂದಿನ ಕಥೆಯನ್ನು ಹೇಳುತ್ತಾರೆ— ಚಾಕ್ಷುಷಮನ್ವಂತರವು ಪ್ರಾರಂಭವಾಗಲು ಹನ್ನೆರಡನೆಯ ದ್ವಾಪರಯುಗದಲ್ಲಿ ತಾಲಜಂಘವಂಶೋತ್ಪನ್ನರೂ, ರಾಕ್ಷಸಪಕ್ಷಪಾತಿಗಳೂ, ನೀಚರೂ, ಆದ ಕ್ಷತ್ರಿಯರು ಕುರುಕ್ಷೇತ್ರದಲ್ಲಿದ್ದ ಭೃಗುವಂಶದ ಬ್ರಾಹ್ಮಣರ ದ್ರವ್ಯರಾಶಿಯನ್ನೆಲ್ಲಾ ಬಲಾತ್ಕಾರದಿಂದ ತೆಗೆದುಕೊಂಡರು.

೫೧-೫೨. ಅಷ್ಟಕ್ಕೇ ಬಿಡದೆ ಬ್ರಾಹ್ಮಣರನ್ನು ಕೊಂದುಹಾಕಿ ಆ ಧನವನ್ನು ಉಪಯೋಗಿಸಿದರು. ಆ ಕ್ಷೇತ್ರದಲ್ಲಿದ್ದ ದಿವ್ಯಜ್ಞಾನವುಳ್ಳವಳೂ, ಗರ್ಭಿಣಿಯೂ ಆದ ಮುನಿಪತ್ನಿಯೊಬ್ಬಳು ಅವರಿಗೆ ಹೆದರಿ ಹಿಮತುಂಗವೆಂಬ ಪ್ರವೇಶಕ್ಕೆ ಬಂದು

ಹಿಮತುಂಗೇ ಸಮಾಗಮ್ಯ ತದ್ಗರ್ಭಂ ಮುನಿಸಂಭವಂ ।
ಶತವರ್ಷಂ ದಧೌ ದೇವೀ ತಪಸಾ ಜ್ಞಾನರೂಪಿಣೀ ॥ ೫೨ ॥

ಮಾತುರೂರೂ ಸುತೋ ಭಿತ್ವಾ ತತೋ ಜಾತೋ ಮಹೀತಲೇ ।
ತೇಜಸಾ ತಸ್ಯ ಪುತ್ರಸ್ಯ ಭಸ್ಮೀಭೂತಮಭೂಜ್ಜಗತ್ ॥ ೫೩ ॥

ತದಾ ತು ಸಕಲಾ ದೇವಾಃ ಪುರಸ್ಕೃತ್ಯ ಪ್ರಜಾಪತಿಂ ।
ವಜ್ರಸ್ಥಿತಶ್ಚ ವೈತಾಲಾಸ್ಸಮಾಜಗ್ಮುರ್ಭಯಾತುರಾಃ ॥ ೫೪ ॥

ಪಿತೃಭಿರ್ದೈವತೈರ್ಬಾಲಃ ಸಮಾಜ್ಞಾತೋ ಹಿಮಾಚಲೇ ।
ಲೋಕನಾಶಕರಂ ತೇಜೋ ಜಲಮಧ್ಯೇ ಸ ಚಾsಕ್ಷಿಪತ್ ॥ ೫೫ ॥

ಜಲದೇವೀ ಚ ವಡವಾ ಭೂತ್ವಾ ತತ್ತೇಜ ಉತ್ತಮಂ ।
ಪೀತ್ವಾ ವವಾಮ ತತ್ರೈವ ಪೀಡಿತಾ ರೌದ್ರತೇಜಸಾ ॥ ೫೬ ॥

---

ಮಹರ್ಷಿಯಿಂದ ಉತ್ಪನ್ನವಾದ ಆ ಗರ್ಭವನ್ನು ತಪೋಬಲದಿಂದ ನೂರುವರ್ಷಗಳು ಧರಿಸಿದ್ದಳು.

೫೩. ಹಾಗೆ ನೂರುವರ್ಷಗಳ ಅನಂತರ ಗರ್ಭಗತನಾಗಿದ್ದ ಪುತ್ರನು ತಾಯಿಯ ತೊಡೆಯನ್ನು ಸೀಳಿಕೊಂಡು ಜನನವಾದನು. ಆ ಕುಮಾರನ ತೇಜಸ್ಸು ಸಕಲ ಜಗತ್ತನ್ನೂ ದಹಿಸಲಾರಂಭಿಸಿತು.

೫೪. ಆಗ ಸಕಲ ದೇವತೆಗಳೂ ವೈತಾಳರೂ ಬ್ರಹ್ಮನನ್ನು ಮುಂದಿಟ್ಟು ಕೊಂಡು ಭಯದಿಂದ ಕೂಡಿದವರಾಗಿ ವಜ್ರಸ್ಥಿತನಾದ ಅವನ ಬಳಿಗೆ ಬಂದರು.

೫೫. ಹೀಗೆ ಬಂದ ಪಿತೃಗಳೂ ದೇವತೆಗಳೂ ಅಪ್ಪಣೆಮಾಡಲಾಗಿ ಆ ಕುಮಾರನು ಲೋಕಗಳನ್ನು ನಾಶಮಾಡುವ ಆ ತೇಜಸ್ಸನ್ನು ಸೆಳೆದು ಹಿಮವತ್ಪರ್ವತದಲ್ಲಿ ನೀರಿನ ಮಧ್ಯದಲ್ಲಿ ಹಾಕಿದನು.

೫೬. ಜಲದೇವಿಯು ಹೆಣ್ಣುಕುದುರೆಯಾಗಿ ಆ ಉತ್ತಮವಾದ ತೇಜಸ್ಸನ್ನು ಪಾನಮಾಡಿ, ಘೋರವಾದ ಆ ತೇಜಸ್ಸನ್ನು ಸಹಿಸಲಾರದೆ ವ್ಯಥೆಗೊಂಡು ಅಲ್ಲಿಯೇ ವಮನಮಾಡಿದಳು.

ತದಾಗತ್ಯ ಸ್ವಯಂ ಬ್ರಹ್ಮಾ ತ್ರಿಕುಟೋ ಯತ್ರ ವೈ ಗಿರಿಃ ।
ತದಧಃ ಸಾಗರೇ ಘೋರೇ ಸ್ಥಾಪಯಾಮಾಸ ಲೋಕಪಃ ॥ ೫೭ ॥

ಮೇಷಗೇ ದ್ಯುಮಣೌ ಪ್ರಾಪ್ತೇ ಶಶಿಮಂಡಲಗಂ ಪ್ರಭುಂ ।
ತಂ ರುದ್ರಂ ಸ ಚಕಾರಾಶು ಪರಮೇಷ್ಠೀ ಪಿತಾಮಹಃ ॥ ೫೮ ॥

ಊರುಜಾತಾತ್ಸ್ಮೃತೋ ವೌರ್ವೋ ದಹನೋ ಲೋಕದಾಹತಃ ।
ವಡವಾಮುಖತೋ ಜಾತೋ ವಾಡವೋ ನಾಮ ಸ ಪ್ರಭುಃ ॥ ೫೯ ॥

॥ ಸೂತ ಉವಾಚ ॥

ಇತಿ ಶ್ರುತ್ವಾ ತು ದಹನೋ ಗುರುವಾಕ್ಯಂ ಮನೋಹರಂ ।
ಸ್ವಮುಖಾತ್ತೇಜ ಉತ್ಪಾದ್ಯ ಕುರುಕ್ಷೇತ್ರಂ ಚಕಾರ ಹ ॥ ೬೦ ॥

ಸಾರಸ್ವತಸ್ಯ ವಿಪ್ರಸ್ಯ ಗೃಹೇ ಜಾತಸ್ಸ ವೈ ಶಿವಃ ।
ಕ್ಷೇತ್ರಶರ್ಮೇತಿ ವಿಖ್ಯಾತೋ ವಿದ್ವಚ್ಛ್ರೇಷ್ಠೋ ಬಭೂವ ಹ ॥ ೬೧ ॥

---

೫೭. ಆಗ ಲೋಕಪಾಲಕನಾದ ಬ್ರಹ್ಮನು ತಾನೇ ಬಂದು ತ್ರಿಕೂಟವೆಂಬ ಪರ್ವತದ ಕೆಳಭಾಗದಲ್ಲಿರುವ ಭಯಂಕರವಾದ ಸಮುದ್ರದಲ್ಲಿ ಆ ತೇಜಸ್ಸನ್ನಿಟ್ಟನು.

೫೮. ಬಳಿಕ ಲೋಕಪಿತಾಮಹನೂ ದಿವ್ಯಜ್ಞಾನಿಯೂ ಆದ ಬ್ರಹ್ಮನು ಸೂರ್ಯನು ಮೇಷರಾಶಿಯಲ್ಲಿರುವಾಗ ಆ ರುದ್ರನನ್ನು ಚಂದ್ರಮಂಡಲಕ್ಕೆ ಅಧಿಪತಿಯನ್ನಾಗಿ ಮಾಡಿದನು.

೫೯. ಊರುವಿನಿಂದ (ತೊಡೆಯಿಂದ) ಹುಟ್ಟಿದುದರಿಂದ ವೌರ್ವನೆಂದೂ ಲೋಕವನ್ನೆಲ್ಲಾ ಸುಟ್ಟುದುದರಿಂದ ದಹನನೆಂದೂ ಬಡಬಾ (ಹೆಣ್ಣುಕುದುರೆ) ಮುಖದಿಂದ ಹೊರಟುದರಿಂದ ಬಾಡಬ ಎಂಬದಾಗಿಯೂ ಆ ಮಹಾತ್ಮನಿಗೆ ಹೆಸರುಗಳಾದವು " ಎಂದು ಹೇಳಿದರು.

೬೦. ಸೂತಮುನಿವರ್ಯನು ಮುಂದುವರಿಸಿ ಹೇಳುತ್ತಾನೆ —ಬೃಹಸ್ಪತ್ಯಾಚಾರ್ಯರು ಹೇಳಿದ ಮನೋಹರವಾದ ಈ ಮಾತನ್ನು ಕೇಳಿ, ಅಗ್ನಿಯು ತನ್ನ ಮುಖದಿಂದ ತೇಜಸ್ಸನ್ನು ಉತ್ಪತ್ತಿಮಾಡಿ ಕುರುಕ್ಷೇತ್ರದಲ್ಲಿ ಜನಿಸುವಂತೆ ಮಾಡಿದನು.

೬೧. ಆ ಅಗ್ನಿತೇಜೋರೂಪಿಯಾದ ಶಿವನು ಸಾರಸ್ವತನೆಂಬ ಬ್ರಾಹ್ಮಣನ ಮನೆಯಲ್ಲಿ ಹುಟ್ಟಿ ಕ್ಷೇತ್ರಶರ್ಮನೆಂಬ ಹೆಸರಿನಿಂದ ಪ್ರಸಿದ್ಧನಾದ ಪಂಡಿತೋತ್ತಮನಾದನು.

ಶಂಕರಾಚಾರ್ಯಮಾಗಮ್ಯ ಶಿಷ್ಯೋ ಭೂತ್ವಾ ಪರಾಜಿತಃ ।
ಬ್ರಹ್ಮಚರ್ಯವ್ರತೀ ಕಾಶ್ಯಾಂ ತಸ್ಥೌ ಶಂಭುಪರಾಯಣಃ ॥ ೬೨ ॥

॥ ಬೃಹಸ್ಪತಿರುವಾಚ ॥

ಏಕಾರ್ಣವೇ ಪುರಾ ಜಾತೇ ನಷ್ಟೇ ಸ್ಥಾವರಜಂಗಮೇ ।
ಶತಾಬ್ದೇ ಬ್ರಹ್ಮಣಃ ಪ್ರಾಪ್ತೇಽವ್ಯಕ್ತಜನ್ಮನಿ ಲೋಕಗೇ ॥ ೬೩ ॥

ಅವ್ಯಕ್ತೇ ಪ್ರಕೃತಿರ್ಮಾಯಾ ಪೀತ್ವಾ ಸರ್ವಜಲಂ ಮುದಾ ।
ಮಹಾಕಾಲೀ ಸ್ವಯಂ ಮೂರ್ತಿರಂಧಕಾರಸ್ವರೂಪಿಣೀ ॥ ೬೪ ॥

ಏಕಾ ಬಭೂವ ತತ್ರೈವ ಪ್ರಾಕೃತೇ ಕಲ್ಪದಾರುಣೇ ।
ಚತುರ್ಯುಗಾನಾಂ ಕೋಟೀನಾಂ ತ್ರಯಾಣಾಂ ದಾರುಣೇ ಲಯೇ॥ ೬೫ ॥

ಷಷ್ಟಿಲಕ್ಷಯುತಾನಾಂ ಚ ಕಾಲಸ್ತತ್ರ ವ್ಯತೀತವಾನ್ ।
ತದಾ ಸಾ ಪ್ರಕೃತಿರ್ದೇವೀ ನಿತ್ಯಶುದ್ಧಾ ಸನಾತನೀ ॥ ೬೬ ॥

---

೬೨. ಅವನು ಶಂಕರಾಚಾರ್ಯರಲ್ಲಿಗೆ ಬಂದು ಅವರಿಂದ ಜಿತನಾಗಿ ಅವರ ಶಿಷ್ಯನಾಗಿದ್ದುಕೊಂಡು, ಬ್ರಹ್ಮಚರ್ಯವ್ರತನಿಷ್ಠನೂ ಈಶ್ವರಭಕ್ತನೂ ಆಗಿ, ಕಾಶಿಯಲ್ಲಿ ವಾಸಮಾಡುತ್ತಿದ್ದನು.

೬೩-೬೪ ಬೃಹಸ್ಪತ್ಯಾಚಾರ್ಯರು ಮುಂದಕ್ಕೆ ಹೇಳುತ್ತಾರೆ—ಪೂರ್ವದಲ್ಲಿ ಬ್ರಹ್ಮನಿಗೆ ನೂರುವರ್ಷಗಳಾದಾಗ ನಾಲ್ಕುಸಮುದ್ರಗಳೂ ಒಂದುಗೂಡಿ ಜಲಪ್ರಳಯುವಾಗಿ, ಚರಾಚರಾತ್ಮಕವಾದ ಪ್ರಪಂಚವೆಲ್ಲವೂ ನಾಶವಾಯಿತು. ಆಗ ಪರಮಾತ್ಮನು ದಿವ್ಯಲೋಕಕ್ಕೆ ಹೋದನು. ಅವ್ಯಕ್ತರೂಪಿಣಿಯೂ ಪ್ರಕೃತಿಯೂ ಆದ ಮಾಯೆಯು ಸಂತೋಷದಿಂದ ಆ ಸಮಸ್ತ ಜಲವನ್ನೂ ಪಾನಮಾಡಿ ತಾನು ಮಹಾಕಾಲಿಯಾಗಿ ಅಂಧಕಾರವಂತಿರುವ ಕಪ್ಪುಬಣ್ಣದ ರೂಪವನ್ನು ಧರಿಸಿದಳು.

೬೫. ಆ ಮಹಾಕಾಲಿಯು ಘೋರವಾದ ಆ ಪ್ರಾಕೃತಪ್ರಳಯದಲ್ಲಿ ತಾನು ಒಬ್ಬಳೇ ಉಳಿದಳು. ಈ ಬಗೆಯಾದ ಅದು ಮೂರುಕೋಟಿ ಚತುರ್ಯುಗಗಳು ಕಳೆದನಂತರ ನಡೆಯತಕ್ಕ ಭಯಂಕರವಾದ ಪ್ರಳಯ.

೬೬-೬೭. ಇಂಥಾ ಪ್ರಳಯದಲ್ಲಿ ಅರವತ್ತುಲಕ್ಷವರ್ಷ ಪರಿಮಿತವಾದ ಕಾಲವು ಕಳೆದುಹೋಯಿತು. ಆಗ ಪ್ರಕೃತಿಯೂ, ಮಂಗಳಕರಳೂ, ನಿತ್ಯಶುದ್ಧಳೂ, ನಾಶ

ಸ್ವೇಚ್ಛಯಾ ಚ ಸ್ವರೂಪಂ ಸ್ವಂ ಮಹಾಗೌರಮನುತ್ತಮಂ ।
ಪಂಚವಕ್ತ್ರಂ ದಶಭುಜಂ ತ್ರಿನೇತ್ರಂ ಚ ದಧೌ ಶಿವಾ ॥ ೬೭ ॥

ಭಾಲನೇತ್ರೇಣ ಸಾ ಮಾತಾ ಸೂಕ್ಷ್ಮತೇಜೋ ದದರ್ಶ ಹ ।
ಶೂನ್ಯಭೂತಂ ಪರಂ ನಿತ್ಯಂ ಅವಿಕಾರಿ ನಿರಂಜನಂ ॥ ೬೮ ॥

ತದಾ ದಿಕ್ಷು ಗತಂ ಬ್ರಹ್ಮ ಸ್ವಭುಜೈಃ ಪ್ರಕೃತಿಃ ಪುರಾ ।
ಗ್ರಹೀತುಮಿಚ್ಛತೀ ತತ್ರ ನ ಸಮರ್ಥಾ ಬಭೂವ ವೈ ॥ ೬೯ ॥

ವಿಸ್ಮಿತಾ ಪ್ರಕೃತಿರ್ಮಾತಾ ಪಂಚವಕ್ತ್ರೈಸ್ಸನಾತನಂ ।
ತುಷ್ಟಾವ ಪರಯಾ ಭಕ್ತ್ಯಾ ಚಿರಂಕಾಲಾತ್ಪರಾತ್ಪರಂ ॥ ೭೦ ॥

ಧಾತುಶಬ್ದೈಃ ಪ್ರಾಙ್ಮುಖಜೈಃ ಪ್ರತ್ಯಯೈರ್ಯಾಮ್ಯವಕ್ತ್ರಜೈಃ ।
ಸುವಿಭಕ್ತಿಮಯೈಃ ಶಬ್ದೈರ್ಮುಖಪಶ್ಚಿಮಜೈಃ ಸ್ಥಿರಾ ॥ ೭೧ ॥

---

ರಹಿತಳೂ ಆದ ಆ ದೇವಿಯು ಸ್ವೇಚ್ಛೆಯಿಂದ ಅತ್ಯುತ್ತಮವಾದ ಗೌರ (ಹಳದಿ) ವರ್ಣ, ಐದುಮುಖಗಳು, ಹತ್ತುತೋಳುಗಳು, ಮೂರುಕಣ್ಣುಗಳು, ಉಳ್ಳದ್ದಾಗಿರುವಂತೆ ತನ್ನ ಸ್ವರೂಪವನ್ನು ಧರಿಸಿದಳು.

೬೮. ಆ ತಾಯಿಯು ತನ್ನ ಹಣೆಗಣ್ಣಿನಿಂದ ಶೂನ್ಯಭೂತವೂ, ಅತಿಶ್ರೇಷ್ಠವೂ, ನಿತ್ಯವೂ, ವಿಕಾರರಹಿತವೂ, ನಿರಂಜನವೂ, ಆಗಿರುವ ಸೂಕ್ಷ್ಮವಾದ ಒಂದು ತೇಜಸ್ಸನ್ನು ನೋಡಿದಳು.

೬೯. ಆಗ ಶ್ರೇಷ್ಠಳಾದ ಪ್ರಕೃತಿಯು ಸಮಸ್ತ ದಿಕ್ಕುಗಳಲ್ಲೂ ವ್ಯಾಪಿಸಿರುವ ಬ್ರಹ್ಮಸ್ವರೂಪವಾದ ಆ ಸೂಕ್ಷ್ಮತೇಜಸ್ಸನ್ನು ತನ್ನ ಕೈಗಳಿಂದ ಹಿಡಿದುಕೊಳ್ಳಲು ಅಪೇಕ್ಷಿಸಿದಾಗ್ಯೂ, ಹಾಗೆ ಹಿಡಿದುಕೊಳ್ಳುವುದಕ್ಕೆ ಸಮರ್ಥಳಾಗಲಿಲ್ಲ.

೭೦. ಆಗ ತಾಯಿಯಾದ ಪ್ರಕೃತಿಯು ಅತ್ಯಂತ ಅಶ್ಚರ್ಯಗೊಂಡವಳಾಗಿ ಬಹಳ ಭಕ್ತಿಯಿಂದ ಕೂಡಿ ಪರಾತ್ಪರನೂ ನಾಶರಹಿತನೂ ಆದ ಪರಮಾತ್ಮನನ್ನು ತನ್ನ ಐದುಮುಖಗಳಿಂದಲೂ ಬಹುಕಾಲ ಸ್ತೋತ್ರಮಾಡಿದಳು.

೭೧-೭೩. ನಿತ್ಯರೂಪಳೂ, ಚಾಂಚಲ್ಯರಹಿತಳೂ, ಆದ ದೇವಿಯು ಪೂರ್ವ ದಿಕ್ಕಿನ ಮುಖದಿಂದ ಹುಟ್ಟಿದ ಧಾತುಶಬ್ದಗಳಿಂದಲೂ, ದಕ್ಷಿಣದಿಕ್ಕಿನ ಮುಖ

ತಿಙನ್ ವಿಭಕ್ತಿಮಯ್ಯೈರ್ನಿತ್ಯಾ ಮುಖೋತ್ತರಮಯ್ಯೈರ್ಮುದಾ ।
ನಭೋವಕ್ತ್ರಮಯ್ಯೈಃ ಶಬ್ದೈರ್ವರ್ಣಮಾತ್ರೈರ್ನಿರಂಜನಂ ॥ ೭೨ ॥

ಸಚ್ಚಿದಾನಂದಘನಕಂ ಪೂರ್ಣಬ್ರಹ್ಮ ಸನಾತನಂ ।
ತುತೋಷ ತತ್ತು ಸರ್ವಜ್ಞಂ ಪಂಚವಕ್ತ್ರೇಷು ಚಾಗಮತ್ ॥ ೭೩ ॥

ಪುರುಷತ್ವಮಭೂದ್ಬ್ರಹ್ಮ ಸ್ವಯಂಭೂರ್ನಾಮ ಚಾಭವತ್ ।
ಅವ್ಯಕ್ತಾತ್ಪ್ರಕೃತೇರ್ಜಾತೋಽವ್ಯಕ್ತಜನ್ಮಾ ಹಿ ಸ ಸ್ಮೃತಃ ॥ ೭೪ ॥

ತಸ್ಯ ಹೇತೋಃ ಸ್ವಯಂ ದೇವೀ ವರದಾ ಲೋಕರೂಪಿಣೀ ।
ಮಹಾಲಕ್ಷ್ಮೀಶ್ಚ ಪೂರ್ವಾರ್ಧಾಜ್ಜಾತಾ ಷೋಡಶಲೋಕಿನೀ ॥ ೭೫ ॥

ಅಷ್ಟಾದಶಭುಜಾಸ್ತಸ್ಯಾ ಲೋಕರಕ್ಷಣತತ್ಪರಾಃ ।
ದೃಷ್ಟ್ವಾ ತದದ್ಭುತಂ ರೂಪಂ ಸ್ವಯಂಭೂರ್ವಿಸ್ಮಯಾನ್ವಿತಃ ॥ ೭೬ ॥

---

ದಿಂದ ಹುಟ್ಟಿದ ಪ್ರತ್ಯಯಗಳಿಂದಲೂ, ಪಶ್ಚಿಮದಿಕ್ಕಿನ ಮುಖದಿಂದ ಹುಟ್ಟಿದ ನಾಮ ವಿಭಕ್ತಿಸಹಿತವಾದ ಸುಬಂತ ಶಬ್ದಗಳಿಂದಲೂ, ಉತ್ತರದಿಕ್ಕಿನ ಮುಖದಿಂದ ಹುಟ್ಟಿದ ತಿಙನ್ತಶಬ್ದಗಳಿಂದಲೂ, ಆಕಾಶದಕಡೆಯ ಮುಖದಿಂದ ಹುಟ್ಟಿದ ಸಕಲ ವರ್ಣಾತ್ಮಕ ವಾದ ಶಬ್ದಗಳಿಂದಲೂ, ಸಹಿತಳಾಗಿ ನಿರಂಜನನೂ, ಸಚ್ಚಿದಾನಂದಘನನೂ, ಪೂರ್ಣ ಬ್ರಹ್ಮನೂ, ನಾಶರಹಿತನೂ, ಸರ್ವಜ್ಞನೂ, ಆದ ಪರಬ್ರಹ್ಮನನ್ನು ಸ್ತೋತ್ರಮಾಡಿ ದಳು. ಐದುಮುಖಗಳಲ್ಲಿಯೂ ಕ್ರಮವಾಗಿ ಆ ಶಬ್ದಗಳು ಹೊರಡುತ್ತಿತ್ತು.

೭೪. ಆಗ ಬ್ರಹ್ಮನು ಪುರುಷರೂಪನಾಗಿ ಆವಿರ್ಭವಿಸಿದನು. ಅವನಿಗೆ ಸ್ವಯಂಭುವೆಂಬ ಹೆಸರುಂಟಾಯಿತು. ಅವ್ಯಕ್ತರೂಪಳಾದ ಪ್ರಕೃತಿಯಿಂದ ಉತ್ಪನ್ನ ನಾದುದರಿಂದ ಅವನು ಅವ್ಯಕ್ತಜನ್ಮನೆಂದು ಪ್ರಸಿದ್ಧನಾದನು.

೭೫. ವರವನ್ನು ಕೊಡುವವಳೂ, ಸಕಲಲೋಕಸ್ವರೂಪಿಣಿಯೂ ಆದ ಮಹಾಲಕ್ಷ್ಮೀದೇವಿಯು ಆ ಬ್ರಹ್ಮನ ಆವಿರ್ಭಾವಕ್ಕೋಸ್ಕರ ತಾನು ಪ್ರಕೃತಿಯ ಪೂರ್ವದ ಅರ್ಧಭಾಗದಿಂದ ಹದಿನಾರು ಕಣ್ಣುಗಳೂ ಹದಿನೆಂಟು ಭುಜಗಳೂ ಉಳ್ಳವ ಳಾಗಿ ಹುಟ್ಟಿದಳು.

೭೬-೭೭. ಅವುಗಳು ಸಕಲ ಲೋಕಗಳನ್ನೂ ಕಾಪಾಡುವುದರಲ್ಲಿ ಆಸಕ್ತಗಳಾ ಗಿದ್ದುವು ಆ ಆಶ್ಚರ್ಯಕರವಾದರೂಪವನ್ನು ನೋಡಿ ಸ್ವಯಂಭುವು ಆಶ್ಚರ್ಯಹೊಂದಿದ

ಪ್ರವಿಶ್ಯ ಬಹುಧಾ ಭೂತ್ವಾ ನಾಂತಂ ತಸ್ಯಾ ಜಗಾಮ ಹ
ಬೃಹತ್ವಾದ್ಬಹುರೂಪತ್ವಾದ್ಬ್ರಹ್ಮ ನಾಮೇತಿ ವಿಶ್ರುತಃ ॥ ೭೭ ॥

ಶ್ರಮಿತೋ ಭಗವಾನ್‌ಬ್ರಹ್ಮಾ ಸತ್ಯಲೋಕಮುಪಸ್ಥಿತಃ ।
ಮುಖೇಭ್ಯ ಉದ್ಭವೈರ್ದೇವೋ ವೇದೈಸ್ತುಷ್ಟಾವ ಶಂಕರಂ ॥ ೭೮ ॥

ಚಿರಂ ಕಾಲಂ ತದಂಗಾದ್ವೈ ನದೀನದಸಮುದ್ಭವಃ ।
ಏಕಾರ್ಣವಂ ತದಾ ಜಾತಂ ಶೇತೇ ತತ್ರ ಸ್ವಯಂ ಪ್ರಭುಃ ॥ ೭೯ ॥

ಸಹಸ್ರಯುಗಪರ್ಯಂತಮುಷಿತ್ವಾऽವ್ಯಕ್ತಭೂಃ ಸ್ವಯಂ ।
ಸತ್ಯಲೋಕಮುಪಾಗಮ್ಯ ಪುನಃ ಸೃಷ್ಟಿಂ ಚಕಾರ ಹ ॥ ೮೦ ॥

ಅನಂತಾಃ ಸೃಷ್ಟಯಶ್ಚಾಸನ್‌ಗಣರೂಪಾಃ ಪೃಥಕ್‌ಪೃಥಕ್ ।
ತಾಭಿರ್ವ್ಯಕ್ತಮಭೂತ್ಸರ್ವಂ ಮಹಾಲಕ್ಷ್ಮೀಮಯಂ ಜಗತ್ ॥ ೮೧ ॥

---

ವನಾಗಿ ತಾನೂ ಅನೇಕ ರೂಪಗಳನ್ನು ಧರಿಸಿಕೊಂಡು ಆ ದೇವಿಯ ಹೃದಯಾಂತರಾಳ ದಲ್ಲಿ ಪ್ರವೇಶಿಸಿ ನೋಡಿದಾಗ್ಯೂ ಕೊನೆಮುಟ್ಟಲಿಲ್ಲ. ಹೀಗೆ ದೊಡ್ಡದಾಗಿರುವ ಅನೇಕ ರೂಪಗಳನ್ನು ಧರಿಸಿದಕಾರಣ ಅವನು ಬ್ರಹ್ಮನೆಂಬ ಹೆಸರಿನಿಂದ ಪ್ರಸಿದ್ಧನಾದನು.

೭೮. ಷಡ್ಗುಣೈಶ್ವರ್ಯಸಂಪನ್ನನೂ ದೇವಪ್ರಮುಖನೂ ಆದ ಬ್ರಹ್ಮನು ಈ ಕಾರ್ಯ ದಲ್ಲಿ ಶ್ರಮಹೊಂದಿ ಬಳಿಕ ಸತ್ಯಲೋಕಕ್ಕೆ ಹೋಗಿ ತನ್ನ ಮುಖಗಳಿಂದ ಹುಟ್ಟಿದ ವೇದಗಳಿಂದ ಈಶ್ವರನನ್ನು ಸ್ತೋತ್ರಮಾಡಿದನು.

೭೯. ಬಹುಕಾಲ ಪರ್ಯಂತವಾಗಿ ಅವನ ಶರೀರದಿಂದ ನದಿಗಳೂ ನದಗಳೂ ಉತ್ಪನ್ನವಾದುವು. ಅವುಗಳಿಂದಾದ ಜಲರಾಶಿಯು ಭೇದವೇ ಕಾಣಿಸದಂತೆ ಮಹಾ ಸಮುದ್ರವಾಯಿತು. ಅಲ್ಲಿ ಪರಮಾತ್ಮನು ಮಲಗಿದ್ದನು.

೮೦. ಅವ್ಯಕ್ತಜನ್ಮನಾದ ಬ್ರಹ್ಮನು ಒಂದುಸಾವಿರ ಯುಗಗಳವರೆಗೂ ಅಲ್ಲಿದ್ದು ಅನಂತರ ಸತ್ಯಲೋಕಕ್ಕೆ ಬಂದು ಮತ್ತೆ ಸೃಷ್ಟಿಮಾಡಲು ಮೊದಲುಮಾಡಿದನು.

೮೧. ಪಿಂಗಡಪಿಂಗಡವಾಗಿ ಗಣರೂಪಗಳಾದ ಅನೇಕ ಸೃಷ್ಟಿಗಳು ಬೇರೆಬೇರೆ ಯಾಗಿ ಆದುವು. ಮಹಾಲಕ್ಷ್ಮೀಮಯವಾದ ಸಕಲ ಜಗತ್ತುಗಳೂ ಆ ಗಣಸೃಷ್ಟಿ ಯಿಂದ ವ್ಯಕ್ತವಾಗಿ ಕಾಣುವಂತಾದುವು.

ದೃಷ್ಟ್ವಾ ಬಹುತ್ವಂ ಸೃಷ್ಟೀನಾಂ ಮಹಾಲಕ್ಷ್ಮೀಃ ಸನಾತನೀ ।
ವಿಸ್ಮಿತಾಽಭೂಚ್ಚ ಸರ್ವೇಶಂ ಭಗವಂತಮುಪಾಯಯೌ ॥ ೮೨ ॥

ನತ್ವೋವಾಚ ವಚೋ ರಮ್ಯಂ ಕೃಷ್ಣಮವ್ಯಕ್ತಮಂಗಲಂ ।
ಭಗವನ್ನಿತ್ಯಶುದ್ಧಾತ್ಮನ್ನರಾಶ್ಚಾಸನ್ಮಹತ್ತರಾಃ ॥ ೮೩ ॥

ಕಥಂ ತೇಷಾಂ ಚ ಗಣನಾ ಕರ್ತವ್ಯಾ ಚ ಮಯಾ ಸದಾ ।
ಇತಿ ಶ್ರುತ್ವಾ ವಚಸ್ತಸ್ಯಾ ದ್ವಿಧಾಭೂತಶ್ಚ ಸೋಽವ್ಯಯಃ ॥ ೮೪ ॥

ಪೂರ್ವಾರ್ಧಾತ್ಸ ತು ರಕ್ತಾಂಗಃ ಪರಾರ್ಧಾದ್ಗೌರರೂಪವಾನ್ ।
ಚತುರ್ಭುಜಸ್ಸ ರಕ್ತಾಂಗೋ ಗೌರವರ್ಣಶ್ಚತುರ್ಭುಜಃ ॥ ೮೫ ॥

ಸರ್ವಸೃಷ್ಟಿಗಣಾನಾಂ ಚ ಸ ಈಶೋ ಭಗವಾನ್ಪ್ರಭುಃ
ಗಣೇಶೋ ನಾಮ ವಿಖ್ಯಾತಶ್ಚೇಶ್ವರಸ್ಸ ತು ವಿಶ್ರುತಃ ॥ ೮೬ ॥

---

೮೨ ಸನಾತನೆಯಾದ ಮಹಾಲಕ್ಷ್ಮಿಯು ಆ ಅನೇಕವಿಧವಾದ ಸೃಷ್ಟಿಯನ್ನು ನೋಡಿ ಆಶ್ಚರ್ಯಗೊಂಡಳು. ಮತ್ತು ಸರ್ವೇಶ್ವರನೂ, ಷಡ್ಗುಣೈಶ್ವರ್ಯಸಂಪನ್ನನೂ, ಅವ್ಯಕ್ತಸ್ವರೂಪನೂ, ಮಂಗಳಕರನೂ ಆದ ವಿಷ್ಣುವಿಗೆ ನಮಸ್ಕಾರಮಾಡಿ ಮಧುರವಾಗಿ ಮಾತಾಡತೊಡಗಿ,

೮೩. "ಎಲೈ ನಿತ್ಯಶುದ್ಧಸ್ವರೂಪನಾದ ಪರಮಾತ್ಮನೇ ! ಮನುಷ್ಯರಾದರೋ ಲೆಕ್ಕವಿಲ್ಲದಷ್ಟು ಉತ್ಪನ್ನರಾಗಿದ್ದಾರೆ ; ನಾನು ಯಾವಾಗಲೂ ಅವರನ್ನು ಹೇಗೆ ಲೆಕ್ಕ ಮಾಡಲಿ ?" ಎಂದು ಕೇಳಿದಳು.

೮೪-೮೫. ಈ ಪ್ರಕಾರ ಹೇಳಿದ ಮಾತನ್ನು ಕೇಳಿ ಆ ನಾಶರಹಿತನಾದ ಪರಮಾತ್ಮನು ತಾನು ಎರಡು ಪ್ರಕಾರವಾಗಿ ಪರಿಣಮಿಸಿದನು. ಅವನ ಪೂರ್ವಭಾಗದ ಅರ್ಧದೇಹವು ಕೆಂಪಾದಬಣ್ಣವುಳ್ಳದೂ ಪಶ್ಚಿಮಾರ್ಧದೇಹವು ಹಳದೀಬಣ್ಣವುಳ್ಳದೂ ಆಯಿತು. ಕೆಂಪುದೇಹವು ನಾಲ್ಕುತೋಳುಗಳುಳ್ಳದ್ದಾಯಿತು. ಗೌರದೇಹವೂ ನಾಲ್ಕು ತೋಳುಗಳುಳ್ಳದ್ದಾಯಿತು.

೮೬. ಹಾಗೆ ಎರಡು ಪ್ರಕಾರವಾಗಿ ಪರಿಣಮಿಸಿದ ದೇಹದಲ್ಲಿ ಪೂರ್ವಾರ್ಧ ಶರೀರವು ಸಕಲ ಸೃಷ್ಟಿಗಣಗಳಿಗೂ ಅಧಿಪತಿಯೂ, ಷಡ್ಗುಣೈಶ್ವರ್ಯಸಂಪನ್ನನೂ ಸಕಲ, ಕಾರಣನೂ, ಸರ್ವೇಶ್ವರನೂ ಆಗಿ ಗಣೇಶನೆಂಬ ಹೆಸರಿನಿಂದ ಪ್ರಸಿದ್ಧಿಹೊಂದಿತು.

**ಪರಶ್ಚತುರ್ಭುಜೋ ಯೋ ವೈ ಯೋಗಿಧ್ಯೇಯೋ ನಿರಂಜನಃ।**
**ಏಕದಾ ವಿಧಿತೋ ಜಾತಃ ಶಿವಃ ಪಾರ್ವತಿವಲ್ಲಭಃ ॥ ೮೭ ॥**

**ಗಣೇಶಂ ಪೂಜಯಾಮಾಸ ಸಹಸ್ರಾಬ್ದಂ ಪ್ರಯತ್ನತಃ ।**
**ತದಾ ಪ್ರಸನ್ನೋ ಭಗವಾನ್‌ಗಣೇಶಃ ಶರ್ವಪೂಜಕಃ ॥ ೮೮ ॥**

**ವರಂ ವರಯ ತಂ ಪ್ರಾಹ ಪಾರ್ವತೀಸಹಿತಂ ಹರಂ ।**
**ಪ್ರಸನ್ನಾತ್ಮಾ ಭವಃ ಸಾಕ್ಷಾತ್ತುಷ್ಟಾವ ಚ ವಿನಮ್ರಧೀಃ ॥ ೮೯ ॥**

**॥ ಶಿವ ಉವಾಚ ॥**

**ನಮೋ ವಿಷ್ಣುಸ್ವರೂಪಾಯ ಗಣೇಶಾಯ ಪರಾತ್ಮನೇ ।**
**ಚತುರ್ಭುಜಾಯ ರಕ್ತಾಯ ಯಜ್ಞಪೂರ್ಣಕರಾಯ ಚ ॥ ೯೦ ॥**

**ವಿಘ್ನಹಂತ್ರೇ ಜಗದ್ಧರ್ತ್ರೇ ಸರ್ವಾನಂದಪ್ರದಾಯಿನೇ ।**
**ಸಿದ್ಧೀನಾಂ ಪತಯೇ ತುಭ್ಯಂ ನಿಧೀನಾಂ ಪತಯೇ ನಮಃ ॥ ೯೧ ॥**

---

೮೭. ಉಳಿದ ಪಶ್ಚಿಮಾರ್ಧಶರೀರವು ನಾಲ್ಕುತೋಳಿನಿಂದ ಶೋಭಿಸುತ್ತಾ ಯೋಗಿಗಳಿಗೆ ಧ್ಯಾನಯೋಗ್ಯವೂ ನಿರಂಜನವೂ ಎನಿಸಿದ ಪರಮಾತ್ಮಸ್ವರೂಪವಾಯಿತು. ಪಾರ್ವತೀಪತಿಯೂ ವಿಧಿಯಿಂದ ಉತ್ಪನ್ನನೂ ಆದ ಈಶ್ವರನು ಒಂದು ಸಮಯದಲ್ಲಿ ಸಾವಿರವರ್ಷಗಳವರೆಗೆ ಪ್ರಯತ್ನಪೂರ್ವಕವಾಗಿ ಗಣೇಶನನ್ನು ಪೂಜೆಮಾಡಿದನು.

೮೮. ಆಗ ಪ್ರಸನ್ನನಾದ ಗಣೇಶನು ಈಶ್ವರನು ಮಾಡಿದ ಪೂಜೆಯಿಂದ ಸಂತುಷ್ಟನಾಗಿ ಪಾರ್ವತೀಸಹಿತನಾದ ಈಶ್ವರನನ್ನು ಕುರಿತು "ನಿನಗೆ ಬೇಕಾದ ವರವನ್ನು ಬೇಡು" ಎಂದನು.

೮೯. ಗಣೇಶನ ಈ ಮಾತಿನಿಂದ ಸಂತುಷ್ಟನಾದ ಈಶ್ವರನು ವಿನಯಯುಕ್ತನಾಗಿ ಅವನನ್ನು ಸ್ತೋತ್ರಮಾಡಿದನು.

೯೦. ಈಶ್ವರನು ಹೇಳುತ್ತಾನೆ—"ವಿಷ್ಣುಸ್ವರೂಪನೂ, ನಾಲ್ಕುತೋಳುಗಳುಳ್ಳವನೂ, ರಕ್ತವರ್ಣನೂ, ಯಾಗವನ್ನು ಪೂರ್ಣಗೊಳಿಸತಕ್ಕವನೂ, ಗಣಗಳಿಗೆ ಅಧಿಪತಿಯೂ ಆದ ನಿನಗೆ ನಮಸ್ಕಾರ.

೯೧. ವಿಘ್ನಗಳನ್ನು ನಾಶಮಾಡುವವನೂ, ಪ್ರಪಂಚವನ್ನು ಕಾಪಾಡುವವನೂ, ಸಮಸ್ತ ಆನಂದಗಳನ್ನೂ ಉಂಟುಮಾಡುವವನೂ, ಸಿದ್ಧಿಗಳಿಗೆ ಅಧಿಪತಿಯೂ, ನವನಿಧಿಗಳಿಗೆ ಯಜಮಾನನೂ ಆದ ನಿನಗೆ ನಮಸ್ಕಾರ."

ಪ್ರಸನ್ನೋ ಭವ ದೇವೇಶ ಪುತ್ರೋ ಭವ ಮಮ ಪ್ರಿಯಃ ।
ಇತಿ ಶ್ರುತ್ವಾದಿಪೂಜ್ಯಸ್ತು ಗಣೇಶೋ ಭಕ್ತವತ್ಸಲಃ ॥ ೯೨ ॥

ಪಾರ್ವತ್ಯಾಃ ಸರ್ವದೇಹಾತ್ತು ತೇಜೋಭೂತಾತ್ಸಮುದ್ಭವಃ ।
ತದಾ ಕೈಲಾಸಶಿಖರೇ ಸರ್ವೇ ದೇವಾಸ್ಸವಾಸವಾಃ ॥ ೯೩ ॥

ಮಂಗಲಾರ್ಥಮುಪಾಜಗ್ಮುರ್ದೇವದೇವಸ್ಯ ಮಂದಿರೇ ।
ಮಹೋತ್ಸವಶ್ಚ ತತ್ರಾಸೀತ್ಸರ್ವಲೋಕಸುಖಾವಹಃ ॥ ೯೪ ॥

ಏತಸ್ಮಿನ್ನಂತರೇ ತತ್ರ ಸೂರ್ಯಪುತ್ರಃ ಶನಿಃ ಸ್ವಯಂ ।
ಕ್ರೂರದೃಷ್ಟಿಃ ಸಮಾಯಾತಃ ಕಾಲಾತ್ಮಾ ದೇವಮಂಡಪೇ ॥ ೯೫ ॥

ತಸ್ಯ ದರ್ಶನಮಾತ್ರೇಣ ಸ ಬಾಲೋ ವಿಶಿರಾ ಹ್ಯಭೂತ್ ।
ಹಾಹಾಕಾರೋ ಮಹಾಂಶ್ಚಾಸೀತ್ಕೈಲಾಸೇ ಗುಹ್ಯಕಾಲಯೇ ॥ ೯೬ ॥

---

೯೨-೯೩-೯೪. "ಎಲೈ ದೇವೇಶನೇ ! ನೀನು ನನಗೆ ಪ್ರತ್ಯಕ್ಷನಾಗು. ನನ್ನ ಪ್ರೀತಿಗೆ ಪಾತ್ರನಾದ ಮಗನಾಗು" ಎಂದು ಸ್ತುತಿಸಿದನು. ಆದಿಪೂಜ್ಯನೂ, ಭಕ್ತರಲ್ಲಿ ಪ್ರೀತಿಯುಳ್ಳವನೂ ಆದ ಗಣೇಶನು ಈ ಮಾತನ್ನು ಕೇಳಿ ಪಾರ್ವತಿಯ ಸಮಸ್ತ ತೇಜೋಮಯವಾದ ದೇಹದಿಂದ ಜನಿಸಿದನು. ಆಗ ಇಂದ್ರನೊಡಗೂಡಿ ಸಕಲ ದೇವತೆಗಳೂ ಕೈಲಾಸಪರ್ವತದಲ್ಲಿ ನಡೆಯುವ ಮಂಗಲೋತ್ಸವಕ್ಕಾಗಿ ಪರಮೇಶ್ವರನ ಮನೆಗೆ ಬಂದರು. ಅಲ್ಲಿ ಸಕಲ ಲೋಕಗಳಿಗೂ ಈ ಸುಖಪ್ರದವಾದ ಮಂಗಲೋತ್ಸವವು ನಡೆಯಿತು.

೯೫. ಈ ಮಧ್ಯದಲ್ಲಿ ಆ ದೇವತೆಗಳ ಸಮೂಹಕ್ಕೆ ಕಾಲಸ್ವರೂಪನೂ, ಕ್ರೂರವಾದ ದೃಷ್ಟಿಯುಳ್ಳವನೂ, ಸೂರ್ಯನ ಮಗನೂ ಆದ ಶನಿಯು ತಾನಾಗಿಯೇ ಅಲ್ಲಿಗೆ ಬಂದನು.

೯೬. ಅವನು ಆ ಬಾಲನನ್ನು ನೋಡಿದೊಡನೆಯೇ ಆ ಬಾಲಕನು ಶಿರೋಹೀನನಾದನು. ಗುಹ್ಯಕರವಾಸಸ್ಥಾನವಾದ ಆ ಕೈಲಾಸದಲ್ಲಿ ದೊಡ್ಡದಾದ ಹಾಹಾಕಾರವುಂಟಾಯಿತು.

ತಚ್ಛಿರಶ್ಚಂದ್ರಲೋಕೇ ವೈ ತುಲಾಸಂಸ್ಥೇ ದಿವಾಕರೇ ।
ಸಪ್ತವಿಂಶದ್ದಿನಾನ್ಯೇವ ಪ್ರಕಾಶಯತಿ ಭೂತಲೇ ॥ ೯೭ ॥

ನಿಂದಿತೋ ದೈವತೈಸ್ತತ್ರ ಶನಿರ್ಜನಭಯಂಕರಃ ।
ಗಜಸ್ಯ ಮಸ್ತಕಂ ಛಿತ್ವಾ ದಂತತ್ಯೈಕಂ ರಾಗರೂಪಿ ಯತ್ ॥ ೯೮ ॥

ತಚ್ಛಿಶೋಃ ಕಂಧರೇ ರಕ್ತೇಽರೋಪಯತ್ಸೂರ್ಯಸಂಭವಃ ।
ಗಜಯೋನ್ಯಾ ಸ್ತುತೋ ಬ್ರಹ್ಮಾ ಕರ್ಕಟಸ್ಯ ತದಾ ಶಿರಃ ॥ ೯೯ ॥

ಸಮಾರೋಪ್ಯ ತು ತದ್ಯೋನಿಃ ಕರ್ಕಟೋ ವಿಶಿರೀಕೃತಃ ।
ಏವಂ ಗಜಾನನೋ ಜಾತೋ ಗಣೇಶಶ್ಚೇಶ್ವರಃ ಸ್ವಯಂ ॥ ೧೦೦ ॥

॥ ಸೂತ ಉವಾಚ ॥

ಇತಿ ಶ್ರುತ್ವಾ ಗಣೇಶಸ್ತು ಗುರೋರ್ವಚನಮುತ್ತಮಂ ।
ಸ್ವಮುಖಾತ್ಸ್ಕಂಧಮುತ್ಪಾದ್ಯ ಕಾಶ್ಯಾಂ ಜಾತಃ ಸ ಚೇಶ್ವರಃ ॥ ೧೦೧ ॥

---

೯೭. ಸೂರ್ಯನು ತುಲಾರಾಶಿಯಲ್ಲಿರುವಾಗ ಆ ತಲೆಯು ಚಂದ್ರಲೋಕದಲ್ಲಿ ಇಪ್ಪತ್ತೇಳು ದಿವಸಗುಳ ಭೂಲೋಕದಲ್ಲಿರುವವರಿಗೆ ಪ್ರಕಾಶವಾಗಿ ಕಾಣಿಸುತ್ತಿತ್ತು.

೯೮. ಆಗ ಸಕಲಜನರಿಗೆ ಭಯವನ್ನುಂಟುಮಾಡುವವನೂ, ಸೂರ್ಯನಮಗನೂ ಆದ ಶನಿಯನ್ನು ಎಲ್ಲಾ ದೇವತೆಗಳೂ ನಿಂದಿಸಲು ಆಗ ಅವನು ಕೆಂಪುಬಣ್ಣ ವುಳ್ಳುದೂ, ಒಂದೇದಂತವುಳ್ಳದ್ದೂ ಆದ ಆನೆಯ ತಲೆಯನ್ನು ಕತ್ತರಿಸಿ ತಂದು ಆ ಬಾಲಕನ ಕತ್ತಿನಲ್ಲಿ ಸೇರಿಸಿದನು

೯೯. ಆ ಆನೆಯು ಬ್ರಹ್ಮನನ್ನು ಸ್ತೋತ್ರಮಾಡಲು, ಬ್ರಹ್ಮನು ಒಂದು ಏಡಿಯ ತಲೆಯನ್ನು ತಂದು ಆನೆಯ ಕಂಠದಲ್ಲಿ ಇಟ್ಟನು. ಅಂದಿನಿಂದ ಏಡಿಯು ತಲೆಯಿಲ್ಲದು ದಾಯಿತು. ಈ ಪ್ರಕಾರವಾಗಿ ಸ್ವಯಂಪ್ರಭುವಾದ ಗಣೇಶನು ಆನೆಯಮುಖವುಳ್ಳವ ನಾದನು" ಎಂದು ಹೇಳಿದರು.

೧೦೧. ಸೂತಮುನಿವರ್ಯನು ಹೇಳುತ್ತಾನೆ—ಈರೀತಿಯಾಗಿ ಹೇಳಿದ ಬೃಹಸ್ಪತ್ಯಾಚಾರ್ಯರ ದಿವ್ಯವಾದಮಾತನ್ನು ಕೇಳಿ ಪ್ರಭುವಾದ ಆ ಗಣೇಶ್ವರನು ತನ್ನ ಮುಖದಿಂದ ಶರೀರಸ್ಕಂಧವನ್ನು ಸೆಳೆದು ಭೂಮಿಯಲ್ಲಿ ಜನ್ಮವೆತ್ತಲು ಉದ್ದೇಶಪಟ್ಟನು.

ದೈವಜ್ಞಸ್ಯ ದ್ವಿಜಸ್ಯೈವ ಪುತ್ರೋ ಭೂತ್ವಾ ಶುಭಾನನಃ ।
ಢುಂಢಿರಾಜಸ್ತತೋ ನಾಮ್ನಾ ಪ್ರಸಿದ್ಧೋಽಭೂನ್ಮಹೀತಲೇ ॥ ೧೦೨ ॥

ಜಾತಕಾಭರಣಂ ನಾಮ ಜ್ಯೋತಿಃಶಾಸ್ತ್ರಂ ಫಲಾತ್ಮಕಂ ।
ಕೃತ್ವಾ ಸ ವೇದರಕ್ಷಾರ್ಥೇ ಶಂಕರಾಚಾರ್ಯಮಾಗಮತ್ ॥ ೧೦೩ ॥

ಶಿಷ್ಯೋ ಭೂತ್ವಾ ಪ್ರಸನ್ನಾತ್ಮಾ ಗುರುಸೇವಾಪರೋಽಭವತ್ ।
ಇತಿ ತೇ ಕಥಿತಂ ವಿಪ್ರ ಢುಂಢಿರಾಜೋ ಯಥಾಭವತ್ ॥ ೧೦೪ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಪ್ರತಿಸರ್ಗಪರ್ವಣಿ ಚತುರ್ಥಖಂಡೇ ಕಲಿಯುಗೀಯೇತಿಹಾಸಸಮುಚ್ಚಯೇ ಭಾರತೀಶ ಗೋರಖನಾಥ ಕ್ಷೇತ್ರಶರ್ಮ ಢುಂಢಿರಾಜಸಮುತ್ಪತ್ತಿವರ್ಣನೋ ನಾಮ ದ್ವಾದಶೋಽಧ್ಯಾಯಃ.

---

೧೦೨. ಶುಭಮುಖನಾದ ಆ ಗಣೇಶನು ಕಾಶಿಯಲ್ಲಿ ಒಬ್ಬ ಜ್ಯೋತಿಷಿಕ ಬ್ರಾಹ್ಮಣನ ಮಗನಾಗಿ ಜನಿಸಿ ಢುಂಢಿರಾಜನೆಂಬ ಹೆಸರಿನಿಂದ ಲೋಕವಿಖ್ಯಾತನಾದನು.

೧೦೩. ಅವನು ಜ್ಯೋತಿಷಶಾಸ್ತ್ರದಲ್ಲಿ ಫಲಭಾಗವಾದ ಜಾತಕಾಭರಣವೆಂಬ ಗ್ರಂಥವನ್ನು ರಚಿಸಿ, ವೇದಮತವನ್ನು ರಕ್ಷಿಸುವುದಕ್ಕಾಗಿ ಶಂಕರಾಚಾರ್ಯರಲ್ಲಿ ಬಂದು ಸೇರಿದನು.

೧೦೪. ಆ ಢುಂಢಿರಾಜನು ಸಂತೋಷದಿಂದ ಶಂಕರಾಚಾರ್ಯರ ಶಿಷ್ಯನಾಗಿ ಗುರುಸೇವೆಯಲ್ಲಿ ನಿರತನಾದನು. ಎಲೈ ಬ್ರಾಹ್ಮಣನೇ ! ಢುಂಢಿರಾಜನು ಹೇಗೆ ಹುಟ್ಟಿದನೆಂಬುದನ್ನು ಈರೀತಿಯಾಗಿ ನಿನಗೆ ನಾನು ಹೇಳಿದ್ದೇನೆ ಎಂದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಪ್ರತಿಸರ್ಗಪರ್ವದ ನಾಲ್ಕನೆಯ ಖಂಡದಲ್ಲಿ ಭಾರತೀಶ, ಗೋರಖನಾಥ, ಕ್ಷೇತ್ರಶರ್ಮ, ಢುಂಢಿರಾಜ ಇವರುಗಳ ಉತ್ಪತ್ತಿ ವರ್ಣನೆಯೆಂಬ ಹನ್ನೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಪ್ರತಿಸರ್ಗಪರ್ವಣಿ ಚತುರ್ಥಖಂಡೇ

## ತ್ರಯೋದಶೋಽಧ್ಯಾಯಃ

॥ ಬೃಹಸ್ಪತಿರುವಾಚ ॥

ಷೋಡಶಾಬ್ದೇ ಚ ಸಂಪ್ರಾಪ್ತೇ ಬ್ರಹ್ಮಣೋಽವ್ಯಕ್ತಜನ್ಮನಃ ।
ಸ ಉಷಿತ್ವಾ ಚ ಕಮಲೇ ಸ್ಥಿತಃ ಸೃಷ್ಟ್ಯರ್ಥಮುದ್ಯತಃ ॥ ೧ ॥

ಏತಸ್ಮಿನ್ನಂತರೇ ವಕ್ತ್ರಾತ್ಸಮುದ್ಭೂತಾ ಚ ಶಾರದಾ ।
ದಿವ್ಯಾಂಗಂ ಸುಂದರಂ ತಸ್ಯಾಃ ದೃಷ್ಟ್ವಾ ಬ್ರಹ್ಮಾ ಸ್ಮರಾತುರಃ ॥ ೨ ॥

ಬಲಾದ್ಗೃಹೀತ್ವಾ ತಾಂ ಕನ್ಯಾಮುವಾಚ ಸ್ಮರಪೀಡಿತಃ ।
ರತಿಂ ದೇಹಿ ಮದಾಘೂರ್ಣೇ ರಕ್ಷ ಮಾಂ ಕಾಮವಿಹ್ವಲಂ ॥ ೩ ॥

---

## ಹದಿಮೂರನೆಯ ಅಧ್ಯಾಯ

೧. ಬೃಹಸ್ಪತ್ಯಾಚಾರ್ಯರು ಹೇಳುತ್ತಾರೆ—ಅವ್ಯಕ್ತಜನ್ಮನಾದ ಬ್ರಹ್ಮನಿಗೆ ದೇವಮಾನದ ಹದಿನಾರನೆಯವರ್ಷವು ಪ್ರಾರಂಭವಾಗುತ್ತಲೆ, ಆ ಬ್ರಹ್ಮನು ಕಮಲದಲ್ಲಿ ಇದ್ದುಕೊಂಡು ಸೃಷ್ಟಿಮಾಡಲು ಇಚ್ಛಿಸಿದನು.

೨. ಆ ಸಂದರ್ಭದಲ್ಲಿ ಬ್ರಹ್ಮನಮುಖದಿಂದ ಶಾರದಾದೇವಿಯು ಜನಿಸಿದಳು. ಅವಳ ದಿವ್ಯವಾದ ಶರೀರವನ್ನೂ, ಸುಂದರವಾದ ರೂಪವನ್ನೂ, ನೋಡಿ ಬ್ರಹ್ಮನಿಗೆ ಅವಳಲ್ಲಿ ಅಭಿಲಾಷೆಹುಟ್ಟಿ ಕಾಮಾತುರನಾದನು.

೩. ಹೀಗೆ ಕಾಮಪೀಡಿತನಾದ ಅವನು ಆ ಕನ್ಯೆಯನ್ನು ಬಲಾತ್ಕಾರದಿಂದ ಹಿಡಿದುಕೊಂಡು “ ಎಲೌ ಮದೋನ್ಮತ್ತಳೇ ! ನನಗೆ ರತಿಸುಖವನ್ನು ಕೊಡು. ಕಾಮಪೀಡಿತನಾದ ನನ್ನನ್ನು ರಕ್ಷಿಸು ” ಎಂದು ಹೇಳಿದನು.

ಇತಿ ಶ್ರುತ್ವಾ ತು ಸಾ ಮಾತಾ ರುಷಾ ಪ್ರಾಹ ಪಿತಾಮಹಂ ।
ಪಂಚ ವಕ್ತ್ರೋಽಯಮಶುಭೋ ನ ಯೋಗ್ಯಸ್ತವ ಕಂಧರೇ ॥ ೪ ॥

ಚತುರ್ವಕ್ತ್ರೋ ವೇದಮಯೋ ಯೋಗ್ಯಃ ಸರ್ವೇಶ್ವರೇ ತ್ವಯಿ ।
ಇತ್ಯುಕ್ತ್ವಾಂತರ್ದಧೇ ಮಾತಾ ಬ್ರಹ್ಮಾ ಕ್ರೋಧಾನ್ವಿತೋಽಭವತ್ ॥ ೫ ॥

ತಸ್ಯ ಕೋಪಾಗ್ನಿನಾ ತೋಯಂ ಶುಷ್ಕಭೂತಮಭೂದ್ಭುವಿ ।
ಶಾಂತಿಭೂತೇ ಚ ತತ್ಕೋಪೇ ರುದ್ರೋ ಜಾತೋ ಭಯಂಕರಃ ॥ ೬ ॥

ಭೈರವೋ ನಾಮ ವಿಖ್ಯಾತಃ ಕಾಲಾತ್ಮಾ ಸಪ್ತವಾಹನಃ ।
ಸ್ವನಖೈಶ್ಚ ನೃಸಿಂಹಾಭೈಃ ಕ್ಷಿಪ್ತ್ವಾ ತತ್ಪಂಚಮಂ ಶಿರಃ ॥ ೭ ॥

ಜಗರ್ಜ ಬಲವಾನ್ರುದ್ರಃ ಶಂಕರೋ ಲೋಕಶಂಕರಃ ।
ಭಯಭೀತಸ್ತದಾ ಬ್ರಹ್ಮಾ ಭೈರವಂ ಶರಣಂ ಯಯೌ ॥ ೮ ॥

---

೪. ಈ ಮಾತನ್ನು ಕೇಳಿ ಆ ದೇವಿಯು ಕೋಪದಿಂದ ಬ್ರಹ್ಮನನ್ನು ಕುರಿತು ಮಾತನಾಡತೊಡಗಿ " ನಿನ್ನ ಕಂಠದಲ್ಲಿ ಈ ಐದುಮುಖಗಳಿರುವುದು ಮಂಗಳಕರವಲ್ಲ. ಆದ್ದರಿಂದ ನಿನಗೆ ಅದು ಯೋಗ್ಯವಲ್ಲ."

೫. " ಸರ್ವೇಶ್ವರನಾದ ನಿನ್ನಲ್ಲಿ ವೇದಮಯವಾದ ನಾಲ್ಕುಮುಖಗಳಿರುವುದೇ ಯುಕ್ತ " ಎಂದು ಹೇಳಿ ಶಾರದಾಮಾತೆಯು ಅಂತರ್ಧಾನಹೊಂದಿದಳು. ಆಗ ಬ್ರಹ್ಮನು ತುಂಬಾ ಕೋಪಗೊಂಡನು.

೬. ಅವನ ಕೋಪಾಗ್ನಿಜ್ವಾಲೆಯಿಂದ ಭೂಲೋಕದಲ್ಲಿ ನೀರೆಲ್ಲಾ ಬತ್ತಿ ಹೋಯಿತು. ಅವನ ಕೋಪವು ಶಮನವಾಗುತ್ತಲೆ ಭಯಂಕರನಾದ ಭೈರವ ರುದ್ರನು ಹುಟ್ಟಿದನು.

೭-೮. ಕಾಲಸ್ವರೂಪನೂ, ಸೂರ್ಯಸದೃಶವಾದ ತೇಜಸ್ಸುಳ್ಳವನೂ, ಲೋಕಗಳಿಗೆ ಸುಖವನ್ನುಂಟುಮಾಡುವವನೂ, ಭೈರವನೆಂದು ಪ್ರಸಿದ್ಧನೂ ಆದ ಆ ರುದ್ರನು ನೃಸಿಂಹಸ್ವಾಮಿಯ ಉಗುರಿನಂತಿರುವ ತನ್ನ ಉಗುರುಗಳಿಂದ ಆ ಬ್ರಹ್ಮನ ಐದನೆಯ ತಲೆಯನ್ನು ಚಿಗುಟಿ ಕಿತ್ತುಹಾಕಿ, ಅತಿಬಲವಾಗಿ ಗರ್ಜನೆಮಾಡಿದನು ಆಗ ಬ್ರಹ್ಮನು ಹೆದರಿ ಆ ಭೈರವನನ್ನೇ ಮರೆಹೊಕ್ಕನು.

ನಾಥ ನಃ ಪಾಪಭೂತಾನಾಂ ಧಿಯೋ ಯೋऽಸೌ ಪ್ರಚೋದಯಾತ್ ।
ಇತಿ ಶ್ರುತ್ವಾ ಸ ಭಗವಾನ್ ಭೈರವೋ ಲೋಕವಿಶ್ರುತಃ ॥ ೯ ॥

ಬ್ರಹ್ಮಭೂತಮಹಂ ಸ್ವಾಮಿನ್ ವರೇಣ್ಯಂ ತ್ವಾಮುಪಾಗತಃ ।
ಸವಿತುಸ್ತದ್ವರೇಣ್ಯಂ ಯದ್ಭರ್ಗೋ ದೇವಸ್ಯ ಧೀಮಹಿ ॥ ೧೦ ॥

ಗಾಢಮುಚ್ಚೈ ರುರೋದಾಶು ಖಾತ್ಪೇತುಶ್ಚಾಶ್ರುಬಿಂದವಃ ।
ತತೋ ವೃಕ್ಷಾಃ ಸಮುದ್ಭೂತಾಃ ರುದ್ರಾಕ್ಷಾಣಾಂ ಪೃಥಕ್‌ಪೃಥಕ್ ॥ ೧೧ ॥

ಶಿವೋ ಬ್ರಹ್ಮವಧಾದ್ಭೀತಸ್ತತ್ಕಪಾಲಂ ಗೃಹೀತವಾನ್ ।
ಕಪಾಲೀ ನಾಮ ವಿಖ್ಯಾತಂ ಭೈರವಸ್ಯ ತದಾ ಹ್ಯಭೂತ್ ॥ ೧೨ ॥

---

೯. ಹಾಗೆ ಮರೆಹೊಕ್ಕು ಅವನನ್ನು ಸ್ತುತಿಸತೊಡಗಿ "ಎಲೈ ಸ್ವಾಮಿಯೇ! ಪಾಪಿಗಳಾದ ನಮ್ಮಬುದ್ಧಿಗಳನ್ನು ಸತ್ಕಾರ್ಯಗಳಲ್ಲಿ ಪ್ರೇರೇಪಿಸತಕ್ಕವನು, ಲೋಕ ಪ್ರಸಿದ್ಧನೂ, ಪೂಜ್ಯನೂ ಆದ ಭೈರವೇಶ್ವರನೇ ಎಂದು ಉಕ್ತವಾಗಿದೆ."

೧೦. "ಎಲೈ ಸ್ವಾಮಿಯೇ! ಸ್ವಯಂಪ್ರಕಾಶನಾಗಿ ಸವಿತೃಂತರ್ಗತನಾದ ಶ್ರೀ ಪರಮೇಶ್ವರನ ಉತ್ಕೃಷ್ಟವಾದ ಯಾವತೇಜಸ್ಸಿದೆಯೋ ಅದನ್ನು ಎಲ್ಲರೂ ಧ್ಯಾನಿಸು ತ್ತೇವೆ. ಓ ಸ್ವಾಮಿಯೇ! ಬ್ರಹ್ಮಭೂತನೂ ಪರಮಪೂಜ್ಯನೂ ಆಗಿರುವೆಯೆಂದು ನಿನ್ನನ್ನು ಶರಣುಹೊಂದಿದ್ದೇವೆ" ಎಂದು ಸ್ತುತಿಸಿದನು. (ಇಲ್ಲಿ ಪರಮಾತ್ಮನಿಗೂ ಅವನಪ್ರಕಾಶಕ್ಕೂ ಭೇದವನ್ನು ಕಲ್ಪನೆಮಾಡಿಹೇಳಿದೆ. ವಸ್ತುತಃ ಪರಮಾತ್ಮನೂ ಅವನ ಪ್ರಕಾಶವೂ ಬೇರೆಬೇರೆಯಲ್ಲ.)

೧೧. ಆಗ ಶಿವನು ಬ್ರಹ್ಮನವಧೆಗಾಗಿ ಚಿಂತಿಸಿ ಬಲವಾಗಿಯೂ ಗಟ್ಟಿಯಾಗಿಯೂ ಅತ್ತನು. ಆಗ ಆಕಾಶದಿಂದ ಅವನ ಕಣ್ಣೀರು ಹನಿಗಳಾಗಿ ಬಿದ್ದುವು. ಅದರಿಂದ ರುದ್ರಾಕ್ಷಿಯಮರಗಳು ಬೇರೆಬೇರೆಯಾಗಿ ಬೆಳೆದವು.

೧೨. ಭೈರವನು ಚಿಗುಟಿ ಕಿತ್ತ ಬ್ರಹ್ಮಕಪಾಲವು ಅವನಕೈಗೇ ಅಂಟಿಕೊಂಡಿತು. ಆ ಕಾರಣದಿಂದ ಭೈರವನಿಗೆ ಕಪಾಲಿಯೆಂಬ ಹೆಸರೂ ಉಂಟಾಯಿತು.

ಸರ್ವಲೋಕೇಷು ಪುಣ್ಯಾನಿ ಯಾನಿ ಚಾಯತನಾನಿ ಚ ।
ತಾನಿ ತಾನ್ಯೇವ ಗತ್ವಾಶು ಶುದ್ಧೋ ನಾಭೂಚ್ಛಿವಂಕರಃ ॥ ೧೩ ॥

ಏಕದಾ ತೇಷು ವೃಕ್ಷೇಷು ಸಂಸ್ಥಿತೋ ಭಗವಾನ್ ಹರಃ ।
ತದಾ ಬ್ರಹ್ಮವಧೇ ದೋಷಸ್ತ್ಯಕ್ತ್ವಾ ದೂರಮುಪಾಗತಃ ॥ ೧೪ ॥

ತತಃ ಪ್ರಭೃತಿ ವೈ ಶಂಭುರ್ಧೃತ್ವಾ ರುದ್ರಾಕ್ಷಮುತ್ತಮಂ ।
ಪುರೀಂ ಕಾಶೀಂ ಸಮಾಯಾತಃ ಕಪಾಲಸ್ತೇನ ಮೋಚಿತಃ ॥ ೧೫ ॥

ಕಪಾಲಮೋಚನಂ ನಾಮ ತೀರ್ಥಂ ಜಾತಮಘಾಪಹಂ ।
ಏತಸ್ಮಿನ್ನಂತರೇ ಬ್ರಹ್ಮಾ ಸರ್ವದೇವಸಮನ್ವಿತಃ ॥ ೧೬ ॥

---

೧೩. ಬಳಿಕ ಈಶ್ವರನು ಶೀಘ್ರವಾಗಿ ಹೊರಟು ಸಕಲಲೋಕಗಳಲ್ಲಿಯೂ ಯಾವಯಾವ ಪವಿತ್ರಕ್ಷೇತ್ರಗಳಿವೆಯೋ ಅವುಗಳಿಗೆಲ್ಲಾ ಯಾತ್ರೆಹೋದರೂ ಬ್ರಹ್ಮಹತ್ಯಾದೋಷದಿಂದ ಶುದ್ಧನಾಗಲಿಲ್ಲ.

೧೪. ಪೂಜ್ಯನಾದ ರುದ್ರನು ಒಂದುಸಾರಿ ಆ ರುದ್ರಾಕ್ಷಿಯಮರದಡಿಯಲ್ಲಿ ಕುಳಿತುಕೊಂಡನು. ಆಗ ಬ್ರಹ್ಮಹತ್ಯಾದೋಷವು ಇವನನ್ನು ಬಿಟ್ಟು ದೂರ ಹೋಯಿತು.

೧೫. ಆದಿನ ಮೊದಲ್ಗೊಂಡು ರುದ್ರನು ಉತ್ತಮವಾದ ಆ ರುದ್ರಾಕ್ಷಿಯನ್ನು ಧಾರಣೆಮಾಡತೊಡಗಿ ಕಾಶೀಪಟ್ಟಣಕ್ಕೆ ಬಂದನು. ಹಾಗೆ ರುದ್ರಾಕ್ಷಧಾರಣೆಮಾಡಿಕೊಂಡು ಕಾಶೀಪಟ್ಟಣ ಪ್ರವೇಶಮಾಡಿದ್ದರಿಂದ ಬ್ರಹ್ಮಕಪಾಲವು ವಿಮೋಚನೆಯಾಯಿತು.

೧೬-೧೭. ಆ ಸ್ಥಳದಲ್ಲಿ ಪಾಪಗಳನ್ನು ಹೋಗಲಾಡಿಸುವ ಕಪಾಲಮೋಚನವೆಂಬ ತೀರ್ಥವುಂಟಾಯಿತು. ಇಷ್ಟರೊಳಗೆ ಬ್ರಹ್ಮನು ಸಕಲದೇವತೆಗಳಿಂದೊಡಗೂಡಿ ಅಲ್ಲಿಗೆ ಬಂದು ಮಹಾದೇವನನ್ನು ಸ್ತೋತ್ರಗಳಿಂದ ಸ್ತುತಿಮಾಡಿದ್ದಲ್ಲದೆ

ಸಮಾಗತ್ಯ ಮಹಾದೇವಂ ತುಷ್ಟಾವ ಸ್ತುತಿಜೈಸ್ತ್ವನ್ಯೈಃ ।
ಮಕರಸ್ಥೇ ದಿವಾನಾಥೇ ಶಶಿನಶ್ಚೇಶ್ವರಂ ಶುಭಂ ॥ ೧೭ ॥

ಕಪಾಲಿನಂ ಮಹಾರುದ್ರಂ ಚಕಾರ ಭಗವಾನ್ವಿಧಿಃ ॥

॥ ಸೂತ ಉವಾಚ ॥
ಇತಿ ಶ್ರುತ್ವಾ ಗುರೋರ್ವಾಕ್ಯಂ ಕಪಾಲೀ ಭೈರವಃ ಶಿವಃ ।
ಸ್ವಮುಖಾತ್ಸ್ವಾಂಶಮುತ್ಪಾದ್ಯ ಕಾಶ್ಯಾಂ ಜಾತೋ ಹ್ಯಯೋನಿಜಃ ॥ ೧೮ ॥

ಕಪಾಲಮೋಚನಾತ್ಕುಂಡಾತ್ಸಮಾಗಮ್ಯ ಮಹೀತಲೇ ।
ಯತಿರೂಪೋ ವೇದನಿಧಿರ್ಭೈರವೋ ನಾಮ ವಿಶ್ರುತಃ ॥
ಅಘೋರಂ ಕಠಿನಂ ಮಾರ್ಗಂ ಸ್ವಶಿಷ್ಯಾನ್ ಸಮಚೋದಯತ್ ॥ ೧೯ ॥

ಶಂಕರಾಚಾರ್ಯಮಾಗಮ್ಯ ಶಿಷ್ಯೋ ಭೂತ್ವಾ ಸ ಭೈರವಃ ।
ಡಾಮರಂ ನಾಮ ವೈ ತಂತ್ರಂ ಮಂತ್ರಭೂತಂ ಚಕಾರ ಹ ॥
ಕೀಲಿತಾ ಯೇ ತು ವೈ ಮಂತ್ರಾಸ್ತೇನ ಚೋತ್ಕೀಲಿತೀಕೃತಾಃ ॥ ೨೦ ॥

---

ಸೂರ್ಯನು ಮಕರರಾಶಿಯಲ್ಲಿರುವಾಗ ಶಂಭುವೂ ಕಪಾಲಿಯೂ ಆದ ಮಹಾರುದ್ರನನ್ನು ಚಂದ್ರಮಂಡಲಕ್ಕೆ ಅಧಿಪತಿಯನ್ನಾಗಿಮಾಡಿದನು.

೧೮. ಸೂತಮುನಿವರ್ಯನು ಹೇಳುತ್ತಾನೆ—ಈರೀತಿ ಹೇಳಿದ ಬೃಹಸ್ಪತ್ಯಾಚಾರ್ಯರ ಮಾತನ್ನು ಕೇಳಿ ಮಂಗಳಸ್ವರೂಪನೂ ಕಪಾಲಿಯೂ ಆದ ಭೈರವನು ತನ್ನ ಮುಖದಿಂದ ತನ್ನ ತೇಜಸ್ಸಿನ ಅಂಶವನ್ನುತ್ಪತ್ತಿಮಾಡಿ ಕಾಶಿಯಲ್ಲಿ ಅಯೋನಿಜನಾಗಿ ಉದ್ಭವಿಸಲು ಸಂಕಲ್ಪಿಸಿದನು.

೧೯. ಬಳಿಕ ಕಪಾಲಮೋಚನವೆಂಬ ತೀರ್ಥಕುಂಡದಲ್ಲಿ ಯತಿರೂಪದಿಂದ ಉದ್ಭವನಾಗಿ ಮೇಲಕ್ಕೆಬಂದು ವೇದಾಧ್ಯಯನಸಂಪನ್ನನೂ ಭೈರವನೆಂಬ ಹೆಸರಿನಿಂದ ಪ್ರಸಿದ್ಧನೂ ಆಗಿ ತನ್ನ ಶಿಷ್ಯರಿಗೆ ಕಠಿಣವಾದ ಅಘೋರಪಥಯೆಂಬ ಮಾರ್ಗವನ್ನುಪದೇಶಿಸಿದನು.

೨೦. ಆ ಭೈರವನು ಶಂಕರಾಚಾರ್ಯರ ಸಮೀಪಕ್ಕೆ ಬಂದು ಅವರ ಶಿಷ್ಯನಾಗಿ ಡಾಮರಎಂಬ ತಂತ್ರವನ್ನು ಮಂತ್ರವನ್ನಾಗಿಮಾರ್ಪಡಿಸಿದನು. ಕೀಲಿತಾ ಎಂಬ ಮಂತ್ರಗಳಿಂದ ಉತ್ಕೀಲಿತಾ ಎಂಬುದನ್ನೂ ಏರ್ಪಡಿಸಿದನು.

॥ ಬೃಹಸ್ಪತಿರುವಾಚ ॥
ಮಂಡೋದರೀ ಮಯಸುತಾ ತ್ರಿಪುರಾಧಿಪತೇಃ ಸ್ವಸಾ ।
ತ್ರಿಪುರೇ ತು ತದಾ ನಷ್ಟೇ ಮಹಾವಿಷ್ಣುಂ ಸನಾತನಂ ॥
ಭಕ್ತ್ಯಾ ತುಷ್ಟಾವ ಸಾ ದೇವೀ ಪ್ರತ್ಯಹಂ ಗುಪ್ತಭಾವಿನೀ ॥ ೨೧ ॥

ಭಕ್ತಿಭಾವಾತ್ತತೋ ಯೋಗಂ ಹರೌ ಪ್ರಾಪ್ಯ ಮಹೋತ್ತಮಂ ।
ವಿಂಧ್ಯಾದ್ರಿಕಂದರೇ ಘೋರೇ ತತ್ರೈವಾಂತರಧೀಯತ ॥ ೨೨ ॥

ಚತುರ್ಯುಗಂ ಚ ದ್ವಿಶತಂ ತಸ್ಯಾ ಜಾತಂ ಸಮಾಧಿತಃ ।
ವೈವಸ್ವತೇಽಂತರೇ ಪ್ರಾಪ್ತೇ ದ್ವಾದಶೇ ಚೈವ ಕೃದ್ಯುಗೇ ॥ ೨೩ ॥

ಪುಲಸ್ತ್ಯೋ ಬ್ರಹ್ಮಣಃ ಪುತ್ರೋ ವಿಶ್ರವಾ ರೋಷತೋಽಭವತ್ ।
ಶತಾಬ್ದಂ ಚ ತಪಸ್ತಪ್ತ್ವಾ ವಿಶ್ರವಾ ನಾಮ ಯೋ ಮುನಿಃ ॥ ೨೪ ॥

---

೨೧. ಬೃಹಸ್ಪತ್ಯಾಚಾರ್ಯರು ಮುಂದಿನ ವಿಚಾರವನ್ನು ಹೇಳುತ್ತಾರೆ— ರಾಕ್ಷಸರ ಶಿಲ್ಪಿಯಾದ ಮಯನಿಗೆ ಮಂಡೋದರಿಯೆಂಬ ಮಗಳು ಇದ್ದಳು. ಇವಳು ತ್ರಿಪುರೇಶ್ವರನ ತಂಗಿಯಾಗಬೇಕು. ತ್ರಿಪುರನು ನಾಶವಾಗುತ್ತಲೆ ಆ ಮಂಡೋದರೀ ದೇವಿಯು ಪುರಾತನನಾದ ಮಹಾವಿಷ್ಣುವನ್ನು ರಹಸ್ಯದಲ್ಲಿ ಪ್ರತಿದಿನವೂ ಅತ್ಯಂತ ಭಕ್ತಿಯಿಂದ ಸ್ತೋತ್ರಮಾಡುತ್ತಿದ್ದಳು.

೨೨. ಹೀಗೆ ವಿಷ್ಣುವಿನಲ್ಲಿ ಅತ್ಯಂತ ಭಕ್ತಿಭಾವದಿಂದಕೂಡಿ ಶ್ರೇಷ್ಠವಾದ ಯೋಗಾಭ್ಯಾಸವನ್ನುಮಾಡಿ ವಿಂಧ್ಯಪರ್ವತದ ಭಯಂಕರವಾದ ಗುಹೆಯಲ್ಲಿ ಅಂತರ್ಧಾನ ಹೊಂದಿದಳು.

೨೩. ಹೀಗೆ ಅವಳು ಸಮಾಧಿಯೋಗದಲ್ಲಿರಲು ನಾಲ್ಕುಯುಗಗಳೂ ಇನ್ನೂರಾವೃತ್ತಿ ಕಳೆದುವು. ಹನ್ನೆರಡನೆಯ ವೈವಸ್ವತಮನ್ವಂತರದ ಕೃತಯುಗವು ಆರಂಭವಾಯಿತು.

೨೪-೨೬. ಆಗ ಬ್ರಹ್ಮನ ಮಗನಾದ ಪುಲಸ್ತ್ಯನೆಂಬವನು ಕೋಪಿಷ್ಠನಾದ ವಿಶ್ರವಸ್ಸೆಂದು ಪ್ರಸಿದ್ಧನಾದನು. ಆ ವಿಶ್ರವಸ್ಸೆಂಬವನು ಮುನಿಯಾಗಿ ನೂರುವರ್ಷಗಳು ತಪಸ್ಸನ್ನುಮಾಡಿ ಸುಮಾಲಿಎಂಬ ರಾಕ್ಷಸನ ಮಗಳಾದ ಕೈಕಸಿಎಂಬವಳನ್ನು

ಸುಮಾಲಿನೋಥ ದೈತ್ಯಸ್ಯ ಸುತಾಂ ವೈ ಕೈಕಸೀಂ ಮುದಾ ।
ಸಮುದ್ವಾಹ್ಯ ವಿಧಾನೇನ ಪುಲಸ್ತ್ಯಸ್ಸ ಚ ವಿಶ್ರವಾಃ ॥ ೨೫ ॥

ಕದಲೀವಿಪಿನೇ ರಮ್ಯೇ ಗಂಧಮಾದನಪರ್ವತೇ ।
ಸ ರೇಮೇ ಚ ತಯಾ ಸಾರ್ಧಂ ವಿಶ್ರವಾ ಭಗವಾನೃಷಿಃ ॥ ೨೬ ॥

ರಾವಣಃ ಕುಂಭಕರ್ಣಶ್ಚ ತಯೋರ್ಜಾತೌ ಹಿ ರಾಕ್ಷಸೌ ।
ರಾವಣೋ ಮಾತೃಭಕ್ತಶ್ಚ ಪಿತೃಭಕ್ತಸ್ತತೋಽನುಜಃ ॥ ೨೭ ॥

ಸಹಸ್ರಾಬ್ದಂ ತಪೋ ಘೋರಂ ಚಕ್ರತುಸ್ತೌ ವರಾರ್ಥಿನೌ ।
ತದಾ ಪ್ರಸನ್ನೋ ಭಗವಾನ್ಪರಮೇಷ್ಠೀ ಪಿತಾಮಹಃ ॥ ೨೮ ॥

ದದೌ ತಾಭ್ಯಾಂ ವರಂ ರಮ್ಯಮಜೇಯಂ ದೇವದಾನವೈಃ ।
ತೌ ತು ಲಬ್ಧವರೌ ಕ್ರುದ್ಧೌ ಪುಷ್ಪಕಂ ಯಾನಮುತ್ತಮಂ ॥
ಗೃಹೀತ್ವಾ ಚ ಬಲಾದ್ವೀರೌ ಯುಯುಧಾತೇ ಪರಸ್ಪರಂ ॥ ೨೯ ॥

---

ಸಂತೋಷದಿಂದ ವಿಧಿಪೂರ್ವಕವಾಗಿ ಲಗ್ನವಾದನು. ಹೀಗೆ ಪೂಜ್ಯನಾದ ಆ ವಿಶ್ರವಸ್ಸು, ಕೈಕಸಿಯೊಡನೆ ಮನೋಹರವಾದ ಕದಲಿಕಾರಣ್ಯದಲ್ಲಿಯೂ, ಗಂಧಮಾಧನ ಪರ್ವತದಲ್ಲಿಯೂ ಕ್ರೀಡಿಸಿದನು.

೨೭. ಆ ವಿಶ್ರವಸ್ಸನಿಂದ ಕೈಕಸಿಯಲ್ಲಿ ರಾವಣನೂ ಕುಂಭಕರ್ಣನೂ ಹುಟ್ಟಿದರು. ಅವರಲ್ಲಿ ರಾವಣನು ಮಾತೃಭಕ್ತಿಯುಳ್ಳವನೂ ಅವನ ತಮ್ಮನು ಪಿತೃಭಕ್ತಿಯುಳ್ಳವನೂ ಆಗಿದ್ದರು.

೨೮. ಅವರಿಬ್ಬರೂ ಬ್ರಹ್ಮನಿಂದ ವರವನ್ನು ಪಡೆಯಬೇಕೆಂದು ಸಾವಿರವರ್ಷಗಳವರೆಗೆ ಭಯಂಕರವಾದ ತಪಸ್ಸನ್ನು ಮಾಡಿದರು. ಆಗ ಪಿತಾಮಹನೂ, ಷಡ್ಗುಣೈಶ್ವರ್ಯಸಂಪನ್ನನೂ ಆದ ಬ್ರಹ್ಮನು ಅವರಿಗೆ ಪ್ರತ್ಯಕ್ಷನಾದನು.

೨೯. ಪ್ರಸನ್ನನಾದ ಬ್ರಹ್ಮನು "ದೇವತೆಗಳಿಂದಲೂ ದಾನವರಿಂದಲೂ ಅಜೇಯರಾಗಿರಿ" ಎಂಬ ಉತ್ತಮವಾದ ವರವನ್ನು ಕೊಟ್ಟನು. ಆ ರಾವಣ ಕುಂಭಕರ್ಣರು ಹೀಗೆ ವರವನ್ನು ಪಡೆದನಂತರ ಮದವೇರಿದವರಾಗಿ ಪುಷ್ಪಕವೆಂಬ ದಿವ್ಯ ವಿಮಾನವನ್ನು ಬಲಾತ್ಕಾರದಿಂದ ತೆಗೆದುಕೊಂಡು ವಿಜಯಯಾತ್ರೆಯನ್ನು ಮಾಡುತ್ತಿದ್ದರು.

ತಾಭ್ಯಾಂ ವಿನಿರ್ಜಿತಾ ದೇವಾಸ್ತ್ಯಕ್ತ್ವಾ ಸ್ವರ್ಗಂ ಸುಖಪ್ರದಂ ।
ಪಾರ್ಥಿವೈಃ ಪೂಜಯಾಮಾಸುಃ ಶಿವಂ ಕೈಲಾಸಸಂಸ್ಥಿತಾಃ ॥ ೩೦ ॥

ಏಕಾದಶಾಬ್ದಮಾರಾಧ್ಯ ತೇ ದೇವಾ ಗಿರಿಜಾಪತಿಂ ।
ಶಂಕರಾಚ್ಚ ವರಂ ಪ್ರಾಪ್ಯ ನಿರ್ಭಯಾಶ್ಚ ತದಾಭವನ್ ॥ ೩೧ ॥

ಶಿವೋಽಪಿ ಚ ಸ್ವಪೂರ್ವಾರ್ಧಾಜ್ಜಾತೋ ವೈ ಮಾನಸೋತ್ತರೇ ।
ಗಿರೌ ಯತ್ರ ಸ್ಥಿತಾ ದೇವೀ ಗೌತಮಸ್ಯ ತನೂದ್ಭವಾ ॥
ಅಂಜನಾ ನಾಮ ವಿಖ್ಯಾತಾ ಕೀಶಕೇಸರಿಭೋಗಿನೀ ॥ ೩೨ ॥

ರೌದ್ರಂ ತೇಜಸ್ತದಾ ಘೋರಂ ಮುಖೇ ಕೇಸರಿಣೋ ಯಯೌ ।
ಸ್ಮರಾತುರಃ ಕಪೀಂದ್ರಸ್ತು ಬುಭುಜೇ ತಾಂ ಶುಭಾನನಾಂ ॥ ೩೩ ॥

---

೩೦. ಇವರಿಂದ ಸೋತುಹೋದ ದೇವತೆಗಳು ಸುಖಕರವಾದ ಸ್ವರ್ಗವನ್ನು ಬಿಟ್ಟು ಕೈಲಾಸಕ್ಕೆ ಹೋಗಿ ಈಶ್ವರನನ್ನು ಪಾರ್ಥಿವಪೂಜಾವಿಧಾನದಿಂದ ಪೂಜಿಸಿದರು.

೩೧. ಆ ದೇವತೆಗಳು ಗಿರಿಜಾರಮಣನನ್ನು ಹನ್ನೊಂದುವರ್ಷಗಳಕಾಲ ಪೂಜೆಮಾಡಿ, ಈಶ್ವರನಿಂದ ವರವನ್ನು ಪಡೆದು ಅನಂತರ ಭಯರಹಿತರಾದರು.

೩೨. ಈಶ್ವರನೂಕೂಡ ತನ್ನ ದೇಹದ ಪೂರ್ವಾರ್ಧಾಂಶದಿಂದ ಮಾನಸ ಸರೋವರದ ಉತ್ತರಭಾಗದ ಪರ್ವತದಲ್ಲಿ, ಗೌತಮರ ಪುತ್ರಿಯೂ ಕೇಸರಿಎಂಬ ಕಪಿವೀರನ ಪತ್ನಿಯೂ ಅಂಜನಾಎಂಬ ಹೆಸರಿನಿಂದ ಪ್ರಖ್ಯಾತೆಯೂ ದದ ಪುಣ್ಯಾತ್ಮಳಲ್ಲಿ ಹುಟ್ಟಲು ನಿಶ್ಚಯಿಸಿದನು.

೩೩. ಆಗ ಭಯಂಕರವಾದ ಪೂರ್ವಾರ್ಧಭಾಗದ ರುದ್ರತೇಜಸ್ಸು ಕೇಸರಿ ಕಪಿಯ ಮುಖದಲ್ಲಿ ಪ್ರವೇಶಿಸಿತು. ಆ ಕಪಿವೀರನು ಆಗಲೇ ಕಾಮಪೀಡಿತನಾಗಿ ಆ ಮಂಗಳಮುಖಿಯನ್ನು ಉಪಭೋಗಿಸಿದನು.

ಏತಸ್ಮಿನ್ನಂತರೇ ವಾಯುಃ ಕಪೀಂದ್ರಸ್ಯ ತನೌ ಗತಃ ।
ವಾಂಛಿತಾಮಂಜನಾಂ ಶುಭ್ರಾಂ ರಮಯಾಮಾಸ ವೈ ಬಲಾತ್ ॥ ૩೪ ॥

ದ್ವಾದಶಾಬ್ದಮತೋ ಜಾತಂ ದಂಪತ್ಯೋರ್ಮೈಥುನಸ್ಥಯೋಃ ।
ತದನು ಭ್ರೂಣಮಾಸಾದ್ಯ ವರ್ಷಮಾತ್ರಂ ಹಿ ಸಾದಧತ್ ॥ ೩೫ ॥

ಪುತ್ರೋ ಜಾತಸ್ಸ ರಾಗಾತ್ಮಾ ಸ ರುದ್ರೋ ವಾನರಾನನಃ ।
ಕುರೂಪಾಚ್ಚ ತತೋ ಮಾತ್ರಾ ಪ್ರಕ್ಷಿಪ್ತೋಽಭೂದ್ಗಿರೇರಧಃ ॥ ೩೬ ॥

ಬಲಾದಾಗತ್ಯ ಬಲವಾನ್ ಸೂರ್ಯಂ ದೃಷ್ಟ್ವಾ ಹ್ಯುಪಸ್ಥಿತಂ ।
ವಿಲಿಖ್ಯ ಭಗವಾನಿಂದ್ರೋ ದೇವಸ್ತತ್ರ ಸಮಾಗತಃ ॥ ೩೭ ॥

---

೩೪. ಈ ಮಧ್ಯದಲ್ಲಿ ವಾಯುವು ಕಪೀಂದ್ರನ ಶರೀರದಲ್ಲಿ ಸೇರಿಕೊಂಡು ತನಗೆ ಇಷ್ಟಳೂ ಶುದ್ಧಳೂ ಆದ ಅಂಜನಾದೇವಿಯನ್ನು ಪೂರ್ಣಬಲದಿಂದ ಉಪಭೋಗಿಸಿದನು.

೩೫. ಹೀಗೆ ಆ ದಂಪತಿಗಳು ಹನ್ನೆರಡುವರ್ಷಗಳು ಮೈಥುನಕರ್ಮದಲ್ಲಿ ನಿರತರಾಗಿದ್ದರು. ಅನಂತರ ಅವಳು ಗರ್ಭಿಣಿಯಾಗಿ ಒಂದುವರ್ಷ ಗರ್ಭವನ್ನು ಧರಿಸಿದ್ದಳು.

೩೬. ಬಳಿಕ ಶಂಕರಾಂಶದಿಂದ ಯುಕ್ತನಾದ ಕೆಂಪುಬಣ್ಣದ ಒಬ್ಬ ಪ್ರಿಯ ಪುತ್ರನು ಕಪಿಮುಖವುಳ್ಳವನಾಗಿ ಹುಟ್ಟಿದನು. ಅನಂತರ ತಾಯಿಯು ತನ್ನ ಮಗುವು ಕುರೂಪಿಯಾಗಿದ್ದುದನ್ನು ನೋಡಿ ತಿರಸ್ಕಾರದಿಂದ ಪರ್ವತದ ಕೆಳಭಾಗಕ್ಕೆ ಬಿಸಾಡಿದಳು.

೩೭. ರುದ್ರಾಂಶಸಂಭೂತನೂ, ಬಲಿಷ್ಠನೂ, ದೇವನೂ ಆದ ಆ ಕಪಿಯು ಪ್ರಯತ್ನಪಟ್ಟು ಮೇಲಕ್ಕೆ ಬಂದು, ಸಮೀಪದಲ್ಲಿ ಸೂರ್ಯನಿರುವುದನ್ನು ನೋಡಿ ಅವನನ್ನು ಹಿಡಿದುಕೊಳ್ಳಲು ಹೋದನು. ಆಗ ಇಂದ್ರನು ಅಲ್ಲಿಗೆ ಬಂದನು.

ವಜ್ರಸಂತಾಡಿತೋ ವಾಪಿ ನ ತತ್ಯಾಜ ತದಾ ರವಿಂ ।
ಭಯಭೂತಸ್ತದಾ ಪ್ರಾಂಶುಸ್ಸೂರ್ಯಂ ತ್ರಾಹೀತಿ ಜಲ್ಪಿತಃ ॥ ೩೮ ॥

ಶ್ರುತ್ವಾ ತದಾರ್ತವಚನಂ ರಾವಣೋ ಲೋಕರಾವಣಃ ।
ಪುಚ್ಛೇ ಗೃಹೀತ್ವಾ ತಂ ಕೀಶಂ ಮುಷ್ಟಿಯುದ್ಧಮಚೀಕರತ್ ॥ ೩೯ ॥

ತದಾ ತು ಕೇಸರಿಸುತೋ ರವಿಂ ತ್ಯಕ್ತ್ವಾ ರುಷಾನ್ವಿತಃ ।
ವರ್ಷಮಾತ್ರಂ ಮಹಾಘೋರಂ ಮಲ್ಲಯುದ್ಧಂ ಚಕಾರ ಹ ॥ ೪೦ ॥

ಶ್ರಮಿತೋ ರಾವಣಸ್ತತ್ರ ಭಯಭೀತಸ್ಸಮಂತತಃ ।
ಪಲಾಯನಪರೋ ಭೂತಃ ಕೀಶರುದ್ರೇಣ ತಾಡಿತಃ ॥ ೪೧ ॥

ಏತಸ್ಮಿನ್ನಂತರೇ ಪ್ರಾಪ್ತೋ ವಿಶ್ರವಾ ಭಗವಾನೃಷಿಃ ।
ಸ್ತೋತ್ರೈರ್ವೇದಮಯೈರ್ದೇವಂ ತುಷ್ಟಾವ ಪರಯಾ ಗಿರಾ ॥ ೪೨ ॥

---

೩೮. ಇಂದ್ರನು ವಜ್ರಾಯುಧದಿಂದ ಹೊಡೆದಾಗ್ಯೂ ಇವನು ಸೂರ್ಯನನ್ನು ಬಿಡಲಿಲ್ಲ. ಆಗ ಬಹಳ ಎತ್ತರದಲ್ಲಿದ್ದುದರಿಂದ ಹೆದರಿದವನಾಗಿ ಸೂರ್ಯನನ್ನು ಕುರಿತು " ಕಾಪಾಡು ಕಾಪಾಡು ! ಎಂದು ಕೂಗಿಕೊಂಡನು.

೩೯. ಲೋಕಭಯಂಕರನಾದ ರಾವಣನು ಈ ಆರ್ತಧ್ವನಿಯನ್ನು ಕೇಳಿ ಆ ಕಪಿಯ ಬಾಲವನ್ನು ಹಿಡಿದು ಜಗ್ಗಿ ಅದರೊಡನೆ ಮುಷ್ಟಿಯುದ್ಧಮಾಡಿದನು.

೪೦. ಆಗ ಕೇಸರಿಯ ಮಗನಾದ ಆ ಕಪಿಯು ಸೂರ್ಯನನ್ನು ಬಿಟ್ಟು ಕೋಪದಿಂದ ಕೂಡಿ ರಾವಣನೊಡನೆ ಒಂದುವರ್ಷಕಾಲ ಮಹಾಭಯಂಕರವಾದ ಮಲ್ಲಯುದ್ಧವನ್ನು ಮಾಡಿದನು.

೪೧. ರಾವಣನು ಬಹಳ ಶ್ರಮದಿಂದ ಬಳಲಿ ಕಪಿರೂಪಿನ ರುದ್ರನಿಂದ ದೇಹದ ಎಲ್ಲ ಕಡೆಯಲ್ಲಿಯೂ ಪ್ರಹಾರಗಳನ್ನು ತಿಂದು ಹೆದರಿ, ಎಲ್ಲಾದರೂ ಓಡಿಹೋಗುವುದರಲ್ಲಿದ್ದನು.

೪೨. ಆ ಸಮಯಕ್ಕೆ ಸರಿಯಾಗಿ ಪೂಜ್ಯನಾದ ವಿಶ್ರವಸಮುನಿಯು ಅಲ್ಲಿಗೆ ಬಂದು ವೇದಮಯವಾದ ಸ್ತೋತ್ರಗಳಿಂದಲೂ, ಉತ್ತಮವಾದ ಮಾತಿನಿಂದಲೂ ದೇವನಾದ ಕಪಿರೂಪಿನ ರುದ್ರನನ್ನು ಸ್ತೋತ್ರಮಾಡಿದನು.

ಪ್ರಸನ್ನಸ್ತು ತದಾ ರುದ್ರೋ ರಾವಣಂ ಲೋಕರಾವಣಂ ।
ತ್ಯಕ್ತ್ವಾ ಪಂಪಾಸರಸ್ತೀರೇ ನಿವಾಸಂ ಕೃತವಾನ್ಬಲೀ ॥
ಸ್ಥಾಣುಭೂತಃ ಸ್ಥಿತಸ್ತತ್ರ ಸ್ಥಾಣುರ್ನಾಮ ತತೋಽಭವತ್ ॥ ೪೩ ॥

ನಿಘ್ನಂತಂ ಚ ಸುರಾನ್ಮುಖ್ಯಾನ್ರಾವಣಂ ಲೋಕರಾವಣಂ ॥ ೪೪ ॥

ನಿಹಂತಿ ಮುಷ್ಟಿಭಿರ್ಯೋ ನ ಹನೂಮಾನಿತಿ ವಿಶ್ರುತಃ ॥ ೪೫ ॥

ತಪಸಾ ತಸ್ಯ ಕೀಶಸ್ಯ ಪ್ರಸನ್ನೋ ಭಗವಾನ್ವಿಧಿಃ ।
ನಮ್ರಧೀರ್ವಚನಂ ಪ್ರಾಹ ಶೃಣು ರುದ್ರ ತಪೋನಿಧೇ ॥ ೪೬ ॥

ವೈವಸ್ವತೇಽಂತರೇ ಪ್ರಾಪ್ತೇ ಚಾಷ್ಟಾವಿಂಶತ್ತಮೇ ಯುಗೇ ।
ತ್ರೇತಾಯಾಃ ಪೂರ್ವಚರಣೇ ರಾಮಸ್ಸಾಕ್ಷಾದ್ಭವಿಷ್ಯತಿ ॥
ತಸ್ಯ ಭಕ್ತಿಂ ಚ ಸಂಪ್ರಾಪ್ಯ ಕೃತಕೃತ್ಯೋ ಭವಿಷ್ಯಸಿ ॥ ೪೭ ॥

---

೪೩ ಆಗ ಸಮಾಧಾನಗೊಂಡ ಬಲಶಾಲಿಯಾದ ಕಪಿರೂಪಿನ ರುದ್ರನು ಲೋಕಭಯಂಕರನಾದ ರಾವಣನನ್ನು ಬಿಟ್ಟುಕೊಟ್ಟು, ತಾನು ಅಲ್ಲಿಂದ ಹೊರಟು ಪಂಪಾಸರೋವರದ ದಡಕ್ಕೆ ಬಂದು ಅಲ್ಲಿ ತಪಸ್ಸುಮಾಡುತ್ತಿದ್ದನು. ಮೋಟುಮರದಂತೆ ಅಲ್ಲಿ ಸ್ಥಿರವಾಗಿ ಇದ್ದಕಾರಣ ಕಪಿರೂಪಿನ ರುದ್ರನಿಗೆ ಸ್ಥಾಣುವೆಂಬ ಹೆಸರು ಉಂಟಾಯಿತು.

೪೪-೪೬. ಪ್ರಮುಖರಾದ ದೇವತೆಗಳನ್ನೂ ಪೀಡಿಸುವ ಲೋಕಭಯಂಕರನಾದ ರಾವಣನನ್ನು ಮುಷ್ಟಿಪ್ರಹಾರಗಳಿಂದ ಪೀಡಿಸಿದಕಾರಣ ಆ ಕಪೀವೀರನು ಹನೂಮಾನ್ ಎಂದು ಪ್ರಸಿದ್ಧನಾದನು. ಆ ಕಪಿರೂಪಿರುದ್ರನ ತಪಸ್ಸಿಗೆ ಮೆಚ್ಚಿದ ಷಡ್ಗುಣೈಶ್ವರ್ಯಸಂಪನ್ನನಾದ ಬ್ರಹ್ಮನು ವಿನಯಪೂರ್ವಕವಾಗಿ ಈರೀತಿಯಾಗಿ ಹೇಳಿದನು. " ಎಲೈ ತಪೋನಿಧಿಯಾದರುದ್ರನೇ ! ಕೇಳು.

೪೭ " ವೈವಸ್ವತಮನ್ವಂತರವು ಬರಲು ಇಪ್ಪತ್ತೆಂಟನೆಯ ತ್ರೇತಾಯುಗದ ಪೂರ್ವಭಾಗದಲ್ಲಿ ಸಾಕ್ಷಾತ್ಪರಮಾತ್ಮನು ರಾಮನಾಗಿ ಅವತರಿಸುತ್ತಾನೆ. ಆ ಶ್ರೀರಾಮನ ಭಕ್ತಿಯನ್ನು ಹೊಂದಿ ನೀನು ಕೃತಕೃತ್ಯನಾಗುವೆ" ಎಂದನು.

ಇತಿ ಚೋಕ್ತ್ವಾ ದದೌ ತಸ್ಮೈ ಚಂದ್ರಂ ಭಾದ್ರಪ್ರಕಾಶಕಂ ।
ರಾವಣಾಯ ಪ್ರಿಯಾಂ ರಮ್ಯಾಂ ದದೌ ಮಂದೋದರೀಂ ವಿಧಿಃ ॥ ೪೮ ॥

ನೈರ್ಋತಶ್ಚೈವ ದಿಕ್ಪಾಲಸ್ಸ ಬಭೂವ ಚ ರಾವಣಃ ।
ಅಲ್ಪಾಯುರ್ಮರಣಂ ಪ್ರಾಪ್ತೋ ರಾಮೇಣ ಹರಿರೂಪಿಣಾ ॥ ೪೯ ॥

॥ ಸೂತ ಉವಾಚ ॥

ಇತಿ ಶ್ರುತ್ವಾ ಸ ಹನುಮಾನಯೋನಿಃ ಕದಲೀವನೇ ।
ದೇಹಭೂತೋ ಮಹೀಂ ಪ್ರಾಪ್ತೋ ಬಾಲಶರ್ಮೇತಿ ವಿಶ್ರುತಃ ॥ ೫೦ ॥

ಪುರೀಂ ಕಾಶೀಂ ಸಮಾಯಾತೋ ಯತ್ರ ವೈ ಮಣಿಕರ್ಣಿಕಾ ।
ರಾಮಪಕ್ಷೇ ಬಾಲಶರ್ಮಾ ಶಿವಪಕ್ಷೇ ತು ಶಂಕರಃ ॥ ೫೧ ॥

ಮಾಸಮಾತ್ರಂ ಚ ಶಾಸ್ತ್ರಾರ್ಥಸ್ತಯೋಶ್ಚಾಸೀನ್ಮಹೋತ್ತಮಃ ।
ಶಂಕರಾಚಾರ್ಯಯತಿನಾ ಬಾಲಶರ್ಮಾ ಪರಾಜಿತಃ ॥ ೫೨ ॥

---

೪೮. ಹೀಗೆ ಹೇಳಿ ಬ್ರಹ್ಮನು ಭಾದ್ರಪದಮಾಸದಲ್ಲಿ ಪ್ರಕಾಶಿಸುವ ಚಂದ್ರ ಮಂಡಲದ ಆಧಿಪತ್ಯವನ್ನು ಅವನಿಗೆ ಕೊಟ್ಟನು. ಪ್ರೀತಿಸಂಪನ್ನೆಯೂ ಮನೋಹರೆಯೂ ಆದ ಮಂಡೋದರಿಯನ್ನು ರಾವಣನಿಗೆ ಕೊಟ್ಟನು.

೪೯. ಆ ರಾವಣನು ರಾಕ್ಷಸರಿಗೆ ರಾಜನಾದನು. ಅವನು ಸ್ವಲ್ಪಾಯುಸ್ಸುಳ್ಳವನಾಗಿ ವಿಷ್ಣುರೂಪನಾದ ಶ್ರೀರಾಮನಿಂದ ಮರಣಹೊಂದಿದನು.

೫೦. ಆಗ ಸೂತಮಾನಿವರ್ಯನು ಹೇಳುತ್ತಾನೆ—ಬ್ರಹ್ಮನ ಮಾತನ್ನು ಕೇಳಿ ಕದಲಿಕಾರಣ್ಯದಲ್ಲಿದ್ದ ಆ ಹನುಮಂತನು ಭೂಮಿಯಲ್ಲಿ ಅಯೋನಿಜನಾಗಿ ಜನಿಸಿ ಬಾಲಶರ್ಮನೆಂಬ ಹೆಸರಿನಿಂದ ಪ್ರಸಿದ್ಧನಾದನು.

೫೧-೫೨. ಆ ಬಳಿಕ ಅವನು ಕಾಲಕ್ರಮದಲ್ಲಿ ಗಂಗಾನದಿಯು ಪ್ರವಹಿಸುತ್ತಿರುವ ಕಾಶೀಪಟ್ಟಣದಲ್ಲಿ ಮಣಿಕರ್ಣಿಕಾತೀರ್ಥಕ್ಕೆ ಬಂದನು. ಬಾಲಶರ್ಮನು ರಾಮಪಕ್ಷವನ್ನೂ ಶಂಕರಾಚಾರ್ಯರು ಶಿವಪಕ್ಷವನ್ನೂ ವಹಿಸಿ ವಾಕ್ಯಾರ್ಥಮಾಡಿದರು. ಒಂದುತಿಂಗಳವರೆಗೆ ಎಡೆಬಿಡದೆ ಶಾಸ್ತ್ರಾರ್ಥಗಳ ವಿಚಾರವಾಗಿ ಅವರಿಬ್ಬರಿಗೂ ವಾದನಡೆಯಿತು. ಆಗ ಶ್ರೀ ಶಂಕರಾಚಾರ್ಯ ಯತಿಗಳಿಂದ ಬಾಲಶರ್ಮನು ಪರಾಜಿತದನು.

**ಶಿಷ್ಯೋ ಭೂತ್ವಾ ಚ ತತ್ರೈವ ಗುರುಸೇವಾಪರೋಽಭವತ್ ।**
**ಚಕಾರ ಯಸ್ತಂತ್ರಮಂತ್ರಂ ಸರ್ವಜಾತಿಕಥಾಮಯಂ ॥ ೫೩ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ಚತುರ್ಥಖಂಡೇ ಅಘೋರಪಥಭೈರವ ಹನುಮಜ್ಜನ್ಮ ರುದ್ರಮಾಹಾತ್ಮ್ಯ ಬಾಲಶರ್ಮ ಸಮುತ್ಪತ್ತಿವರ್ಣನೋ ನಾಮ ತ್ರಯೋದಶೋಽಧ್ಯಾಯಃ.**



---

೫೩. ಅನಂತರ ಅಲ್ಲಿಯೇ ಅವರ ಶಿಷ್ಯನಾಗಿ ಗುರುಸೇವೆಯಲ್ಲಿ ನಿರತನಾಗಿ ನಿಂತು ಆತನು ಸಕಲ ಜಾತಿಗಳಿಗೂ ಸಂಬಂಧಪಟ್ಟ ತಂತ್ರಮಂತ್ರಗಳನ್ನು ರಚಿಸಿದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ನಾಲ್ಕನೆಯಃಖಂಡದಲ್ಲಿ ಅಘೋರಪಥಭೈರವ ಹನುಮಜ್ಜನ್ಮ ರುದ್ರಮಹಾತ್ಮ್ಯ ಬಾಲಶರ್ಮಸಮುತ್ಪತ್ತಿ ವರ್ಣನವೆಂಬ ಹದಿಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಪ್ರತಿಸರ್ಗಪರ್ವಣಿ ಚತುರ್ಥಖಂಡೇ

## ಚತುರ್ದಶೋಽಧ್ಯಾಯಃ

---

॥ ಬೃಹಸ್ಪತಿರುವಾಚ ॥

ಇದಂ ದೃಶ್ಯಂ ಯದಾ ನಾಸೀದ್ಯತ್ತತ್ಸದಸದಾತ್ಮಕಂ ।
ತದಾಕ್ಷರಮಯಂ ತೇಜೋ ವ್ಯಾಪ್ತರೂಪಮಚಿಂತ್ಯಕಂ ॥ ೧ ॥

ನ ಚ ಸ್ಥೂಲಂ ನ ವಾ ಸೂಕ್ಷ್ಮಂ ಶೀತಂ ನೋಷ್ಣಂ ಚ ತತ್ಪರಂ ।
ಆದಿಮಧ್ಯಾಂತರಹಿತಂ ಮನಾಗಾಕಾರವರ್ಜಿತಂ ॥ ೨ ॥

ಯೋಗಿದೃಶ್ಯಂ ಪರಂ ನಿತ್ಯಂ ಶೂನ್ಯಭೂತಂ ಪರಾತ್ಪರಂ ।
ಏಕಾ ವೈ ಪ್ರಕೃತಿರ್ಮಾಯಾ ರೇಖಾ ಯಾ ತದಧಃ ಸ್ಮೃತಾ ॥ ೩ ॥

---

### ಹದಿನಾಲ್ಕನೆಯ ಅಧ್ಯಾಯ

೧. ಬೃಹಸ್ಪತ್ಯಾಚಾರ್ಯರು ಹೇಳುತ್ತಾರೆ—ವ್ಯಾವಹಾರಿಕ ಮತ್ತು ಪ್ರಾತಿಭಾಸಿಕ ರೂಪವಾದ ಈ ದೃಶ್ಯಾತ್ಮಕಪ್ರಪಂಚವು ಯಾವಾಗ ಇರಲಿಲ್ಲವೋ ಆಗ ನಾಶರಹಿತವೂ ಎಲ್ಲಾ ಕಡೆಯಲ್ಲೂ ವ್ಯಾಪಕವೂ, ಮನಸ್ಸಿನಿಂದಲೂ ಯೋಚಿಸಲಸಾಧ್ಯವೂ, ಒಂದೇ ಪ್ರಕಾಶಸ್ವರೂಪವೂ ಆದ ಚೈತನ್ಯವುಮಾತ್ರ ಇದ್ದಿತು.

೨-೩. ಅದು ಸ್ಥೂಲಸೂಕ್ಷ್ಮಾದಿರೂಪ ಪರಿಮಾಣಶೂನ್ಯವಾದ್ದರಿಂದ ದ್ರವ್ಯವೂ ಅಲ್ಲ. ಶೀತೋಷ್ಣಾದಿ ಗುಣಸ್ವರೂಪವೂ ಅಲ್ಲದೆ ಉತ್ಕೃಷ್ಟವೂ ಈ ದ್ರವ್ಯಗುಣಾದಿಗಳನ್ನು ಅತಿಕ್ರಮಿಸಿದುದೂ ಉತ್ಪತ್ತಿ, ಸ್ಥಿತಿ, ಲಯಗಳೆಂಬ ವಿಕಾರರಹಿತವೂ, ಆಕಾರ ವರ್ಜಿತವೂ, ಯೋಗಿಗಳ ಧ್ಯಾನದೃಷ್ಟಿಯಿಂದ ಸಾಕ್ಷಾತ್ಕರಿಸಲ್ಪಡುವುದೂ, ನಿತ್ಯವೂ, ದ್ವೈತಪ್ರಪಂಚಶೂನ್ಯವೂ, ಕಾರ್ಯವರ್ಗಕ್ಕಿಂತಲೂ ಪರವಾದ ಮಾಯೆಗೂ ಪರವಾದುದೂ ಆಗಿದೆ

ಮಹತ್ತತ್ವಮಯೀ ಜ್ಞೇಯಾ ತದಧಶ್ಚೋರ್ಧ್ವರೇಖಿಕಾಃ ।
ರಜಸ್ಸತ್ವತಮೋಭೂತಾ ಓಮಿತ್ಯೇವಸುಲಕ್ಷಣಂ ॥ ೪ ॥

ತತ್ಸದ್ಬ್ರಹ್ಮ ಪರಂ ಜ್ಞೇಯಂ ಯತ್ರ ಪ್ರಾಪ್ಯ ಪುನರ್ಭವಃ ।
ಕಿಯತಾ ಚೈವ ಕಾಲೇನ ತಸ್ಯೇಚ್ಛಾ ಸಮುಪದ್ಯತ ॥ ೫ ॥

ಅಹಂಕಾರಸ್ತತೋ ಜಾತಸ್ತತಸ್ತನ್ಮಾತ್ರಿಕಾಃ ಪರಾಃ ।
ಪಂಚಭೂತಾನ್ಯತೋಽಪ್ಯಾಸಞ್ಜ್ಞಾನವಿಜ್ಞಾನಕಾನ್ಯತಃ ॥ ೬ ॥

ದ್ವಾವಿಂಶಜ್ಜಡಭೂತಾಂಶ್ಚ ದೃಷ್ಟ್ವಾ ಸ್ವೇಚ್ಛಾಮಯೋ ವಿಭುಃ ।
ದ್ವಂದ್ವಭೂತಶ್ಚ ಸಗುಣೋ ಬುದ್ಧಿರ್ಜೀವಸ್ಸಮಾಗತಃ ॥ ೭ ॥

---

೪-೫ ಪ್ರಕೃತಿಯೆಂದು ಕರೆಯಲ್ಪಡುವ ಮಾಯೆಯು ಆತನ ಚೈತನ್ಯದ ಒಂದು ರೇಖಾರೂಪವೆಂದು ಹೇಳಲ್ಪಟ್ಟಿದೆ. ಆ ಪ್ರಕೃತಿಯ ಮೇಲಿನದು ಮಹತ್ತತ್ವವು. ಅದರಮೇಲಿನದು ರಜಸ್ತತ್ವ, ಅದರಮೇಲಿನದು ತಮಸ್ತತ್ವ ಆ ಪರಚೈತನ್ಯವು ಓಂ ಶಬ್ದದ ಉಚ್ಚಾರಮಾಡಿದಾಗ ಪರಿಸ್ಫುರಿತವಾಗುವ ಅರ್ಥವಾದುದರಿಂದ ಓಂಕಾರವೇ ಅದರ ಲಕ್ಷಣವಾಗಿದೆ. ಆ ಪರಬ್ರಹ್ಮವೇ ತ್ರಿಕಾಲಾಭಾಧ್ಯವಾದ ಪರಜ್ಞೇಯ ವಸ್ತುವು. ಆ ಬ್ರಹ್ಮವನ್ನು ಹೊಂದಿದವನಿಗೆ ಪುನರ್ಜನ್ಮವೇ ಇಲ್ಲ. ಇಂತಹ ಪರ ಚೈತನ್ಯಕ್ಕೆ ಕೆಲವುಕಾಲಕಳೆದಮೇಲೆ ಸೃಷ್ಟಿವಿಷಯಕಸಂಕಲ್ಪರೂಪವಾದ ಮಾಯಾ ಪ್ರವೃತ್ತಿಯು ಹುಟ್ಟಿತು.

೬. ಆ ಸಂಕಲ್ಪದಿಂದ ಅಹಂಕಾರವುಂಟಾಯಿತು. ಅಹಂಕಾರದಿಂದ ಉತ್ಕೃಷ್ಟವಾದ ಪಂಚತನ್ಮಾತ್ರೆಗಳು ಉಂಟಾದುವು. ಅವುಗಳಿಂದ ಜ್ಞಾನ, ವಿಜ್ಞಾನಗಳುಂಟಾದುವು.

೭. ಸ್ವತಂತ್ರೇಚ್ಛುವಾದ ಆ ಪರಬ್ರಹ್ಮನು ಇಪ್ಪತ್ತೆರಡು ಜಡಭೂತಗಳನ್ನು ನೋಡಿ ಬುದ್ಧಿಯು ಅಧ್ಯಾಸವನ್ನು ಹೊಂದಿದನು. ಆ ಬುದ್ಧಿ ಉಪಾಧಿವಶವಾಗಿ ಸಗುಣವಾದ ಜೀವಸ್ವರೂಪವಾದನು. ಅಹಂಕಾರ (ಅಂತಃಕರಣ) ರೂಪ ಉಪಾಧಿ ಸಹಿತನಾದ ಈ ಪರಬ್ರಹ್ಮನು ಅಹಂಕಾರಸಹಿತನಾದಾಗ ಸಗುಣನು. ಅಹಂಕಾರವನ್ನು ಬೇರ್ಪಡಿಸಿ ಉಳಿದ ಅರ್ಥದಿಂದ ಅವನು ನಿರ್ಗುಣನು.

ಪೂರ್ವಾರ್ಧಾತ್ಸಗುಣಃ ಸೋಽಸೌ ನಿರ್ಗುಣಶ್ಚ ಪರಾರ್ಧತಃ ।
ತಾಭ್ಯಾಂ ಗೃಹೀತಂ ತತ್ಸರ್ವಂ ಚೈತನ್ಯಮಭವತ್ತತಃ ॥ ೮ ॥

ಸ ವಿರಾಡಿತಿ ಸಂಜ್ಞೋ ವೈ ಜೀವೋ ಜಾತಸ್ಸನಾತನಃ ।
ವಿರಾಜೋ ನಾಭಿತೋ ಜಾತಂ ಪದ್ಮಂ ತಚ್ಛತಯೋಜನಂ ॥ ೯ ॥

ಪದ್ಮಾಚ್ಚ ಕುಸುಮಂ ಜಾತಂ ಯೋಜನಾಯಾಮಮುತ್ತಮಂ ।
ತತ್ಪದ್ಮಕುಸುಮಾಜ್ಜಾತೋ ವಿರಂಚಿಃ ಕಮಲಾಸನಃ ॥ ೧೦ ॥

ದ್ವಿಭುಜಸ್ಸ ಚತುರ್ವಕ್ತ್ರೋ ದ್ವಿಪಾದೋ ಭಗವಾನ್ವಿಧಿಃ ।
ಜ್ಞೇಯಃ ಸಪ್ತವಿತತ್ಯಂಗೋ ಮಹಾಚಿಂತಾಮವಾಪ್ತವಾನ್ ॥ ೧೧ ॥

ಕೋಽಹಂ ಕಸ್ಮಾತ್ಕುತ ಆಯಾತಃ ।
ಕಾ ಮೇ ಜನನೀ ಕೋ ಮೇ ತಾತಃ ॥
ಇತ್ಯಧಿಚಿಂತಯುತಂ ಹೃದಿ ದೇವಂ ।
ಶಬ್ದಮಹತ್ವಮಯೇನ ಸ ಆಹ ॥ ೧೨ ॥

---

೮. ಅನಂತರ ಅಂತಃಕರಣಮಯನಾದ ಪರಮಾತ್ಮನ ಸಂಬಂಧಹೊಂದಿದ ಎಲ್ಲಾ ವಸ್ತುವೂ ಚೇತನದಂತೆ ಕಾಣಿಸಿಕೊಂಡಿತು.

೯. ಆ ಪ್ರಾಚೀನವಾದ ಪರಬ್ರಹ್ಮವು ಹಿರಣ್ಯಗರ್ಭಎಂದು ಕರೆಯಲ್ಪಡುವ ಅನಾದಿ ಮುಖ್ಯಜೀವನಾದನು. ಆ ವಿರಾಟ್‌ಪುರುಷನ ಹೊಕ್ಕಳಿನಿಂದ ನೂರು ಯೋಜನ ವಿಸ್ತಾರವುಳ್ಳ ಕಮಲನಾಳವುಂಟಾಯಿತು.

೧೦. ಆ ನಾಳದಿಂದ ಒಂದುಯೋಜನವಿಸ್ತಾರವುಳ್ಳ ಉತ್ತಮವಾದ ಕಮಲ ಪುಷ್ಪವು ಉತ್ಪತ್ತಿಯಾಯಿತು. ಆ ಕಮಲದಹೂವಿನಲ್ಲಿ ಕಮಲಾಸನನಾದ ಬ್ರಹ್ಮನು ಹುಟ್ಟಿದನು

೧೧. ಷಡ್ಗುಣೈಶ್ವರ್ಯಸಂಪನ್ನನಾದ ಆ ಬ್ರಹ್ಮನು ಎರಡು ತೋಳುಳ್ಳವನೂ, ಎರಡು ಪಾದಗಳುಳ್ಳವನೂ ಏಳುಗೇಣುಪ್ರಮಾಣ ಶರೀರವುಳ್ಳವನೂ ಆಗಿರುತ್ತಾ ಬಹಳ ಚಿಂತೆಗೊಳಗಾದನು.

೧೨. ನಾನು ಯಾರು ? ಯಾರಿಂದ ಜನಿಸಿದೆ ? ಯಾವುದಕ್ಕಾಗಿ ಬಂದೆನು ? ನನ್ನ ತಾಯಿಯಾರು ? ನನ್ನ ತಂದೆಯಾರು ? ಹೀಗೆಂದು ಮನಸ್ಸಿನಲ್ಲಿ ಅಪಾರವಾಗಿ ಯೋಚಿಸುತ್ತಿರುವ ಆ ದೇವನನ್ನು ಕುರಿತು ಪರಬ್ರಹ್ಮವು ಮಹಾಶಬ್ದಮಯವಾಗಿ,

ತಪಶ್ಚೈವ ತು ಕರ್ತವ್ಯಂ ಸಂಶಯಸ್ಯಾಪನುತ್ತಯೇ ।
ತದಾಕರ್ಣ್ಯ ವಿಧಿಸ್ಸಾಕ್ಷಾತ್ತಪಸ್ತೇಪೇ ಮಹತ್ತರಂ ॥ ೧೩ ॥

ಸಹಸ್ರಾಬ್ದಂ ಪ್ರಯತ್ನೇನ ಧ್ಯಾತ್ವಾ ವಿಷ್ಣುಂ ಸನಾತನಂ ।
ಚತುರ್ಭುಜಂ ಯೋಗಗಮ್ಯಂ ನಿರ್ಗುಣಂ ಗುಣವಿಸ್ತರಂ ॥ ೧೪ ॥

ಸಮಾಧಿನಿಷ್ಠೋ ಭಗವಾನ್ಬಭೂವ ಕಮಲಾಸನಃ ।
ಏತಸ್ಮಿನ್ನಂತರೇ ವಿಷ್ಣುರ್ಬಾಲೋ ಭೂತ್ವಾ ಚತುರ್ಭುಜಃ ॥ ೧೫ ॥

ಶ್ಯಾಮಾಂಗೋ ಬಲವಾನಸ್ತ್ರೀ ದಿವ್ಯಭೂಷಣಭೂಷಿತಃ ।
ಬ್ರಹ್ಮಣೋಽಂಕೇಽಹರಿಸ್ತಸ್ಥೌ ಯಥಾ ಬಾಲಃ ಪಿತುಃ ಸ್ವಯಂ ॥ ೧೬ ॥

ತದಾ ಪ್ರಬುದ್ಧಶ್ಚ ವಿಧಿಸ್ತಂ ದೃಷ್ಟ್ವಾ ಮೋಹಮಾಗತಃ ।
ವತ್ಸವತ್ಸೇತಿ ವಚನಂ ವಿಧಿಃ ಪ್ರಾಹ ಪ್ರಸನ್ನಧೀಃ ॥ ೧೭ ॥

---

೧೩. " ಈ ಸಂಶಯವು ಹೋಗಬೇಕಾದರೆ ವಿಚಾರವನ್ನು ಮಾಡಬೇಕು " ಎಂದು ಹೇಳಿದಂತಾಯಿತು. ಈ ಮಾತನ್ನು ಕೇಳಿ ಸಾಕ್ಷಾತ್‌ಬ್ರಹ್ಮನು ಗಹನವಾಗಿ ವಿಚಾರಮಾಡಿದನು.

೧೪-೧೬. ಪುರಾತನನೂ, ನಾಲ್ಕುತೋಳುಳ್ಳವನೂ, ಯೋಗಾಭ್ಯಾಸದಿಂದ ತಿಳಿಯಲು ಯೋಗ್ಯನೂ, ನಿರ್ಗುಣನೂ, ನಾನಾಗುಣಾಶ್ರಯನೂ ಆದ ವಿಷ್ಣುವನ್ನು ಆ ಬ್ರಹ್ಮನು ಒಂದುಸಾವಿರವರ್ಷಗಳವರೆಗೆ ಮಹಾಪ್ರಯತ್ನದಿಂದ ಧ್ಯಾನಮಾಡಿ ಸಮಾಧಿಯೋಗದಲ್ಲಿ ನಿರತನಾದನು. ಈ ಸಮಯದಲ್ಲಿ ವಿಷ್ಣುವು ನಾಲ್ಕುತೋಳುಳ್ಳವನೂ, ಕಪ್ಪಾದಶರೀರವುಳ್ಳವನೂ, ಮಹಾಬಲಿಷ್ಠನೂ, ಅಸ್ತ್ರವನ್ನು ಧರಿಸಿದವನೂ, ಉತ್ತಮಾಲಂಕಾರಗಳಿಂದ ಭೂಷಿತನೂ ಆದ ಬಾಲಕನಾಗಿ ಒಂದು ತಂದೆಯ ತೊಡೆಯಮೇಲೆ ಮಗು ಮಲಗುವಂತೆ ಬ್ರಹ್ಮನ ತೊಡೆಯಮೇಲೆ ಮಲಗಿಕೊಂಡನು.

೧೭. ಆಗ ಸಮಾಧಿಯಿಂದೆಚ್ಚೆತ್ತಬ್ರಹ್ಮನು ಆ ಶಿಶುವನ್ನು ನೋಡಿ ಮೋಹಿತನಾಗಿ ಸಂತುಷ್ಟವಾದಮನಸ್ಸಿನಿಂದ ಮಗೂ ! ಮಗೂ ! ಎಂದು ಕರೆದನು.

ವಿಹಸ್ಯಾಹ ತದಾ ವಿಷ್ಣುರಹಂ ಬ್ರಹ್ಮನ್ ಪಿತಾ ತವ ।
ತಯೋರ್ವಿವದತೋರೇವಂ ರುದ್ರೋ ಜಾತಸ್ತಮೋಮಯಃ ॥ ೧೮ ॥

ಜ್ಯೋತಿರ್ಲಿಂಗಶ್ಚ ಭಯದೋ ಯೋಜನಾಂತರವಿಸ್ತರಃ ।
ಹಂಸರೂಪಂ ತದಾ ಬ್ರಹ್ಮಾ ವರಾಹೋ ಭಗವಾನ್‌ಪ್ರಭುಃ ॥ ೧೯ ॥

ಶತಾಬ್ದಂ ತೌ ಪ್ರಯತ್ನೇನ ಜಾತೌ ಚೋರ್ಧ್ವಮಧಃ ಕ್ರಮಾತ್ ।
ಲಜ್ಜಿತೌ ಪುನರಾಗತ್ಯ ತದಾ ತುಷ್ಟುವತುರ್ಮುದಾ ॥ ೨೦ ॥

ತಾಭ್ಯಾಂ ಸ್ತುತೋ ಹರಃ ಸಾಕ್ಷಾದ್ಭವೋ ನಾಮ್ನಾ ಸಮಾಗತಃ ।
ಕೈಲಾಸನಿಲಯಂ ಕೃತ್ವಾ ಸಮಾಧಿಸ್ಥೋ ಬಭೂವ ಹ ॥ ೨೧ ॥

ಜಾತಂ ಪಂಚಯುಗಂ ತತ್ರ ದಿವ್ಯಂ ರುದ್ರಸ್ಯ ಯೋಗಿನಃ ।
ಏತಸ್ಮಿನ್ನಂತರೇ ಘೋರೋ ದಾನವಸ್ತಾರಕಾಸುರಃ ॥ ೨೨ ॥

---

೧೮-೧೯. ಆಗ ವಿಷ್ಣುವು ನಗುತ್ತಾ "ಎಲೈ ಬ್ರಹ್ಮನೇ! ನಾನು ನಿನ್ನ ತಂದೆ" ಎಂದನು. ಹೀಗೆ ಅವರಿಬ್ಬರೂ ಚರ್ಚೆಮಾಡುತ್ತಿರಲು ಈಶ್ವರನು ತಮೋಗುಣ ಸ್ವರೂಪನೂ, ಅನೇಕ ಯೋಜನವಿಸ್ತಾರನೂ, ಮಹಾಭಯಂಕರನೂ ಆದ ಜ್ಯೋತಿ ರ್ಲಿಂಗವಾಗಿ ಕಾಣಿಸಿದನು. ಅದರ ತುದಿ ಬುಡಗಳನ್ನು ಅರಿಯಬೇಕೆಂದು ಆಗ ಬ್ರಹ್ಮನು ಹಂಸರೂಪವನ್ನೂ ವಿಷ್ಣುವು ವರಾಹರೂಪವನ್ನೂ ಧರಿಸಿದರು.

೨೦. ನೂರುವರ್ಷಗಳವರೆಗೆ ಹಂಸರೂಪಿನ ಬ್ರಹ್ಮನು ಆಕಾಶಕ್ಕೂ, ವರಾಹ ರೂಪಿಯಾದ ವಿಷ್ಣುವು ಪಾತಾಳಕ್ಕೂ ಗಮಿಸಿದರು. ಕೊನೆಗೂ ಅದರ ಆದ್ಯಂತಗಳನ್ನು ಕಾಣಲಾರದೆ ನಾಚಿಕೆಗೊಂಡು ಹಿಂದಕ್ಕೆ ಬಂದು ಸಂತೋಷದಿಂದ ಈಶ್ವರನನ್ನು ಸ್ತೋತ್ರಮಾಡಿದರು.

೨೧. ಅವರಿಬ್ಬರಿಂದಲೂ ಸ್ತೋತ್ರಮಾಡಲ್ಪಟ್ಟ ಸಾಕ್ಷಾತ್ಪರಮೇಶ್ವರನು ಭವ ನೆಂಬ ಹೆಸರಿನಿಂದ ಬಂದು ಕೈಲಾಸದಲ್ಲಿ ವಾಸಮಾಡುತ್ತಾ ಸಮಾಧಿನಿಷ್ಠನಾದನು.

೨೨-೨೩. ಹೀಗೆಯೇ ತಪೋಮಾರ್ಗದಲ್ಲಿ ರುದ್ರನಿರಲು ದೇವಮಾನದ ಐದು ಯುಗಗಳು ಕಳೆದುವು. ಇದೇ ಸಮಯದಲ್ಲಿ ತಾರಕಾಸುರನೆಂಬ ಭಯಂಕರನಾದ

**ಸಹಸ್ರಾಬ್ದಂ ತಪಃ ಕೃತ್ವಾ ಬ್ರಹ್ಮಣೋ ವರಮಾಪ್ತವಾನ್ ।**
**ಭವವೀರ್ಯೋದ್ಭವಃ ಪುತ್ರಃ ಸ ತೇ ಮೃತ್ಯುಂ ಕರಿಷ್ಯತಿ ॥ ೨೩ ॥**

**ಇತಿ ಮತ್ವಾ ಸುರಾಞ್ಜಿತ್ವಾ ಮಹೇಂದ್ರಶ್ಚ ತದಾಭವತ್ ।**
**ತೇ ಸುರಾಶ್ಚೈವ ಕೈಲಾಸಂ ಗತ್ವಾ ರುದ್ರಂ ಪ್ರತುಷ್ಟುವುಃ ॥ ೨೪ ॥**

**ವರಂ ಬ್ರೂಹೀತಿ ವಚನಂ ಸುರಾನ್ ಪ್ರಾಹ ತದಾ ಶಿವಃ ।**
**ತೇ ತು ಶ್ರುತ್ವಾ ಪ್ರಣಮ್ಯೋಚುರ್ವಚನಂ ನಮ್ರಕಂಧರಾಃ ॥ ೨೫ ॥**

**ಭಗವನ್ ಬ್ರಹ್ಮಣಾ ದತ್ತೋ ವರೋ ವೈ ತಾರಕಾಯ ಚ ।**
**ಶಿವವೀರ್ಯೋದ್ಭವಃ ಪುತ್ರಃ ಸ ತೇ ಮೃತ್ಯುರ್ಭವಿಷ್ಯತಿ ॥ ೨೬ ॥**

---

ರಾಕ್ಷಸನು ಸಾವಿರವರ್ಷಗಳು ಬ್ರಹ್ಮನನ್ನು ಪ್ರಾರ್ಥಿಸಿ ತಪಸ್ಸುಮಾಡಿ "ಈಶ್ವರನ ವೀರ್ಯದಿಂದ ಹುಟ್ಟಿದ ಮಗನಿಂದಮಾತ್ರ ಮರಣಹೊಂದು" ಎಂದು ವರವನ್ನು ಪಡೆದನು.

೨೪. ಪ್ರಕೃತದಲ್ಲಿ ಶಿವನಿಗೆ ಕುಮಾರನು ಇಲ್ಲದಿರುವುದನ್ನು ತಿಳಿದುಕೊಂಡ ತಾರಕಾಸುರನು ದೇವತೆಗಳನ್ನು ಜಯಿಸಿ ತಾನೇ ಮಹೇಂದ್ರನಾದನು. ಆ ದೇವತೆಗಳು ಕೂಡಲೇ ಕೈಲಾಸಕ್ಕೆ ಹೋಗಿ ಈಶ್ವರನನ್ನು ಸ್ತೋತ್ರಮಾಡಿದರು.

೨೫. ಆಗ ಈಶ್ವರನು ದೇವತೆಗಳನ್ನು ಕುರಿತು "ಎಲೈ ಸುರಶ್ರೇಷ್ಠರೇ ! ನಿಮಗೆ ಇಷ್ಟವಾದ ವರವನ್ನು ಕೇಳಿ" ಎಂದು ಹೇಳಿದನು. ದೇವತೆಗಳು ಆ ಮಾತನ್ನು ಕೇಳಿ ಈಶ್ವರನಿಗೆ ನಮಸ್ಕಾರಮಾಡಿ ಈರೀತಿಯಾಗಿ ಹೇಳತೊಡಗಿದರು.

೨೬ "ಎಲೈಷಡ್ಗುಣೈಶ್ವರ್ಯಸಂಪನ್ನನೇ ! ಬ್ರಹ್ಮನು ತಾರಕಾಸುರನಿಗೆ ಶಿವನ ವೀರ್ಯದಿಂದ ಹುಟ್ಟಿದವನು ನಿನ್ನನ್ನು ಕೊಲ್ಲುತ್ತಾನೆ ಎಂದು ವರವನ್ನು ಕೊಟ್ಟಿರುತ್ತಾನೆ."

ಅತೋಽಸ್ಮಾನ್ರಕ್ಷ ಭಗವನ್ಶಿವಿವಾಹಂ ಕುರು ಶಂಕರ ।
ಸ್ವಾಯಂಭುವೇಽಂತರೇ ಪೂರ್ವಂ ದಕ್ಷಶ್ಚಾಸೀತ್ಪ್ರಜಾಪತಿಃ ।
ಷಷ್ಟಿಕನ್ಯಾಸ್ತತೋ ಜಾತಾಸ್ತಾಸಾಂ ಮಧ್ಯೇ ಸತೀ ವರಾ ॥ ೨೭ ॥

ವರ್ಷಮಾತ್ರಂ ಭವಂತಂ ಸಾ ಪಾರ್ಥಿವೈಃ ಸಮಪೂಜಯತ್ ।
ತಸ್ಯೈ ತ್ವಯಾ ವರೋ ದತ್ತಃ ಸಾ ಬಭೂವ ತವ ಪ್ರಿಯಾ ॥ ೨೮ ॥

ತತ್ಪಿತ್ರಾ ಯಾ ಕೃತಾ ನಿಂದಾ ಭವತೋಽಜ್ಞಾನಚಕ್ಷುಷಾ ।
ತಸ್ಯ ದೋಷಾತ್ಸತೀ ದೇವೀ ತತ್ಯಾಜ ಸ್ವಂ ಕಲೇವರಂ ॥ ೨೯ ॥

ಸತೀತೇಜಸ್ತದಾ ದಿವ್ಯಂ ಹಿಮಾದ್ರೌ ಘೋರಮಾಗಮತ್ ।
ಪೀಡಿತಸ್ತೇನ ಗಿರಿರಾಡ್ಬಭೂವ ಸ್ಮರವಿಹ್ವಲಃ ॥ ೩೦ ॥

---

೨೭. "ಎಲೈ ಶಂಕರನೇ ! ಆದಕಾರಣ ನೀನು ವಿವಾಹವನ್ನು ಮಾಡಿಕೊಂಡು ನಮ್ಮನ್ನು ಕಾಪಾಡು. ಹಿಂದೆ ಸ್ವಾಯಂಭುವಮನ್ವಂತರದಲ್ಲಿ ದಕ್ಷನು ಬ್ರಹ್ಮನಾಗಿದ್ದನು. ಅವನಿಂದ ಅರವತ್ತು ಕನ್ಯೆಕೆಯರು ಹುಟ್ಟಿದರು. ಅವರಲ್ಲಿ ಸತೀಎಂಬುವಳು ಅತ್ಯಂತ ಶ್ರೇಷ್ಠಳಾಗಿದ್ದಳು."

೨೮. "ಅವಳು ಒಂದುವರ್ಷದವರೆಗೆ ನಿನ್ನನ್ನು ಪಾರ್ಥಿವಲಿಂಗಪೂಜಾಕ್ರಮದಿಂದ ಪೂಜಿಸಿದಳು. ಆಗ ಅವಳಿಗೆ ನೀನು ವರವನ್ನುಕೊಟ್ಟೆ. ಅವಳು ನಿನ್ನ ಪ್ರಿಯಪತ್ನಿಯಾದಳು."

೨೯. "ಅಜ್ಞಾನದೃಷ್ಟಿಯಿಂದ ಅವಳ ತಂದೆಯು ನಿನ್ನನ್ನು ನಿಂದಿಸಿದಕಾರಣ ಆ ದೋಷದಿಂದ ಸತೀದೇವಿಯು ತನ್ನ ಶರೀರತ್ಯಾಗಮಾಡಿದಳು."

೩೦. ಆಗ ಆ ಸತೀದೇವಿಯ ದಿವ್ಯವೂ ಭಯಂಕರವೂ ಆದ ತೇಜಸ್ಸು ಹಿಮವತ್ಪರ್ವತದಲ್ಲಿ ಬಂದು ಸೇರಿತು. ಅದರಿಂದ ಪೀಡಿತನಾದ ಹಿಮವಂತನು ಮನ್ಮಥಾವಿಷ್ಟನಾದನು.

ಪಿತ್ರೀಶ್ವರಂ ಸ ತುಷ್ಟಾವ ಕಾಮವ್ಯಾಕುಲಚೇತನಃ ।
ಅರ್ಯಮಾ ತು ತದಾ ತುಷ್ಟೋ ದದೌ ತಸ್ಮೈ ಸುತಾಂ ನಿಜಾಂ ॥
ಮೇನಾಂ ಮನೋಹರಾಂ ಶುದ್ಧಾಂ ಸ ದೃಷ್ಟ್ವಾ ಹರ್ಷಿತೋಽಭವತ್ ॥೩೧॥

ನರರೂಪಂ ಶುಭಂ ಕೃತ್ವಾ ದೇವತುಲ್ಯಂ ಚ ತತ್ಪ್ರಿಯಂ ।
ಸ ರೇಮೇ ಚ ತಯಾ ಸಾರ್ಧಂ ಚಿರಂ ಕಾಲಂ ಮಹಾವನೇ ॥ ೩೨ ॥

ಗರ್ಭೋ ಜಾತಸ್ತದಾ ರಮ್ಯೋ ನವವರ್ಷಾಂತಮುತ್ತಮಃ ।
ಕನ್ಯಾ ಜಾತಾ ತದಾ ಸುಭ್ರೂರ್ಗೌರೀ ಗೌರಮಯೀ ಸತೀ ॥ ೩೩ ॥

ಜಾತಮಾತ್ರಾ ಚ ಸಾ ಕನ್ಯಾ ಬಭೂವ ನವಹಾಯಿನೀ ।
ತುಷ್ಟಾವ ಶಂಕರಂ ದೇವಂ ಭವಂತಂ ತಪಸಾ ಚಿರಂ ॥ ೩೪ ॥

---

೩೧. ಆ ಹಿಮವಂತನು ಕಾಮಪೀಡಿತವಾದ ಮನಸ್ಸುಳ್ಳವನಾಗಿ ಪಿತೃಗಣಾಧಿಪತಿಯನ್ನು ಸ್ತೋತ್ರಮಾಡಿದನು. ಆಗ ಸಂತೋಷಗೊಂಡ ಅರ್ಯಮನು ಮನೋಹರಳೂ ಶುದ್ಧಳೂ ಆದ ತನ್ನ ಪುತ್ರಿ ಮೇನಾಎಂಬುವಳನ್ನು ಅವನಿಗೆ ಕೊಟ್ಟನು. ಅವಳನ್ನು ಪಡೆದು ಹಿಮವಂತನು ಸಂತೋಷಗೊಂಡನು.

೩೨. ಆ ಹಿಮವಂತನು ದೇವತೆಗಳರೂಪಕ್ಕೆ ಸಮಾನವೂ ಮಂಗಳಕರವೂ ಆ ಮೇನೆಗೆ ಪ್ರಿಯವೂ ಆದ, ಮನುಷ್ಯರೂಪವನ್ನು ಧರಿಸಿಕೊಂಡು ಅವಳೊಡನೆ ಆ ಮಹಾವನದಲ್ಲಿ ಬಹುಕಾಲ ಕ್ರೀಡಿಸಿದನು. ಆಕೆ ಗರ್ಭಿಣಿಯಾದಳು.

೩೩. ಒಂಭತ್ತುವರ್ಷಗಳವರೆಗೆ ಉತ್ತಮವಾದ ಗರ್ಭವು ಆ ಬೆಳೆಯಿತು. ಅನಂತರ ಸತೀದೇವಿಯ ಅಂಶದಿಂದ ಸುಂದರವಾದ ಹುಬ್ಬುಗಳುಳ್ಳವಳೂ, ಹಳದಿಯ ವರ್ಣವಾದ ಶರೀರವುಳ್ಳವಳೂ, ಗೌರಿಯೆಂದು ಪ್ರಸಿದ್ಧಳೂ ಆದ ಕನ್ಯಕೆಯು ಹುಟ್ಟಿದಳು.

೩೪. ಆ ಕನ್ಯೆಯು ಹುಟ್ಟಿದಾಗಲೇ ಒಂಭತ್ತುವರ್ಷದವಳಾಗಿದ್ದಳು. ಅನಂತರ ಅವಳು ಬಹುಕಾಲ ತಪಸ್ಸನ್ನುಮಾಡಿ ದೇವನೂ, ಮಂಗಳಕರನೂ ಆದ ನಿನ್ನನ್ನು ಬಹುವಾಗಿ ಸ್ತೋತ್ರಮಾಡಿದಳು.

ಶತಾಬ್ದಂ ಚ ಜಲೇ ಮಗ್ನಾ ಶತಾಬ್ದಂ ವಹ್ನಿಸಂಸ್ಥಿತಾ ।
ಶತಾಬ್ದೇ ಚ ಸ್ಥಿತಾ ವಾಯೌ ಶತಾಬ್ದಂ ನಭಸಿ ಸ್ಥಿತಾ ॥ ೩೫ ॥

ಶತಾಬ್ದಂ ಚ ಸ್ಥಿತಾ ಚಂದ್ರೇ ಶತಾಬ್ದಂ ರವಿಮಂಡಲೇ ।
ಶತಾಬ್ದಂ ಗರ್ಭಭೂಮ್ಯಾಂ ಚ ಸ್ಥಿತಾ ಸಾ ಗಿರಿಜಾ ಸತೀ ॥ ೩೬ ॥

ಶತಾಬ್ದಂ ಚ ಮಹತ್ತತ್ವೇ ಗತ್ವಾ ಯೋಗಬಲೇನ ಸಾ ।
ಭವಂ ತಂ ಶಂಕರಂ ಶುದ್ಧಂ ತತ್ರ ದೃಷ್ಟ್ವಾ ಸ್ಥಿತಾದ್ಯವೈ ॥ ೩೭ ॥

ತ್ರಿಶತಾಬ್ದಮತೋ ಜಾತಂ ತಸ್ಮಾತ್ತ್ವಂ ಪಾರ್ವತೀಂ ಶಿವಾಂ ।
ವರಂ ದೇಹಿ ಪ್ರಸನ್ನಾತ್ಮಾ ಮಹಾದೇವ ನಮೋಽಸ್ತು ತೇ ॥ ೩೮ ॥

---

೩೫-೩೬ ಒಂದುನೂರುವರ್ಷಗಳು ನೀರಿನಲ್ಲಿ ನಿಂತುಕೊಂಡೂ, ಒಂದುನೂರು ವರ್ಷಗಳು ಪಂಚಾಗ್ನಿಮಧ್ಯದಲ್ಲಿದ್ದುಕೊಂಡೂ, ಒಂದುನೂರುವರ್ಷಗಳು ವಾಯು ಸೇವನೆಮಾಡುತ್ತಾ ವಾಯುಮಂಡಲದಲ್ಲಿದ್ದುಕೊಂಡೂ, ಒಂದುನೂರುವರ್ಷಗಳು ಆಕಾಶದಲ್ಲಿರುವವಳಾಗಿಯೂ, ಒಂದುನೂರುವರ್ಷಗಳು ಚಂದ್ರಮಂಡಲದಲ್ಲಿರುವ ವಳಾಗಿಯೂ, ಒಂದುನೂರುವರ್ಷಗಳು ಸೂರ್ಯಮಂಡಲದಲ್ಲಿರುವವಳಾಗಿಯೂ, ಒಂದುನೂರುವರ್ಷಗಳು ಭೂಮಧ್ಯದಲ್ಲಿರುವವಳಾಗಿಯೂ ಆ ಪರ್ವತಪುತ್ರಿಯಾದ ಗೌರಿಯು ತಪಸ್ಸನ್ನು ಮಾಡಿದಳು.

೩೭. ಆ ಪಾರ್ವತಿಯು ಯೋಗಬಲದಿಂದ ಮಹತ್ತತ್ವದಲ್ಲಿ ಪ್ರವೇಶಿಸಿ ಒಂದು ನೂರುವರ್ಷಗಳವರೆಗೆ ಶುದ್ಧನೂ ಶಂಕರನೂ ಆದ ನಿನ್ನನ್ನು ನೋಡುತ್ತಾ ಅಲ್ಲಿಯೇ ಇದ್ದಳು.

೩೮. "ಹೀಗೆ ಮುನ್ನೂರುವರ್ಷಗಳು ಕಳೆದಿವೆ. ಆದುದರಿಂದ ನೀನು ಪ್ರಸನ್ನನಾಗಿ ಮಂಗಳಕರಳಾದ ಪಾರ್ವತಿಯನ್ನು ಸ್ವೀಕರಿಸಿ ನಮಗೆ ಇಷ್ಟವಾದ ವರವನ್ನು ಕೊಡು. ಎಲೈ ಮಹಾದೇವನೇ! ನಿನಗೆ ನಮಸ್ಕಾರ" ಎಂದು ಪ್ರಾರ್ಥಿಸಿದರು.

ಇತಿ ಶ್ರುತ್ವಾ ವಚೋ ರಮ್ಯಂ ಶಂಕರೋ ಲೋಕಶಂಕರಃ ।
ದೇವಾನಾಹ ತದಾ ವಾಕ್ಯಮಯೋಗ್ಯಂ ವಚನಂ ಹಿ ವಃ ॥ ೩೯ ॥

ಮತ್ತೋ ಜ್ಯೇಷ್ಠಾಶ್ಚ ಯೇ ರುದ್ರಾಃ ಕುಮಾರವ್ರತಧಾರಿಣಃ ।
ಮೃಗವ್ಯಾಧಾದಯೋ ಮುಖ್ಯಾ ದಶ ಜ್ಯೋತಿಸ್ಸಮುದ್ಭವಾಃ ॥ ೪೦ ॥

ಅಹಂ ತೇಷಾಮವರಜೋ ಭವೋ ನಾಮ್ನೈವ ಯೋಗರಾಟ್ ।
ಮಾಯಾರೂಪಾಂ ಶುಭಾಂ ನಾರೀಂ ಕಥಂ ಗೃಹ್ಣಾಮಿ ಲೋಕದಾಂ ॥೪೧॥

ನಾರೀ ಭಗವತೀ ಸಾಕ್ಷಾತ್ತಯಾ ಸರ್ವಮಿದಂ ತತಂ ।
ಮಾತೃರೂಪಾ ತು ಸಾ ಜ್ಞೇಯಾ ಯೋಗಿನಾಂ ಲೋಕವಾಸಿನಾಂ ॥ ೪೨ ॥

ಅಹಂ ಯೋಗೀ ಕಥಂ ನಾರೀಂ ಮಾತರಂ ವರಿತುಂ ಕ್ಷಮಃ ।
ತಸ್ಮಾದಹಂ ಯುಷ್ಮದರ್ಥೇ ಸ್ವವೀರ್ಯಮಾದದಾಮ್ಯಹಂ ॥ ೪೩ ॥

---

೩೯. ಲೋಕಗಳಿಗೆ ಕ್ಷೇಮವನ್ನುಂಟುಮಾಡುವ ಶಂಕರನು ಅವರಾಡಿದ ಮಾತನ್ನು ಕೇಳಿ ಆಗ ದೇವತೆಗಳನ್ನು ಕುರಿತು " ನೀವು ಹೇಳಿದಮಾತು ನ್ಯಾಯವಾದುದಲ್ಲ."

೪೦. " ದಿವ್ಯತೇಜಸ್ಸಿನಿಂದಹುಟ್ಟಿ ಬ್ರಹ್ಮಚರ್ಯವ್ರತಪರಾಯಣರಾಗಿರುವ ಮೃಗವ್ಯಾಧನೇ ಮೊದಲಾದ ಹತ್ತುಜನರುದ್ರರು, ನನಗಿಂತ ಹಿರಿಯರೂ, ಮುಖ್ಯರೂ ಆಗಿರುತ್ತಾರೆ."

೪೧. " ನಾನು ಅವರಲ್ಲಿ ಕನಿಷ್ಠನು (ಕಿರಿಯನು) ಭವನೆಂಬ ಹೆಸರಿನಿಂದ ಯೋಗನಿರತನಾಗಿರುವೆನು ಮಾಯಾಸ್ವರೂಪಿಣಿಯೂ, ಮಂಗಳಕರೆಯೂ ದಿವ್ಯಲೋಕಗಳನು ಕೊಡುವವಳೂ ಆದ ಆ ಸ್ತ್ರೀಯನ್ನು ನಾನು ಹೇಗೆ ಸ್ವೀಕರಿಸಲಿ ? "

೪೨. " ಆ ಸ್ತ್ರೀಯು ಸಾಕ್ಷಾತ್ ಷಡ್ಗುಣೈಶ್ವರ್ಯಸಂಪನ್ನೆ! ಅವಳಿಂದ ಈ ಸಕಲ ಬ್ರಹ್ಮಾಂಡವೂ ವ್ಯಾಪ್ತವಾಗಿದೆ. ಯೋಗಿಗಳಿಗೂ ದಿವ್ಯಲೋಕನಿವಾಸಿಗಳಿಗೂ ಅವಳು ತಾಯಿಯೆಂದು ತಿಳಿಯಬೇಕು."

೪೩ " ಯೋಗಿಯಾದ ನಾನು ತಾಯಿಯಂತಿರುವ ಆ ಸ್ತ್ರೀಯನ್ನು ಲಗ್ನವಾಗಲು ಹೇಗೆ ಸಮರ್ಥನಾದೇನು ? ಆದುದರಿಂದ ನಾನು ನಿಮ್ಮ ಕಾರ್ಯಕ್ಕಾಗಿ ನನ್ನ ವೀರ್ಯವನ್ನು ತೆಗೆದುಕೊಡುತ್ತೇನೆ."

ತದ್ವೀರ್ಯಂ ಭಗವಾನ್ವಹ್ನಿಃ ಪ್ರಾಪ್ಯ ಕಾರ್ಯಂ ಕರಿಷ್ಯತಿ ।
ಇತ್ಯುಕ್ತ್ವಾ ವಹ್ನಯೇ ದೇವೋ ದದೌ ವೀರ್ಯಮನುತ್ತಮಂ ॥ ೪೪ ॥

ಸ್ವಯಂ ತತ್ರ ಸಮಾಧಿಸ್ಥೋ ಬಭೂವ ಭಗವಾನ್‌ಹರಃ ।
ತದಾ ಶಕ್ರಾದಯೋ ದೇವಾ ವಹ್ನಿನಾ ಸಹ ನಿರ್ಯಯುಃ ॥
ಸತ್ಯಲೋಕಂ ಸಮಾಗತ್ಯಾಽಬ್ರುವನ್ಸರ್ವಂ ಪ್ರಜಾಪತಿಂ ॥ ೪೫ ॥

ಶ್ರುತ್ವಾ ತತ್ಕಾರಣಂ ಸರ್ವಂ ಸ್ವಯಂಭೂಶ್ಚತುರಾನನಃ ।
ನಮಸ್ಕೃತ್ಯ ಪರಂ ಬ್ರಹ್ಮ ಕೃಷ್ಣಧ್ಯಾನಪರೋಽಭವತ್ ॥ ೪೬ ॥

ಧ್ಯಾನಮಾರ್ಗೇಣ ಭಗವಾನ್ಗತ್ವಾ ಬ್ರಹ್ಮಾ ಪರಂ ಪದಂ ।
ಹೇತುಂ ತದ್ವರ್ಣಯಾಮಾಸ ಯಥಾ ಶಂಕರಭಾಷಿತಂ ॥ ೪೭ ॥

ಶ್ರುತ್ವಾ ವಿಹಸ್ಯ ಭಗವಾನ್‌ಸ್ವಮುಖಾತ್ತೇಜ ಉತ್ತಮಂ ।
ಸಮುತ್ಪಾದ್ಯ ತತೋ ಜಾತಃ ಪುರುಷೋ ರುಚಿರಾನನಃ ॥ ೪೮ ॥

---

೪೪. "ಆ ವೀರ್ಯವನ್ನು ಪೂಜ್ಯನಾದ ಅಗ್ನಿಯು ಧರಿಸಿ ನಿಮ್ಮ ಕಾರ್ಯವನ್ನು ಮಾಡುತ್ತಾನೆ" ಎಂದು ಹೇಳಿ ಈಶ್ವರನು ತನ್ನ ಶ್ರೇಷ್ಠವಾದ ವೀರ್ಯವನ್ನು ಅಗ್ನಿಗೆ ಕೊಟ್ಟನು.

೪೫. ಷಡ್ಗುಣೈಶ್ವರ್ಯಸಂಪನ್ನನಾದ ರುದ್ರನು ಹೀಗೆ ವೀರ್ಯವನ್ನು ಅಗ್ನಿಗೆ ಕೊಟ್ಟಮೇಲೆ ಅಲ್ಲಿಯೇ ಸಮಾಧಿನಿರತನಾದನು. ಅನಂತರ ಇಂದ್ರನೇ ಮೊದಲಾದ ದೇವತೆಗಳು ಅಗ್ನಿಯೊಂದಿಗೆ ಹೊರಟು ಹೋದರು. ಬಳಿಕ ಸತ್ಯಲೋಕಕ್ಕೆ ಬಂದು ಸಕಲವೃತ್ತಾಂತವನ್ನು ಬ್ರಹ್ಮನೊಂದಿಗೆ ಹೇಳಿದರು.

೪೬. ಸ್ವಯಂಭುವಾದ ಬ್ರಹ್ಮನು ಅವರ ಆಗಮನಕ್ಕೆ ಕಾರಣವನ್ನು ಕೇಳಿ ಪರಮಾತ್ಮನಿಗೆ ನಮಸ್ಕಾರಮಾಡಿ ಕೃಷ್ಣನ ಧ್ಯಾನದಲ್ಲಿ ಆಸಕ್ತನಾದನು.

೪೭. ಪೂಜ್ಯನಾದ ಬ್ರಹ್ಮನು ಧ್ಯಾನಯೋಗದಿಂದ ಪರಮಪದವನ್ನು ಸೇರಿ ಶಂಕರನು ಹೇಳಿದ ಸಕಲವೃತ್ತಾಂತವನ್ನೂ ಅಲ್ಲಿ ವಿವರಿಸಿದನು.

೪೮. ಷಡ್ಗುಣೈಶ್ವರ್ಯಸಂಪನ್ನನಾದ ಪರಮಾತ್ಮನು ಬ್ರಹ್ಮನ ಮಾತನ್ನು ಕೇಳಿ ನಗುತ್ತಾ ತನ್ನ ಮುಖದಿಂದ ದಿವ್ಯವಾದ ತೇಜಸ್ಸನ್ನು ಉತ್ಪನ್ನಮಾಡಿ ಅದರಿಂದ ದಿವ್ಯರೂಪವುಳ್ಳ ಪುರುಷನಾದನು,

ಬ್ರಹ್ಮಾಂಡಸ್ಯ ಚ್ಛವಿರ್ಯಾ ವೈ ಸ್ಥಿತಾ ತಸ್ಯ ಕಲೇವರೇ ।
ಪ್ರದ್ಯುಮ್ನೋ ನಾಮ ವಿಖ್ಯಾತಂ ತಸ್ಯ ಜಾತಂ ಮಹಾತ್ಮನಃ ॥ ೪೯ ॥

ತೇನ ಸಾರ್ಧಂ ತದಾ ಬ್ರಹ್ಮಾ ಸಂಪ್ರಾಪ್ಯ ಸ್ವಂ ನಿಕೇತನಂ ।
ದದೌ ತೇಭ್ಯಸ್ಸ ಪುರುಷಂ ಪ್ರದ್ಯುಮ್ನಂ ಶಂಬರಾರ್ತಿದಂ ॥ ೫೦ ॥

ತೇಜಸಾ ತಸ್ಯ ದೇವಸ್ಯ ನರಾ ನಾರ್ಯಸ್ಸಮಂತತಃ ।
ಏಕೀಭೂತಾಸ್ತ್ರಿಲೋಕೇಷು ಬಭೂವುಃ ಸ್ಮರಪೀಡಿತಾಃ ॥ ೫೧ ॥

ಸ್ಥಾವರಾಃ ಸೌಮ್ಯಭೂತಾ ವೈ ತೇ ತು ಕಾಮಾಗ್ನಿ ಪೀಡಿತಾಃ ।
ಸರಿದ್ಭಿಶ್ಚ ಲತಾಭಿಶ್ಚ ಮಿಲಿತಾಸ್ಸಂಬಭೂವಿರೇ ॥ ೫೨ ॥

ಬ್ರಹ್ಮಾಂಡೇಶಃ ಶಿವಃ ಸಾಕ್ಷಾದ್ರುದ್ರಃ ಕಾಲಾಗ್ನಿ ಸನ್ನಿಭಃ ।
ತ್ರಿನೇತ್ರಾತ್ತೇಜ ಉತ್ಪಾದ್ಯ ಶಮಯಾಮಾಸ ತದ್ವ್ಯಥಾಂ ॥ ೫೩ ॥

---

೪೯. ಸಕಲ ಬ್ರಹ್ಮಾಂಡಗಳಲ್ಲಿಯೂ ಯಾವಕಾಂತಿಯಿದೆಯೋ ಅದೆಲ್ಲಾ ಆ ಪುರುಷನ ಶರೀರದಲ್ಲಿದ್ದಿತಾದಕಾರಣ ಆ ಮಹಾತ್ಮನಿಗೆ ಪ್ರದ್ಯುಮ್ನನೆಂಬ ಹೆಸರು ಪ್ರಖ್ಯಾತಿಯಾಯಿತು .

೫೦. ಆಗ ಆ ಬ್ರಹ್ಮನು ಪ್ರದ್ಯುಮ್ನನೊಂದಿಗೆ ತನ್ನ ನಿವಾಸಕ್ಕೆ ಬಂದು ಶಂಬರಾಸುರನಿಗೆ ಶತ್ರುವಾದ ಪ್ರದ್ಯುಮ್ನನನ್ನು ಆ ದೇವತೆಗಳಿಗೆ ಒಪ್ಪಿಸಿದನು.

೫೧. ಆ ದೇವನ ತೇಜಸ್ಸಿನಿಂದ ಮೂರುಲೋಕಗಳಲ್ಲಿಯೂ ಸ್ತ್ರೀಯರೂ ಪುರುಷರೂ ಕಾಮಪೀಡಿತರಾಗಿ ಯಾವಾಗಲೂ ಅಗಲದೆ ಒಂದೆಡೆಯಲ್ಲಿರುತ್ತಿದ್ದರು.

೫೨. ಅಚರವ್ಯಕ್ತಿಗಳೂ ಸೌಮ್ಯಪ್ರಾಣಿಗಳೂಕೂಡ ಕಾಮಾಗ್ನಿಯಿಂದ ಬಹಳ ವ್ಯಥೆಪಟ್ಟುವು. ಸೌಮ್ಯಪ್ರಾಣಿಗಳು ಕಾಮಾತುರತೆಯಿಂದ ಬಳ್ಳಿಗಳೊಡನೆ ಸೇರಿದವು.

೫೩. ಬ್ರಹ್ಮಾಂಡಕ್ಕೆ ಒಡೆಯನೂ, ಸಾಕ್ಷಾತ್‌ರುದ್ರನೂ, ಪ್ರಳಯಕಾಲದಲ್ಲಿ ಅಗ್ನಿಗೆ ಸಮಾನನೂ ಆದ ಶಿವನು ತನ್ನ ಫಾಲನೇತ್ರದಿಂದ ಅಗ್ನಿಜ್ವಾಲೆಯನ್ನು ಹರಡಿ ಆ ಪ್ರದ್ಯುಮ್ನನಿಂದುಂಟಾದ ತೊಂದರೆಯನ್ನು ಪರಿಹರಿಸಿಕೊಂಡನು.

ತದಾ ಕ್ರುದ್ಧಃ ಸ ಕೃಷ್ಣಾಂಗೋ ಗೃಹೀತ್ವಾ ಕೌಸುಮಂ ಧನುಃ
ದಿವ್ಯಾನ್ಪಂಚ ಶರಾನ್ಘೋರಾನ್ಮಹಾದೇವಾಯ ಬಂಧವೇ ॥ ೫೪ ॥

ಉಚ್ಚಾಟನೇನ ಬಾಣೇನ ಗಂತಾऽಭೂಲ್ಲೋಕಶಂಕರಃ ।
ವಶೀಕರಣಬಾಣೇನ ನಾರೀವಶ್ಯಃ ಶಿವೋऽಭವತ್ ॥ ೫೫ ॥

ಸ್ತಂಭನೇನ ಮಹಾದೇವಃ ಶಿವಾಪಾರ್ಶ್ವೇ ಸ್ಥಿರೋऽಭವತ್ ।
ಆಕರ್ಷಣೇನ ಭಗವಾಞ್ಶಿವಾಕರ್ಷಣತತ್ಪರಃ ॥ ೫೬ ॥

ಮಾರಣೇನೈವ ಬಾಣೇನ ಮೂರ್ಛಿತೋऽಭೂನ್ಮಹೇಶ್ವರಃ ॥
ಏತಸ್ಮಿನ್ನಂತರೇ ದೇವೀ ಮಹತ್ತತ್ವೇ ಸ್ಥಿತಾ ಶಿವಾ ।
ಮೂರ್ಛಿತಂ ಶಿವಮಾಲೋಕ್ಯ ತತ್ರೈವಾಂತರ್ಧಿಮಾಗಮತ್ ॥ ೫೭ ॥

---

೫೪. ಆಗ ಕೋಪಗೊಂಡ ಆ ಕೃಷ್ಣಾಂಗನು (ಪ್ರದ್ಯುಮ್ನನು) ಪುಷ್ಪಧನುಸ್ಸನ್ನು ತೆಗೆದುಕೊಂಡು, ಉತ್ತಮವೂ ಭಯಂಕರವೂ ಆದ ಐದುಬಾಣಗಳನ್ನು ಲೋಕಬಂಧುವಾದ ಮಹಾದೇವನಮೇಲೆ ಪ್ರಯೋಗಿಸಿದನು.

೫೫. ಹೀಗೆ ಪ್ರಯೋಗಿಸಿದ ಉಚ್ಚಾಟನಬಾಣದಿಂದ ಲೋಕಶಂಕರನಾದ ಶಿವನು ಹಿಮ್ಮೆಟ್ಟಿದನು. ಹಾಗೆಯೇ ಮತ್ತೆ ಪ್ರಯೋಗಿಸಿದ ವಶೀಕರಣ ಬಾಣದಿಂದ ಸ್ತ್ರೀವಶನಾದನು.

೫೬. ಪುಷ್ಪಧನ್ವನು ಕೂಡಲೆ ಪ್ರಯೋಗಿಸಿದ ಸ್ತಂಭನಬಾಣದಿಂದ ಮಹಾದೇವನು ದೇವಿಯ ಸಮೀಪದಲ್ಲಿ ಸ್ಥಿರವಾಗಿನಿಂತನು. ಪ್ರದ್ಯುಮ್ನನು ಪ್ರಯೋಗಿಸಿದ ಆಕರ್ಷಣಬಾಣದಿಂದ ಷಡ್ಗುಣೈಶ್ವರ್ಯಸಂಪನ್ನನಾದ ಶಿವನು ದೇವಿಯ ಆಕರ್ಷಣೆಯಲ್ಲಿ ನಿರತನಾದನು.

೫೭. ಪ್ರದ್ಯುಮ್ನನು ಮತ್ತೆ ಪ್ರಯೋಗಿಸಿದ ಮಾರಣಬಾಣದಿಂದ ಆ ಮಹೇಶ್ವನು ಮೂರ್ಛೆಹೊಂದಿದನು. ಇಷ್ಟರೊಳಗೆ ಮಹತ್ತತ್ವದಲ್ಲಿ ಸೇರಿದ್ದ ಪಾರ್ವತಿಯು ಶಿವನು ಮೂರ್ಛೆಗೊಂಡುದನ್ನು ನೋಡಿ ಅಲ್ಲಿಯೇ ಅಂತರ್ಧಾನಹೊಂದಿದಳು.

ತದೋತ್ಥಾಯ ಮಹಾದೇವೋ ವಿಲಲಾಪ ಭೃಶಂ ಮುಹುಃ ।
ಹಾ ಪ್ರಿಯೇ ಚಂದ್ರವದನೇ ಹಾ ಶಿವೇ ಚ ಘಟಸ್ತನಿ ॥ ೫೮ ॥

ಹಾ ಉಮೇ ಸುಂದರಾಭೇ ಚ ಪಾಹಿ ಮಾಂ ಸ್ಮರವಿಹ್ವಲಂ ।
ದರ್ಶನಂ ದೇಹಿ ರಂಭೋರು ದಾಸಭೂತೋಽಸ್ಮಿ ಸಾಂಪ್ರತಂ ॥ ೫೯ ॥

ಏವಂ ವಿಲಪಮಾನಂ ತಂ ಗಿರಿಜಾ ಯೋಗಿನೀ ಸ್ವಯಂ ।
ಸಮಾಗತ್ಯ ವಚಃ ಪ್ರಾಹ ನತ್ವಾ ತಂ ಶಂಕರಂ ಪ್ರಿಯಂ ॥ ೬೦ ॥

ಕನ್ಯಾಹಂ ಭಗವನ್ದೇವ ಮಾತೃಪಿತ್ರನುಸಾರಿಣೀ ।
ತಯೋಸ್ಸಕಾಶಾದ್ಭಗವನ್ಮಮ ಪಾಣಿಂ ಗೃಹಾಣ ಭೋಃ ॥ ೬೧ ॥

---

೫೮. ಆಗ ಮಹಾದೇವನು ಎಚ್ಚತ್ತು ಪದೇಪದೇ ಬಹುವಾಗಿ ಗೋಳಾಡುತ್ತಾ ಅಯ್ಯೋ ಪ್ರಿಯೇ! ಚಂದ್ರನಂತೆಮುಖವುಳ್ಳವಳೇ! ಮಂಗಳಕರಳೇ! ಆನೆಯ ಕುಂಭದಂತೆ ಕುಚವುಳ್ಳವಳೇ!

೫೯. ಅಯ್ಯೋ ಉಮೆಯೇ! ಸುಂದರವಾದ ಕಾಂತಿಯುಳ್ಳವಳೇ! ಕಾಮ ಪೀಡಿತನಾದ ನನ್ನನ್ನು ಕಾಪಾಡು. ಬಾಳೆಯಕಂಬದಂತೆ ಸುಂದರವಾದ ತೊಡೆಗಳುಳ್ಳ ಎಲೌ ದೇವೀ! ನಾನು ನಿನಗೆ ಸೇವಕನಾಗಿದ್ದೇನೆ; ಈಗ ನನಗೆ ನಿನ್ನ ದರ್ಶನವನ್ನು ಕೊಡು" ಎಂದು ವಿಲಪಿಸಿದನು.

೬೦. ಈ ಪ್ರಕಾರ ಅಳುತ್ತಿರುವ ಪ್ರಿಯನಾದ ಆ ಶಂಕರನನ್ನು ನೋಡಿ ಯೋಗಿನಿಯಾದ ಗಿರಿಜೆಯು ತಾನಾಗಿ ಅಲ್ಲಿಗೆ ಬಂದು ಶಂಕರನಿಗೆ ನಮಸ್ಕಾರಮಾಡಿ ಅವನೊಡನೆ ಮಾತನಾಡಲುತೊಡಗಿ,

೬೧. "ಎಲೈ ಪೂಜ್ಯನಾದ ದೇವನೇ! ನಾನು ಕನ್ಯೆಯು. ಆದುದರಿಂದ ತಂದೆತಾಯಿಗಳ ಇಷ್ಟವನ್ನನುಸರಿಸತಕ್ಕವಳು. ನೀನು ಅವರ ಮೂಲಕವಾಗಿ ನನ್ನ ಪಾಣಿಗ್ರಹಣವನ್ನುಮಾಡಿಕೋ" ಎಂದಳು.

ತಥೇತಿ ಮತ್ವಾ ಸ ಶಿವಃ ಪ್ರದ್ಯುಮ್ನಶರಪೀಡಿತಃ ।
ಸಪ್ತರ್ಷೀನ್ ಪ್ರೇಷಯಾಮಾಸ ತೇ ತು ಗತ್ವಾ ಹಿಮಾಚಲಂ ॥
ಸಂಬೋಧ್ಯ ಚ ವಿವಾಹಸ್ಯ ವಿಧಿಂ ಚಕ್ರುರ್ಮುದಾನ್ವಿತಾಃ ॥ ೬೨ ॥

ಬ್ರಹ್ಮಾಂಡೇ ಯೇ ಸ್ಥಿತಾ ದೇವಾಸ್ತೇಷಾಂ ಸ್ವಾಮೀ ಮಹೇಶ್ವರಃ ।
ವಿವಾಹೇ ತಸ್ಯ ಸಂಪ್ರಾಪ್ತೇ ಸರ್ವೇ ದೇವಾಸ್ಸಮಾಯಯುಃ ॥ ೬೩ ॥

ಅನಂತಾಂಶ್ಚ ಗಣಾಂಶ್ಚೈವ ಸುರಾನ್ದೃಷ್ಟ್ವಾ ಹಿಮಾಚಲಃ ।
ಗಿರಿಜಾಂ ಶರಣಂ ಪ್ರಾಪ್ಯ ತಸ್ಥೌ ಪರ್ವತರಾಟ್ ಸ್ವಯಂ ॥ ೬೪ ॥

ತದಾ ತು ಪಾರ್ವತೀ ದೇವೀ ನಿಧೀನ್ ಸಿದ್ಧೀಃ ಸಮಂತತಃ ।
ಚಕಾರ ಕೋಟಿಶಸ್ತತ್ರ ಬಹುರೂಪಾ ಸನಾತನೀ ॥ ೬೫ ॥

ದೃಷ್ಟ್ವಾ ತದ್ವಿಸ್ಮಿತಾ ದೇವಾ ಬ್ರಹ್ಮಣಾ ಸಹ ಹರ್ಷಿತಾಃ ।
ತುಷ್ಟುವುಃ ಪಾರ್ವತೀಂ ದೇವೀಂ ನಾರೀರತ್ನಂ ಸನಾತನೀಂ ॥ ೬೬ ॥

---

೬೨. ಕಾಮಬಾಣಪೀಡಿತನಾದ ಆ ಶಿವನು ಹಾಗೆಯೇ ಆಗಲೆಂದೊಪ್ಪಿ ಸಪ್ತರ್ಷಿಗಳನ್ನು ಅವಳ ತಂದೆಯ ಬಳಿಗೆ ಕಳುಹಿಸಿದನು. ಆ ಋಷಿಗಳು ಸಂತುಷ್ಟರಾಗಿ ಹಿಮವಂತನಲ್ಲಿಗೆ ಹೋಗಿ ಈ ವಿಚಾರವನ್ನು ಆತನಿಗೆ ತಿಳಿಸಿ ವಿವಾಹನಿಶ್ಚಯವನ್ನು ಮಾಡಿದರು.

೬೩. ಈ ಬ್ರಹ್ಮಾಂಡದಲ್ಲಿ ಯಾವಯಾವ ದೇವತೆಗಳಿದ್ದಾರೋ ಅವರಿಗೆಲ್ಲಾ ಮಹೇಶ್ವರನು ಯಜಮಾನನು (ಪೂಜ್ಯನು) ಆ ಮಹೇಶ್ವರನಿಗೇ ವಿವಾಹವಾಗತಕ್ಕ ಸಂಧರ್ಭವೊದಗಲು ಸಮಸ್ತದೇವತೆಗಳೂ ಬಂದರು.

೬೪. ಹೀಗೆ ಬಂದ ಅಸಂಖ್ಯಾತರಾದ ಗಣಗಳನ್ನೂ ದೇವತೆಗಳನ್ನೂ ನೋಡಿ ಪರ್ವತರಾಜನಾದ ಹಿಮವಂತನು ಅವರನ್ನು ಸತ್ಕರಿಸಲು ತೋಚದೆ ಗಿರಿಜೆಯನ್ನು ಮರೆಹೊಕ್ಕನು.

೬೫. ಆಗ ಅನೇಕರೂಪಳೂ ಪುರಾತನೆಯೂ ಆದ ಪಾರ್ವತೀದೇವಿಯು ನವನಿಧಿಗಳನ್ನೂ ಅಷ್ಟಸಿದ್ಧಿಗಳನ್ನೂ ಕೋಟಿಗಟ್ಟಲೆ ಅಲ್ಲಿ ನಿರ್ಮಿಸಿದಳು.

೬೬. ಇದನ್ನು ನೋಡಿ ಸಂತೋಷಗೊಂಡ ದೇವತೆಗಳು ಬ್ರಹ್ಮನಿಂದೊಡಗೂಡಿದವರಾಗಿ ಪುರಾತನ ಸ್ತ್ರೀರತ್ನಳಾದ ಪಾರ್ವತೀದೇವಿಯನ್ನು ಸ್ತೋತ್ರಮಾಡಿದರು

॥ ದೇವಾ ಊಚುಃ ॥

ಉ ವಿತರ್ಕೇ ಚ ಮಾ ಲಕ್ಷ್ಮೀರ್ಬಹುರೂಪಾಹಿ ದೃಶ್ಯತೇ ।
ಉಮಾ ತಸ್ಮಾಚ್ಚ ತೇ ನಾಮ ನಮಸ್ತಸ್ಯೈ ನಮೋನಮಃ ॥ ೬೭ ॥

ಅಯನಾನ್ಯೇವ ಕತಿಚಿದ್ಬ್ರಹ್ಮಾಂಡೇಽಸ್ಮಿಞ್ಛಿವೇ ತವ ।
ಕಾತ್ಯಾಯನೀ ಹಿ ವಿಜ್ಞೇಯಾ ನಮಸ್ತಸ್ಯೈ ನಮೋನಮಃ ॥ ೬೮ ॥

ಗೌರವರ್ಣಾಚ್ಚ ವೈ ಗೌರೀ ಶ್ಯಾಮವರ್ಣಾಚ್ಚ ಕಾಲಿಕಾ ।
ರಕ್ತವರ್ಣಾದ್ಧೈಮವತೀ ನಮಸ್ತಸ್ಯೈ ನಮೋನಮಃ ॥ ೬೯ ॥

ಭವಸ್ಯ ದಯಿತಾ ತ್ವಂ ವೈ ಭವಾನೀ ರುದ್ರಸಂಯುತಾ ।
ದುರ್ಗಾ ತ್ವಂ ಯೋಗಿದುಷ್ಪ್ರಾಪ್ಯಾ ನಮಸ್ತಸ್ಯೈ ನಮೋನಮಃ ॥ ೭೦ ॥

೬೭. ದೇವತೆಗಳು ಹೇಳುತ್ತಾರೆ—'ಉ' ಎಂಬ ಶಬ್ದವು ವಿತರ್ಕ ಎಂಬ ಅರ್ಥವನ್ನು ಕೊಡುವುದಾಗಿದೆ. 'ಮಾ' ಎಂದರೆ ಲಕ್ಷ್ಮಿಯು. ಆ ಪರಾಶಕ್ತಿಯು ಬಹುರೂಪವಾಗಿ ತೋರುತ್ತಿರುವುದರಿಂದ ವಿತರ್ಕಯೋಗ್ಯಳಾದ ನಿನಗೆ ಉಮಾ ಎಂಬ ಹೆಸರು ಬಂದಿದೆ. ಇಂಥ ನಿನಗೆ ನಮಸ್ಕಾರಗಳು.

೬೮. ಎಲೈ ಮಂಗಳಸ್ವರೂಪಳೇ! ಈ ಬ್ರಹ್ಮಾಂಡದಲ್ಲಿ ನಿನ್ನ ಮಾರ್ಗಗಳು ಅನೇಕ ವಿಧಗಳಾಗಿರುತ್ತವೆ. ಆ ಅರ್ಥದ ಕತಿ, ಅಯನ ಎಂಬ ಎರಡು ಶಬ್ದವೂ ಸೇರಿ ಆವ ಕಾತ್ಯಾಯನೀ ಎಂಬ ನಾಮವು ನಿನಗೆ ಅರ್ಹವಾಗಿದೆ. ಅಂಥ ನಿನಗೆ ನಮಸ್ಕಾರಗಳು.

೬೯. ಹಳದಿಯವರ್ಣವುಳ್ಳವಳಾದ ಕಾರಣ ಗೌರೀ ಎಂದೂ ಕಪ್ಪುವರ್ಣವುಳ್ಳವಳಾದ ಕಾರಣ ಕಾಳಿ ಎಂದೂ, ರಕ್ತವರ್ಣವುಳ್ಳವಳಾದ ಕಾರಣ ಹೈಮವತೀ ಎಂದೂ ಹೆಸರುಗಳನ್ನು ಪಡೆದು ಪ್ರಸಿದ್ಧಳಾದ ನಿನಗೆ ನಮಸ್ಕಾರಗಳು.

೭೦. ನೀನು ಈಶ್ವರನ ಪತ್ನಿಯಾಗಿ ಈಶ್ವರನ ಅರ್ಧಾಂಗದಲ್ಲಿರುವಳಾದ್ದರಿಂದ ಭವಾನಿ ಎಂದೂ, ಯೋಗಿಗಳಿಗೂ ಸುಲಭವಾಗಿ ದೊರಕದವಳಾದ್ದರಿಂದ ದುರ್ಗಾ ಎಂದೂ ಪ್ರಸಿದ್ಧಳಾದ ನಿನಗೆ ನಮಸ್ಕಾರಗಳು.

ನಾಂತಂ ಜಗ್ಮುರ್ವಯಂ ತೇ ವೈ ಚಂಡಿಕಾ ನಾಮ ವಿಶ್ರುತಾ ।
ಅಂಬಾ ತ್ವಂ ಮಾತೃಭೂತಾ ನೋ ನಮಸ್ತಸ್ಯೈ ನಮೋನಮಃ ॥ ೭೧ ॥

ಇತಿ ಶ್ರುತ್ವಾ ಸ್ತವಂ ತೇಷಾಂ ವರದಾ ಸರ್ವಮಂಗಲಾ ।
ದೇವಾನುವಾಚ ಮುದಿತಾ ದೈತ್ಯಭೀತಿಂ ಹರಾಮಿ ವಃ ॥ ೭೨ ॥

ಸ್ತೋತ್ರೇಣಾನೇನ ಸಂಪ್ರೀತಾ ಭವಾಮಿ ಜಗತೀತಲೇ ॥ ೭೩ ॥

ಇತ್ಯುಕ್ತ್ವಾ ಶಂಭುಸಹಿತಾ ಕೈಲಾಸಂ ಗುಹ್ಯಕಾಲಯಂ ।
ಗುಹಾಯಾಂ ಮಿಥುನೀಭೂಯ ಸಹಸ್ರಾಬ್ದಂ ಮುಮೋದ ವೈ ॥ ೭೪ ॥

ಏತಸ್ಮಿನ್ನಂತರೇ ದೇವಾ ಭೀರುಕಾ ಲೋಕನಾಶನಾತ್ ।
ಬ್ರಹ್ಮಾಣಂ ಚ ಪುರಸ್ಕೃತ್ಯ ತುಷ್ಟುವುರ್ಗಿರಿಜಾಪತಿಂ ॥ ೭೫ ॥

---

೭೧. ಚಂಡಿಕೆಯೆಂಬ ಹೆಸರಿನಿಂದ ಪ್ರಸಿದ್ಧಳಾದ ನಿನ್ನ ಮಹಿಮೆಯ ಪರಮಾವಧಿಯನ್ನು ನಾವು ತಿಳಿಯಲಾರೆವು. ಜಗತ್ತಿಗೆ ತಾಯಿಯಾದ ನೀನು ನಮಗೂ ತಾಯಿಯಾಗಿರುವೆ. ಇಂಥ ನಿನಗೆ ನಮಸ್ಕಾರಗಳು” ಎಂದು ಸ್ತುತಿಸಿದರು.

೭೨. ಈ ಪ್ರಕಾರವಾಗಿ ಆ ದೇವತೆಗಳು ಮಾಡಿದ ಸ್ತೋತ್ರವನ್ನು ಕೇಳಿ ಸರ್ವಮಂಗಳಾದೇವಿಯು ಸಂತೋಷಗೊಂಡು ವರವನ್ನು ಕೊಡಲು ಉದ್ಯುಕ್ತಳಾಗಿ ದೇವತೆಗಳನ್ನು ಕುರಿತು “ ನಿಮಗೊದಗಿರುವ ರಾಕ್ಷಸಭೀತಿಯನ್ನು ಹೋಗಲಾಡಿಸುತ್ತೇನೆ ” (ಎಂದು ಹೇಳಿದಳು.)

೭೩. “ ಅಲ್ಲದೆ ಈ ಪ್ರಪಂಚದಲ್ಲಿ ಈ ಸ್ತೋತ್ರವನ್ನು ಯಾರು ಪಠಿಸುತ್ತಾರೋ ಅವರ ವಿಷಯದಲ್ಲಿ ನಾನು ಸದಾ ಸಂತುಷ್ಟಳಾಗಿರುತ್ತೇನೆ ” ಎಂದೂ ಹೇಳಿದಳು.

೭೪. ಈ ಪ್ರಕಾರ ಹೇಳಿ ಈಶ್ವರನನ್ನು ಹಿಂಬಾಲಿಸಿ ಹೊರಟು ಸಿದ್ಧರಿಗೆ ಆವಾಸಸ್ಥಾನವಾದ ಕೈಲಾಸಕ್ಕೆ ಹೋಗಿ ದಾಂಪತ್ಯಭಾವನೆಯನ್ನು ಹೊಂದಿ ಸಾವಿರ ವರ್ಷಗಳವರೆಗೆ ಗುಹೆಯಲ್ಲಿ ಕ್ರೀಡಿಸುತ್ತಿದ್ದರು.

೭೫. ಈ ಕ್ರೀಡಾಮಧ್ಯದಲ್ಲಿ ದೇವತೆಗಳು ರಾಕ್ಷಸಬಾಧೆಯಿಂದ ಆಗುತ್ತಿರುವ ಲೋಕಕ್ಷಯವನ್ನು ನೋಡಿ ಹೆದರಿದವರಾಗಿ ಬ್ರಹ್ಮನನ್ನು ಮುಂದಿಟ್ಟುಕೊಂಡು ಕೈಲಾಸಕ್ಕೆ ಹೋಗಿ ಗಿರಿಜಾಪತಿಯಾದ ಪರಮೇಶ್ವರನನ್ನು ಬಹುವಾಗಿ ಸ್ತೋತ್ರ ಮಾಡಿದರು.

ಲಜ್ಜಿತೌ ತೌ ತದಾ ತತ್ರ ಪಶ್ಚಾತ್ತಾಪಂ ಹಿ ಚಕ್ರತುಃ ।
ಮಹಾನ್‌ಕ್ರೋಧಸ್ತಯೋಶ್ಚಾಸೀತ್ತೇನ ವೈ ದುದ್ರುವುಃ ಸುರಾಃ ॥ ೭೬ ॥

ಪ್ರದ್ಯುಮ್ನೋ ಬಲವಾಂಸ್ತತ್ರ ಸಂತಸ್ಥೌ ಗೌರಿವಾಚಲಃ ।
ರುದ್ರಕೋಪಾಗ್ನಿನಾ ದಗ್ಧೋ ಬಭೂವ ಬಲವತ್ತರಃ ॥ ೭೭ ॥

ಪ್ರದ್ಯುಮ್ನಃ ಸ್ಥೂಲರೂಪಂ ಚ ತ್ಯಕ್ತ್ವಾ ಭಸ್ಮಮಯಂ ತದಾ ।
ಸೂಕ್ಷ್ಮದೇಹಮುಪಾಗಮ್ಯ ವಿಶ್ರುತೋಽಭೂದನಂಗಕಃ ॥
ಯಥಾ ಪೂರ್ವಂ ತಥೈವಾಸೀತ್ಕಾಯಂ ಕೃತ್ವಾ ಸ್ಮರೋ ವಿಭುಃ ॥ ೭೮ ॥

ಸ್ಥೂಲರೂಪಾ ರತಿರ್ದೇವೀ ಶತಾಬ್ದಂ ಶಂಕರಂ ಪರಂ ।
ಧ್ಯಾನೇನಾರಾಧಯಾಮಾಸ ಗಿರಿಜಾವಲ್ಲಭಂ ವ್ರತೈಃ ॥
ತದಾ ದದೌ ವರಂ ದೇವಸ್ತಸ್ಯೈ ರತ್ಯೈ ಸನಾತನಃ ॥ ೭೯ ॥

---

೭೬. ಆಗ ಕ್ರೀಡಾಸಕ್ತರಾಗಿದ್ದ ಅವರೀರ್ವರೂ ಅತ್ಯಂತ ಲಜ್ಜಾಯುತರಾಗಿ ಖಿನ್ನತೆಹೊಂದಿದರು. ಅವರೀರ್ವರೂ ಅತ್ಯಂತ ಕೋಪಗೊಳ್ಳಲಾಗಿ ಆ ಕೋಪಕ್ಕೆ ಹೆದರಿ ದೇವತೆಗಳು ಓಡಿಹೋದರು.

೭೭. ಬಲಿಷ್ಠನಾದ ಪ್ರದ್ಯುಮ್ನನು ಮಾತ್ರ ಚಲಿಸದಿರುವ ವೃಷಭದಂತೆ ಅಲ್ಲಿಯೇ ನಿಂತನು. ಅತಿಬಲಿಷ್ಠನಾಗಿದ್ದ ಆತನು ಈಶ್ವರನ ಕೋಪವೆಂಬ ಬೆಂಕಿಯಿಂದ ಸುಟ್ಟುಹೋದನು.

೭೮. ಆಗ ಪ್ರದ್ಯುಮ್ನನ ಸ್ಥೂಲಶರೀರವು ಭಸ್ಮವಾಯಿತು. ಅವನು ಅಂದಿನಿಂದ ಸೂಕ್ಷ್ಮಶರೀರವನ್ನು ಹೊಂದಿ ಅನಂಗ (ಶರೀರವಿಲ್ಲದವ) ನೆಂದು ಪ್ರಸಿದ್ಧನಾದನು. ಈರೀತಿ ಮನ್ಮಥನು ಸೂಕ್ಷ್ಮಶರೀರವನ್ನು ಹೊಂದಿದಾಗ್ಯೂ ಪ್ರಭಾವದಲ್ಲಿ ಮೊದಲಿನಂತೆಯೇ ಇದ್ದನು.

೭೯. ಸ್ಥೂಲಶರೀರಯುಕ್ತಳಾದ ರತೀದೇವಿಯು ಒಂದುನೂರುವರ್ಷಗಳು ನಿಯಮಯುಕ್ತಳಾಗಿ ಗಿರಿಜಾಪತಿಯೂ ಸರ್ವೋತ್ತಮನೂ ಆದ ಶಂಕರನನ್ನು ಧ್ಯಾನಮಾಡಿ ಪೂಜಿಸಿದಳು. ಆಗ ಪುರಾತನನಾದ ಈಶ್ವರನು ಆ ರತಿದೇವಿಗೆ ವರವನ್ನು ಕೊಡುವವನಾಗಿ ;

ರತಿದೇವಿ ಶೃಣು ತ್ವಂ ವೈ ಲೋಕಾನಾಂ ಹೃತ್ಸು ಜಾಯಸೇ ।
ಯೌವನೇ ವಯಸಿ ಪ್ರಾಪ್ತೇ ನೃಣಾಂ ದೇಹ್ಯೈಃ ಪತಿಂ ಸ್ವಕಂ ॥
ಭಜಿಷ್ಯಸಿ ಮದರ್ಥೇಚ ಪ್ರದ್ಯುಮ್ನಂ ಕೃಷ್ಣಸಂಭವಂ ॥ ೮೦ ॥

ಸ್ವಾರೋಚಿಷಾಂತರಃ ಕಾಲೋ ವರ್ತತೇ ಚಾದ್ಯ ಸುಪ್ರಿಯಃ ।
ವೈವಸ್ವತೇಽಂತರೇ ಪ್ರಾಪ್ತೇ ಹ್ಯಷ್ಟಾವಿಂಶತ್ತಮೇ ಯುಗೇ ॥
ದ್ವಾಪರಾಂತೇ ಚ ಭಗವಾನ್ಕೃಷ್ಣಃ ಸಾಕ್ಷಾಜ್ಜನಿಷ್ಯತಿ ॥ ೮೧ ॥

ತದಾ ತಸ್ಯ ಸುತಂ ದೇವಂ ಪ್ರದ್ಯುಮ್ನಂ ಮೇರುಮೂರ್ಧನಿ ।
ಭಜಿಷ್ಯಸಿ ಸುಖಂ ರಮ್ಯೇ ವಿಪಿನೇ ನಂದನೇ ಚಿರಂ ॥ ೮೨ ॥

ಅನ್ಯೇಷು ದ್ವಾಪರಾಂತೇಷು ಸ್ವರ್ಣಗರ್ಭೋ ಹಿ ತತ್ಪತಿಃ ।
ಜನ್ಮವಾನ್ವರ್ತತೇ ಭೂಮೌ ಯಥಾ ಕೃಷ್ಣಸ್ತಥೈವ ಸಃ ॥ ೮೩ ॥

---

೮೦ ಎಲೌ ರತೀದೇವಿಯೇ ! ನೀನು ಪುರುಷರ ಯೌವನಕಾಲದಲ್ಲಿ ಜನರ ಮನಸ್ಸಿನಲ್ಲಿ ಹುಟ್ಟುತ್ತೀಯೆ. ನೀನು ನನಗೆ ಕಾಮವಿಕಾರವುಂಟುಮಾಡುವುದಕ್ಕಾಗಿ ಮಹಾವಿಷ್ಣುವಿನಿಂದ ಅವತರಿಸಲ್ಪಟ್ಟ ಕೃಷ್ಣನ ಪುತ್ರನಾಗಿ ಆವಿರ್ಭೂತನಾಗುವ ನಿನ್ನ ಪತಿಯಾದ ಪ್ರದ್ಯುಮ್ನನನ್ನು ಸೇವಿಸುತ್ತೀಯೆ.

೮೧. ಈಗ ಹಿತಕರವಾದ ಸ್ವಾರೋಚಿಷಮನ್ವಂತರವು ನಡೆಯುತ್ತಿದೆ. ಮುಂದೆ ವೈವಸ್ವತಮನ್ವಂತರವು ಬಂದನಂತರ ಇಪ್ಪತ್ತೆಂಟನೆಯ ದ್ವಾಪರಯುಗದ ಕೊನೆಯಲ್ಲಿ ಷಡ್ಗುಣೈಶ್ವರ್ಯಸಂಪನ್ನನಾದ ಪರಮಾತ್ಮನು ಕೃಷ್ಣಾವತಾರ ಮಾಡುತ್ತಾನೆ.

೮೨. ಆಗ ಅವನ ಮಗನಾಗಿ ಜನಿಸಿದ ಪ್ರದ್ಯುಮ್ನದೇವನೊಡನೆ ಮೇರುಪರ್ವತದ ಶಿಖರದಲ್ಲೂ ಮನೋಹರವಾದ ನಂದನವನದಲ್ಲೂ ಸುಖದಿಂದ ಬಹುಕಾಲ ಸೇವಿಸುತ್ತೀಯೆ.

೮೩. ಇನ್ನುಳಿದ ದ್ವಾಪರಯುಗದಲ್ಲಿ ನಿನ್ನ ಪತಿಯು ಸ್ವರ್ಣಗರ್ಭನಾಗಿ ಭೂಮಿಯಲ್ಲಿ ಜನ್ಮವನ್ನು ಹೊಂದಿ ಸಾಕ್ಷಾತ್ ಕೃಷ್ಣನಂತಿರುತ್ತಾನೆ.

ಮಧ್ಯಾಹ್ನೇ ಚೈವ ಸಂಧ್ಯಾಯಾಂ ಬ್ರಹ್ಮಣೋಽವ್ಯಕ್ತಜನ್ಮನಃ ।
ಕಲ್ಪೇಕಲ್ಪೇ ಹರಿಸ್ಸಾಕ್ಷಾತ್ಕರೋತಿ ಜನಮಂಗಳಂ　　॥ ೮೪ ॥

ಇತ್ಯುಕ್ತ್ವಾ ಭಗವಾಞ್ಜೃಂಭುಸ್ತತ್ರೈವಾಂತರ್ಧಿಮಾಗಮತ್ ।
ರಾಜಾ ಬಭೂವ ರುದ್ರಾಣಾಂ ಗಿರಿಜಾವಲ್ಲಭೋ ಭವಃ　　॥ ೮೫ ॥

ಇತಿ ತೇ ರುದ್ರಮಾಹಾತ್ಮ್ಯಂ ಪ್ರಸಂಗೇನಾಪಿ ವರ್ಣಿತಂ ।
ಧನವಾನ್ಪುತ್ರವಾನ್ ವಾಗ್ಮೀ ಭವೇದ್ಯಃ ಶೃಣುಯಾದಿದಂ　　॥ ೮೬ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಪ್ರತಿಸರ್ಗಪರ್ವಣಿ ಚತುರ್ಥಖಂಡೇ
ಕಲಿಯುಗೀಯೇತಿಹಾಸಸಮುಚ್ಚಯೇ ರುದ್ರಮಾಹಾತ್ಮ್ಯವರ್ಣನಂ
ನಾಮ ಚತುರ್ದಶೋಽಧ್ಯಾಯಃ.



---

೮೪. "ಮಾಯೆಯಿಂದ ಜನಿಸಿದವನೂ ಪ್ರತಿಕಲ್ಪದ ಮಧ್ಯಾಹ್ನಕಾಲ ಸಂಧ್ಯಾಕಾಲಗಳಲ್ಲಿ ಸಾಕ್ಷಾತ್ ಪರಮಾತ್ಮಸ್ವರೂಪನೆನಿಸಿದವನೂ ಆದ ನಿನ್ನ ಪತಿಯು ಸಕಲ ಜನರಿಗೂ ಮಂಗಳವನ್ನುಂಟುಮಾಡುತ್ತಾನೆ."

೮೫. ಈರೀತಿಯಾಗಿ ಹೇಳಿ ಷಡ್ಗುಣೈಶ್ವರ್ಯಸಂಪನ್ನನಾದ ಪರಮೇಶ್ವರನು ಅಲ್ಲಿಯೇ ಅಂತರ್ಧಾನಹೊಂದಿದನು. ಬಳಿಕ ಗಿರಿಜಾಪತಿಯಾದ ಈಶ್ವರನು ರುದ್ರರಿಗೆಲ್ಲಾ ರಾಜನಾದನು.

೮೬. ಸಂದರ್ಭವೊದಗಲಾಗಿ ರುದ್ರಮಹಾತ್ಮೆಯನ್ನು ಈರೀತಿಯಾಗಿ ಹೇಳಿದೆನು. ಇದನ್ನು ಯಾವನು ಕೇಳುತ್ತಾನೋ ಅವನು ಧನವಂತನೂ, ಪುತ್ರವಂತನೂ, ವಾಚಾಳಿಯೂ ಆಗುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಪ್ರತಿಸರ್ಗಪರ್ವದ ನಾಲ್ಕನೆಯ ಖಂಡದಲ್ಲಿ
ಕಲಿಯುಗದ ಇತಿಹಾಸಸಮುಚ್ಚಯದಲ್ಲಿ ರುದ್ರ್ಯಮಾಹಾತ್ಮ್ಯವರ್ಣನೆಯೆಂಬ
ಹದಿನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಪ್ರತಿಸರ್ಗಪರ್ವಣಿ ಚತುರ್ಥಖಂಡೇ
## ಪಂಚದಶೋಽಧ್ಯಾಯಃ

॥ ಸೂತ ಉವಾಚ ॥

ಭೃಗುವರ್ಯ ಮಹಾಭಾಗ ಶೃಣು ತ್ವಂ ಜೀವವರ್ಣಿತಂ ।
ಪವಿತ್ರಂ ವಸುಮಾಹಾತ್ಮ್ಯಂ ಸರ್ವವಸ್ತುಸುಖಪ್ರದಂ ॥ ೧ ॥

॥ ಬೃಹಸ್ಪತಿರುವಾಚ ॥

ವೈವಸ್ವತೇಽಂತರೇ ಪ್ರಾಪ್ತೇ ಚಾದ್ಯೇ ಸತ್ಯಯುಗೇ ಶುಭೇ ।
ಇಲ್ವಲಾ ತಾಮಸೀ ಶಕ್ತಿಃ ಪ್ರಿಯಾ ವಿಶ್ರವಸೋ ಮುನೇಃ ॥
ಶಿವಮಾರಾಧಯಾಮಾಸ ಸತೀ ಸಾ ಪಾರ್ಥಿವಾರ್ಚನೈಃ ॥ ೨ ॥

---

## ಹದಿನೈದನೆಯ ಅಧ್ಯಾಯ

೧. ಸೂತಮುನಿವರ್ಯನು ಹೇಳುತ್ತಾನೆ—ಎಲೈ ಮಹಾತ್ಮನಾದ ಭೃಗುವೇ! ಸಕಲವಸ್ತುಗಳಿಗೂ ಸುಖವನ್ನು ಕೊಡುವುದೆಂದು ಬೃಹಸ್ಪತ್ಯಾಚಾರ್ಯರು ಹೇಳಿದುದೂ ಪವಿತ್ರವೂ ಆದ ವಸುಮಹಾತ್ಮೆಯನ್ನು ಅವರ ಮಾತಿನಲ್ಲಿ ಹೇಳುವೆನು ಕೇಳು.

೨. ಬೃಹಸ್ಪತ್ಯಾಚಾರ್ಯರು ಹೇಳುತ್ತಾರೆ—ವೈವಸ್ವತಮನ್ವಂತರವು ಬರಲು ಸುಖಕರವಾದ ಮೊದಲನೆಯ ಕೃತಯುಗದಲ್ಲಿ ವಿಶ್ರವಮುನಿಯ ಪತ್ನಿಯೂ ತಾಮಸೀ ಶಕ್ತಿಯೂ ಆದ 'ಇಲ್ವಲಾ' ಎಂಬವಳು ಪಾರ್ಥಿವಾರ್ಚನಕ್ರಮದಿಂದ ಈಶ್ವರನನ್ನು ಪೂಜಿಸಿದಳು.

ಏತಸ್ಮಿನ್ನಂತರೇ ಜಾತೋ ದೀಕ್ಷಿತಾನ್ವಯಸಂಭವಃ ।
ಯಕ್ಷಶರ್ಮಾ ಮಹಾಧೂರ್ತೋ ಯಕ್ಷಿಣೀಪೂಜನೇ ರತಃ ॥ ೩ ॥

ತಸ್ಯ ಮಿತ್ರಸ್ನುಷಾ ಸುಭ್ರೂ ರಮಿತಾ ತೇನ ಪಾಪಿನಾ ।
ತೇನ ದೋಷೇಣ ವಿಪ್ರೋಽಸೌ ಕುಷ್ಠಭೂತಸ್ತದಾಭವತ್ ॥ ೪ ॥

ಕುಷ್ಠಭೂತಂ ದ್ವಿಜಂ ತ್ಯಕ್ತ್ವಾ ಯಕ್ಷಿಣೀ ಮಂತ್ರವತ್ಸಲಾ ।
ಶಿವಲೋಕಂ ಯಯೌ ದೇವೀ ಕೈಲಾಸಂ ಗುಹ್ಯಕಾಲಯಂ ॥ ೫ ॥

ಕ್ಷುಧಾತುರೋ ಯಕ್ಷಶರ್ಮಾ ಶಿವರಾತ್ರೇ ಮಹೋತ್ತಮೇ ।
ದರ್ಶಿತಂ ಪೂಜನಂ ತೇನ ಯೋಷಿದ್ಭ್ಯಶ್ಚೋಪದೇಶತಃ ॥ ೬ ॥

ಪ್ರಭಾತೇ ಸಮನುಪ್ರಾಪ್ತೇ ಪಾರಣಾಂ ಕೃತವಾನ್ದ್ವಿಜಃ ।
ಮರಣಂ ಪ್ರಾಪ್ತವಾನ್ಕುಷ್ಠೀ ತತ್ರೈವ ಶಿವಮಂದಿರೇ ॥ ೭ ॥

---

೩. ಈ ಸಮಯಕಾಲದಲ್ಲಿ ದೀಕ್ಷಿತವಂಶದಲ್ಲಿ ಯಕ್ಷಶರ್ಮನೆಂಬುವನು ಹುಟ್ಟಿದ ಮಹಾಧೂರ್ತನೂ, ಯಕ್ಷಿಣಿಯ ಪೂಜೆಯಲ್ಲಿ ನಿರತನೂ ಆಗಿರುತ್ತಿದ್ದನು.

೪. ಆ ಪಾಪಿಯು ತನ್ನ ಸ್ನೇಹಿತನ ರೂಪವತಿಯಾದ ಸೊಸೆಯನ್ನುಪಭೋಗಿಸಿದನು. ಆ ಪಾಪದಿಂದ ಆ ಬ್ರಾಹ್ಮಣನು ಕುಷ್ಠರೋಗವನ್ನು ಪಡೆದನು.

೫. ಮಂತ್ರಪ್ರಿಯಳಾದ ಯಕ್ಷಿಣೀದೇವಿಯು ಕುಷ್ಠರೋಗವನ್ನು ಹೊಂದಿದ ಆ ಬ್ರಾಹ್ಮಣನನ್ನು ಕೈಬಿಟ್ಟು ಶಿವಲೋಕವೆನಿಸಿ ಗುಹ್ಯಕರನಿವಾಸವಾದ ಕೈಲಾಸಕ್ಕೆ ಹೋದಳು.

೬. ಹಸಿವಿನಿಂದ ಬಳಲಿದ ಯಕ್ಷಶರ್ಮನು ಉತ್ತಮೋತ್ತಮವಾದ ಶಿವರಾತ್ರಿಯದಿನ ಶಿವಮಂದಿರದಲ್ಲಿ ಸ್ತ್ರೀಯರಿಗೆ ಶಿವಪೂಜೆಯನ್ನು ಉಪದೇಶಮಾಡಿದನು.

೭. ಮಾರನೆಯದಿನ ಬೆಳಗಾಗಲು ಆ ಬ್ರಾಹ್ಮಣನು ಪಾರಣೆಯನ್ನು ಮಾಡಿದನು. ಹೀಗೆ ಆ ಕುಷ್ಠಿಯು ಕಾಲಕ್ರಮದಲ್ಲಿ ಅದೇ ದೇವಾಲಯದಲ್ಲಿಯೇ ಮೃತನಾದನು.

ತೇನ ಪುಣ್ಯಪ್ರಭಾವೇಣ ರಾಜಾಸೀತ್ಕರಣಾಟಕೇ ।
ರಾಜರಾಜ ಇತಿ ಖ್ಯಾತೋ ಮಂಡಲೀಕೋ ನೃಪೋಽಭವತ್ ॥ ೮ ॥

ಶಿವಾರ್ಚನಂ ಮಂಗಲದಂ ಗೇಹೇಗೇಹೇ ದಿನೇದಿನೇ ।
ಬ್ರಾಹ್ಮಣೈಃ ಕಾರಯಾಮಾಸ ರಾಜರಾಜೋ ಮಹಾಬಲಃ ॥ ೯ ॥

ಶತಾಬ್ದಂ ಭೂತಲೇ ರಾಜ್ಯಂ ಕೃತಂ ತೇನ ಮಹಾತ್ಮನಾ ।
ರಾಜ್ಯಾಧಿಕಾರಂ ಶ್ರೇಷ್ಠಸ್ಯ ಸುತಸ್ಯ ಪ್ರದದೌ ನೃಪಃ ॥
ತತಃ ಕಾಶೀಪುರೀಂ ಪ್ರಾಪ್ಯ ಶಿವಂ ತುಷ್ಟಾವ ಪೂಜನೈಃ ॥ ೧೦ ॥

ತ್ರಿವರ್ಷಾಂತೇ ಮಹಾದೇವೋ ಜ್ಯೋತಿರ್ಲಿಂಗೋ ಬಭೂವ ಹ ।
ರಾಜರಾಜೇಶ್ವರೋ ನಾಮ ಪ್ರಸಿದ್ಧೋಽಭೂಚ್ಛಿವಃ ಸ್ವಯಂ ॥ ೧೧ ॥

ಸ ನೃಪಃ ಪಾವಿತಸ್ತೇನ ತ್ಯಕ್ತ್ವಾ ಪ್ರಾಣಾಂಸ್ತದಾ ಸ್ವಯಂ ।
ಇಲ್ವಲಾಗರ್ಭಮಾಗಮ್ಯ ಪುತ್ರೋಽಭೂಚ್ಛುಭಲಕ್ಷಣಃ ॥ ೧೨ ॥

---

೮. ಆ ಪುಣ್ಯಪ್ರಭಾವದಿಂದ ಕರ್ಣಾಟಕದೇಶದಲ್ಲಿ ರಾಜರಾಜನೆಂದು ಪ್ರಸಿದ್ಧನಾದ ಮಂಡಲಾಧಿಪತಿಯಾದನು.

೯. ಮಹಾಬಲಿಷ್ಠನಾದ ಆ ರಾಜರಾಜನು ದಿನದಿನವೂ ಸಕಲಮಂಗಳವನ್ನುಂಟುಮಾಡುವ ಶಿವಾರ್ಚನೆಯನ್ನು ಎಲ್ಲ ಬ್ರಾಹ್ಮಣರ ಮನೆಯಲ್ಲಿಯೂ ಮಾಡಿಸಿದನು.

೧೦. ಮಹಾತ್ಮನಾದ ಆ ರಾಜನು ಒಂದುನೂರುವರ್ಷಗಳು ಹೀಗೆ ಭೂಮಿಯಲ್ಲಿ ರಾಜ್ಯವಾಳಿದನು. ಅನಂತರ ಶ್ರೇಷ್ಠನಾದ ತನ್ನ ಮಗನಿಗೆ ರಾಜ್ಯಾಧಿಕಾರ್ಯವನ್ನು ವಹಿಸಿಕೊಟ್ಟು ತಾನು ಕಾಶೀಪಟ್ಟಣಕ್ಕೆ ಬಂದು ಪೂಜೆ, ಸ್ತುತಿ ಇವುಗಳಿಂದ ಈಶ್ವರನನ್ನು ಸಂತೋಷಪಡಿಸುತ್ತಿದ್ದನು.

೧೧. ಮಹಾದೇವನಾದ ಶಿವನು ಮೂರುವರ್ಷಗಳ ಅನಂತರ ತಾನೇ ಜ್ಯೋತಿರ್ಲಿಂಗನಾಗಿ ರಾಜರಾಜೇಶ್ವರನೆಂದು ಪ್ರಸಿದ್ಧನಾದನು.

೧೨. ಆರೀತಿ ಈಶ್ವರನಿಂದ ರಾಜನು ಪರಿಶುದ್ಧನಾಗಿ ಪ್ರಾಣವನ್ನುಬಿಟ್ಟು ಇಲ್ವಲಾದೇವಿಯ ಗರ್ಭದಲ್ಲಿ ನೆಲಸಿ ಶುಭಲಕ್ಷಣಗಳಿಂದ ಕೂಡಿ ಅವಳಿಗೆ ಮಗನಾಗಿ ಹುಟ್ಟಿದನು.

ಜಾತಃ ಕುತ್ಸಿತವೇಲಾಯಾಂ ರಾತ್ರೌ ಘೋರತಮೋವೃತೇ ।
ಕುಬೇರ ಇತಿ ತನ್ನಾಮ ಪ್ರಸಿದ್ಧಮಭವದ್ಭುವಿ ॥ ೧೩ ॥

ತಪಸಾ ತೋಷಯಾಮಾಸ ಸ ಬಾಲಃ ಪರಮೇಷ್ಠಿನಂ ।
ತಸ್ಮೈ ಬ್ರಹ್ಮಾ ತದಾಗತ್ಯ ಲಂಕಾಂ ನಾಮ ಪುರೀಂ ಶುಭಾಂ ॥ ೧೪ ॥

ಸುವರ್ಣರಚಿತಾಂ ರಮ್ಯಾಂ ಕಾರಯಿತ್ವಾ ದದೌ ಪ್ರಭುಃ ।
ತಿಸ್ರಃ ಕೋಟ್ಯಃ ಸ್ಮೃತಾ ಯಕ್ಷಾ ಲೋಕಕಾರ್ಯಪರಾಯಣಾಃ ॥
ತೇಷಾಂ ಸ್ವಾಮೀ ಸ ವೈ ಚಾಸೀದ್ಯಕ್ಷರಾಡಿತಿ ವಿಶ್ರುತಃ ॥ ೧೫ ॥

ಕಿನ್ನರಾ ಬಹುರೂಪಾಶ್ಚ ತದಾದೇಶನಿವಾಸಿನಃ ।
ಬಲಿಭಿಃ ಪೂಜಯಾಮಾಸುಃ ಕಿನ್ನರೇಶಸ್ತದಾ ಸ್ವಯಂ ॥ ೧೬ ॥

---

೧೩. ಭಯಂಕರವಾದ ಕತ್ತಲೆಯು ಆವರಿಸಿದ ರಾತ್ರಿಯಲ್ಲಿ ಅವೇಳೆಯಲ್ಲಿ ಹುಟ್ಟಿದವನಾದ್ದರಿಂದ, ಕುಬೇರ ಎಂಬದಾಗಿ ಅವನ ಹೆಸರು ಭೂಲೋಕದಲ್ಲಿ ಪ್ರಕಟವಾಯಿತು.

೧೪. ಆ ಬಾಲಕನು ತಪಸ್ಸಿನಿಂದ ಬ್ರಹ್ಮನನ್ನು ಸಂತೋಷಗೊಳಿಸಿದನು. ಆಗ ಬ್ರಹ್ಮನು ಬಂದು, ಮಂಗಳಕರನಾಗಿಯೂ ಮನೋಹರವಾಗಿಯೂ ಸುವರ್ಣದಿಂದ ರಚಿಸಿದುದಾಗಿಯೂ ಇರುವ ಲಂಕಾ ಎಂಬ ಪಟ್ಟಣವನ್ನು ನಿರ್ಮಾಣಮಾಡಿ ಅವನಿಗೆ ಕೊಟ್ಟನು.

೧೫. ಅಲ್ಲಿದ್ದ ಮೂರುಕೋಟಿ ಯಕ್ಷರು ಲೋಕ ಕಾರ್ಯದಲ್ಲಿ ನಿರತರಾದರು. ಆ ಬಾಲಕನು ಅವರಿಗೆಲ್ಲಾ ರಾಜನಾಗಿ ಯಕ್ಷರಾಟ್ ಎಂದು ಪ್ರಖ್ಯಾತನಾದನು.

೧೬. ಅನೇಕ ರೂಪವುಳ್ಳ ಕಿನ್ನರರೆಲ್ಲ ಇವನ ಅಪ್ಪಣೆಯನ್ನು ಪರಿಪಾಲಿಸುತ್ತಾ ನಾನಾವಿಧವಾದ ಉಪಹಾರಗಳಿಂದ ಅವನನ್ನು ಪೂಜಿಸಿದರು. ಆಗ ಆತನು ಕಿನ್ನರೇಶನೆಂದು ಪ್ರಸಿದ್ಧನಾದನು.

ಗುಹ್ಯಕಾ ನರಭಾವಸ್ಥಾ ದಿವ್ಯಮೂಲ್ಯಪ್ರಕಾರಿಣಃ ।
ತೇಷಾಂ ಸ್ವಾಮೀ ಸ ವೈ ಚಾಸೀತ್ಕುಬೇರೋ ಭಗವಾನ್ಸ್ವಯಂ ॥ ೧೭ ॥

ಗಿರಿಭ್ಯೋ ಬಹುರತ್ನಾನಿ ಗೃಹೀತ್ವಾ ಲೋಕಹೇತವೇ ।
ರಕ್ಷೋಭಿಃ ಪ್ರೇಷಯಾಮಾಸ ಗೇಹೇಗೇಹೇ ಜನೇಜನೇ ॥ ೧೮ ॥

ಧರ್ಮಕಾರ್ಯಕರಾ ಯೇ ತು ನರಾ ವೇದಪರಾಯಣಾಃ ।
ತೇಷಾಂ ಕೋಶಾಶ್ಚ ತೇನೈವ ಪೂರಿತಾ ನರಧರ್ಮಿಣಾ ॥ ೧೯ ॥

ಯೇ ತು ಲೋಭಪರಾ ಧೂರ್ತಾ ನರಾಃ ಸಂಚಯಕಾರಿಣಃ ।
ತೇಷಾಂ ರಾಜಾ ಸ ಭಗವಾನ್ದ್ರವ್ಯದೋ ರಾಕ್ಷಸೇಶ್ವರಃ ॥ ೨೦ ॥

ಶವಭೂತಾ ನರಾ ಯೇ ವೈ ದಾಹಿತಾ ವಹ್ನಿಕರ್ಮಣಿ ।
ಅಗ್ನಿದ್ವಾರೇಣ ತನ್ಮಾಂಸಂ ಭುಂಜತೇ ರಾಕ್ಷಸಾಃ ಸದಾ ॥ ೨೧ ॥

---

೧೭. ಗುಹ್ಯಕರೂ ಸಹ ತಾವೂ ಮನುಷ್ಯರೆಂಬ ಭಾವವನ್ನು ಹೊಂದಿ ಉತ್ತಮವಾದ ದ್ರವ್ಯವನ್ನು ಕಾಣಿಕೆ ಒಪ್ಪಿಸುತ್ತಿದ್ದರು. ಪೂಜ್ಯನಾದ ಕುಬೇರನು ಆ ಗುಹ್ಯಕರಿಗೂ ಯಜಮಾನನಾದನು.

೧೮. ಜನಗಳಿಗಾಗಿ ಪರ್ವತಗಳಿಂದ ನಾನಾವಿಧವಾದ ರತ್ನಗಳನ್ನು ತಂದು ರಾಕ್ಷಸರಮೂಲಕ ಮನೆಮನೆಗೂ ಎಲ್ಲಾ ಜನರಿಗೂ ಕಳುಹಿಸಿಕೊಡುತ್ತಲಿದ್ದನು.

೧೯. ಮನುಷ್ಯಧರ್ಮನೆನಿಸಿದ ಕುಬೇರನು ಯಾವಮನುಷ್ಯರು ಧರ್ಮನಿರತರೂ ಧರ್ಮಕಾರ್ಯದಲ್ಲಿ ಆಸಕ್ತರೂ ಆಗಿರುತ್ತಾರೋ ಅವರ ಭಂಡಾರವನ್ನು ಧನರತ್ನಾದಿಗಳಿಂದ ತುಂಬಿಸುತ್ತಿದ್ದನು.

೨೦. ಪೂಜ್ಯನೂ ರಾಕ್ಷಸರಿಗೆ ರಾಜನೂ ಆದ ಕುಬೇರನು, ಯಾರು ಧೂರ್ತರೂ ಲೋಭಿಗಳೂ, ಹಣವನ್ನು ಕೂಡಿಡುವವರೂ ಆಗಿರುತ್ತಾರೋ ಅವರಿಗೆಲ್ಲಾ ಅಧಿಪತಿಯಾಗಿ ಹಣವನ್ನು ಕೊಡುವವನಾಗಿದ್ದನು.

೨೧. ಮನುಜರು ಶವರೂಪರಾಗಿ ಅಗ್ನಿಯಲ್ಲಿ ಸುಡಲ್ಪಡುತ್ತಿದ್ದರೆ ರಾಕ್ಷಸರು ಯಾವಾಗಲೂ ಅಗ್ನಿಯ ಮೂಲಕ ಅವರ ಮಾಂಸವನ್ನು ತಿನ್ನುತ್ತಿದ್ದರು.

ಆಭಿರ್ವಿಭೂತಿಭಿರ್ಯುಕ್ತಂ ದೃಷ್ಟ್ವಾ ತಂ ರಾವಣೋ ಬಲೀ ।
ಜಿತ್ವಾ ನಿಷ್ಕಾಸ್ಯ ಲಂಕಾಯಾಃ ಸ್ವಯಂ ರಾಜಾ ಬಭೂವ ಹ　　॥ ೨೨ ॥

ಕುಬೇರೋ ದುಃಖಿತಸ್ತತ್ರ ಶಂಕರಂ ದುಃಖನಾಶನಂ ।
ಶರಣ್ಯಂ ಶರಣಂ ಪ್ರಾಪ್ತಸ್ತದಾ ತು ಭಗವಾನ್ ಹರಃ　　॥ ೨೩ ॥

ತೇನ ಮೈತ್ರೀ ಕೃತಾ ರಮ್ಯಾ ಕುಬೇರೇಣ ಸಮಂ ದಧೌ ।
ಅಲಕಾವತೀ ನಾಮ ಪುರೀ ರಚಿತಾ ವಿಶ್ವಕರ್ಮಣಾ ॥
ಸ ತಾಂ ಮಂಗಲದಾಮಾಪ್ಯ ಕುಬೇರೋ ಹರ್ಷಮಾಪ್ತವಾನ್　　॥ ೨೪ ॥

ಇತಿ ಶ್ರುತ್ವಾ ತದನುಜೋ ರಾವಣೋ ಲೋಕರಾವಣಃ ।
ಕೈಲಾಸಂ ಗಿರಿಮಾಗಮ್ಯ ನಲಕೂಬರಭೋಗಿನೀಂ　　॥ ೨೫ ॥

ದೃಷ್ಟ್ವಾ ಪುಲಸ್ತ್ಯತನಯಃ ಪಸ್ಪರ್ಶ ಮಧುರಾನನಾಂ ।
ತದಾ ಪತಿವ್ರತಾ ದೇವೀ ಸುಪ್ರಭಾ ಪ್ರಾಹ ತಂ ರುಷಾ　　॥ ೨೬ ॥

---

೨೨. ಈರೀತಿಯಾದ ಮಹೈಶ್ವರ್ಯದಿಂದ ಕೂಡಿದ ಕುಬೇರನನ್ನು ನೋಡಿ, ಬಲಿಷ್ಠನಾದ ರಾವಣನು ಅವನನ್ನು ಜಯಿಸಿ ಲಂಕೆಯಿಂದೋಡಿಸಿ ತಾನೇ ಲಂಕೆಗೆ ರಾಜನಾದನು.

೨೩-೨೪. ಕುಬೇರನು ವ್ಯಥೆಗೊಂಡು, ದುಃಖನಾಶಕನೂ ಸರ್ವರಕ್ಷಕನೂ ಆದ ಶಂಕರನನ್ನು ಮರೆಹೊಕ್ಕನು. ಆಗ ಷಡ್ಗುಣೈಶ್ವರ್ಯಸಂಪನ್ನನಾದ ಈಶ್ವರನು ಆ ಕುಬೇರನೊಡನೆ ಉತ್ತಮವಾದ ಸ್ನೇಹವನ್ನು ಬೆಳೆಯಿಸಿದನು. ವಿಶ್ವಕರ್ಮನು ಅಲಕಾವತಿಯೆಂಬ ಒಂದು ಪಟ್ಟಣವನ್ನು ನಿರ್ಮಾಣಮಾಡಿದನು. ಆ ಕುಬೇರನು ಮಂಗಳಕರವಾದ ಆ ಅಲಕಾವತೀ ಪಟ್ಟಣವನ್ನು ಸೇರಿ ಅಲ್ಲಿ ಸಂತೋಷದಿಂದಿದ್ದನು.

೨೫-೨೬. ಈ ವಾರ್ತೆಯನ್ನು ಕೇಳಿ ಕುಬೇರನ ತಮ್ಮನೂ, ಲೋಕಭಯಂಕರನೂ, ಪುಲಸ್ತ್ಯನಮಗನೂ ಆದ ರಾವಣನು ಕೈಲಾಸಪರ್ವತಕ್ಕೆ ಬಂದು ಕುಬೇರಪುತ್ರನೆನಿಸಿ ಸುಂದರವಾದ ಮುಖವುಳ್ಳ ನಲಕೂಬರನ ಕಾಮಿನಿಯನ್ನು ನೋಡಿ ಅವಳನ್ನು ಸೆಳೆದನು. ಆಗ ಪತಿವ್ರತೆಯಾದ ಆ ಸುಪ್ರಭಾದೇವಿಯು ಕೋಪಗೊಂಡವಳಾಗಿ ಆ ರಾವಣನನ್ನು ಕುರಿತು ಈರೀತಿ ಹೇಳಿದಳು

ಸ್ನುಷೇವ ತವ ಪಾಪಾತ್ಮನ್ನರ್ತೇಽಹಂ ಲೋಕರಾವಣ ।
ಕುಷ್ಠೋ ಭವೇತ್ತವ ತನೌ ತೇನ ದೋಷೇಣ ದಾರುಣಃ ॥ ೨೭ ॥

ತ್ವಯಾ ಹೃತಂ ವಿಮಾನಂ ಯಜ್ಜ್ಯೇಷ್ಠಬಂಧೋಶ್ಚ ಪುಷ್ಪಕಂ ।
ನಿಷ್ಫಲತ್ವಮವಾಪ್ನೋತು ಯಥಾ ಚೋರೈರ್ಹೃತಂ ಧನಂ ॥ ೨೮ ॥

ಇತಿ ಶಾಪಾನ್ವಿತೋ ವೀರಸ್ತಥಾಭೂತಃ ಸುದುಃಖಿತಃ ।
ಶಿವಮಾರಾಧಯಾಮಾಸ ಕೈಲಾಸೇ ಪಾರ್ಥಿವಾರ್ಚನೈಃ ॥ ೨೯ ॥

ದ್ವಾದಶಾಬ್ದಮತೋ ಜಾತಂ ಪೂಜನಂ ತಸ್ಯ ಕುರ್ವತಃ ।
ಸ ರುದ್ರೋ ನ ಪ್ರಸನ್ನೋಽಭೂತ್ತದಾ ದುಃಖೀ ಸ ರಾವಣಃ ॥ ೩೦ ॥

ಜುಹಾವ ವಹ್ನೌ ಕ್ರಮತಃ ಶಿರಾಂಸಿ ಪುರುಷಾದನಃ ।
ಸ್ಥೂಲದೇಹಂ ಚ ಸಕಲಂ ಸ ರುದ್ರಾಯ ತದಾಽರ್ಪಯತ್ ॥ ೩೧ ॥

---

೨೭. "ಎಲೈ ಲೋಕಭಯಂಕರನೇ! ಪಾಪಿಯೇ! ನಾನು ನಿನಗೆ ನ್ಯಾಯತಃ ಸೊಸೆಯಾಗಬೇಕು. ನನ್ನನ್ನು ಸ್ಪರ್ಶಮಾಡಿದ ದೋಷದಿಂದ ಭಯಂಕರವಾದ ಕುಷ್ಠರೋಗವು ನಿನಗೆ ಪ್ರಾಪ್ತವಾಗಲಿ."

೨೮. "ನೀನು ನಿನ್ನ ಅಣ್ಣನಾದ ಕುಬೇರನಿಂದ ಅಪಹರಿಸಿದ ಪುಷ್ಪಕ ವಿಮಾನವು ಕಳ್ಳರು ಕದ್ದ ಹಣದಂತೆ ನಿಷ್ಫಲವಾಗಲಿ" ಎಂದಳು.

೨೯. ವೀರನಾದ ರಾವಣನು ಈ ಪ್ರಕಾರವಾಗಿ ಶಾಪಹೊಂದಿ ಕುಷ್ಠರೋಗ ದಿಂದಕೂಡಿ ದುಃಖಿಸುತ್ತಾ ಕೈಲಾಸಪರ್ವತದಲ್ಲಿ ಪಾರ್ಥಿವಲಿಂಗಾರ್ಚನಕ್ರಮದಿಂದ ಈಶ್ವರನನ್ನು ಪೂಜಿಸಿದನು.

೩೦-೩೧. ಹೀಗೆ ಪೂಜೆಮಾಡುತ್ತಿರಲು ಹನ್ನೆರಡುವರ್ಷಗಳು ಕಳೆದುವು. ಆ ಈಶ್ವರನಾದರೋ ಪ್ರತ್ಯಕ್ಷನಾಗಲಿಲ್ಲ. ಆಗ ರಾಕ್ಷಸನಾದ ರಾವಣನು ದುಃಖಪಟ್ಟು ತನ್ನ ತಲೆಗಳನ್ನು ಒಂದೊಂದಾಗಿ ಕತ್ತರಿಸಿ ಅಗ್ನಿಯಲ್ಲಿ ಹೋಮಮಾಡತೊಡಗಿ ಆ ರಾವಣನು ಅನುಕ್ರಮದಿಂದ ತನ್ನ ಸ್ಥೂಲದೇಹವನ್ನೆಲ್ಲಾ ರುದ್ರನಿಗೆ ಅರ್ಪಣೆ ಮಾಡಿದನು.

ಭಸ್ಮಭೂತಸ್ತದಾ ರಕ್ಷೋ ನ ಮೃತೋ ಬ್ರಹ್ಮಣೋ ವರಾತ್ ।
ಪಾವಕಾದುದ್ಭವಂ ಚಾನ್ಯಂ ದೇಹಂ ಪ್ರಾಪ್ಯ ಮನೋಹರಂ ॥ ೩೨ ॥

ಶಿವಾಯ ವಾಯುರೂಪಾಯ ದದೌ ಸ್ವಾಂಗಂ ಪುನರ್ಬಲೀ ।
ಪಿಶಾಚೈರ್ವಾಯುರೂಪೈಶ್ಚ ಭಕ್ಷಿತಃ ಸ ಚ ರಾವಣಃ ॥ ೩೩ ॥

ನ ಮಮಾರ ವರಾದ್ಘೋರೋ ವಾಯೋರ್ಜಾತಂ ಕಲೇವರಂ ।
ಗೃಹೀತ್ವಾ ಸ ಚ ರುದ್ರಾಯ ನಭೋಭೂತಾಯ ಚಾರ್ಪಯತ್ ॥ ೩೪ ॥

ತದಾ ಮಾತೃಗಣೈರ್ಘೋರೈರ್ಭಕ್ಷಿತೋಽಭೂತ್ಸ ರಾವಣಃ ।
ಬ್ರಹ್ಮಣೋ ವರದಾನೇನ ನ ಪಂಚತ್ವಮವಾಪ್ತವಾನ್ ॥ ೩೫ ॥

ನಭಸಶ್ಚೋದ್ಭವಂ ದೇಪಂ ಶೂನ್ಯಭೂತಂ ಸ ರಾವಣಃ ।
ಪುನಃ ಪ್ರಾಪ್ಯ ಶಿವಾಯೈವ ಸೋಽಹಂ ಭೂತಾಯ ಚಾಽರ್ಪಯತ್ ॥ ೩೬ ॥

---

೩೨-೩೩. ಆಗ ಆ ರಾಕ್ಷಸನು ಹೀಗೆ ಬೂದಿಯಾದನು. ಆದರೆ ಬ್ರಹ್ಮನ ವರ ಪ್ರಸಾದದಿಂದ ಸಾಯಲಿಲ್ಲ. ಅಗ್ನಿಯಿಂದ ಹುಟ್ಟಿದ ಉತ್ತಮವಾದ ಮತ್ತೊಂದು ಶರೀರವನ್ನು ಹೊಂದಿ ಬಲಿಷ್ಠನಾದ ರಾವಣನು ವಾಯುರೂಪನಾದ ಈಶ್ವರನಿಗೆ ಮತ್ತೆ ತನ್ನ ಶರೀರವನ್ನು ಬಲಿಯಾಗಿ ಕೊಟ್ಟನು. ವಾಯುರೂಪವಾದ ಪಿಶಾಚಿಗಳು ಆ ರಾವಣನ ಶರೀರವನ್ನು ತಿಂದುವು.

೩೪. ಭಯಂಕರನಾದ ರಾವಣನು ಬ್ರಹ್ಮನ ವರದಿಂದ ಆಗಲೂ ಸಾಯಲಿಲ್ಲ. ವಾಯುವಿನಿಂದ ಶರೀರವನ್ನು ಪಡೆದು ಆಕಾಶಸ್ವರೂಪನಾದ ಈಶ್ವರನಿಗೆ ಅರ್ಪಣೆ ಮಾಡಿದನು.

೩೫. ಆಗ ಭಯಂಕರರಾದ ಮಾತೃಗಣಗಳು ಅವನನ್ನು ತಿಂದರು. ಆಗಲೂ ಬ್ರಹ್ಮನ ವರದಿಂದ ಅವನು ಮರಣಹೊಂದಲಿಲ್ಲ.

೩೬ ಮತ್ತೆ ಆ ರಾವಣನು ಆಕಾಶದಿಂದುತ್ಪನ್ನವಾದ ಶೂನ್ಯದೇಹನಾಗಿ ಜೀವಬ್ರಹ್ಮೈಕ್ಯಸ್ವರೂಪನಾದ ಈಶ್ವರನಿಗೆ ಆ ದೇಹವನ್ನೊಪ್ಪಿಸಿದನು.

ತದಾ ಪ್ರಸನ್ನೋ ಭಗವಾನ್ರುದ್ರೋऽಹಂಕಾರದೇವತಾ ।
ಕುಬೇರಸ್ಯ ಯಥಾಮಿತ್ರಂ ರಾವಣಸ್ಯ ತಥಾಭವತ್ ॥ ೩೭ ॥

ಏಕೈಕೇನೈವ ಶಿರಸಾ ಕೋಟಿಕೋಟಿಶಿರೋऽಭವತ್ ।
ವಜ್ರಭೂತೋऽಭವದ್ದೇಹೋ ದೇವದೇವಪ್ರಸಾದತಃ ॥ ೩೮ ॥

ಏವಂ ಸ ರಾವಣೋ ಘೋರೋ ಬಭೂವ ವರದರ್ಪಿತಃ ॥
ದೇವದೈತ್ಯಮನುಷ್ಯಾಣಾಂ ಪನ್ನಗಾನಾಂ ಚ ಯೋಷಿತಃ ।
ನವೋಢಾ ರಮಿತಾಶ್ಚಾಸನ್ಬ್ರಹ್ಮಾಂಡೇ ತೇನ ರಕ್ಷಸಾ ॥ ೩೯ ॥

ಪತಿವ್ರತಾಮತೋ ರಮ್ಯೋ ವೇದಧರ್ಮಃ ಸನಾತನಃ ।
ಭಗ್ನೀಭೂತೋऽಭವತ್ಸರ್ವಃ ಸರ್ವಲೋಕೇಷು ರಕ್ಷಸಾ ॥ ೪೦ ॥

ಕ್ಷುತ್ತೃಡ್ಭ್ಯಾಂ ವರ್ಜಿತೋ ನಿತ್ಯಂ ಶಂಕರೇಣೈವ ತರ್ಪಿತಃ ।
ಅನ್ಯೇ ಸುರಾ ವಿನಾ ಯಜ್ಞೈಃ ಕ್ಷುಧಿತಾಃ ಸಂಬಭೂವಿರೇ ॥ ೪೧ ॥

---

೩೭. ಆಗ ಷಡ್ಗುಣೈಶ್ವರ್ಯಸಂಪನ್ನನೂ ಅಹಂಕಾರಕ್ಕೆ ಅಧಿದೇವತೆಯೂ ಆದ ರುದ್ರನು ಪ್ರತ್ಯಕ್ಷನಾಗಿ ಕುಬೇರಪ್ರಿಯನು ಹೇಗೋ ಹಾಗೆ ರಾವಣನಿಗೂ ಸ್ನೇಹಿತನಾದನು.

೩೮. ಅವನ ಒಂದೊಂದು ತಲೆಯಿಂದ ಒಂದೊಂದು ಕೋಟಿತಲೆಗಳು ಹುಟ್ಟಿದುವು. ದೇವತೆಗಳಿಗೂ ದೇವನಾದ ರುದ್ರನ ಅನುಗ್ರಹದಿಂದ ರಾವಣನ ಶರೀರವು ವಜ್ರದಂತೆ ಕಠಿಣವಾಯಿತು.

೩೯. ಹೀಗೆ ಭಯಂಕರನಾದ ರಾವಣನು ವರಪ್ರಭಾವದಿಂದ ಕೊಬ್ಬಿದವನಾಗಿ ಬ್ರಹ್ಮಾಂಡದಲ್ಲೆಲ್ಲಾ ಸಂಚರಿಸಿ; ದೇವತೆಗಳು, ರಾಕ್ಷಸರು, ಮನುಷ್ಯರು, ನಾಗರು ಇವರುಗಳಲ್ಲಿ ಯೌವನವತಿಯರಾದ ಸ್ತ್ರೀಯರನ್ನು ಉಪಭೋಗಿಸಿದನು.

೪೦ ಈ ರಾಕ್ಷಸನಿಂದ ಸಮಸ್ತಲೋಕಗಳಲ್ಲಿಯೂ ಉತ್ತಮವಾದ ಪತಿವ್ರತಾಧರ್ಮವೂ, ಪ್ರಾಚೀನವಾದ ವೇದಧರ್ಮವೂ, ನಾಶವಾಯಿತು.

೪೧. ಈಶ್ವರನಿಂದ ಅನುಗೃಹೀತನಾದ ಈ ರಾವಣನು ಯಾವಾಗಲೂ ಹಸಿವುಬಾಯಾರಿಕೆಗಳಿಲ್ಲದವನಾದನು. ಭೂಮಿಯಲ್ಲಿ ಯಜ್ಞವೇ ನಡೆಯದ ಕಾರಣ ಉಳಿದ ದೇವತೆಗಳೆಲ್ಲರೂ ಹಸಿವಿನಿಂದ ಬಳಲಿದರು.

ಬ್ರಹ್ಮಾಣಂ ಚ ಪುರಸ್ಕೃತ್ಯ ಕ್ಷೀರಾಬ್ಧೌ ಪ್ರಾಪ್ಯ ದುಃಖಿತಾಃ ।
ಏಕೀಭೂಯ ಸುರಾಸ್ಸರ್ವೇ ತುಷ್ಟುವುಃ ಪರಮೇಶ್ವರಂ ॥ ೪೨ ॥

ತದಾ ಪ್ರಸನ್ನೋ ಭಗವಾನ್ಸಗುಣೋ ನಿರ್ಗುಣೋ ಹರಿಃ ।
ಉವಾಚ ಸಕಲಾನ್ದೇವಾನ್ ಭಕ್ತಿನಮ್ರಾನ್ ಯತೇಂದ್ರಿಯಾನ್ ॥ ೪೩ ॥

ಕಲ್ಪಾಖ್ಯೇ ಶ್ವೇತವಾರಾಹೇ ನೇದೃಶಃ ಕೋಽಪಿ ದಾನವಃ ।
ಬಭೂವ ಚ ಯಥೈವಾಸೌ ರಾವಣೋ ಲೋಕರಾವಣಃ ॥ ೪೪ ॥

ಪುರಾ ಮಾರ್ಕಂಡಕಲ್ಪೇ ಚ ನಿಶುಂಭಃ ಶುಂಭ ಏವ ಹಿ ।
ಯಥಾ ಜಾತೌ ತಥಾ ಘೋರೌ ಕುಂಭಕರ್ಣಶ್ಚ ರಾವಣಃ ॥ ೪೫ ॥

ರಾವಣಾ ಬಹವಶ್ಚಾಸನ್ ಹೀದೃಶೋ ನೈವ ರಾವಣಃ ।
ಅಹಂ ಬ್ರಹ್ಮಾ ತಥಾ ರುದ್ರೋ ಯತೋ ಜಾತಾಸ್ಸನಾತನಾಃ ॥
ಸಾ ತು ವೈ ಪ್ರಕೃತಿರ್ಮಾಯಾ ಕೋಟಿವಿಶ್ವವಿಧಾಯಿನೀ ॥ ೪೬ ॥

---

೪೨. ಹೀಗೆ ದುಃಖಿತರಾದ ದೇವತೆಗಳು ಬ್ರಹ್ಮನನ್ನು ಮುಂದಿಟ್ಟುಕೊಂಡು ಕ್ಷೀರಸಮುದ್ರಕ್ಕೆ ಹೋಗಿ ಎಲ್ಲರೂ ಐಕಮತ್ಯದಿಂದ ಪರಮಾತ್ಮನನ್ನು ಸ್ತುತಿಸಿದರು.

೪೩. ಆಗ ಸಗುಣನೂ, ನಿರ್ಗುಣನೂ, ಷಡ್ಗುಣೈಶ್ವರ್ಯಸಂಪನ್ನನೂ ಆದ ವಿಷ್ಣುವು ಪ್ರತ್ಯಕ್ಷನಾಗಿ ಭಕ್ತಿಯಿಂದ ತಲೆಬಾಗಿಸಿಕೊಂಡವರೂ ಜಿತೇಂದ್ರಿಯರೂ ಆದ ಸಕಲದೇವತೆಗಳನ್ನೂ ಕುರಿತು ಈರೀತಿಯಾಗಿ ಮಾತಾಡಿದನು.

೪೪. " ಶ್ವೇತವರಾಹವೆಂಬ ಕಲ್ಪದಲ್ಲಿ ಲೋಕಭಯಂಕರನಾದ ಈ ರಾವಣನಂತಹ ಯಾವನೊಬ್ಬ ರಾಕ್ಷಸನೂ ಇರಲಿಲ್ಲ.

೪೫. ಹಿಂದೆ ಮಾರ್ಕಂಡೇಯ ಕಲ್ಪದಲ್ಲಿ ಶುಂಭ ನಿಶುಂಭರೆಂಬ ಘೋರರಾದ ರಾಕ್ಷಸರು ಹೇಗೆ ಹುಟ್ಟಿದರೋ ಹಾಗೆ ಈಗ ಈ ರಾವಣಕುಂಭಕರ್ಣರು ಹುಟ್ಟಿರುತ್ತಾರೆ.

೪೬. ಹಿಂದೆ ಅನೇಕ ರಾವಣರು ಉತ್ಪನ್ನರಾಗಿದ್ದರು. ಈರೀತಿಯಾದ ರಾವಣನು ಇರಲಿಲ್ಲ. ಬ್ರಹ್ಮ, ಈಶ್ವರ ಮತ್ತು ನಾನು ಎಲ್ಲರೂ ಯಾರಿಂದ ಉತ್ಪನ್ನರಾದೆವೋ ಆ ದೇವಿಯು ಮಾಯಾರೂಪವಾದ ಸೃಷ್ಟಿಮಾಡುವವಳೂ ಆಗಿರುತ್ತಾಳೆ.

ದೇವಸಂಕಟಘೋರೇಷು ಸಮರ್ಥೋ ದೇವರಾಟ್ ಸ್ವಯಂ ।
ಶಕ್ರವಿಘ್ನೇ ಸಮುದ್ಭೂತೇ ಸಮರ್ಥೋ ಭಗವಾನ್‌ಹರಃ ॥ ೪೭ ॥

ರುದ್ರಾಣಾಂ ಸಂಕಟೇ ಘೋರೇ ಸಮರ್ಥೋಽಹಂ ಸದಾ ಭುವಿ ।
ಮಯಿ ಸಂಕಟಸಂಪ್ರಾಪ್ತೇ ಸಮರ್ಥೋ ಭಗವಾನ್‌ಹರಃ ॥ ೪೮ ॥

ಬ್ರಹ್ಮಣಃ ಪರಮೋ ದುಃಖೇ ಸಮರ್ಥಾ ಪ್ರಕೃತಿಃ ಪರಾ ।
ಮಧುಕೈಟಭೌ ಪುರಾ ಜಾತೌ ದಾನವೌ ಲೋಕವಿಶ್ರುತೌ ॥ ೪೯ ॥

ತಾಭ್ಯಾಂ ದುಃಖಮಯೋ ಬ್ರಹ್ಮಾ ತುಷ್ಟಾವ ಜಗದಂಬಿಕಾಂ ।
ತದಾ ತಸ್ಯಾ ಬಲೇನಾಹಂ ಜಘಾನ ಮಧುಕೈಟಭೌ ॥ ೫೦ ॥

ಅತೋ ಮದಾಜ್ಞಯಾ ಸರ್ವೇ ವಿಷ್ಣುಮಾಯಾಂ ಸನಾತನೀಂ ।
ಶರಣ್ಯಾಂ ಶರಣಂ ಪ್ರಾಪ್ಯ ಕುರ್ವತಾಂ ಜಗತೋ ಹಿತಂ ॥ ೫೧ ॥

---

೪೭. ದೇವತೆಗಳಿಗೆ ಭಯಂಕರವಾದ ಆಪತ್ತು ಬಂದರೆ ಇಂದ್ರನು ಅದನ್ನು ಪರಿಹರಿಸಲು ಸಮರ್ಥನು. ಇಂದ್ರನಿಗೆ ಆಪತ್ತು ಬಂದರೆ ಷಡ್ಗುಣೈಶ್ವರ್ಯಸಂಪನ್ನನಾದ ಮಹೇಶ್ವರನು ಹೋಗಲಾಡಿಸಲು ಶಕ್ತನು.

೪೮. ರುದ್ರರಿಗೆ ಮಹತ್ತಾದ ತೊಂದರೆಯುಂಟಾದರೆ ಅದನ್ನು ಪರಿಹರಿಸಲು ನಾನು ಯಾವಾಗಲೂ ಶಕ್ತನು. ನನಗೆ ಆಪತ್ತು ಬಂದರೆ ಅದನ್ನು ಪರಿಹರಿಸಲು ಪೂಜ್ಯನಾದ ಈಶ್ವರನು ಶಕ್ತನಾಗುತ್ತಾನೆ

೪೯. ಬ್ರಹ್ಮನಿಗೆ ಅತಿಘೋರವಾದ ದುಃಖವು ಬಂದರೆ ಶ್ರೇಷ್ಠಳಾದ ಪ್ರಕೃತಿಯು ಹೋಗಲಾಡಿಸಲು ಸಮರ್ಥಳಾಗುತ್ತಾಳೆ. ಪೂರ್ವದಲ್ಲಿ ಲೋಕಪ್ರಸಿದ್ಧರಾದ ಮಧುಕೈಟಭರೆಂಬ ರಾಕ್ಷಸರು ಹುಟ್ಟಿದರು.

೫೦. ಅವರಿಬ್ಬರಿಂದಲೂ ಬಹು ಶೋಕಹೊಂದಿದ ಬ್ರಹ್ಮನು ಜಗನ್ಮಾತೆಯಾದ ದೇವಿಯನ್ನು ಸ್ತೋತ್ರಮಾಡಿದನು. ಆಗ ಆ ದೇವಿಯಿಂದ ಬಲವನ್ನು ಪಡೆದು ನಾನು ಮಧುಕೈಟಭರನ್ನು ಕೊಂದೆನು.

೫೧. ಆದುದರಿಂದ ನನ್ನ ಅಪ್ಪಣೆಯ ಪ್ರಕಾರ ವಿಷ್ಣುಮಾಯೆಯೂ, ಪುರಾತನಳೂ, ರಕ್ಷಕಳೂ ಆದ ದೇವಿಯನ್ನು ಎಲ್ಲರೂ ಮರೆಹೊಕ್ಕು ಜಗತ್ತಿಗೆ ಹಿತವನ್ನುಂಟು ಮಾಡಿರಿ" ಎಂದನು.

ಇತಿ ಶ್ರುತ್ವಾ ತು ತೇ ದೇವಾಸ್ತುಷ್ಟುವುಃ ಪ್ರಕೃತಿಂ ಪರಾಂ ।
ಪ್ರಸನ್ನಾ ಚ ತದಾ ದೇವೀ ಬ್ರಹ್ಮಜ್ಯೋತಿರ್ಮಯೀ ಶಿವಾ ॥ ೫೨ ॥

ದ್ವಿಧಾಭೂತಾ ಮಹೀಂ ಪ್ರಾಪ್ತಾ ಸೀತಾರಾಮೌ ಪರಾಪರೌ ।
ತ್ರಿಲಿಂಗಜನನೀ ಸೀತಾ ತಯಾ ತದಪರಂ ದ್ವಿಧಾ ॥
ಕೃತಂ ತೌ ಚ ದ್ವಿಧಾ ಜಾತೌ ಶಬ್ದಾರ್ಥೌ ರಾಮಲಕ್ಷ್ಮಣೌ ॥ ೫೩ ॥

ಶಬ್ದಮಾತ್ರಸಮೂಹಾನಾಂ ಸ್ವಾಮೀ ರಾಮಸ್ಸನಾತನಃ ।
ಅರ್ಥಮಾತ್ರಸಮೂಹಾನಾಮೀಶಃ ಕ್ಲೀಬಸ್ಸ ಲಕ್ಷ್ಮಣಃ ॥ ೫೪ ॥

ಯಸ್ಯ ವಜ್ರಮಯಂ ವೀರ್ಯಂ ಬ್ರಹ್ಮಚರ್ಯಂ ದೃಢಂ ತಥಾ ।
ಸ ಕ್ಲೀಬಶ್ಚ ತತೋಽನ್ಯೇ ವೈ ಕ್ಲೀಬಭೂತಾ ಹಿ ವಾನರಾಃ ॥ ೫೫ ॥

---

೫೨. ಈ ಪ್ರಕಾರವಾದ ಮಾತನ್ನು ಕೇಳಿ ಆ ದೇವತೆಗಳು ಶ್ರೇಷ್ಠಳಾದ ಆ ಪ್ರಕೃತಿಯನ್ನು ಸ್ತೋತ್ರಮಾಡಿದರು. ಆಗ ಬ್ರಹ್ಮಜ್ಯೋತಿಸ್ವರೂಪಳೂ ಮಂಗಳ ರೂಪಿಣಿಯೂ ಆದ ದೇವಿಯು ಪ್ರತ್ಯಕ್ಷಳಾದಳು.

೫೩. ಆ ದೇವಿಯು ಎರಡು ಅಂಶವಾಗಿ ಭೂಮಿಯಲ್ಲಿ ಜನಿಸಿ ಸೀತಾ ರಾಮ ಎಂಬ ಹೆಸರನ್ನು ಪಡೆದಳು. ಸ್ತ್ರೀಪುನ್ನಪುಂಸಕಲಿಂಗಗಳೆಂಬ ಮೂರುಲಿಂಗಗಳಿಗೂ ಕಾರಣಳಾದ ದೇವಿಯು ಸೀತೆಯಾದಳು. ಅವಳು ತನ್ನನ್ನುಳಿದು ಇನ್ನೊಂದು ಭಾಗ ವನ್ನು ಎರಡಾಗಿಮಾಡಿದಳು. ಆ ಎರಡು ಭಾಗಗಳೂ ಮತ್ತೆ ವಿಭಾಗಿಸಲ್ಪಟ್ಟು ಶಬ್ದಾರ್ಥ ರೂಪಗಳಾಗಿ ರಾಮಲಕ್ಷ್ಮಣರೆಂಬ ಹೆಸರಿನಿಂದ ಪ್ರಸಿದ್ಧರಾದರು.

೫೪. ಪುರಾತನನಾದ ರಾಮನು ಶಬ್ದಸಮೂಹಗಳಿಗೆ ಅಧಿಪತಿಯು. ಅರ್ಥ ಸಮೂಹಗಳಿಗೆ ನಪುಂಸಕನಾನ ಆ ಲಕ್ಷ್ಮಣನು ಯಜಮಾನನಾದನು.

೫೫. ಯಾವನ ವೀರ್ಯವು ವಜ್ರದಂತೆ ಕಠಿಣವಾದುದೋ ಮತ್ತು ಯಾವನ ಬ್ರಹ್ಮಚರ್ಯವು ಧೃಢವಾದುದೋ ಆ ಲಕ್ಷ್ಮಣನು ನಪುಂಸಕನು. ಹಾಗೆಯೇ ಇನ್ನೂ ಅನೇಕಮಂದಿ ಕಪಿವೀರರೂಕೂಡ ನಪುಂಸಕರಾಗಿರುತ್ತಾರೆ.

ಪರಾ ತು ಪ್ರಕೃತಿಸ್ಸೀತಾ ತಯೋರ್ಮಂಗಲದಾಯಿನೀ ।
ಭೂಮಿಮಧ್ಯಾತ್ಸಮುದ್ಭೂತಾ ಹ್ಯಯೋನಿರ್ಯೋನಿಕಾರಿಣೀ ॥ ೫೬ ॥

ಸಹಸ್ರಂ ರಾಮರಾಮೇತಿ ಜಪಿತಂ ಯೇನ ಧೀಮತಾ ।
ಸೀತಾನಾಮ್ನಾ ಚ ತಸ್ಯೈವ ಫಲಂ ಜ್ಞೇಯಂ ಚ ತತ್ಸಮಂ ॥ ೫೭ ॥

ಯೋನಿಭೂತೌ ಚ ತೌ ದೇವೌ ರಾಧೇಯಸ್ಯ ಗೃಹಂ ಗತೌ ।
ಇದಂ ದೃಶ್ಯಂ ಯದಾ ನಾಸೀತ್ತಾಮಸೀ ಪ್ರಕೃತಿಸ್ತದಾ ॥
ಅಕ್ಷರಾಶೇಷಭೂತಾ ಚ ಸ್ವಯಂ ಜಾತಾ ತ್ರಿಧೇಚ್ಛಯಾ ॥ ೫೮ ॥

ಪೂರ್ವಂ ಶೇಷಸ್ಸ ವೈ ರಾಮೋ ಮಧ್ಯೇ ಕ್ಲೀಬಸ್ಸ ಲಕ್ಷ್ಮಣಃ ।
ಅಪರೌ ಪೂರ್ವತೋ ಜಾತೌ ಪುಂಕ್ಲೀಚೌ ಚ ಪರೇಶ್ವರೌ ॥
ಪರೋ ಭಾಗಸ್ತು ಸಾ ದೇವೀ ಯೋಗನಿದ್ರಾ ಸನಾತನೀ ॥ ೫೯ ॥

---

೫೬. ಉತ್ತಮಳೂ ಪ್ರಕೃತಿಯೂ ಆದ ಸೀತೆಯು ಅವರಿರ್ವರಿಗೂ ಮಂಗಳವನ್ನುಂಟುಮಾಡುವವಳೂ, ಅಯೋನಿಜೆಯೂ, ಸಕಲಕಾರಣಗಳಿಗೂ ಕಾರಣಳೂ ಆಗಿ, ಭೂಮಿಮಧ್ಯದಿಂದ ಉತ್ಪನ್ನಳಾದಳು.

೫೭. ಯಾವ ಜ್ಞಾನಿಯು ಸೀತಾಸಹಿತವಾದ ರಾಮರಾಮ ಎಂಬ ನಾಮವನ್ನು ಒಂದುಸಾವಿರಾವರ್ತಿ ಜಪಮಾಡುತ್ತಾನೋ ಅವನಿಗೆ ಜಪಾನುರೂಪವಾದ ಫಲವು ಪೂರ್ಣವಾಗಿ ಬರುತ್ತದೆ ಎಂದು ತಿಳಿಯಬೇಕು.

೫೮. ಜಗತ್ಕಾರಣರಾದ ಆ ಸೀತಾರಾಮರು ರಾಧಾಧೀಶ್ವರನ ಮನೆಯನ್ನು ಸೇರಿದರು. ಈ ಪ್ರಪಂಚವು ಯಾವಾಗ ಇರಲಿಲ್ಲವೋ ಆಗ ತಮೋಗುಣಪ್ರಧಾನಳೂ ನಾಶರಹಿತಳೂ ಯಾವಾಗಲೂ ಇರುವವಳೂ ಆದ ಪ್ರಕೃತಿಯು ಸ್ವೇಚ್ಛೆಯಿಂದ ಮೂರುಭಾಗವಾದಳು. (ಜಗತ್ಕಾರಣರಾದ ಆ ಸೀತಾರಾಮರೇ ರಾಧಾದೇವಿಯು ಪತಿಯೂ ದ್ವಿಭುಜನೂ ಮುರಳೀಹಸ್ತನೂ ಆದ ಪರಮಾತ್ಮನು ರಾಸಕ್ರೀಡೆಯನ್ನು ಮಾಡಿದನೆಂದು ಪುರಾಣಾಂತರದಲ್ಲಿ ಹೇಳಿದೆ.)

೫೯. ಪೂರ್ವಭಾಗವು ಶೇಷರೂಪವಾದುದು. ಅವನೇ ರಾಮನಾಗಿ ಮಧ್ಯವರ್ತಿಯಾದನು. ಇನ್ನೊಂದು ಭಾಗದಿಂದ ನಪುಂಸಕನಾದ ಲಕ್ಷ್ಮಣನು ಹುಟ್ಟಿದನು. ಇನ್ನಿಬ್ಬರು ಪುನ್ನಪುಂಸಕರೂ, ಪರಮೋತ್ತಮರೂ ಆಗಿ ಪೂರ್ವಭಾಗದಿಂದ ಹುಟ್ಟಿದರು. ಉತ್ತಮವಾದ ಭಾಗದಿಂದ ಪುರಾತನಳೂ ಯೋಗನಿದ್ರಾಸ್ವರೂಣಿಯೂ ಆದ ಆ ದೇವಿಯು ಉತ್ಪನ್ನವಾದಳು.

ಅನ್ಯಕಲ್ಪೇಷು ಹೇ ದೇವಾಃ ಕ್ಷೀರಶಾಯೀ ಹರಿಃ ಸ್ವಯಂ ।
ರಾಮೋ ಜ್ಞೇಯಸ್ತಥಾ ಶೇಷೋ ರುದ್ರರೂಪಸ್ಸ ಲಕ್ಷ್ಮಣಃ ॥ ೬೦ ॥

ಸೀತಾ ಭಗವತೀ ಲಕ್ಷ್ಮೀರ್ಜಾತಾ ಜನಕನಂದಿನೀ ।
ಸುದರ್ಶನಶ್ಚ ಭರತೋ ಹರೇಃ ಶಂಖಸ್ತತೋಽನುಜಃ ॥ ೬೧ ॥

ಕಲ್ಪಾಖ್ಯೇ ಶ್ವೇತವಾರಾಹೇ ರಾಮೋ ಜಾತಃ ಪರಾತ್ಪರಃ ।
ಪ್ರದ್ಯುಮ್ನೋ ಭರತೋ ಜ್ಞೇಯೋಽನಿರುದ್ಧಃ ಶತ್ರುಹಾ ಪ್ರಭುಃ ॥
ತೈಶ್ಚ ಸರ್ವೇ ವಿದಲಿತಾ ರಾಕ್ಷಸಾ ರಾವಣಾದಯಃ ॥ ೬೨ ॥

ಕೀರ್ತಿಂ ಸ್ವಕೀಯಾಂ ಲೋಕೇಷು ಪ್ರಭುಸ್ಸಂಸ್ಥಾಪ್ಯ ಪಾವನೀಂ ।
ಪುಷ್ಪಕಂ ಚ ಕುಬೇರಾಯ ವಿಮಾನಂ ಚ ತದಾ ದದೌ ॥
ರುದ್ರಸಂಖ್ಯಾ ಸಹಸ್ರಾಬ್ದಂ ರಾಜ್ಯಂ ಕೃತ್ವಾ ಪರಂ ಯಯೌ ॥ ೬೩ ॥

---

೬೦-೬೧. ಎಲೈ ದೇವತೆಗಳೇ ! ಇತರ ಕಲ್ಪಗಳಲ್ಲಿ ಕ್ಷೀರಸಮುದ್ರದಲ್ಲಿ ಮಲಗಿರುವ ಸಾಕ್ಷಾದ್ವಿಷ್ಣುವು ರಾಮನೆಂದೂ, ಮತ್ತು ರುದ್ರರೂಪನಾದ ಆದಿಶೇಷನು ಲಕ್ಷ್ಮಣನೆಂದೂ, ಲಕ್ಷ್ಮಿಯು ಸೀತೆಯೆಂಬ ಹೆಸರಿನಿಂದ ಜನಕರಾಜನ ಮಗಳಾಗಿ ಹುಟ್ಟಿದಳೆಂದೂ, ಸುದರ್ಶನಚಕ್ರವು ಭರತನೆಂದೂ, ಪರಮಾತ್ಮನ ಶಂಖವು ಶತ್ರುಘ್ನನೆಂದೂ ತಿಳಿಯಿರಿ !

೬೨. ಶ್ವೇತವರಾಹವೆಂಬ ಕಲ್ಪದಲ್ಲಿ ಪರಾತ್ಪರನಾದ ವಾಸುದೇವನು ರಾಮನಾದನು. ಪ್ರದ್ಯುಮ್ನನು ಭರತನಾದನು. ಅನಿರುದ್ಧನು ಶತ್ರುಘ್ನನಾದನು. ಅವರುಗಳು ರಾವಣನೇ ಮುಂತಾದ ರಾಕ್ಷಸರನ್ನು ನಾಶಮಾಡಿದನು.

೬೩. ಸ್ವಾಮಿಯಾದ ರಾಮನು ತನ್ನ ಪರಿಶುದ್ಧವಾದ ಕೀರ್ತಿಯನ್ನು ಲೋಕಗಳಲ್ಲಿ ಹರಡಿ ಪುಷ್ಪಕವೆಂಬ ಕುಬೇರನಿಗೆ ವಿಮಾನವನ್ನು ಕೊಟ್ಟನು. ಏಕಾದಶರುದ್ರರ ಸಂಖ್ಯೆ (ಎಂದರೆ ಹನ್ನೊಂದುಸಾವಿರ) ವರ್ಷಗಳವರೆಗೆ ರಾಜ್ಯಭಾರವನ್ನು ಮಾಡಿ ಪರಮಪದಕ್ಕೆ ತೆರಳಿದನು.

॥ ಸೂತ ಉವಾಚ ॥

ಇತಿ ಶ್ರುತ್ವಾ ಕುಬೇರಸ್ತು ಪ್ರಥಮೋ ವಸುದೇವತಾ ।
ಸ್ವಮುಖಾತ್ಸ್ವಾಂಶಮುತ್ಪಾದ್ಯ ವೈಶ್ಯಯೋನೌ ಬಭೂವ ಹ ॥ ೬೪ ॥

ಧರದತ್ತಸ್ಯ ವೈಶ್ಯಸ್ಯ ಪುತ್ರೋ ಭೂತ್ವಾ ಮಹೀತಲೇ ।
ತ್ರಿಲೋಚನಸ್ಸ ವೈ ನಾಮ ಮಥುರಾಯಾಂ ಬಭೂವ ಹ ॥ ೬೫ ॥

ಸರ್ವದ್ರವ್ಯವ್ಯಯಂ ಕೃತ್ವಾ ನಾನಾತೀರ್ಥೇಷು ಹರ್ಷಿತಃ ।
ಪುರೀಂ ಕಾಶೀಂ ಸಮಾಗಮ್ಯ ರಾಮಾನಂದಂ ಚ ವೈಷ್ಣವಂ ॥
ನತ್ವಾ ತದ್ವಶ್ಯಮಭಜಚ್ಛಿಷ್ಯೋ ಭೂತ್ವಾ ತ್ರಿಲೋಚನಃ ॥ ೬೬ ॥

ಸ್ವಗೇಹಂ ಪುನರಾಗತ್ಯ ಸ ವೈಶ್ಯಶ್ಚಾಜ್ಞಯಾ ಗುರೋಃ ।
ರಾಮಭಕ್ತಿಪರಶ್ಚಾಸೀತ್ಸಾಧುಸೇವಾಪರಾಯಣಃ ॥ ೬೭ ॥

---

೬೪-೬೫. ಸೂತಮುನಿವರ್ಯನು ಹೇಳುತ್ತಾನೆ—ಮೊದಲನೆಯ ವಸುರೂಪನೆನಿಸಿದ ಕುಬೇರನು ಈ ವೃತ್ತಾಂತವನ್ನೆಲ್ಲಾ ಕೇಳಿ ಬಂದು ಅಂಶವನ್ನು ತನ್ನ ಮುಖದಿಂದ ಉತ್ಪತ್ತಿಮಾಡಿ ವೈಶ್ಯಜಾತಿಯಲ್ಲಿ ಜನಿಸಬೇಕೆಂದುದ್ದೇಶಿಸಿ ಭೂಲೋಕದಲ್ಲಿ ಮಥುರಾಪಟ್ಟಣದಲ್ಲಿದ್ದ ಧರದತ್ತನೆಂಬ ವೈಶ್ಯನ ಪುತ್ರನಾಗಿ ತ್ರಿಲೋಚನನೆಂಬ ಹೆಸರಿನಿಂದ ಜನಿಸಿದನು.

೬೬. ಕೆಲವುದಿನಗಳು ಕಳೆದಮೇಲೆ ಆತನು ಸಂತೋಷದಿಂದ ತೀರ್ಥಯಾತ್ರೆ ಹೊರಟು ನಾನಾಕ್ಷೇತ್ರಗಳಲ್ಲಿ ಸಂಚರಿಸುತ್ತಾ ಕಾಶೀಪಟ್ಟಣಕ್ಕೆ ಬಂದು ಅಲ್ಲಿ ವಿಷ್ಣುಭಕ್ತನಾದ ರಾಮಾನಂದನೆಂಬುವನ ಸಮೀಪಕ್ಕೆ ಬಂದು ಅವನ ಶಿಷ್ಯನಾಗಿ ಅವನ ಸೇವೆಮಾಡಿದನು.

೬೭-೯೮. ಆ ವೈಶ್ಯಕುಮಾರನು ಬಳಿಕ ಗುರುವಿನ ಆಜ್ಞೆಯಂತೆ ತನ್ನ ಮನೆಗೆ ಬಂದು ಶ್ರೀರಾಮನಲ್ಲಿ ಅತ್ಯಂತ ಭಕ್ತಿಯುತನೂ ಸಾಧುಸಜ್ಜನರ ಸೇವೆಮಾಡುವುದರಲ್ಲಿ ನಿರತನೂ ಆಗಿ ಒಂದುವರ್ಷ ನಡೆಸಿದನು. ಹದಿಮೂರನೆಯ ತಿಂಗಳಾದ ಮೇಲೆ ಭಕ್ತವತ್ಸಲನೂ, ಸಮಸ್ತ ಇಷ್ಟಾರ್ಥಗಳನ್ನು ಕರುಣಿಸತಕ್ಕವನೂ ಆದ ಶ್ರೀರಾಮನು ಅವನ ಮನೆಯಲ್ಲಿ ದಾಸನಾಗಿ ಇರತೊಡಗಿದನು.

ತದಾ ತು ಭಗವಾನ್ರಾಮೋ ದಾಸಭೂತಶ್ಚ ತದ್ಗೃಹೇ ।
ಸ್ಥಿತಸ್ತ್ರಯೋದಶೇ ಮಾಸಿ ಸರ್ವವಾಂಛಿತದಾಯಕಃ ॥ ೬೮ ॥

ಮಣಿರತ್ನಹಿರಣ್ಯಾನಿ ವಾಸಾಂಸಿ ವಿವಿಧಾನಿ ಚ ।
ನಾನಾವ್ಯಂಜನಯೋಗ್ಯಾನಿ ಬ್ರಾಹ್ಮಣೇಭ್ಯಃ ಸ್ವಯಂ ದದೌ ॥ ೬೯ ॥

ವೈಷ್ಣವೇಭ್ಯೋ ಯತಿಭ್ಯಶ್ಚ ಮನೋವಾಂಛಿತದಾಯಕಃ ।
ತತಸ್ತ್ರಿಲೋಚನಂ ಪ್ರಾಹ ಭಗವಾನ್ರಾವಣಾರ್ತಿಹಾ ॥ ೭೦ ॥

ಅಹಂ ರಾಮೋ ನ ವೈ ದಾಸಸ್ತವ ಭಕ್ತಿವಿಮೋಹಿತಃ ।
ನಿವಾಸಂ ಕೃತವಾನ್ಗೇಹೇ ತವ ಪ್ರಿಯಹಿತೇ ರತಃ ॥ ೭೧ ॥

ಅದ್ಯಪ್ರಭೃತಿ ಭೋ ವೈಶ್ಯ ವಸಾಮಿ ಹೃದಯೇ ತವ ।
ಇತ್ಯುಕ್ತ್ವಾಂತರ್ಹಿತೋ ದೇವಃ ಸ ವೈಶ್ಯೋ ಹರ್ಷಮಾಗತಃ ॥ ೭೨ ॥

---

೬೯. ಹದಿಮೂರನೆಯ ತಿಂಗಳಲ್ಲಿ ಆ ಸೇವಕನು ಮನಃಪೂರ್ವಕವಾಗಿ ನಾನಾ ಅಲಂಕಾರಯೋಗ್ಯಗಳಾದ ರತ್ನಭೂಷಣಗಳನ್ನೂ ಅನರ್ಘ್ಯವಸ್ತ್ರಾದಿಗಳನ್ನೂ ಬ್ರಾಹ್ಮಣಸನ್ಯಾಸಿಗಳಿಗೆ ತಾನೇ ದಾನಮಾಡಿದನು

೭೦-೭೧ ವೈಷ್ಣವಯತಿಗಳ ಮನಸ್ಸಿನ ಇಷ್ಟಾರ್ಥವನ್ನು ಕೊಡುವವನೂ, ರಾವಣನ ಬಾಧೆಯನ್ನು ಪರಿಹರಿಸುವವನೂ ಆದ ಆ ದಾಸನು ಒಂದುದಿನ ಆ ವೈಶ್ಯನಾದ ತ್ರಿಲೋಚನನನ್ನು ಕುರಿತು " ಅಯ್ಯಾ ! ನಾನು ನಿನ್ನ ಆರಾಧ್ಯದೈವನಾದ ಶ್ರೀರಾಮನು. ನಿಜವಾಗಿ ನಿನ್ನ ದಾಸನಲ್ಲ. ನಿನಗೆ ಹಿತವನ್ನುಂಟುಮಾಡುವುದರಲ್ಲಿ ಆಸಕ್ತನಾಗಿ ನಿನ್ನ ಮನೆಯಲ್ಲಿ ವಾಸಿಸುತ್ತಿದ್ದೆನು."

೭೨. " ಅಯ್ಯಾ ವೈಶ್ಯಶ್ರೇಷ್ಠನೇ ! ಇಂದುಮೊದಲುಗೊಂಡು ನಿನ್ನ ಹೃದಯದಲ್ಲಿಯೇ ವಾಸಿಸುತ್ತೇನೆ " ಎಂದು ಹೇಳಿ ಆ ಸ್ವಾಮಿಯು ಅಲ್ಲಿಯೇ ಅದೃಶ್ಯನಾದನು. ಆ ವೈಶ್ಯನು ಸಂತುಷ್ಟಮನಸ್ಕನಾಗಿ ಬಳಿಕ ದಾರಾಪುತ್ರಾದಿಗಳ ಮಮತೆಯನ್ನು

ತ್ಯಕ್ತ್ವಾ ಕಲತ್ರಂ ಪುತ್ರಂ ಚ ಪ್ರಾಪ್ಯ ವೈರಾಗ್ಯಮುತ್ಕಟಂ ।
ಉಷಿತ್ವಾ ಸರಯೂತೀರೇ ರಾಮಧ್ಯಾನಪರೋऽಭವತ್ ॥ ೭೩ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ಚತುರ್ಥಖಂಡೇ
ಕಲಿಯುಗೀಯೇತಿಹಾಸಸಮುಚ್ಚಯೇ ವಸುಮಾಹಾತ್ಮ್ಯೇ
ತ್ರಿಲೋಚನವೈಶ್ಯೋತ್ಪವರ್ಣನಂ ನಾಮ
ಪಂಚದಶೋऽಧ್ಯಾಯಃ.



ತೊರೆದು ಪರಮವೈರಾಗ್ಯಯುಕ್ತನಾಗಿ ಸರಯೂತೀರದಲ್ಲಿ ವಾಸಿಸುತ್ತಾ ರಾಮಧ್ಯಾನ, ಜಪ, ಇವುಗಳಲ್ಲಿ ಆಸಕ್ತನಾಗಿದ್ದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣ ಪ್ರತಿಸರ್ಗಪರ್ವದ ನಾಲ್ಕನೆಯ ಖಂಡದ
ವಸುಮಹಾತ್ಮ್ಯೆಯಲ್ಲಿ ತ್ರಿಲೋಚನವೈಶ್ಯೋತ್ಪತ್ತಿವರ್ಣನವೆಂಬ
ಹದಿನೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಪ್ರತಿಸರ್ಗಪರ್ವಣಿ ಚತುರ್ಥಖಂಡೇ

## ಷೋಡಶೋಽಧ್ಯಾಯಃ

॥ ಬೃಹಸ್ಪತಿರುವಾಚ ॥

ಸ್ವಾಯಂಭುವೇಽಂತರೇ ಪೂರ್ವಂ ಧ್ರುವವಂಶಸಮುದ್ಭವಃ ।
ರಾಜಾ ಪ್ರಾಚೀನಬರ್ಹಿಶ್ಚ ಬಭೂವ ಮಖಕಾರಕಃ ॥ ೧ ॥

ನಾರದಸ್ಯೋಪದೇಶೇನ ತ್ಯಕ್ತ್ವಾ ಹಿಂಸಾಮಯಂ ಮಖಂ ।
ಜ್ಞಾನವಾನ್ ವೈಷ್ಣವೋ ಭೂತ್ವಾ ದಶಪುತ್ರಾನಜೀಜನತ್ ॥ ೨ ॥

---

## ಹದಿನಾರನೆಯ ಅಧ್ಯಾಯ

೧. ಬೃಹಸ್ಪತ್ಯಾಚಾರ್ಯರು ಹೇಳುತ್ತಾರೆ—ಹಿಂದೆ ಸ್ವಾಯಂಭುವಮನ್ವಂತರದಲ್ಲಿ ಧ್ರುವವಂಶೋತ್ಪನ್ನನಾದ ಪ್ರಾಚೀನಬರ್ಹಿಯೆಂಬ ರಾಜನಿದ್ದನು. ಇವನು ಯಜ್ಞಯಾಗಾದಿಗಳನ್ನು ಮಾಡುವ ಶೀಲವುಳ್ಳವನಾಗಿದ್ದನು.

೨. ಒಂದುದಿವಸ ನಾರದನು ಇವನ ಬಳಿಗೈತಂದು ಲೋಕವ್ಯವಹಾರವಿಚಾರವನ್ನಾಡುತ್ತಿರುವಾಗ್ಗೆ, ಯಾಗವು ಹಿಂಸಾರೂಪವೆಂದು ತಿಳಿಯಿತು. ಆ ರಾಜನು ಅವರ ಉಪದೇಶದಿಂದ ಹಿಂಸಾಮಯವಾದ ಪಶುಯಾಗವನ್ನು ಮಾಡುವುದನ್ನು ಬಿಟ್ಟು ವೈಷ್ಣವದೀಕ್ಷೆಯನ್ನು ಪಡೆದು ಜ್ಞಾನಿಯಾಗಿ ಹತ್ತುಮಂದಿ ಪುತ್ರರನ್ನು ಪಡೆದನು.

ಪ್ರಚೇತಾ ನಾಮ ತೇಷಾಂ ವೈ ಜಾತಂ ತೇ ಚೈಕರೂಪಿಣಃ ।
ಪಿತುರಾಜ್ಞಾಂ ಪುರಸ್ಕೃತ್ಯ ಜಲಮಧ್ಯೇ ತಪೋಽರ್ಥಿನಃ ॥
ರತ್ನಾಕರಸ್ಯ ಸಿಂಧೋಶ್ಚ ಮಗ್ನಭೂತಾ ಬಭೂವಿರೇ ॥ ೩ ॥

ತೇಷಾಂ ತು ತಪಸಾ ತುಷ್ಟಃ ಸ್ವಯಂಭೂಶ್ಚತುರಾನನಃ ।
ಸಪ್ತಾಬ್ಧಿಷು ಸ ತಾನ್‌ಸಪ್ತ ಸುತಾನ್ ಸಂಸ್ಥಾಪ್ಯ ಲೋಕರಾಟ್ ॥ ೪ ॥

ರತ್ನಾಕರೇಽಷ್ಟಮಂ ಪುತ್ರಂ ನವಮಂ ಮಾನಸೋತ್ತರೇ ।
ದಶಮಂ ಮೇರುಶಾಖಾಯಾಂ ಸುತಂ ಕೃತ್ವಾ ಮುಮೋದ ಹ ॥ ೫ ॥

ಅಪೋ ವಹತಿ ಯೋ ಲೋಕೇ ಸ ಆಪವ ಇತಿ ಸ್ಮೃತಃ ।
ದ್ವಿತೀಯೋ ವರುಣೋ ನಾಮ ಯಾದಸಾಂ ಪತಿರಪ್ಪತಿಃ ॥ ೬ ॥

---

೩. ಅವರೆಲ್ಲರೂ ಒಂದೇಸಮನಾದ ರೂಪವಂತರಾಗಿದ್ದರು. ಇವರೆಲ್ಲರಿಗೂ ಪ್ರಚೇತರೆಂಬ ಹೆಸರು ಪ್ರಸಿದ್ಧಿಗೆ ಬಂದಿತು. ಒಂದುಸಲ ಈ ಹತ್ತುಜನಗಳೂ, ತಂದೆಯ ಅಪ್ಪಣೆಯನ್ನು ಪಡೆದು ಮನೆಯಿಂದ ಹೊರಟು ರತ್ನಗಳಿಗೆಲ್ಲಾ ಆಶ್ರಯವಾದ ಸಮುದ್ರವನ್ನುಸೇರಿ ಅಲ್ಲಿ ನೀರಿನಮಧ್ಯದಲ್ಲಿ ನಿಂತುಕೊಂಡು ತಪಸ್ಸು ಮಾಡತೊಡಗಿದರು.

೪. ಸ್ವಯಂಭುವಾದ ಚತುರ್ಮುಖಬ್ರಹ್ಮನು ಇವರ ತಪಸ್ಸಿಗೆಮೆಚ್ಚಿ ಅವರಲ್ಲಿ ಏಳುಮಂದಿಯನ್ನು ಸಪ್ತಸಮುದ್ರಗಳಲ್ಲಿ ಸ್ಥಾಪಿಸಿದನು.

೫. ಲೋಕರಕ್ಷಕನಾದ ಆ ಬ್ರಹ್ಮನು ಎಂಟನೆಯವನನ್ನು ರತ್ನಾಕರ (ರತ್ನಗಳಿಗೆ ಆಸರೆಯಾದಸಮುದ್ರ) ದಲ್ಲಿಯೂ, ಒಂಭತ್ತನೆಯವನನ್ನು ಮಾನಸೋತ್ತರ (ಮಾನಸಸರೋವರ) ದಲ್ಲಿಯೂ, ಹತ್ತನೆಯವನನ್ನು ಮೇರುಶಾಖಾ ಎಂಬ ಸರಸ್ಸಿನಲ್ಲಿಯೂ ಸ್ಥಾಪಿಸಿ ಸಂತುಷ್ಟಾಂತರಂಗನಾದನು.

೬. ಮೊದಲನೆಯವನು, ಲೋಕದಲ್ಲಿ ನೀರನ್ನು ಧರಿಸುವವನಾದ್ದರಿಂದ ಅವನಿಗೆ ಆಪವನೆಂದು ಹೆಸರುಬಂದಿತು. ಎರಡನೆಯವನು ನೀರಿಗೆಲ್ಲಾ ಅಧಿಪತಿಯೆನಿಸಿ ವರುಣನೆಂಬ ಹೆಸರಿನಿಂದ ಪ್ರಖ್ಯಾತಿಹೊಂದಿದನು.

ದದೌ ಪಾಶಂ ತದಾ ಬ್ರಹ್ಮಾ ದೈತ್ಯಬಂಧನಹೇತವೇ ।
ಪಾಶೀ ನಾಮ ತತೋ ಜಾತಂ ವರುಣಸ್ಯ ಮಹಾತ್ಮನಃ ॥ ೭ ॥

ಸ ತು ಪೂರ್ವಭವೇ ಚಾಸೀದ್ಬ್ರಾಹ್ಮಣಃ ಶಕ್ತಿಪೂಜಕಃ ।
ಆಪವೋ ನಾಮ ವಿಖ್ಯಾತೋ ವಾರುಣೀಪಾನತತ್ಪರಃ ॥ ೮ ॥

ಭದ್ರಕಾಲ್ಯಾಃ ಪ್ರಿಯೋ ಭಕ್ತೋ ನಿತ್ಯಂ ಪೂಜನತತ್ಪರಃ ।
ನಾನಾರಕ್ತಮಯೈಃ ಪುಷ್ಪೈರ್ಗುಂಫಿತಾಂ ರಕ್ತಮಾಲಿಕಾಂ ॥ ೯ ॥

ರಕ್ತಚಂದನಸಂಯುಕ್ತಾಂ ಗೃಹೀತ್ವಾ ಮಂತ್ರಸಂಯುತಃ ।
ಭದ್ರಕಾಲ್ಯೈ ನಿವೇದ್ಯಾಶು ನವಾರ್ಣವಪರೋಽಭವತ್ ॥ ೧೦ ॥

ಧೂಪೈರ್ದೀಪೈಶ್ಚ ನೈವೇದ್ಯೈಸ್ತಾಂಬೂಲೈರ್ಋತುಜೈಃ ಫಲೈಃ ।
ಪೂಜಯಿತ್ವಾ ಮಹಾಲಕ್ಷ್ಮೀಂ ಭದ್ರಕಾಲೀಂ ಸನಾತನೀಂ ॥ ೧೧ ॥

---

೭. ಆಗ ಬ್ರಹ್ಮನು ರಾಕ್ಷಸರನ್ನು ಬಂಧಿಸುವುದಕ್ಕೋಸ್ಕರ ಇವನಿಗೆ ಪಾಶಾಯುಧವನ್ನು ಕೊಟ್ಟನು. ಆದಕಾರಣ ಮಹಾಪುರುಷನಾದ ಈ ವರುಣನಿಗೆ ಪಾಶೀ ಎಂದೂ ಹೆಸರಾಯಿತು.

೮. ಮೊದಲನೆಯವನು ತನ್ನ ಪೂರ್ವಜನ್ಮದಲ್ಲಿ ಶಕ್ತಿದೇವತೆಯನ್ನು ಪೂಜಿಸುವ ಬ್ರಾಹ್ಮಣನಾಗಿದ್ದನು ಅವನು ಸದಾ ಜಲ ಪಾನಮಾಡುವುದರಲ್ಲಿ ಆಸಕ್ತನಾಗಿರುತ್ತಿದ್ದುದರಿಂದ ಇವನಿಗೆ ಆಪವನೆಂಬ ಹೆಸರು ಬಂದಿತು.

೯-೧೦. ಇವನು ಮಂಗಳಕರಳಾದ ಕಾಳಿಕಾದೇವಿಯ ಭಕ್ತನಾಗಿ, ಪ್ರತಿನಿತ್ಯವೂ ಅನೇಕ ಕೆಂಪುಬಣ್ಣದ ಹೂವುಗಳಿಂದ ಕಟ್ಟಿದುದೂ ಕೆಂಪುಚಂದನದಿಂದ ಲೇಪಿತವೂ ಆದ ಕೆಂಪುಮಾಲಿಕೆಯನ್ನು ಭದ್ರಕಾಳಿಕಾದೇವಿಗೆ ಮಂತ್ರಪೂರ್ವಕವಾಗಿ ಸಮರ್ಪಿಸಿ ಕೂಡಲೆ ನವಾರ್ಣವ ಮಂತ್ರವನ್ನು ಜಪಿಸುತ್ತಿದ್ದನು.

೧೧. ಮತ್ತು ಧೂಪ, ದೀಪ, ನೈವೇದ್ಯ, ತಾಂಬೂಲ ಮತ್ತು ಆಯಾಯ ಋತುಗಳಲ್ಲಿ ದೊರೆವ ಹಣ್ಣುಗಳು ಇವುಗಳಿಂದ, ಸನಾತನೆಯೂ ಮಹಾಲಕ್ಷ್ಮೀ ಸ್ವರೂಪಿಣಿಯೂ ಆದ ಭದ್ರಕಾಳೀದೇವಿಯನ್ನು ಪೂಜೆಮಾಡುತ್ತಿದ್ದನು.

ತಿಲೈಃ ಶರ್ಕರಯಾ ಯುಕ್ತಂ ಮಧುನಾ ಚ ಹವಿಃ ಸ್ವಯಂ ।
ವಹ್ನಿದ್ವಾರೇಣ ಸಂಹುತ್ಯ ತುಷ್ಟಾವ ಜಗದಂಬಿಕಾಂ ॥ ೧೨ ॥

ಚರಿತ್ರಂ ಮಧ್ಯಮಂ ದೇವ್ಯಾ ವಿಷ್ಣುದೇವೇನ ನಿರ್ಮಿತಂ ।
ನವಾರ್ಣವೇನ ತೇನೈವ ಪ್ರತ್ಯಹಂ ಜಾಪ್ಯತತ್ಪರಃ ॥ ೧೩ ॥

ಏವಂ ವರ್ಷತ್ರಯಂ ಜಾತಂ ತಸ್ಯ ಪೂಜಾಂ ಪ್ರಕುರ್ವತಃ ।
ಪ್ರಸನ್ನಾಽಭೂತ್ತದಾ ದೇವೀ ವರದಾ ಸರ್ವಮಂಗಲಾ ॥
ವರಂ ಬ್ರೂಹೀತಿ ವಚನಂ ತಮಾಹ ದ್ವಿಜಸತ್ತಮಂ ॥ ೧೪ ॥

ಇತಿ ವಾಕ್ಯಂ ಪ್ರಿಯಂ ಶ್ರುತ್ವಾ ದ್ವಿಜ ಆಪವ ನಮ್ರಧೀಃ ।
ತುಷ್ಟಾವ ದಂಡವದ್ಭೂತ್ವಾ ಭದ್ರಕಾಲೀಂ ಸನಾತನೀಂ ॥ ೧೫ ॥

---

೧೨. ಅನಂತರ ಎಳ್ಳು, ಸಕ್ಕರೆ ಮತ್ತು ಜೇನುತುಪ್ಪ ಇವು ಬೆರೆದಿರುವ ಹವಿಸ್ಸನ್ನು ಅಗ್ನಿಯಲ್ಲಿ ಹೋಮಮಾಡಿ ಜಗದಂಬಿಕೆಯನ್ನು ಸ್ತೋತ್ರಮಾಡಿದನು.

೧೩. ಅಲ್ಲದೆ ಮಹಾವಿಷ್ಣುವಿನಿಂದ ರಚಿತವಾದ ದೇವಿಯ ಮಧ್ಯಚರಿತ್ರ ಸ್ತೋತ್ರವನ್ನು, ಹಿಂದೆ ಹೇಳಿದ ನವಾರ್ಣವ ಮಂತ್ರದೊಡನೆ ಪ್ರತಿನಿತ್ಯವೂ ಜಪ ಮಾಡುತ್ತಾ ಧ್ಯಾನತತ್ಪರನಾಗಿದ್ದನು.

೧೪. ಹೀಗೆ ಆ ಆಪವನು ದೇವಿಯ ಪೂಜೆಯನ್ನೂ ಜಪವನ್ನೂ ಸಹ ಮೂರುವರ್ಷಗಳವರೆಗೆ ಬಿಡದೆ ಮಾಡುತ್ತಿರಲು, ವರವನ್ನು ಕರುಣಿಸುವವಳೂ ಸರ್ವ ಮಂಗಳಸ್ವರೂಪಳೂ ಆದ ದೇವಿಯು ಪ್ರಸನ್ನೆಯಾಗಿ ಆ ಬ್ರಾಹ್ಮಣೋತ್ತಮನನ್ನು ಕುರಿತು " ಅಯ್ಯಾ! ನಿನಗೆ ಬೇಕಾದ ವರವನ್ನು ಬೇಡು " ಎಂದಳು.

೧೫. ತನ್ನ ಮನಸ್ಸಿಗೆ ಹಿತಕರವಾಗುವಂತೆ ದೇವಿಯು ಹೇಳಿದಮಾತನ್ನು ಕೇಳಿ ಬ್ರಾಹ್ಮಣಶ್ರೇಷ್ಠನಾದ ಆಪವನು ವಿನಯದಿಂದ ಪುರಾತನೆಯಾದ ಆ ಭದ್ರ ಕಾಲಿಗೆ ದಂಡಪ್ರಣಾಮಮಾಡಿ ಮುಂದೆ ಹೇಳುವಂತೆ ಸ್ತೋತ್ರ ಮಾಡಿದನು.

॥ ಆಪವ ಉವಾಚ ॥

ವಿಷ್ಣುಕಲ್ಪೇ ಪುರಾ ಚಾಸೀದ್ದಾನವೋ ಮಹಿಷಾಸುರಃ ।
ಕೋಟಿಕೋಟಿಸಹಸ್ರೈಸ್ತು ರಥೈರ್ವಾಜಿಗಜೈರ್ಯುತಃ ॥ ೧೬ ॥

ತ್ರೈಲೋಕ್ಯಂ ಸ್ವವಶೇ ಕೃತ್ವಾ ಮಹೇಂದ್ರಸ್ಸ ತದಾಭವತ್ ।
ಸ್ವಾರೋಚಿಷಾಂತರಃ ಕಾಲೋ ಗತೋ ರಾಜ್ಯಂ ಪ್ರಕುರ್ವತಃ ॥ ೧೭ ॥

ತತಸ್ಸ ಭಗವಾನ್ವಿಷ್ಣುಸ್ಸರ್ವದೇವಸಮನ್ವಿತಃ ।
ಸಮುತ್ಪಾದ್ಯ ಮುಖಾತ್ತೇಜೋ ಜ್ವಾಲಾಮಾಲೀ ಬಭೂವ ಹ ॥ ೧೮ ॥

ಜ್ಯೋತಿರ್ಲಿಂಗಾತ್ತದಾ ದೇವೀ ಭವತೀ ಸ್ವೇಚ್ಛಯಾ ಭುವಿ ।
ಸಂಭೂಯ ಮಹಿಷಂ ಹಂತ್ರೀ ತಸ್ಯೈ ದೇವ್ಯೈ ನಮೋನಮಃ ॥ ೧೯ ॥

---

೧೬. ಆಪವನು ಹೇಳುತ್ತಾನೆ—ಹಿಂದೆ ವಿಷ್ಣುಕಲ್ಪದಲ್ಲಿ ಮಹಿಷಾಸುರನೆಂಬ ರಾಕ್ಷಸನಿದ್ದನು. ಅವನ ಹತ್ತಿರ ಕೋಟ್ಯಂತರ ರಥಗಳೂ, ಕುದುರೆಗಳೂ, ಆನೆಗಳೂ ಸಹ ಇದ್ದುವು.

೧೭. ಇವುಗಳ ಬಲದಿಂದ ಅವನು ಇಂದ್ರನನ್ನು ಸೋಲಿಸಿ ಮೂರು ಲೋಕವನ್ನೂ ತನ್ನ ಅಧೀನದಲ್ಲಿಟ್ಟುಕೊಂಡು ತಾನೇ ಇಂದ್ರನಾದನು. ಈರೀತಿ ಅವನು ಸ್ವಾರೋಚಿಷಮನ್ವಂತರ ಬರುವವರೆಗೂ ರಾಜ್ಯಭಾರಮಾಡುತ್ತಿದ್ದನು.

೧೮. ಷಡ್ಗುಣೈಶ್ವರ್ಯಸಂಪನ್ನನಾದ ಮಹಾವಿಷ್ಣುವು ದೇವತೆಗಳೊಡನೆ ಅಲ್ಲಿಗೆ ಬಂದು, ತನ್ನ ಮುಖದಿಂದ ಸ್ವಲ್ಪ ತೇಜಸ್ಸನ್ನು ತೆಗೆದುಹಾಕಲು ಅದು ಜ್ವಾಲೆಗಳಿಂದ ಆವರಿಸಿಕೊಂಡು ಉರಿಯತೊಡಗಿತು.

೧೯. ಆ ತೇಜಸ್ಸು ಲಿಂಗಾಕಾರವಾಯಿತು. ದೇವಿಯು ತನ್ನ ಇಚ್ಛಾಪೂರ್ವಕವಾಗಿ ಆ ಜ್ಯೋತಿರ್ಲಿಂಗದಿಂದಹುಟ್ಟಿ ಭೂಲೋಕಕ್ಕೆ ಬಂದು ಮಹಿಷಾಸುರನನ್ನು ಯುದ್ಧದಲ್ಲಿ ಕೊಂದಳು. ಅವಳೇ ನೀನಾಗಿರುವೆಯಾದಕಾರಣ ಅಂತಹ ನಿನಗೆ ನಮಸ್ಕಾರಗಳು.

ರುದ್ರಕಲ್ಪೇ ಪುರಾ ಚಾಸೀದ್ರುದಚ್ಛಂಭುಮುಖಾದ್ದಿವಿ ।
ರಾವಣಶ್ಚ ಸಹಸ್ರಾಸ್ಯೋ ಜಾತೋ ಬ್ರಹ್ಮಾಂಡರಾವಣಃ ॥ ೨೦ ॥

ರಾಕ್ಷಸೋ ಬಲವಾನ್ಘೋರೋ ಲೋಕಾಲೋಕಗಿರೇರಧಃ ।
ನ್ಯವಸದ್ದೇವದೈತ್ಯಾನಾಂ ಮನುಷ್ಯಾಣಾಂ ಚ ಭಕ್ಷಕಃ ॥ ೨೧ ॥

ಷಷ್ಠೇ ಮನ್ವಂತರೇ ತೇನ ಬ್ರಹ್ಮಾಂಡಂ ರಾಜ್ಯಸಾತ್ಕೃತಂ ।
ತತೋ ವೈವಸ್ವತೇ ಪ್ರಾಪ್ತೇ ತ್ರೇತಾಷ್ಟಾವಿಂಶಕೇ ಪ್ರಭುಃ ॥
ಸ ಜಾತೋ ರಾಘವಗೃಹೇ ರಾಮಸ್ಸಂಕರ್ಷಣಃ ಸ್ವಯಂ ॥ ೨೨ ॥

ಷೋಡಶಾಬ್ದವಪುರ್ಭೂತ್ವಾ ಸ ಗತೋ ಜನಕಾಲಯೇ ।
ಧನುಶ್ಚಾಜಗವಂ ಘೋರಂ ಪ್ರಭಗ್ನಂ ತೇನ ಧೀಮತಾ ॥ ೨೩ ॥

---

೨೦. ಹಿಂದೆ ರುದ್ರಕಲ್ಪದಲ್ಲಿ ರೋದನಮಾಡುತ್ತಿರುವ ಶಿವನ ಮುಖದಿಂದ ಸಾವಿರಮುಖವುಳ್ಳ ಲೋಕಭಯಂಕರನಾದ ಬ್ರಹ್ಮಾಂಡರಾವಣನು ಉದಯಿಸಿದನು.

೨೧. ಬಲಶಾಲಿಯೂ ಭಯಂಕರನೂ ಆದ ಆ ರಾಕ್ಷಸನು ಲೋಕಾಲೋಕ ಪರ್ವತದ ಕೆಳಭಾಗದಲ್ಲಿ ವಾಸಮಾಡುತ್ತಾ ಮನುಷ್ಯರನ್ನೂ ದೈತ್ಯರನ್ನೂ ತಿನ್ನುತ್ತಿದ್ದನು.

೨೨. ಆರನೆಯ ಮನ್ವಂತರದಲ್ಲಿ ಈ ಬ್ರಹ್ಮಾಂಡವೆಲ್ಲವೂ ಅವನ ರಾಜ್ಯವಾಗಿ ಪರಿಣಮಿಸಿತು. ಅನಂತರ ವೈವಸ್ವತಮನ್ವಂತರವು ಪ್ರಾಪ್ತವಾಗಲು ಇಪ್ಪತ್ತೆಂಟನೆಯ ತ್ರೇತಾಯುಗದಲ್ಲಿ ಸರ್ವಸಮರ್ಥನಾದ ಸಂಕರ್ಷಣನೇ ರಘುವಂಶೋತ್ಪನ್ನನಾದ ದಶರಥನ ಮನೆಯಲ್ಲಿ ರಾಮನೆಂಬ ಹೆಸರಿನಿಂದ ಅವತರಿಸಿದನು.

೨೩. ಅವನಿಗೆ ಹದಿನಾರುವರ್ಷವಾಗುತ್ತಲೇ ಬುದ್ಧಿಶಾಲಿಯಾದ ಅವನು ಜನಕನ ಮನೆಗೆ ಹೋಗಿ ಸ್ವಯಂವರಕ್ಕೆ ಪಣವಾಗಿ ಇಟ್ಟಿದ್ದ ಭಯಂಕರವಾದ ಪರಮೇಶ್ವರನ ಧನುಸ್ಸನ್ನು ಮುರಿದುಹಾಕಿದನು.

ತದಾ ಬ್ರಹ್ಮಾದಯೋ ದೇವಾ ಜ್ಞಾತ್ವಾ ರಾಮಂ ಸನಾತನಂ ।
ಸಹಸ್ರವದನಸ್ಯೈವ ವರ್ಣಯಾಮಾಸ ಕಾರಣಂ ॥ ೨೪ ॥

ತಚ್ಛ್ರುತ್ವಾ ಹಂಸಯಾನಂ ಚ ಸಮಾರುಹ್ಯ ಸ ಸೀತಯಾ ।
ಲೋಕಾಲೋಕಗಿರೌ ಪ್ರಾಪ್ಯ ಘೋರಯುದ್ಧಮಚೀಕರತ್ ॥ ೨೫ ॥

ಹಂಸಯಾನಪತಾಕಾಯಾಂ ಸಂಸ್ಥಿತೋ ಹನುಮಾನ್ಕಪಿಃ ।
ವೇದಾಶ್ಚ ವಾಜಿನಸ್ತತ್ರ ನೇತಾ ಬ್ರಹ್ಮಾ ಸನಾತನಃ ॥ ೨೬ ॥

ದಿವ್ಯವರ್ಷಮಭೂದ್ಘೋರಃ ಸಂಗ್ರಾಮಸ್ತೇನ ರಕ್ಷಸಾ ।
ರಾವಣಸ್ಸ ತದಾ ಕ್ರುದ್ಧೋ ದ್ವಿಸಹಸ್ರೈಶ್ಚ ಬಾಹುಭಿಃ ॥ ೨೭ ॥

ಅಪರೌ ಮೂರ್ಛಯಿತ್ವಾ ತೌ ಭ್ರಾತರೌ ರಾಮಲಕ್ಷ್ಮಣೌ ।
ಜಗರ್ಜ ಬಲವಾನ್ಘೋರಸ್ಸ ಚ ಬ್ರಹ್ಮಾಂಡರಾವಣಃ ॥ ೨೮ ॥

---

೨೪. ಆಗ ಬ್ರಹ್ಮಾದಿದೇವತೆಗಳೆಲ್ಲರೂ ಈ ರಾಮನನ್ನು ಪುರಾತನನಾದ ಪರಮಪುರುಷನೆಂದು ತಿಳಿದು ಸಾವಿರತಲೆಯ ರಾವಣನ ಹಾವಳಿಯನ್ನು ಅವನಿಗೆ ತಿಳಿಸಿದರು.

೨೫. ಆಗ ರಾಮನು ಸೀತೆಯೊಡನೆ ಹಂಸಯಾನವನ್ನೇರಿ ಲೋಕಾಲೋಕ ಪರ್ವತಕ್ಕೆ ಬಂದು, ಅಲ್ಲಿ ಆ ಸಹಸ್ರಕಂಠರಾವಣನೊಡನೆ ಘೋರವಾದ ಯುದ್ಧ ವನ್ನು ಮಾಡಿದನು.

೨೬. ಹಂಸಯಾನದ ಧ್ವಜದಲ್ಲಿ ಕಪಿಯಾದ ಹನುಮಂತನು ಕುಳಿತಿದ್ದನು. ಆ ರಥಕ್ಕೆ ವೇದಗಳೇ ಕುದುರೆಗಳಾಗಿದ್ದುವು. ಪುರಾತನನಾದ ಬ್ರಹ್ಮನೇ ಸಾರಥಿ ಯಾಗಿದ್ದನು.

೨೭-೨೮. ಹೀಗೆ ರಾಮರಾವಣರಿಗೆ ದೇವಮಾನದ ಒಂದುವರ್ಷಪರ್ಯಂತ ಘೋರವಾದ ಯುದ್ಧನಡೆಯಿತು. ಆಗ ಬಲಶಾಲಿಯೂ ಭಯಂಕರನೂ ಆದ ಆ ಸಹಸ್ರಕಂಠರಾವಣನು ಕೋಪಗೊಂಡು ತನ್ನ ಎರಡುಸಾವಿರ ತೋಳುಗಳಿಂದ ಯುದ್ಧಮಾಡಿ ರಾಮಲಕ್ಷ್ಮಣರನ್ನು ಮೂರ್ಛೆಗೊಳಿಸಿ ಘೋರವಾಗಿ ಗರ್ಜನೆ ಮಾಡಿದನು.

ಬ್ರಹ್ಮಣಾ ಸಂಸ್ತುತಾ ಮಾತಾ ಭವತೀ ಬ್ರಹ್ಮರೂಪಿಣೀ ।
ಸೀತಾ ಶಾಂತಿಮಯೀ ನಿತ್ಯಾ ತಯಾ ಬ್ರಹ್ಮಾಂಡರಾವಣಃ ॥
ವಿನಾಶಿತೋ ನಮಸ್ತಸ್ಯೈ ನಮಸ್ತಸ್ಯೈ ನಮೋನಮಃ ॥ ೨೯ ॥

ಬ್ರಹ್ಮಕಲ್ಪೇ ಪುರಾ ಚಾಸೀತ್ತಾಲಜಂಘಾನ್ವಯೋದ್ಭವಃ ।
ಮುರೋ ನಾಮ ಮಹಾದೈತ್ಯೋ ಬ್ರಹ್ಮಣೋ ಬಲದರ್ಪಿತಃ ॥ ೩೦ ॥

ಬ್ರಹ್ಮಾಂಡೇಶಂ ಮಹಾರುದ್ರಂ ಮಹೇಂದ್ರಾದಿಸಮನ್ವಿತಂ ।
ಸ ಬಭೂವ ಪರಾಜಿತ್ಯಾಧಿಕಾರೀ ರೌದ್ರ ಆಸನೇ ॥ ೩೧ ॥

ದೇವೈಸ್ಸಾರ್ಧಂ ಮಹಾದೇವೋ ಮಾಧವಂ ಕ್ಷೀರಶಾಯಿನಂ ।
ಗತ್ವಾ ನಿವೇದಯಾಮಾಸ ಸ ವಿಷ್ಣುಃ ಕ್ರೋಧಸಂಯುತಃ ॥ ೩೨ ॥

---

೨೯. ಆಗ ಬ್ರಹ್ಮಸ್ವರೂಪಿಣಿಯೂ, ನಿತ್ಯಳೂ, ಶಾಂತಿಮಯಳೂ, ಪೂಜ್ಯಳೂ, ಜಗಜ್ಜನನಿಯೂ ಆದ ಸೀತಾದೇವಿಯನ್ನು ಬ್ರಹ್ಮನು ಬಹುವಾಗಿ ಸ್ತೋತ್ರಮಾಡಿದನು. ಆಗ ಆ ದೇವಿಯು ಪ್ರಸನ್ನಳಾಗಿ ಆ ಸಹಸ್ರಕಂಠ ರಾವಣನನ್ನು ಸಂಹಾರ ಮಾಡಿದಳು. ಅವಳೇ ನೀನಾಗಿರುವೆಯಾದಕಾರಣ ನಿನಗೆ ನಮಸ್ಕಾರ.

೩೦. ಹಿಂದೆ ಬ್ರಹ್ಮಕಲ್ಪದಲ್ಲಿ ತಾಲಜಂಘನವಂಶದಲ್ಲಿ ಮುರನೆಂಬ ರಾಕ್ಷಸನು ಹುಟ್ಟಿದನು. ಅವನು ಬ್ರಹ್ಮನನ್ನು ಕುರಿತು ತಪಸ್ಸುಮಾಡಿ ವರವನ್ನು ಪಡೆದು ಆ ಬಲದಿಂದ ಕೊಬ್ಬಿದ್ದನು.

೩೧. ಆ ಮುರಾಸುರನು ಸಕಲ ಪ್ರಪಂಚಗಳಿಗೂ ಅಧಿಪತಿಯಾದ ಮಹಾರುದ್ರನನ್ನೂ (ಪರಮೇಶ್ವರನನ್ನು) ಇಂದ್ರಾದಿಗಳನ್ನೂ ಸೋಲಿಸಿ, ಆ ರುದ್ರನ ಸ್ಥಾನದಲ್ಲಿ ತಾನೇ ಅಧಿಕಾರಮಾಡತೊಡಗಿದನು.

೩೨. ಆಗ ಮಹಾದೇವನು ದೇವತೆಗಳೊಡನೆ ಹೊರಟು ಕ್ಷೀರಸಮುದ್ರದಲ್ಲಿ ಮಲಗಿರುವ ವಿಷ್ಣುವಿನ ಸಮೀಪಕ್ಕೆ ಬಂದು ನಡೆದ ವಿಷಯವನ್ನೆಲ್ಲಾ ಅವನಿಗೆ ಅರಿಕೆಮಾಡಲು ಆ ವಿಷ್ಣುವು ಅದನ್ನು ಕೇಳಿ ತುಂಬಾ ಕೋಪಗೊಂಡನು.

ಜಗಾಮ ಗರುಡಾರೂಢೋ ಯತ್ರ ದೈತ್ಯೋ ಮುರಃ ಸ್ಥಿತಃ ।
ತೇನ ಸಾರ್ಧಮಭೂದ್ಯುದ್ಧಂ ತಸ್ಯ ದೇವಸ್ಯ ದಾರುಣಂ ॥ ೩೩ ॥

ಸಹಸ್ರಾಬ್ದಮತೋ ಜಾತಂ ದೃಷ್ಟ್ವಾ ಬ್ರಹ್ಮಾ ಭಯಾನ್ವಿತಃ ।
ಪರಾಂ ತು ಪ್ರಕೃತಿಂ ನಿತ್ಯಾಂ ತುಷ್ಟಾವ ಶ್ಲಕ್ಷ್ಣಯಾ ಗಿರಾ ॥ ೩೪ ॥

ಪ್ರಸನ್ನಾ ಸಾ ತದಾ ದೇವೀ ಕುಮಾರೀ ಸಪ್ತಹಾಯಿನೀ ।
ಚತುರ್ಭುಜಾಸ್ತ್ರಸಹಿತಾ ಭೂತ್ವಾ ದೈತ್ಯಮುವಾಚ ಹ ॥ ೩೫ ॥

ಪರಾಜಿತೋऽಸ್ತ್ವಯಂ ಭಗವಾನ್‌ದೈತ್ಯರಾಜೇನ ವೈ ತ್ವಯಾ ।
ವಿಜಯಾ ನಾಮ ಮೇ ರಮ್ಯಾ ಕೈಶ್ಚಿನ್ನಾಹಂ ಪರಾಜಿತಾ ॥ ೩೬ ॥

ಉನ್ಮೀಲಿನೀ ವಿಂಜುಲೀ ಚ ತ್ರಿಸ್ಪೃಶಾ ಪಕ್ಷವರ್ಧಿನೀ ।
ಜಯಾ ಜಯಂತೀ ವಿಜಯಾ ವರ್ಷೇವರ್ಷೇ ಕ್ರಮಾದಹಂ ॥ ೩೭ ॥

---

೩೩. ಆತನು ಕೂಡಲೆ ಗರುಡಾರೂಢನಾಗಿ ಆ ಮುರಾಸುರನಿದ್ದೆಡೆಗೆ ಬಂದನು. ಆ ಮುರನಿಗೂ ವಿಷ್ಣುವಿಗೂ ಘೋರಯುದ್ಧವಾಯಿತು.

೩೪. ಹೀಗೆ ಯುದ್ಧಮಾಡುವುದರಲ್ಲಿ ಸಾವಿರವರ್ಷ ಕಳೆದುವು. ಆದರೂ ಯುದ್ಧವು ಮುಗಿಯದೇ ಇರುವುದನ್ನು ನೋಡಿ ಬ್ರಹ್ಮನು ಹೆದರಿ, ಶ್ರೇಷ್ಠಳೂ ನಿತ್ಯಳೂ ಆದ ಪ್ರಕೃತಿದೇವಿಯನ್ನು ಮೃದುವಾದ ವಚನಗಳಿಂದ ಸ್ತೋತ್ರಮಾಡಿದನು.

೩೫. ಆಗ ಆ ಪ್ರಕೃತಿದೇವಿಯು ಪ್ರಸನ್ನಳಾಗಿ ಏಳುವರ್ಷವಯಸ್ಸಿನ ಕುಮಾರಿಯ ವೇಷವನ್ನು ಧರಿಸಿ ನಾಲ್ಕುತೋಳುಗಳಲ್ಲಿಯೂ ಆಯುಧಗಳನ್ನು ಹಿಡಿದು ಆ ಮುರಾಸುರನ ಸಮೀಪಕ್ಕೆ ಹೋಗಿ ಅವನನ್ನು ಕುರಿತು ಹೀಗೆಂದಳು.

೩೬ "ಎಲೈ ದೈತ್ಯರಾಜನೇ! ಭಗವಂತನಾದ ವಿಷ್ಣುವು ನಿನ್ನಿಂದ ಪರಾಜಿತನಾಗಬಹುದು. ಆದರೆ ನನ್ನ ಹೆಸರು 'ವಿಜಯಾ' ಎಂದು ಮನೋಹರವಾಗಿರುವುದು. ನಾನೆಂದಿಗೂ ಯಾರಿಗೂ ಸೋತಿಲ್ಲ.

೩೭. ನಾನು ಉನ್ಮೀಲಿನೀ, ವಿಂಜುಲೀ, ತ್ರಿಸ್ಪೃಶಾ, ಪಕ್ಷವರ್ಧಿನೀ, ಜಯಾ, ಜಯಂತೀ, ಮತ್ತು ವಿಜಯಾ ಎಂಬ ನಾಮಾಂತರಗಳಿಂದ ಪ್ರತಿವರ್ಷವೂ ಕ್ರಮವಾಗಿ ಬೇರೆಬೇರೆಯಾಗಿ ತೋರುವೆನು.

ಏಕಾದಶಶುಭಾಚಾರಾ ವಿಷ್ಣವಸ್ತನಯಾ ಮಮ ।
ಏಕಾದಶೀತಿ ವಿಖ್ಯಾತಾ ವೇದಮಧ್ಯೇ ಸಹಾ ಹ್ಯಹಂ ॥ ೩೮ ॥

ಅತೋ ಮಾಂ ಬಲವಾಞ್ಜಿತ್ವಾ ವಿಜಯಾಂ ವಿಷ್ಣುಮಾತರಂ ।
ಪಾಣಿಂ ಗೃಹಾಣ ಮೇ ರಮ್ಯಂ ಸರ್ವಪೂಜ್ಯೋ ಭವಾನ್‌ಭವೇತ್ ॥ ೩೯ ॥

ಇತಿ ಶ್ರುತ್ವಾ ಮುರೋ ದೈತ್ಯಸ್ತಸ್ಯಾ ರೂಪೇಣ ಮೋಹಿತಃ ।
ಯುಯುಧೇ ಸ ತಯಾ ಸಾರ್ಧಂ ಕ್ಷಣಾರ್ಧೇನ ಲಯಂ ಗತಃ ॥ ೪೦ ॥

ತಂ ಮುರಂ ನಿಹತಂ ದೃಷ್ಟ್ವಾನುಜಸ್ತನ್ನರಕಾಸುರಃ ।
ದೈತ್ಯಮಾಯಾಂ ಮಹಾಘೋರಾಂ ಚಕಾರ ಸುರನಾಶಿನೀಂ ॥ ೪೧ ॥

---

೩೮. ಶುಭಕರವಾದ ಆಚಾರವುಳ್ಳ ಹನ್ನೊಂದುಜನ ವಿಷ್ಣುಗಳೂ ನನ್ನ ಪುತ್ರರು. ಇವರುಗಳನ್ನು ಪಡೆದಿರುವುದರಿಂದ ನನಗೆ ಏಕಾದಶೀ ಎಂದು ವೇದದಲ್ಲಿ ಪ್ರಸಿದ್ಧಿಯಾಗಿದೆ. (ಅಂದರೆ ವೇದಪ್ರತಿಪಾದ್ಯಳಾದ ನನಗೆ ಹನ್ನೊಂದುಜನ ಮಕ್ಕಳು. ಅವರೇ ವಿಷ್ಣುಗಳು, ನಾನೇ ಏಕಾದಶೀ ಎಂದು ಭಾವ).

೩೯. ಆದುದರಿಂದ ಬಲಶಾಲಿಯಾದ ನೀನು ವಿಷ್ಣುವಿನ ತಾಯಿಯಾದ ನನ್ನನ್ನು ಜಯಿಸಿ ಅನಂತರ ಮನೋಹರಳಾದ ನನ್ನನ್ನು ಪಾಣಿಗ್ರಹಣಮಾಡಿಕೊಂಡರೆ ನಿನ್ನನ್ನು ಎಲ್ಲರೂ ಪೂಜಿಸುವರು " ಎಂದು ಹೇಳಿದಳು.

೪೦. ಈರೀತಿ ಹೇಳಿದುದನ್ನು ಕೇಳಿ ಆ ಮುರಾಸುರನು ಅವಳ ರೂಪಕ್ಕೆ ಬೆರಗಾಗಿ ಮೋಹಗೊಂಡು ಅವಳೊಡನೆ ಯುದ್ಧಮಾಡಿದನು. ಆದರೆ ಒಂದುಕ್ಷಣದಲ್ಲಿಯೇ ಸೋತು ನಾಶಹೊಂದಿದನು.

೪೧. ಅಣ್ಣನಾದ ಮುರನು ಸತ್ತುದನ್ನು ನೋಡಿ ಅವನ ತಮ್ಮನಾದ ನರಕಾಸುರನು ದೇವತೆಗಳನ್ನು ನಾಶಮಾಡುವ ಘೋರವಾದ ರಾಕ್ಷಸಮಾಯೆಯನ್ನು ಆ ದೇವಿಯಮೇಲೆ ಪ್ರಯೋಗಿಸಿದನು.

ಏಕಾದಶೀ ಸ್ವಯಂ ಮಾಯಾ ಹುಂಕಾರೇಣೈವ ತಂ ತದಾ ।
ನರಕೇಣ ಸಮಂ ಹತ್ವಾ ಜಗರ್ಜ ಜಗದಂಬಿಕಾ　　　　॥ ೪೨ ॥

ತಯೋಸ್ತೇಜೋ ಮಹಾಘೋರಮನ್ನಮಧ್ಯೇಷು ಚಾಗಮತ್ ।
ದುಷ್ಟಭೂತಮಭೂದನ್ನಂ ನೃಣಾಂ ರೋಗಭಯಪ್ರದಂ　　　　॥ ೪೩ ॥

ದೃಷ್ಟ್ವಾ ಚೈಕಾದಶೀ ನಾಮ್ನಾ ರವಿಶುಕ್ರಾವುವಾಚ ಹ ।
ಕುರುತಾಂ ಶುದ್ಧಮೇವಾಂತರ್ಭವಂತೌ ಲೋಕವಿಶ್ರುತೌ　　　　॥ ೪೪ ॥

ತದಾಜ್ಞಯಾ ತಥಾ ಕೃತ್ವಾ ದೇವಪೂಜ್ಯೌ ಬಭೂವತುಃ ।
ಏವಂ ಮಾತಸ್ತ್ವಯಾ ಸರ್ವಂ ಕೃತಂ ತಸ್ಯೈ ನಮೋನಮಃ　　　　॥ ೪೫ ॥

---

೪೨. ಆದರೇನು ! ಏಕಾದಶೀದೇವಿಯು ತಾನೇ ಮಾಯಾಸ್ವರೂಪಿಣಿಯಾದುದರಿಂದ ತನ್ನ ಹೂಂಕಾರಮಾತ್ರದಿಂದಲೇ ಆ ರಾಕ್ಷಸಮಾಯೆಯನ್ನು ನಾಶಪಡಿಸಿ ಆ ನರಕಾಸುರನನ್ನು ಕೊಂದುಹಾಕಿ ಜಗಜ್ಜನನಿಯಾದ ದೇವಿಯು ಗರ್ಜನೆ ಮಾಡಿದಳು.

೪೩. ಆಗ ಈ ಮುರ ಮತ್ತು ನರಕಾಸುರ ರಾಕ್ಷಸರಿಬ್ಬರ ಮಹಾಘೋರವಾದ ತೇಜಸ್ಸುಗಳೂ ನಾಶವಾಗಿ ಅನ್ನಮಧ್ಯದಲ್ಲಿ ಪ್ರವೇಶಮಾಡಿತು. ಆಗ ಅನ್ನವೆಲ್ಲವೂ ದೂಷಿತವಾಗಿ ಜನಗಳಿಗೆಲ್ಲಾ ರೋಗಭೀತಿಯನ್ನುಂಟುಮಾಡಿತು.

೪೪. ಇದನ್ನು ನೋಡಿ ಏಕಾದಶೀದೇವಿಯು ಸೂರ್ಯ ಮತ್ತು ಶುಕ್ರ ಇವರನ್ನು ಕುರಿತು " ನೀವಿಬ್ಬರೂ ಲೋಕವಿಶ್ರುತರಾಗಿದ್ದೀರಿ. ನೀವು ಈಗ ಆ ದೋಷವನ್ನು ಹೋಗಲಾಡಿಸಿ " ಎಂದು ಹೇಳಿದಳು.

೪೫. ಅವರಿಬ್ಬರೂ ಆ ದೇವಿಯ ಅಪ್ಪಣೆಯಿಂದ ಆ ಅನ್ನದೋಷವನ್ನು ಹೋಗಲಾಡಿಸಿ ದೇವಪೂಜ್ಯರೆನಿಸಿದರು. ಎಲೌ ತಾಯೇ ! ಈರೀತಿ ಎಲ್ಲವೂ ನಿನ್ನಿಂದಲೇ ನಿರ್ವಹಿಸಲ್ಪಟ್ಟಿತು. ಮಹಾದೇವಿಯೇ ! ಅಂಥ ನಿನಗೆ ನಮಸ್ಕಾರ" ಎಂದು ಸ್ತೋತ್ರಮಾಡಿದನು.

ಇತಿ ಶ್ರುತ್ವಾ ಭದ್ರಕಾಲೀ ಸ್ತೋತ್ರಂ ದಿವ್ಯಂ ಕಥಾಮಯಂ ।
ಆಪವಂ ಪ್ರಾಹ ಸಾ ದೇವೀ ಬ್ರಾಹ್ಮಣಂ ವೇದಕೋವಿದಂ ॥ ೪೬ ॥

ಪ್ರಲಯೇ ಚ ತದಾ ಪ್ರಾಪ್ತೇ ನಷ್ಟೇ ಸ್ಥಾವರಜಂಗಮೇ ।
ಏಕಾರ್ಣವೇ ಪುರಾ ತ್ವಂ ವೈ ಮತ್ಪ್ರಸಾದಾತ್ಸುಖೀ ಭವ ॥ ೪೭ ॥

ಸ್ತೋತ್ರೇಣಾನೇನ ಸುಪ್ರೀತಾ ವರದಾಹಂ ಸದಾ ನರಾನ್ ।
ಇತ್ಯುಕ್ತ್ವಾಂತರ್ಹಿತಾ ದೇವೀ ಸ ವಿಪ್ರೋ ವರುಣೋಽಭವತ್ ॥ ೪೮ ॥

॥ ಸೂತ ಉವಾಚ ॥

ಇತಿ ಶ್ರುತ್ವಾ ಗುರೋರ್ವಾಕ್ಯಂ ದ್ವಿತೀಯೋ ಭಗವಾನ್ವಸುಃ ।
ವರುಣಃ ಸ್ವಮುಖಾತ್ತೇಜೋ ಜನಯಾಮಾಸ ಭೂತಲೇ ॥ ೪೯ ॥

---

೪೬. ಆಗ ಭದ್ರಕಾಳೀದೇವಿಯು ದಿವ್ಯಕಥಾರೂಪವಾದ ಈ ಸ್ತೋತ್ರವನ್ನು ಕೇಳಿ ಸಂತೋಷಗೊಂಡು ವೇದಪಾರಂಗತನಾದ ಆಪವನೆಂಬ ಆ ಬ್ರಾಹ್ಮಣನನ್ನು ಕುರಿತು ಹೀಗೆಂದಳು.

೪೭ " ಪ್ರಳಯಕಾಲದಲ್ಲಿ ಸ್ಥಾವರಜಂಗಮಾತ್ಮಕವಾದ ಪ್ರಪಂಚವೆಲ್ಲವೂ ನಾಶವಾದರೂ ನೀನುಮಾತ್ರ ಸಮುದ್ರದಲ್ಲಿಯೇ ಇರುತ್ತಾ ನನ್ನನುಗ್ರಹದಿಂದ ಸುಖವಾಗಿರು " ಎಂದಳು.

೪೮. ಮತ್ತೆ " ನಿನ್ನ ಸ್ತೋತ್ರದಿಂದ ನಾನು ಸುಪ್ರೀತಳಾಗಿದ್ದೇನೆ. ಇದೇರೀತಿ ಈ ಸ್ತೋತ್ರದಿಂದ ಸ್ತುತಿಮಾಡುವವರಿಗೆ ನಾನು ವರವನ್ನೀಯುವೆನು" ಎಂದು ಹೇಳಿ ಆ ದೇವಿಯು ಅಂತರ್ಧಾನ ಹೊಂದಿದಳು. ಆ ಆಪವನೆಂಬ ಬ್ರಾಹ್ಮಣನೇ ವರುಣನೆನಿಸಿದನು

೪೯. ಸೂತಮುನಿವರ್ಯನು ಹೇಳುತ್ತಾನೆ—ಈರೀತಿ ಬೃಹಸ್ಪತ್ಯಾಚಾರ್ಯರು ಹೇಳಿದುದನ್ನು ಕೇಳಿ ಭಗವಂತನೂ ಎರಡನೆಯವಸುವೂ ಆದ ವರುಣನು ತನ್ನ ಮುಖದಿಂದ ತೇಜಸ್ಸನ್ನು ತೆಗೆದು ಭೂಮಿಯಲ್ಲಿ ಅವತರಿಸುವಂತೆ ಅಣಿಮಾಡಿದನು.

ದೇಹಾಲ್ಯಾಂ ಸ ತು ವೈ ಜಾತೋ ಧರ್ಮಭಕ್ತಸ್ಯ ವೈ ಗೃಹೇ ।
ವಿಧವಾ ತಸ್ಯ ಯಾ ಕನ್ಯಾ ಗರ್ಭಂ ಧತ್ತೇ ಹರೇಃ ಸ್ವಯಂ ॥ ೫೦ ॥

ಇತಿ ಜ್ಞಾತ್ವಾ ಧರ್ಮಭಕ್ತೋ ಮುಮುದೇ ಸುತಜನ್ಮನಿ ।
ನಾಮದೇವ ಇತಿ ಖ್ಯಾತಃ ಸಾಂಖ್ಯಯೋಗಪರಾಯಣಃ ॥ ೫೧ ॥

ಆಬ್ರಹ್ಮಸ್ತಂಬಪರ್ಯಂತಂ ಸರ್ವಂ ವಿಷ್ಣುಮಯಂ ಜಗತ್ ।
ಜ್ಞಾತ್ವಾ ದೃಷ್ಟ್ವಾ ಗತಃ ಕಾಶ್ಯಾಂ ರಾಮಾನಂದಂ ಹರಿಪ್ರಿಯಂ ॥ ೫೨ ॥

ನತ್ವಾ ತಚ್ಛಿಷ್ಯತಾಂ ಪ್ರಾಪ್ಯ ತತ್ರ ವಾಸಮಕಾರಯತ್ ।
ಸಿಕಂದರೋ ಮ್ಲೇಚ್ಛಪತಿ ರ್ದೇಹಲೀರಾಜ್ಯಮಾಸ್ಥಿತಃ ॥ ೫೩ ॥

---

೫೦. ಆ ತೇಜಸ್ಸು ದೆಹಲೀಪಟ್ಟಣದಲ್ಲಿರುವ ಧರ್ಮಭಕ್ತನ ಮನೆಯಲ್ಲಿ ಜನ್ಮತಾಳಿತು. ಆ ಧರ್ಮಭಕ್ತನ ಮಗಳು ಒಬ್ಬಳು ವಿಧವೆಯಾಗಿದ್ದಳು. ಅವಳು ಈ ವರುಣತೇಜಸ್ಸನ್ನು ಧರಿಸಿ ಗರ್ಭತಾಳಿದಳು.

೫೧. ದಿನತುಂಬಿದನಂತರ ಅವಳಿಗೆ ಪುತ್ರಸಂತಾನವಾಗಲು ಅದನ್ನು ಕೇಳಿ ಧರ್ಮಭಕ್ತನು ದೇವತಾಂಶಪುರುಷನು ತನ್ನ ಮನೆಯಲ್ಲಿ ಅವತರಿಸಿದ್ದರಿಂದ ಬಹಳ ಸಂತೋಷಪಟ್ಟನು. ಆ ಮಗುವು ನಾಮದೇವನೆಂದು ಪ್ರಸಿದ್ಧನಾಗಿ ಸಾಂಖ್ಯಯೋಗ ನಿಪುಣನೆನಿಸಿದನು.

೫೨. ಬ್ರಹ್ಮನಿಂದ ಹಿಡಿದು ಅಚೇತನವಾದ ಸ್ತಂಬದವರೆಗೂ ಪ್ರಪಂಚವೆಲ್ಲಾ ವಿಷ್ಣುಮಯವೆಂದು ಆ ನಾಮದೇವನು ತಿಳಿದು ಕಾಶಿಗೆ ಹೋಗಿ ಅಲ್ಲಿ ವಿಷ್ಣು ಭಕ್ತನಾದ ರಾಮಾನಂದನನ್ನು ದರ್ಶನಮಾಡಿದನು.

೫೩. ಆ ಪೂಜ್ಯನಿಗೆ ನಮಸ್ಕಾರಮಾಡಿ ಅವನ ಶಿಷ್ಯನಾಗಿ ಅಲ್ಲಿಯೇ ವಾಸ ಮಾಡಿದನು. ಆ ಸಮಯದಲ್ಲಿ ಸಿಕಂದರನೆಂಬ ಮ್ಲೇಚ್ಛರಾಜನು ದೆಹಲಿಯಲ್ಲಿ ರಾಜ್ಯವನ್ನಾಳುತ್ತಿದ್ದನು.

ನಾಮದೇವಂ ಸಮಾಹೂಯ ಸಂಪರೀಕ್ಷ್ಯ ತದಾ ಸುಖೀ ।
ಅರ್ಧಕೋಟಿಮಿತಂ ದ್ರವ್ಯಂ ದದೌ ತಸ್ಮೈ ಕಲಿಪ್ರಿಯಃ ॥ ೫೪ ॥

ನಾಮದೇವಸ್ತು ತದ್ದ್ರವ್ಯೈರ್ಗಂಗಾರೋಹಣಮುತ್ತಮಂ ।
ಕಾರಯಾಮಾಸ ವೈ ಕಾಶ್ಯಾಂ ಶುಭ್ರಂ ಸರ್ವಂ ಶಿಲಾಮಯಂ ॥ ೫೫ ॥

ದಶವಿಪ್ರಾನ್ಪಂಚ ನೃಪಾನ್ಪಂಚ ವೈಶ್ಯಾಞ್ಛತಂ ಗವಾಂ ।
ಪುನರುಜ್ಜೀವಯಾಮಾಸ ಶವಭೂತಾನ್ಸ ಯೋಗವಾನ್ ॥ ೫೬ ॥

॥ ಬೃಹಸ್ಪತಿರುವಾಚ ॥

ವಿಶ್ವಾನರಃ ಪುರಾ ಚಾಸೀದ್ಬ್ರಾಹ್ಮಣೋ ವೇದಕೋವಿದಃ ।
ಅನಪತ್ಯೋ ವಿಧಾತಾರಂ ತುಷ್ಟಾವ ಬಹುಪೂಜನೈಃ ॥ ೫೭ ॥

---

೫೪. ಆ ಸಿಕಂದರನು ನಾಮದೇವನನ್ನು ತನ್ನ ಆಸ್ಥಾನಕ್ಕೆ ಕರೆಯಿಸಿಕೊಂಡು ಬಹುಪ್ರಕಾರವಾಗಿ ಪರೀಕ್ಷೆಮಾಡಿ ಸಂತೋಷಹೊಂದಿ ಕಲಿಪ್ರಿಯನಾದ ಅವನು ಅರ್ಧಕೋಟಿರೂಪಾಯಿಗಳನ್ನು ಅವನಿಗೆ ಕೊಟ್ಟನು.

೫೫. ಆಗ ನಾಮದೇವನು ಆ ದ್ರವ್ಯದಿಂದ ಕಾಶಿಯಲ್ಲಿ ಗಂಗಾನದಿಗೆ ಶ್ರೇಷ್ಠತರವಾದ ಒಂದು ಸೋಪಾನವನ್ನು ಕಟ್ಟಿಸಿದನು. ಆ ಸೋಪಾನವು ಪರಿಶುದ್ಧವೂ ಬರಿಯಕಲ್ಲಿನಿಂದಲೇ ನಿರ್ಮಿತವೂ ಆಗಿದ್ದಿತು.

೫೬. ಅನಂತರ ಯೋಗಿಯಾದ ನಾಮದೇವನು ತನ್ನ ಯೋಗಶಕ್ತಿಯಿಂದ ಮೃತರಾಗಿದ್ದ ಹತ್ತುಜನ ಬ್ರಾಹ್ಮಣರನ್ನೂ, ಐದುಜನ ರಾಜರನ್ನೂ, ಐವರು ವೈಶ್ಯರನ್ನೂ ಮತ್ತು ಒಂದುನೂರು ಹಸುಗಳನ್ನೂ ಪುನಃ ಬದುಕಿಸಿದನು.

೫೭. ಬೃಹಸ್ಪತ್ಯಾಚಾರ್ಯರು ಮುಂದುವರಿಸಿ ಹೇಳುತ್ತಾರೆ—ಹಿಂದೆ ವೇದಾಧ್ಯಯನಸಂಪನ್ನನಾದ ವಿಶ್ವಾನರನೆಂಬ ಬ್ರಾಹ್ಮಣನಿದ್ದನು. ಅವನಿಗೆ ಮಕ್ಕಳಿಲ್ಲದ್ದರಿಂದ ಅವನು ಅನೇಕವಿಧವಾದವ್ರತಪೂಜಾದಿಗಳನ್ನುಮಾಡಿ ಬ್ರಹ್ಮನನ್ನು ಸ್ತೋತ್ರಮಾಡಿದನು.

ವರ್ಷಮಾತ್ರೇಣ ಭಗವಾನ್ಪರಮೇಷ್ಠೀ ಪ್ರಜಾಪತಿಃ ।
ಸಮಾಗತ್ಯ ವಚಃ ಪ್ರಾಹ ವರಂ ಬ್ರೂಹಿ ದ್ವಿಜೋತ್ತಮ ॥ ೫೮ ॥

ಇತಿ ಶ್ರುತ್ವಾ ಸ ಹೋವಾಚ ಭಗವಂಸ್ತೇ ನಮೋನಮಃ ।
ಪ್ರಕೃತೇಶ್ಚ ಪರಃ ಪುತ್ರೋ ಭೂಯಾನ್ಮಮ ವರಾತ್ತವ ॥ ೫೯ ॥

ಇತಿ ಶ್ರುತ್ವಾ ತದಾ ಬ್ರಹ್ಮಾ ವಿಸ್ಮಿತಃ ಪ್ರಾಹ ತಂ ದ್ವಿಜಂ ।
ಏಕಾ ವೈ ಪ್ರಕೃತಿರ್ಮಾಯಾ ತ್ರಿಲಿಂಗಜನನೀ ಸ್ವಯಂ ॥ ೬೦ ॥

ತಯಾ ದೃಶ್ಯಂ ಜಗತ್ಸರ್ವಂ ಸಮುತ್ಪಾದಿತಮಾತ್ಮನಾ ।
ಪ್ರಕೃತೇಶ್ಚ ಪರೋ ಯೋ ವೈ ಪರಮಾತ್ಮಾ ಸ ಚಾವ್ಯಯಃ ॥ ೬೧ ॥

---

೫೮. ಹೀಗೆ ಒಂದುವರ್ಷಕಳೆಯಲು ಭಗವಂತನೂ, ಪರಮಶ್ರೇಷ್ಠನೂ ಆದ ಬ್ರಹ್ಮನು ಪ್ರತ್ಯಕ್ಷನಾಗಿ "ಅಯ್ಯಾ ಬ್ರಾಹ್ಮಣೋತ್ತಮನೇ ! ನಿನಗೆ ಬೇಕಾದ ವರವನ್ನು ಬೇಡು" ಎಂದು ಹೇಳಿದನು.

೫೯. ಆಗ ಬ್ರಾಹ್ಮಣನು ಬ್ರಹ್ಮನ ಮಾತನ್ನು ಕೇಳಿ "ಭಗವಂತನಾದ ಹಿರಣ್ಯಗರ್ಭಪ್ರಭುವೇ ! ನಿನಗೆ ನಮಸ್ಕಾರ. ನೀನು ಅನುಗ್ರಹಿಸುವುದಾದರೆ ನನಗೆ ಪ್ರಕೃತಿದೇವಿಗಿಂತಲೂ ಶ್ರೇಷ್ಠನಾದ ಪರಮಾತ್ಮನೇ ಮಗನಾಗಿ ಹುಟ್ಟಬೇಕು" ಎಂದು ಪ್ರಾರ್ಥಿಸಿದನು.

೬೦. ಆ ಬ್ರಾಹ್ಮಣನ ಮಾತನ್ನು ಕೇಳಿ ಬ್ರಹ್ಮನು ಆಗ ಆಶ್ಚರ್ಯಗೊಂಡವನಾಗಿ ಆ ಬ್ರಾಹ್ಮಣನನ್ನು ಕುರಿತು "ಎಲೈ ವಿಪ್ರನೇ ! ಅದ್ವಿತೀಯಳಾದ ಪ್ರಕೃತಿದೇವಿಯು ಮಾಯಾಸ್ವರೂಪಿಣಿಯು. ಸೃಷ್ಟಿಸ್ಥಿತಿಲಯಕಾರ್ಯಕರ್ತರಾದ ಬ್ರಹ್ಮವಿಷ್ಣುಮಹೇಶ್ವರರ ಉತ್ಪತ್ತಿಗೆ ಅವಳೇ ಕಾರಣಳು.

೬೧. ದೃಷ್ಟಿಗೆ ಗೋಚರವಾಗುತ್ತಿರುವ ಈ ಸಕಲಪ್ರಪಂಚವನ್ನೂ ಆ ಪ್ರಕೃತಿದೇವಿಯೇ ನಿರ್ಮಿಸಿದಳು. ಪ್ರಕೃತಿಗಿಂತಲೂ ಶ್ರೇಷ್ಠನಾದವನು ಪರಮಾತ್ಮನು. ಅವನು ನಾಶರಹಿತನು."

ಅಬುದ್ಧಿರ್ಬೋಧನಿರತೋ ಹ್ಯಶ್ರುತಿಶ್ಚ ಶೃಣೋತಿ ವೈ ।
ಅದೇಹಃ ಸ ಸ್ಪೃಶೇತ್ಯೇತದಚಕ್ಷುಃ ಪಶ್ಯತಿ ಸ್ವಯಂ ॥ ೬೨ ॥

ಅಜಿಹ್ವೋನ್ನಂ ಸ ಗೃಹ್ಣಾತಿ ಸ ಜಿಘ್ರತಿ ನಸಾ ವಿನಾ ।
ಅಮುಖೋ ವೇದವಕ್ತಾ ಚ ಕರ್ಮಕಾರಃ ಕರಂ ವಿನಾ ॥ ೬೩ ॥

ಅಪದೋ ಗಚ್ಛತಿ ಹ್ಯೇತದಲಿಂಗೋ ನಾರಿಭೋಗವಾನ್ ।
ಅಗುಹ್ಯೋ ಹಿ ಕರೋತ್ಯೇತಾಂ ಸತತ್ತ್ವಾಂ ಗುಹ್ಯಭೂತಿನೀಂ ॥ ೬೪ ॥

ಶಬ್ದಬ್ರಹ್ಮ ಸ್ಪರ್ಶಮಯಂ ರೂಪಬ್ರಹ್ಮ ರಸಾತ್ಮಕಂ ।
ಗಂಧಬ್ರಹ್ಮ ಪರಂ ಜ್ಞೇಯಂ ತಸ್ಮೈ ತದ್ಬ್ರಹ್ಮಣೇ ನಮಃ ॥ ೬೫ ॥

---

೬೨. ಆ ಪರಮಪುರುಷನು ಜ್ಞಾನ (ಬುದ್ಧಿ) ರಹಿತನಾದರೂ ಜ್ಞಾನೋಪದೇಶಮಾಡುವನು. ಕಿವಿಯಿಲ್ಲದೇ ಇದ್ದರೂ ಕೇಳುವನು. ಶರೀರರಹಿತನಾದರೂ ಪ್ರಪಂಚವನ್ನೆಲ್ಲಾ ಸ್ಪರ್ಶಮಾಡುವನು. ಕಣ್ಣಿಲ್ಲದೆ ಇದ್ದರೂ ಎಲ್ಲವನ್ನೂ ನೋಡುವನು.

೬೩. ನಾಲಿಗೆಯಿಲ್ಲದೆಯಿದ್ದರೂ ಅವನು ಅನ್ನವನ್ನು ಸ್ವೀಕರಿಸುವನು. ಮೂಗಿಲ್ಲದಿದ್ದರೂ ವಾಸನೆನೋಡುವ ಸಾಮರ್ಥ್ಯವುಳ್ಳವನು. ಬಾಯಿ (ಮುಖವು) ಇಲ್ಲದಿದ್ದರೂ ವೇದೋಚ್ಚಾರಣೆಯನ್ನು ಮಾಡುವನು. ಕೈಗಳಿಲ್ಲದಿದ್ದರೂ ಕೆಲಸವನ್ನೆಲ್ಲಾ ಮಾಡುವನು.

೬೪. ಕಾಲಿಲ್ಲದಿದ್ದರೂ ಸಂಚರಿಸುವನು. ಲಿಂಗವಿಲ್ಲದಿದ್ದರೂ ಸ್ತ್ರೀಯರನ್ನು ಉಪಭೋಗಿಸುವನು. ತಾನು ಗುಹ್ಯಾಂಗಿಲ್ಲದಿದ್ದರೂ ಗುಹ್ಯವೂ (ರಹಸ್ಯವೂ) ಪಂಚಭೂತಮಯವೂ ಆದ ತತ್ತ್ವವನ್ನು ನಿರ್ಮಿಸುವನು.

೬೫. ಶಬ್ದಸ್ವರೂಪನೂ, ಸ್ಪರ್ಶಸ್ವರೂಪನೂ, ರೂಪಸ್ವರೂಪನೂ, ರಸಸ್ವರೂಪನೂ, ಗಂಧಸ್ವರೂಪನೂ, ಶ್ರೇಷ್ಠನೂ ಆದ ಆ ಪರಬ್ರಹ್ಮನಿಗೆ ನಮಸ್ಕಾರ. (ಪರಮಾತ್ಮನು ನಿರ್ಗುಣನೂ, ನಿಷ್ಕ್ರಿಯನೂ, ನಿತ್ಯನೂ, ನಿರ್ವಿಕಾರನೂ, ನಿರಾಕಾರನೂ, ನಿತ್ಯಶುದ್ಧನೂ, ಜ್ಞಾನಸ್ವರೂಪನೂ ಆಗಿರುವನು. ಆದುದರಿಂದ ಹಿಂದೆ ಹೇಳಿದ ಕಾರ್ಯಗಳೆಲ್ಲವೂ ಮಹಾಮಹಿಮನಾದ ಆ ಪರಮಾತ್ಮನಿಗೆ ಅಸಾಧ್ಯವಲ್ಲ ಎಂದು ತಿಳಿಯಬೇಕು.)

ಪ್ರಕೃತಿಂ ಪುರುಷಂ ಚೈವ ವಿದ್ಧ್ಯನಾದೀ ಉಭಾವಪಿ ।
ವಿಕಾರಾಂಶ್ಚ ಗುಣಾಂಶ್ಚೈವ ವಿದ್ಧಿ ಪ್ರಕೃತಿಸಂಭವಾನ್ ॥ ೬೬ ॥

ಏಕಾರ್ಥೌ ತೌ ಚ ಶಬ್ದೈಕೌ ರೂಪೈಕೌ ನಿತ್ಯವಿಗ್ರಹೌ ।
ಆದಿಮಧ್ಯಾಂತರಹಿತೌ ನಿತ್ಯಶುದ್ಧೌ ಸನಾತನೌ ॥ ೬೭ ॥

ಪುಂಸ್ತ್ರೀನಪುಂಸ್ಕಜನನೀ ಜ್ಞೇಯಾ ಸಾ ಪ್ರಕೃತಿಃ ಪರಾ ।
ಪುರುಷಶ್ಚ ಕವಿಃ ಸೂಕ್ಷ್ಮಃ ಕೂಟಸ್ಥೋ ಜ್ಞಾನವಾನ್ ಪರಃ ॥ ೬೮ ॥

ಅಜನ್ಮಾ ಜನ್ಮ ಚಾಪ್ನೋತಿ ಮಯಾ ಜಾತಃ ಸ ಜನ್ಮವಾನ್ ।
ಕಥಂ ಸ ಪುರುಷೋ ನಿತ್ಯಸ್ತವ ಪುತ್ರೋ ಭವಿಷ್ಯತಿ ॥ ೬೯ ॥

---

೬೬. ಪ್ರಕೃತಿ ಮತ್ತು ಪುರುಷ ಇವರಿಬ್ಬರೂ ಅನಾದಿವ್ಯಕ್ತಿಗಳೆಂದು ತಿಳಿಯುವವನಾಗು. ಎಲೈ ಬ್ರಾಹ್ಮಣನೇ! ವಿಕಾರಗಳೂ ಗುಣಗಳೂ ಸಹ ಪ್ರಕೃತಿಯಿಂದ ಜನಿಸಿದುವು.

೬೭. ಈ ಪ್ರಕೃತಿಪುರುಷರಿಬ್ಬರೂ ಸಮಾನಾರ್ಥವುಳ್ಳವರು. ಏಕಶಬ್ದಪ್ರತಿಪಾದ್ಯರು ಸಮಾನವಾದ ಆಕಾರವುಳ್ಳವರು, ನಿತ್ಯರು, ಆದಿ, ಮಧ್ಯ ಮತ್ತು ಅಂತ ಇಲ್ಲದವರು, ಎಂದರೆ ಎಲ್ಲರಿಗಿಂತಲೂ ಇವರೇ ಆದಿಯಾದುದ ರಿಂದ ಇವರು ಅನಾದಿಗಳಾಗಿರುವರು. ಹೀಗೆಯೇ ಇವರಿಗೆ ಮಧ್ಯ ಮತ್ತು ಅಂತಇವುಗಳೂ ಇಲ್ಲ. ಸೃಷ್ಟಿಸ್ಥಿತಿಸಂಹಾರ ಕಾರ್ಯಗಳೆಲ್ಲಾ ಇವರಿಂದಲೇ ನಡೆಯುತ್ತಿರುವುದರಿಂದ ಇವರನ್ನು ಸೃಷ್ಟಿ ಮುಂತಾದ್ದು ಮಾಡುವವರು ಯಾರೂ ಇಲ್ಲವೆಂದು ತಿಳಿಯಬೇಕು

೬೮. ಪುರುಷರು, ಸ್ತ್ರೀಯರು ಮತ್ತು ನಪುಂಸಕರು ಇವರುಗಳ ಉತ್ಪತ್ತಿಗೆ ಶ್ರೇಷ್ಠಳಾದ ಆ ಪ್ರಕೃತಿಯು ಕಾರಣಳು. ಪುರುಷನಾದರೋ ಕವಿಯೂ, ಸೂಕ್ಷ್ಮನೂ, ಕೂಟಸ್ಥನೂ, ಜ್ಞಾನಿಯೂ ಮತ್ತು ಶ್ರೇಷ್ಠನೂ ಆಗಿರುವನು.

೬೯. ಉತ್ಪತ್ತಿರಹಿತನಾದ ಆ ಪರಮಪುರುಷನು ಲೋಕರಕ್ಷಣೆಗೋಸ್ಕರ ಅವತರಿಸುವುದಕ್ಕಾಗಿ ನನ್ನಿಂದ ಸೃಷ್ಟಿಸಲ್ಪಡುವನು. ಇಂತಹ ಮಹಾಮಹಿಮನೂ ನಿತ್ಯನೂ ಆದ ಪರಮಾತ್ಮನು ನಿನಗೆ ಹೇಗೆತಾನೇ ಮಗನಾದಾನು ?

ಅತೋ ವಿಶ್ವಾನರ ಮುನೇ ಮಾಯಾಭೂತೋ ಹರಿಃ ಸ್ವಯಂ ।
ತವ ಪುತ್ರತ್ವಮಾಪ್ನೋತಿ ವರಾನ್ಮಮ ಜನಾರ್ದನಃ ॥ ೭೦ ॥

ಇತ್ಯುಕ್ತ್ವಾಂತರ್ದಧೇ ದೇವಃ ಪಾವಕಸ್ತದ್ವರಾದಭೂತ್ ।
ಅಷ್ಟಾನಾಂ ಚ ವಸೂನಾಂ ಚ ಪಾವಕೋ ಹಿ ಪತಿಸ್ತ್ವಯಂ ॥ ೭೧ ॥

ವೈಶ್ವಾನರ ಇತಿ ಖ್ಯಾತೋಽಭವತ್ಸ್ವಾಹಾಪತಿಃ ಪ್ರಭುಃ ।
ಸ ತು ಪೂರ್ವಭವೇ ದೇವಃ ಪುರಾ ಕಲ್ಪೇಽನಲೋಽಭವತ್ ॥ ೭೨ ॥

ನೈಷಧೋ ಬ್ರಾಹ್ಮಣೋ ಧೀಮಾನ್ಯಥಾ ರಾಜಾ ನಲಸ್ತಥಾ ।
ಸಂಕಟಾಯಾಂ ಗತೇ ಭೂಪೇ ದಮಯಂತೀ ಪತಿವ್ರತಾ ॥ ೭೩ ॥

ಸ್ವಪಿತುರ್ಗೇಹಮಾಸಾದ್ಯಾನ್ವೇಷಯಾಮಾಸ ಭೂಪತಿಂ ।
ತದಾನಲೋ ದ್ವಿಜಃ ಪ್ರಾಪ್ತೋ ದಮಯಂತೀಪತಿಃ ಪ್ರಭುಃ ॥ ೭೪ ॥

---

೭೦. ಆದುದರಿಂದ ಎಲೈ ವಿಶ್ವಾನರಮುನಿಯೇ ! ನನ್ನ ವರದಮಹಿಮೆಯಿಂದ ಮಾಯಾಸ್ವರೂಪನಾದ ವಿಷ್ಣುವು ನಿನಗೆ ಮಗನಾಗಿ ಜನಿಸುವನು.

೭೧. ಹೀಗೆ ಹೇಳಿ ಬ್ರಹ್ಮನು ಅಂತರ್ಧಾನವಾದನು. ಆಗ ವಿಶ್ವಾನರನು ಬ್ರಹ್ಮದೇವನ ವರದಬಲದಿಂದ ಪಾವಕನೆನಿಸಿದನು. ಅಲ್ಲದೆ ಅಷ್ಟವಸುಗಳಿಗೂ ಇವನೇ ಯಜಮಾನನಾದನು.

೭೨. ಅನಂತರ ಸ್ವಾಹಾಪತಿಯಾದ ಈ ಪಾವಕನಿಗೆ ವೈಶ್ವಾನರನೆಂಬ ಹೆಸರು ಬಂದಿತು. ಹಿಂದಿನ ಜನ್ಮದಲ್ಲಿ ಇವನು ಅನಲನೆಂಬ ಹೆಸರಿನಿಂದ ಪ್ರಖ್ಯಾತನಾಗಿದ್ದನು.

೭೩-೭೪. ಆಗ ಇವನು ಬ್ರಾಹ್ಮಣನು. ಮೇಧಾವಿಯಾದ ಇವನು ನಿಷಧದೇಶದ ರಾಜನಾದ ನಲಮಹಾರಾಜನಂತೆ ಪ್ರಸಿದ್ಧನಾಗಿದ್ದನು. ನಲಮಹಾರಾಜನಿಗೆ ಆರಣ್ಯ ವಾಸ ಪ್ರಾಪ್ತವಾಗಲು ಅವನ ಪತ್ನಿಯಾದ ದಮಯಂತೀದೇವಿಯು ಪತಿಯನ್ನಗಲಿ ಸಂಕಟದಿಂದ ಕಡುನೊಂದು ಬಳಲಿ ಬಹಳ ಪ್ರಯತ್ನದಿಂದ ತಂದೆಯ ಮನೆಯನ್ನು ಸೇರಿ ತನ್ನ ಪತಿಯಾದ ನಲನನ್ನು ಎಲ್ಲಾಕಡೆಗಳಲ್ಲಿಯೂ ಹುಡುಕಿಸಿದಳು. ಆಗ ಬ್ರಾಹ್ಮಣನಾದ ಅನಲನು ಆ ದಮಯಂತೀದೇವಿಯಲ್ಲಿ ಮೋಹಗೊಂಡು ತಾನೇ ನಲನೆಂದುಕೊಂಡು (ದಮಯಂತೀಪತಿಯೆಂದು) ಅಲ್ಲಿಗೆ ಬಂದನು.

ದೃಷ್ಟ್ವಾ ತಂ ಮೋಹಮಾಪನ್ನಾ ದಮಯಂತೀ ಶುಭಾನನಾ ।
ಏತಸ್ಮಿನ್ನಂತರೇ ತತ್ರ ವಾಗುವಾಚಾಽಶರೀರಿಣೀ ॥ ೭೫ ॥

ನಾಯಂ ನಲಸ್ತವ ಪತಿರ್ಬ್ರಾಹ್ಮಣೋಽಯಂ ಸುಮೋಹಿತಃ ।
ಅನಲೋಽಯಂ ಸುವಿಖ್ಯಾತೋ ದೇವವಾಕ್ಯಾತ್ಸ ಚಾಽಭವತ್ ॥ ೭೬ ॥

ಮಹಾಸರಸ್ವತೀಂ ದೇವೀಂ ತುಷ್ಟಾವ ಸ ತು ಮೋಹಿತಃ ।
ತಸ್ಯ ಪುಣ್ಯಪ್ರಭಾವೇನ ವಿಶ್ವಾನರಸುತೋಽಭವತ್ ॥ ೭೭ ॥

॥ ಸೂತ ಉವಾಚ ॥

ಇತಿ ಶ್ರುತ್ವಾ ಗುರೋರ್ವಾಕ್ಯಂ ಪಾವಕೋ ಭಗವಾನ್ ಪ್ರಭುಃ ।
ಸ್ವಮುಖಾತ್ಸ್ವಾಂಶಮುತ್ಪಾದ್ಯ ಸಂಜಾತಸ್ತು ತತೋ ವಸುಃ ॥ ೭೮ ॥

---

೭೫. ಆಗ ಮನೋಹರವಾದ ಮುಖವುಳ್ಳ ದಮಯಂತಿಯು ಸುಂದರನಾದ ಆವನನ್ನು ನೋಡಿ ಮೋಹಗೊಂಡಳು. ಈ ಸಂದರ್ಭದಲ್ಲಿಯೇ ಅಶರೀರವಾಣಿಯೊಂದು ಕೇಳಿಸಿತು.

೭೬. " ಎಲೈ ದಮಯಂತಿಯೇ ! ಇವನು ನಿನ್ನ ಪತಿಯಾದ ನಲನಲ್ಲ. ಇವನು ದೇವತೆಗಳ ಮಾತಿನಿಂದ ನಿನ್ನಲ್ಲಿ ಮೋಹಗೊಂಡು ಬಂದಿರುವ ಅನಲನೆಂಬ ಬ್ರಾಹ್ಮಣನು " ಎಂದು ಹೇಳಿತು.

೭೭. ಆ ಅಶರೀರವಾಣಿಯನ್ನು ಕೇಳಿ ಮೋಹಗೊಂಡಿದ್ದ ಆ ಅನಲನೆಂಬ ಬ್ರಾಹ್ಮಣನು ಸರಸ್ವತೀದೇವಿಯನ್ನು ಸ್ತೋತ್ರಮಾಡಿದ್ದನು. ಆ ದೇವಿಯ ಸ್ತೋತ್ರ ಪ್ರಭಾವದಿಂದ ಆ ಅನಲನು ಈಗ ವಿಶ್ವಾನರನಿಗೆ ಮಗನಾಗಿ ಹುಟ್ಟಿದನು ಎಂದನು

೭೮. ಸೂತಮುನಿವರ್ಯನು ಹೇಳುತ್ತಾನೆ.— ಈರೀತಿ ಬೃಹಸ್ಪತ್ಯಾಚಾರ್ಯರು ಹೇಳಿದ ಮಾತನ್ನು ಕೇಳಿ ಸರ್ವಸಮರ್ಥನೂ ಷಡ್ಗುಣೈಶ್ವರ್ಯಸಂಪನ್ನನೂ ಆದ ಪಾವಕನು ತನ್ನ ಮುಖದಿಂದ ತೇಜೋಂಶವನ್ನು ತೆಗೆದು ಭೂಮಿಯಲ್ಲಿ ಅವತರಿಸುವಂತೆಮಾಡಿ ತಾನೂ ಒಬ್ಬ ವಸುವೆನಿಸಿದನು.

ರಂಕಣೋ ನಾಮ ವಿಖ್ಯಾತೋ ಲಕ್ಷ್ಮೀದತ್ತಸ್ಯ ವೈ ಸುತಃ ।
ನಗರೇ ಕಾಂಚನಪುರೇ ವೈಶ್ಯಜಾತಿಸಮುದ್ಭವಃ ॥ ೭೯ ॥

ಯಂಕಣಾ ನಾಮ ತತ್ಪತ್ನೀ ಬಭೂವ ಚ ಪತಿವ್ರತಾ ।
ಸರ್ವದ್ರವ್ಯವ್ಯಯಂ ಕೃತ್ವಾ ಧರ್ಮಕಾರ್ಯೇಷು ದಂಪತೀ ॥ ೮೦ ॥

ಕಾಷ್ಠಮಾನೀಯ ವಿಕ್ರೀಯ ಬುಭುಜಾತೇ ಪರಸ್ಪರಂ ।
ರಾಮಾನಂದಸ್ತಸ್ಯ ಗುರೂ ರಂಕಣಸ್ಯ ಮಹಾತ್ಮನಃ ॥ ೮೧ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಪ್ರತಿಸರ್ಗಪರ್ವಣಿ ಚತುರ್ಥಖಂಡೇ ಕಲಿಯುಗೀಯೇತಿಹಾಸಸಮುಚ್ಚಯೇ ವಸುಮಾಹಾತ್ಮ್ಯೇ ರಂಕಣ ವೈಶ್ಯೋತ್ಪತ್ತಿವರ್ಣನೋ ನಾಮ ಷೋಡಶೋಽಧ್ಯಾಯಃ.



೭೯. ಆ ಪಾವಕತೇಜಸ್ಸಿನ ಅಂಶವು ಕಾಂಚನಪುರವೆಂಬ ಪಟ್ಟಣದಲ್ಲಿ ವೈಶ್ಯ ಜಾತಿಯ ಲಕ್ಷ್ಮೀದತ್ತನಿಗೆ ಮಗನಾಗಿ ರಂಕಣನೆಂಬ ಹೆಸರಿನಿಂದ ಅವತರಿಸಿ ಪ್ರಸಿದ್ಧಿ ಪಡೆದನು.

೮೦. ರಂಕಣನಿಗೆ ಯಂಕಣಾಎಂಬ ಹೆಸರುಳ್ಳ ಪತಿವ್ರತಾಶಿರೋಮಣಿಯಾದ ಪತ್ನಿಯಿದ್ದಳು. ದಂಪತಿಗಳಿಬ್ಬರೂ ತಮ್ಮಲ್ಲಿದ್ದ ದ್ರವ್ಯವನ್ನೆಲ್ಲಾ ಕೇವಲ ಧರ್ಮ ಕಾರ್‍ಯಗಳಿಗೇ ಉಪಯೋಗಿಸಿದರು ;

೮೧. ಕೊನೆಗೆ ತಮ್ಮ ಜೀವನನಿರ್ವಾಹಕ್ಕಾಗಿ ಸೌದೆಯನ್ನು ಕಡಿದುತಂದು ಮಾರಿ ಕಾಲಯಾಪನೆ ಮಾಡುತ್ತಿದ್ದರು. ಮಹಾತ್ಮನಾದ ರಂಕಣನಿಗೆ ರಾಮಾ ನಂದರೇ ಗುರುಗಳಾಗಿ ಇದ್ದರು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಪ್ರತಿಸರ್ಗಪರ್ವದ ನಾಲ್ಕನೆಯ ಖಂಡದಲ್ಲಿ ವಸುಮಹಾತ್ಮೆಯಲ್ಲಿ ರಂಕಣವೈಶ್ಯೋತ್ಪತ್ತಿ, ನಿರೂಪಣವೆಂಬ ಹದಿನಾರ ನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಪ್ರತಿಸರ್ಗಪರ್ವಣಿ ಚತುರ್ಥಖಂಡೇ

## ಸಪ್ತದಶೋಽಧ್ಯಾಯಃ

---

॥ ಬೃಹಸ್ಪತಿರುವಾಚ ॥

ದಿತಿಪುತ್ರೌ ಮಹಾಘೋರೌ ವಿಷ್ಣುನಾ ಪ್ರಭವಿಷ್ಣುನಾ ।
ಸಂಹತೌ ತು ದಿತಿರ್ಜ್ಞಾತ್ವಾ ಕಶ್ಯಪಂ ಸಮಪೂಜಯತ್ ॥ ೧ ॥

ದ್ವಾದಶಾಬ್ದಾಂತರೇ ಸ್ವಾಮೀ ಕಶ್ಯಪೋ ಭಗವಾನೃಷಿಃ ।
ಉವಾಚ ಪತ್ನೀಂ ಸ ಹಿ ತಾಂ ವರಂ ಬ್ರೂಹಿ ವರಾನನೇ ॥ ೨ ॥

---

## ಹದಿನೇಳನೆಯ ಅಧ್ಯಾಯ

೧. ಬೃಹಸ್ಪತ್ಯಾಚಾರ್ಯರು ಹೇಳುತ್ತಾರೆ—ಮಹಾಭಯಂಕರರಾದ ದಿತೀ ದೇವಿಯ ಇಬ್ಬರು ಮಕ್ಕಳೂ ಸಮರ್ಥನಾದ ವಿಷ್ಣುವಿನಿಂದ ಕೊಲ್ಲಲ್ಪಡಲು, ಆಗ ದಿತಿಯು ದುಃಖಹೊಂದಿ ತನ್ನ ಪತಿಯಾದ ಕಶ್ಯಪನನ್ನು ಪೂಜಿಸಿದಳು

೨. ಹನ್ನೆರಡುವರ್ಷಕಾಲ ಹೀಗೆ ಪೂಜೆಮಾಡುತ್ತಿರಲು ಆಮೇಲೆ ಅವಳ ಪತಿಯೂ, ಜ್ಞಾನಿಯೂ, ಭಗವಂತನೂ ಆದ ಕಶ್ಯಪನು ಇವಳ ಪೂಜೆಯಿಂದ ಸಂತೋಷಹೊಂದಿ ತನ್ನ ಪತ್ನಿಯನ್ನು ಕುರಿತು "ಎಲೌ ಶೋಭನಾಂಗಿಯೇ ! ನಿನಗೆ ಬೇಕಾದವರವನ್ನು ಬೇಡು ನೀಡುವೆನು" ಎಂದು ಹೇಳಿದನು.

ಸಾ ತು ಶ್ರುತ್ವಾ ನಮಸ್ಕೃತ್ಯ ವಚನಂ ಪ್ರಾಹ ಹರ್ಷಿತಾ ।
ಅದಿತಿರ್ಮಮ ಯಾ ದೇವೀ ಸಪತ್ನೀ ಪುತ್ರಸಂಯುತಾ ॥
ದ್ವಾದಶತನಯಾಸ್ತಸ್ಯಾ ಮಮ ದ್ವೌ ತನಯೌ ಸ್ಮೃತೌ ॥ ೩ ॥

ತದವರ್ಯಸುತೇನೈವ ವಿಷ್ಣುನಾ ಸುರಪಾಲಿನಾ ।
ವಿನಾಶಿತೌ ಸುತೌ ಘೋರೌ ತತೋऽಹಂ ಭೃಶದುಃಖಿತಾ ॥ ೪ ॥

ದೇಹಿ ಮೇ ತನಯಂ ಸ್ವಾಮಿನ್ ದ್ವಾದಶಾದಿತ್ಯನಾಶನಂ ।
ಇತಿ ಶ್ರುತ್ವಾ ವಚೋ ಘೋರಂ ದಿತಿಂ ಪ್ರಾಹ ಸುದುಃಖಿತಃ ॥ ೫ ॥

ಬ್ರಹ್ಮಣಾ ನಿರ್ಮಿತೌ ಲೋಕೇ ಧರ್ಮಾऽಧರ್ಮೌ ಪರಾಪರೌ ।
ಧರ್ಮಪಕ್ಷಾಸ್ತು ಯೇ ಲೋಕೇ ನರಾಸ್ತೇ ಬ್ರಹ್ಮಣಃ ಪ್ರಿಯಾಃ ॥ ೬ ॥

---

೩. ತನ್ನ ಪತಿಯು ನುಡಿದ ಮಾತನ್ನು ಕೇಳಿ ದಿತಿಯು ಸಂತೋಷದಿಂದ ಪತಿಗೆ ನಮಸ್ಕರಿಸಿ " ಸ್ವಾಮಿ ! ನನ್ನ ಸವತಿಯಾದ ಅದಿತಿದೇವಿಯು ಹನ್ನೆರಡು ಜನ ದ್ವಾದಶಾದಿತ್ಯರೆಂಬ ಮಕ್ಕಳನ್ನು ಪಡೆದು ಸಂತೋಷವಾಗಿರುವಳು ನನಗೆ ಇಬ್ಬರು ಮಕ್ಕಳಿದ್ದರು.

೪. ಅವರನ್ನೂ ಸಹ ಪ್ರಭಾವಶಾಲಿಯಾದ ಮಹಾವಿಷ್ಣುವು ಕೊಂದುಹಾಕಿದನು. ಲೋಕಭಯಂಕರರಾದ ಆ ಮಕ್ಕಳು ಮೃತರಾದ್ದರಿಂದ ನಾನು ಬಹಳ ದುಃಖಿತಳಾಗಿರುವೆನು.

೫. ಆದುದರಿಂದ ಎಲೈ ಸ್ವಾಮಿಯೇ ! ನನಗೆ ದ್ವಾದಶಾದಿತ್ಯರನ್ನು ನಾಶ ಮಾಡುವ ಸಾಮರ್ಥ್ಯವುಳ್ಳ ಮಗನಾಗುವಂತೆ ವರವನ್ನು ಕೊಡು " ಎಂದು ಕೇಳಲು ಪತ್ನಿಯು ಹೇಳಿದ ಈ ಭಯಂಕರವಾದ ಮಾತನ್ನು ಕೇಳಿ ಕಶ್ಯಪನು ಬಹಳ ದುಃಖಿತನಾದನು ;

೬. ಆತನು ದಿತಿಯನ್ನು ಕುರಿತು "ಪ್ರಿಯಳೇ! ಬ್ರಹ್ಮನು ಲೋಕದಲ್ಲಿ ಧರ್ಮ ಅಧರ್ಮಗಳನ್ನು ಸೃಷ್ಟಿಮಾಡಿರುವನು. ಅದರಲ್ಲಿ ಧರ್ಮವು ಶ್ರೇಷ್ಠವಾದುದು. ಅಧರ್ಮವು ನೀಚವಾದುದು. ಧರ್ಮವನ್ನಾಚರಿಸಿ ನಡೆಯುವ ಮನುಜರು ಬ್ರಹ್ಮನ ಪ್ರೀತಿಗೆ ಪಾತ್ರರಾಗುವರು.

ಅಧರ್ಮಪಕ್ಷಾಸ್ತು ನರಾ ವೈರಿಣಸ್ತಸ್ಯ ಧೀಮತಃ ।
ಅಧರ್ಮಪಕ್ಷೌ ತನಯೌ ತಸ್ಮಾನ್ಮೃತ್ಯುಮುಪಾಗತೌ ॥ ೭ ॥

ಅತೋ ಧರ್ಮಪ್ರಿಯೇ ಶುದ್ಧಂ ಕುರು ತಸ್ಮಾನ್ಮಹಾಬಲಃ ।
ಭವಿಷ್ಯತಿ ಸುತೋ ಧೀಮಾಂಶ್ಚಿರಂಜೀವೀ ತವ ಪ್ರಿಯಃ ॥ ೮ ॥

ಇತಿ ಶ್ರುತ್ವಾ ದಿತಿರ್ದೇವೀ ಕಶ್ಯಪಾದ್ಗರ್ಭಮುತ್ತಮಂ ।
ಸಂಪ್ರಾಪ್ಯ ಸಾ ಶುಭಾಚಾರಾ ಬಭೂವ ವ್ರತಧಾರಿಣೀ ॥ ೯ ॥

ತಸ್ಯಾ ಗರ್ಭಗತೇ ಪುತ್ರೇ ಮಹೇಂದ್ರಶ್ಚ ಭಯಾನ್ವಿತಃ ।
ದಾಸಭೂತಃ ಸ್ಥಿತೋ ಗೇಹೇ ಸ ದಿತೇರಾಜ್ಞಯಾ ಗುರೋಃ ॥ ೧೦ ॥

---

೭. ಅಧರ್ಮ ಪಕ್ಷಾವಲಂಬಿಗಳಾದ ಮನುಷ್ಯರು ಮೇಧಾವಿಯಾದ ಆ ಮಹಾ ಪುರುಷನಿಗೆ ಯಾವಾಗಲೂ ವಿರೋಧಿಗಳಾಗುವರು ಎಂದು ತಿಳಿಯಬೇಕು. ನಿನ್ನಿಬ್ಬರು ಶೂರಮಕ್ಕಳೂ ಅಧರ್ಮಪಕ್ಷವನ್ನವಲಂಬಿಸಿದ್ದರಿಂದ ತಾವೇ ಮೃತ್ಯುವಶರಾದರು.

೮. ಆದುದರಿಂದ ಧರ್ಮಾಸಕ್ತಿಯುಳ್ಳ ಪ್ರಿಯಳೇ ! ನೀನು ಯಾವಾಗಲೂ ಧರ್ಮಕಾರ್ಯದಲ್ಲಿಯೇ ಮನಸ್ಸುಮಾಡಿ ಪರಿಶುದ್ಧಳಾಗಿರು ; ನಿನಗೆ ಮಹಾಬಲ ಶಾಲಿಯೂ ಮೇಧಾವಿಯೂ ಚಿರಂಜೀವಿಯೂ (ಬಹಳಕಾಲ ಬದುಕುವವನೂ) ಮತ್ತು ನಿನಗೆ ಪ್ರೀತಿಯನ್ನುಂಟುಮಾಡುವವನೂ ಆದ ಸುಪುತ್ರನುದಯಿಸುವನು.'' ಎಂದು ಹೇಳಿದನು.

೯. ಪತಿಯ ಈ ಮಾತನ್ನು ಕೇಳಿ ದಿತೀದೇವಿಯು ತನ್ನ ಪತಿಯಿಂದ ಶ್ರೇಷ್ಠ ವಾದ ಗರ್ಭವನ್ನು ಧರಿಸಿ ವ್ರತವನ್ನಾಚರಿಸುತ್ತಾ ಯಾವಾಗಲೂ ಶುಭಕರ್ಮ ದಲ್ಲಿಯೇ ಆಸಕ್ತಳಾಗಿದ್ದಳು.

೧೦. ಆಗ ಇಂದ್ರನು ದಿತಿಯ ಗರ್ಭದಲ್ಲಿರುವ ಮಗನ ದೆಸೆಯಿಂದ ಭಯ ಹೊಂದಿ ಬೃಹಸ್ಪತ್ಯಾಚಾರ್ಯರ ಆಜ್ಞೆಯಿಂದ ಅವಳ ಸಮೀಪಕ್ಕೆ ಹೋಗಿ ಸೇವಾವೃತ್ತಿ ಯನ್ನನುಸರಿಸಿ ಅವಳ ಮನೆಯಲ್ಲಿ ದಾಸನಾಗಿರುತ್ತಿದ್ದನು.

ಸಪ್ತಮಾಸಿ ಸ್ಥಿತೇ ಗರ್ಭೇ ಶಕ್ರಮಾಯಾವಿಮೋಹಿತಾ ।
ಅಶುಚಿಶ್ಚ ದಿತಿರ್ದೇವೀ ಸುಷ್ವಾಪ ನಿಜಮಂದಿರೇ ॥ ೧೧ ॥

ಅಂಗುಷ್ಠಮಾತ್ರೋ ಭಗವಾನ್ಮಹೇಂದ್ರೋ ವಜ್ರಸಂಯುತಃ ।
ಕುಕ್ಷಿಮಧ್ಯೇ ಸಮಾಗಮ್ಯ ಚಕ್ರೇ ಗರ್ಭಂ ಸ ಸಪ್ತಧಾ ॥ ೧೨ ॥

ಜೀವಭೂತಾನತಿಬಲಾನ್ದೃಷ್ಟ್ವಾ ಸಪ್ತ ಮಹಾರಿಪೂನ್ ।
ಏಕೈಕಃ ಸಪ್ತಧಾ ತೇನ ಮಹೇಂದ್ರೇಣ ತದಾ ಕೃತಃ ॥ ೧೩ ॥

ನಮ್ರೀಭೂತಶ್ಚ ತಾನ್ದೃಷ್ಟ್ವಾ ಮಹೇಂದ್ರಸ್ತ್ರೈಃ ಸಮನ್ವಿತಃ ।
ಯೋನಿದ್ವಾರೇಣ ಚಾಗಮ್ಯ ಪ್ರಣನಾಮ ತದಾ ದಿತಿಂ ॥ ೧೪ ॥

ಪ್ರಸನ್ನಾ ಸಾ ದಿತಿರ್ದೇವಾನ್ಮಹೇಂದ್ರಾಯ ಚ ತಾನ್ ದದೌ ।
ಮರುದ್ಗಣಾಶ್ಚ ತೇ ಸರ್ವೇ ವಿಖ್ಯಾತಾಃ ಶಕ್ರಸೇವಕಾಃ ॥ ೧೫ ॥

---

೧೧. ಹೀಗೆ ದಿತೀದೇವಿಯು ಏಳುತಿಂಗಳು ಗರ್ಭವತಿಯಾದಳು. ಇಂದ್ರನ ಮಾಯೆಯಿಂದ ಮೋಹಗೊಂಡ ಆ ದಿತೀದೇವಿಯು ಒಂದುದಿನ ಅಶುಚಿಯಾಗಿರುವಾಗಲೇ ತನ್ನ ಮನೆಯಲ್ಲಿ ಮಲಗಿನಿದ್ರಿಸಿದಳು.

೧೨. ಆಗ ಮಹೇಂದ್ರನು ಅವಳು ಅಶುಚಿಯಾಗಿರುವಳೆಂದು ತಿಳಿದು ತಾನು ಒಂದು ಅಂಗುಷ್ಠಪ್ರಮಾಣದ-ಶರೀರವನ್ನು ಧರಿಸಿ, ವಜ್ರಾಯುಧದೊಡನೆ ಆ ದಿತಿಯ ಗರ್ಭವನ್ನು ಪ್ರವೇಶಿಸಿ ಏಳುಭಾಗವಾಗಿ ಛೇದಿಸಿಬಿಟ್ಟನು.

೧೩-೧೪. ಆದರೂ ಆ ಏಳುಮಂದಿಯು, ಇನ್ನೂ ಜೀವಂತವಾಗಿರುವುದನ್ನು ತಿಳಿದು ಇವರು ಮಹಾಶತ್ರುಗಳೆಂದರಿತು ಪುನಃ ಆ ಏಳುಮಂದಿಯನ್ನೂ ಒಬ್ಬೊಬ್ಬರನ್ನೂ ಏಳೇಳು ಭಾಗವಾಗಿ ಮಾಡಿದನು. ಆಗ ಅವರಲ್ಲಿದ್ದ ಶಕ್ತಿಯು ಕಡಿಮೆಯಾಯಿತು. ಅನಂತರ ಇಂದ್ರನು ಅವರೊಡನೆ (ಗರ್ಭದಿಂದ) ಯೋನಿಮಾರ್ಗವಾಗಿ ಹೊರಗೆ ಬಂದು ವಿನಯದಿಂದ ಆ ದಿತಿದೇವಿಗೆ ನಮಸ್ಕಾರಮಾಡಿದನು.

೧೫. ಆಗ ದಿತಿಯು ಇಂದ್ರನಲ್ಲಿ ಪ್ರಸನ್ನಳಾಗಿ ಆ ದೇವಾಂಶಸಂಭೂತರಾದ ಆ ಕುಮಾರರನ್ನೆಲ್ಲಾ ಇಂದ್ರನಿಗೆ ಸಮರ್ಪಿಸಿಬಿಟ್ಟಳು. ಅನಂತರ ಅವರೆಲ್ಲರೂ ಮರುದ್ಗಣಗಳೆಂದು ಪ್ರಸಿದ್ಧಿಹೊಂದಿ ಇಂದ್ರನ ಸೇವಕರಾದರು.

ಸ ತು ಪೂರ್ವಭವೇ ಜಾತೋ ಬ್ರಾಹ್ಮಣೋ ಲೋಕವಿಶ್ರುತಃ ।
ಇಲೋ ನಾಮ ಸ ವೇದಜ್ಞೋ ಯಥೇಲೋ ನೃಪತಿಸ್ತದಾ ॥ ೧೬ ॥

ಏಕದಾ ಬಲವಾನ್ರಾಜಾ ಮನುಪುತ್ರ ಇಲಃ ಸ್ವಯಂ ।
ಏಕಾಕೀ ಹಯಮಾರುಹ್ಯ ಮೇರೋರ್ವಿಪಿನಮಾಯಯೌ ॥ ೧೭ ॥

ಮೇರೋರಧಃ ಸ್ಥಿತಃ ಖಂಡಃ ಸ್ವರ್ಣಗರ್ಭೋ ಹರಿಪ್ರಿಯಃ ।
ನಿವಾಸಂ ಕೃತವಾಂಸ್ತತ್ರ ಕೃತ್ವಾ ರಾಷ್ಟ್ರಂ ಮಹೋತ್ತಮಂ ॥ ೧೮ ॥

ಇಲೇನಾವೃತಮೇವಾಪಿ ಕೃತಂ ತತ್ರ ಸ್ಥಲೇ ಸುರಾಃ ।
ಇಲಾವೃತಮಿತಿ ಖ್ಯಾತಃ ಖಂಡೋಽಭೂದ್ವಿಬುಧಪ್ರಿಯಃ ॥ ೧೯ ॥

ಭಾರತೇ ಯೇ ಸ್ಥಿತಾ ಲೋಕಾ ಇಲಾವೃತಮುಪಾಗತಾಃ ।
ಮೇರುರ್ಗಿರಿರ್ವೃಕ್ಷಮಯೋ ವಿಧಾತ್ರಾ ನಿರ್ಮಿತೋ ಹಿ ಸಃ ॥ ೨೦ ॥

---

೧೬. ಈ ಮರುದ್ಗಣಗಳು ಹಿಂದಿನ ಜನ್ಮದಲ್ಲಿ ಬ್ರಾಹ್ಮಣನಾಗಿ ಇಲನೆಂಬ ಹೆಸರಿನಿಂದ ಲೋಕಪ್ರಸಿದ್ಧನಾಗಿದ್ದನು. ಮತ್ತು ಆ ಕಾಲದಲ್ಲಿ ಇದ್ದ ಇಲನೆಂಬ ಮಹಾರಾಜನಂತೆ ಕೀರ್ತಿವಂತನೂ ಮೇಧಾವಿಯೂ ಎನಿಸಿದ್ದನು.

೧೭. ಒಂದು ಸಲ ಮನುಪುತ್ರನೂ ಬಲಶಾಲಿಯೂ ಆದ ಇಲಮಹಾರಾಜನು ತನ್ನ ಕುದುರೆಯನ್ನೇರಿ ಒಬ್ಬನೇ ಮೇರುಪರ್ವತದಕಾಡಿಗೆ ಹೋದನು.

೧೮. ಅಲ್ಲಿ ಮೇರುಪರ್ವತದ ಕೆಳಭಾಗದಲ್ಲಿರುವ ಖಂಡವು ಸ್ವರ್ಣಗರ್ಭವೂ ಮತ್ತು ಮಹಾವಿಷ್ಣುವಿಗೆ ಪ್ರೀತಿಕರವೂ ಆಗಿತ್ತು. ಇಂಥ ಸ್ಥಳದಲ್ಲಿ ಉತ್ತಮವಾದ ರಾಜ್ಯವನ್ನು ನಿರ್ಮಿಸಿಕೊಂಡು ಅಲ್ಲಿ ವಾಸಮಾಡತೊಡಗಿದನು.

೧೯. ಆ ಇಲಮಹಾರಾಜನು ಅಧಿಪತ್ಯಮಾಡುವ ಜಾಗದಲ್ಲಿ ದೇವತೆಗಳು ಸಂತೋಷವಾಗಿ ವಾಸಮಾಡತೊಡಗಿದರು. ಅಂದಿನಿಂದ ಆ ದೇಶವು ಇಲಾವೃತ ಖಂಡವೆಂದು ಪ್ರಸಿದ್ಧಿಹೊಂದಿ ದೇವತೆಗಳಿಗೆ ಅತ್ಯಂತ ಪ್ರೀತಿಕರವಾಗಿದ್ದಿತು.

೨೦. ಆಗ ಭರತಖಂಡದಲ್ಲಿದ್ದ ಜನಗಳೂ ಸಹ ಇಲಾವೃತಖಂಡಕ್ಕೆ ಬಂದು ವಾಸಮಾಡತೊಡಗಿದರು. ಆ ಮೇರುಪರ್ವತವು ಬ್ರಹ್ಮನಿಂದ ವೃಕ್ಷಮಯವಾಗಿ ನಿರ್ಮಿಸಲ್ಪಟ್ಟಿದ್ದಿತು.

ಆರೋಹಣಂ ನರೈಸ್ತೈಸ್ತೈಸ್ಕೃತಂ ಸ್ವರ್ಣಮಯಂ ಶುಭಂ ।
ತಮಾರುಹ್ಯ ಕ್ರಮಾಲ್ಲೋಕಾಃ ಸ್ವರ್ಗಲೋಕಮುಪಾಗತಾಃ ॥ ೨೧ ॥

ತಾನ್‌ದೃಷ್ಟ್ವಾ ಮನುಜಾನ್‌ಪ್ರಾಪ್ತಾನ್ ಸದೇಹಾನ್ ಸ್ವರ್ಗಮಂಡಲೇ ।
ವಿಸ್ಮಿತಾಶ್ಚ ಸುರಾಸ್ಸರ್ವೇ ಮಹೇಶಂ ಶರಣಂ ಯಯುಃ ॥ ೨೨ ॥

ಜ್ಞಾತ್ವಾ ಸ ಭಗವಾನ್ರುದ್ರೋ ಭವಾನ್ಯಾ ಸಹ ಶಂಕರಃ ।
ಇಲಾವೃತವನೇ ರಮ್ಯೇ ಸ ರೇಮೇ ಚ ತಯಾ ಸಹ ॥ ೨೩ ॥

ಏತಸ್ಮಿನ್ನಂತರೇ ಪ್ರಾಪ್ತೋ ವೈವಸ್ವತಸುತೋ ಮಹಾನ್ ।
ಇಲೋ ನಾಮ ಮಹಾಪ್ರಾಜ್ಞೋ ಮೃಗಯಾರ್ಥೀ ಸದಾಶಿವಂ ॥ ೨೪ ॥

ನಗ್ನಭೂತಂ ಸಮಾಲೋಕ್ಯ ನೇತ್ರೇ ಸಂಮೀಲ್ಯ ಸಂಸ್ಥಿತಃ ।
ಲಜ್ಜಿತಾಂ ಗಿರಿಜಾಂ ದೃಷ್ಟ್ವಾ ಶಶಾಪ ಭಗವಾನ್‌ಹರಃ ॥ ೨೫ ॥

---

೨೧ ಜನಗಳೆಲ್ಲರೂ ಆ ಮೇರುಪರ್ವತಕ್ಕೆ ಹತ್ತುವ ಮೆಟ್ಟಲುಗಳನ್ನೆಲ್ಲಾ ಚಿನ್ನದಿಂದಲೇ ನಿರ್ಮಿಸಿದರು. ಅನಂತರ ಜನಗಳೆಲ್ಲರೂ ಕ್ರಮವಾಗಿ ಆ ಮೆಟ್ಟಲುಗಳನ್ನು ಹತ್ತಿ ಸ್ವರ್ಗಕ್ಕೆಬರಲು ಪ್ರಾರಂಭಿಸಿದರು.

೨೨ ಆಗ ಮನುಷ್ಯಶರೀರದಿಂದಲೇ ಸ್ವರ್ಗಲೋಕಕ್ಕೆ ಬಂದಿರುವ ಆ ಜನರನ್ನು ನೋಡಿ ದೇವತೆಗಳೆಲ್ಲರೂ ಆಶ್ಚರ್ಯಗೊಂಡು ಮಹೇಶ್ವರನನ್ನು ಮರೆಹೊಕ್ಕರು.

೨೩. ಆಗ ರುದ್ರನು ಈರೀತಿಯಾಗಲು ಕಾರಣವನ್ನು ತಿಳಿದು ತನ್ನ ಪತ್ನಿಯಾದ ಪಾರ್ವತಿಯೊಡನೆ ಇಲಾವೃತಖಂಡದ ಮನೋಹರವಾದ ಕಾಡಿಗೆ ಬಂದು ಅಲ್ಲಿ ತನ್ನ ಪ್ರಿಯಳೊಡನೆ ವಿಹಾರಮಾಡುತ್ತಿದ್ದನು.

೨೪. ಇದೇ ಸಂದರ್ಭದಲ್ಲಿ ವೈವಸ್ವತಮನುವಿನ ಪುತ್ರನೂ ಮಹಾಪ್ರಾಜ್ಞನೂ ಆದ ಇಲಮಹಾರಾಜನು ಬೇಟೆಯಾಡಲೋಸುಗ ಆ ಮಹೇಶ್ವರನು ವಿಹರಿಸುತ್ತಿದ್ದೆಡೆಗೆಬಂದನು.

೨೫. ಆ ರಾಜನು ಆಸಮಯದಲ್ಲಿ ಶಿವನು ಬೆತ್ತಲೆಯಿದ್ದುದನ್ನು ನೋಡಿ ತನ್ನ ಎರಡು ಕಣ್ಣುಗಳನ್ನೂ ಮುಚ್ಚಿಕೊಂಡು ನಿಂತನು. ಆಗ ಪಾರ್ವತಿಯು ಇಂತಹ ಸ್ಥಿತಿಯನ್ನು ಕಂಡದ್ದಕ್ಕಾಗಿ ಲಜ್ಜಿತಳಾಗಿರಲು ಪರಮೇಶ್ವರನು ಅವಳನ್ನು ನೋಡಿ ಇನ್ನುಮುಂದೆ ಈ ಇಲಾವೃತಖಂಡದಲ್ಲಿ ಎಲ್ಲಕ್ಕೂ ಕೇವಲ ಸ್ತ್ರೀಯರೇ ಆಗಲಿ, ನನ್ನ ಹೊರತು ಇತರ ಪುರುಷರು ಇಲ್ಲದೇಹೋಗಲಿ ಎಂದು ಶಾಪಕೊಟ್ಟನು.

ಅಸ್ಮಿನ್ಖಂಡೇ ಸದಾ ನಾರ್ಯೋ ಭವಿಷ್ಯಂತಿ ಚ ಮಾಂ ವಿನಾ ।
ಇತ್ಯುಕ್ತ್ವಾ ವಚನಂ ತಸ್ಮಿನ್ ನಾರ್ಯಸ್ಸರ್ವಾ ಬಭೂವಿರೇ ॥ ೨೬ ॥

ಇಲಾ ಬಭೂವ ನೃಪತೇಃ ಕನ್ಯಾ ಜನಮನೋಹರಾ ।
ಬಹುಕಾಲಂ ಮೇರುಶೃಂಗೇ ಮಹತ್ತಪಮಚೀಕರತ್ ॥ ೨೭ ॥

ಇಲಾಸಮಾಧಿಭೂತಾಯಾಃ ಸಪ್ತವಿಂಶಚ್ಚತುರ್ಯುಗಂ ।
ಜಾತಂ ತತ ಇಲಾ ಕನ್ಯಾ ತ್ರೇತಾಮಧ್ಯೇ ತು ಚಂದ್ರಜಂ ॥
ಬುಧಂ ದೇವಂ ಪತಿಂ ಕೃತ್ವಾ ಚಂದ್ರವಂಶಮಜೀಜನತ್ ॥ ೨೮ ॥

ಅಯೋಧ್ಯಾಧಿಪತಿಃ ಶ್ರೀಮಾನ್ಯದೇಲಾವ್ರತಮಾಗತಃ ।
ತಸ್ಯ ರಾಜ್ಞೀ ಮದವತೀ ನಾಮ್ನಾ ತುಷ್ಟಾವ ಪಾರ್ವತೀಂ ॥ ೨೯ ॥

---

೨೬-೨೭. ಹೀಗೆ ಶಾಪಪ್ರಾಪ್ತವಾಗಲು ಅಲ್ಲಿಂದಮುಂದೆ ಆ ಖಂಡದಲ್ಲಿ ಕೇವಲ ಸ್ತ್ರೀಯರೇ ಜನಿಸಿದರು. ಆ ಇಲಮಹಾರಾಜನಿಗೆ ಜನಗಳನ್ನು ಮೋಹಗೊಳಿಸುವ ಸೌಂದರ್ಯವುಳ್ಳ ಇಲಾ ಎಂಬ ಕುಮಾರಿಯು ಜನಿಸಿದಳು. ಅವಳು ಬಹಳಕಾಲ ಮೇರುಪರ್ವತದ ಶಿಖರದಲ್ಲಿ ಘೋರವಾದ ತಪಸ್ಸನ್ನು ಮಾಡಿದಳು.

೨೮ ಹಾಗೆ ಸಮಾಧಿಮಗ್ನಳಾಗಿರುವ ಆ ಇಲಾದೇವಿಯು ಕೃತ, ತ್ರೇತ, ದ್ವಾಪರ, ಕಲಿ ಎಂಬ ನಾಲ್ಕುಯುಗಗಳೂ, ಇಪ್ಪತ್ತೇಳುಬಾರಿ ಕಳೆಯುವವರೆಗೂ ತಪಸ್ಸನ್ನುಮಾಡಿ ಅನಂತರ ಪ್ರಾಪ್ತವಾದ ತ್ರೇತಾಯುಗದ ಮಧ್ಯಕಾಲದಲ್ಲಿ ಚಂದ್ರನ ಮಗನಾದ ಬುಧನನ್ನು ವಿವಾಹಮಾಡಿಕೊಂಡು ಪುತ್ರಸಂತಾನಪಡೆದು ಚಂದ್ರವಂಶವನ್ನು ಉದ್ಧಾರಮಾಡಿದಳು.

೨೯. ಅಯೋಧ್ಯಾಪಟ್ಟಣದ ರಾಜನಾದ ಶ್ರೀಮಾನ್ ಇಲಮಹಾರಾಜನು ಇಲಾವೃತಕ್ಕೆ ಗಮಿಸಿದನೆಂದು ಹಿಂದೆಯೇ ಹೇಳಿದೆಯಷ್ಟೆ. ಅವನಿಗೆ ಮದವತೀ ಎಂಬ ಪತ್ನಿಯಿದ್ದಳು. ಆಗ ಆ ಮದವತಿಯು ಇಲ್ಲೇ ಇದ್ದ ಪಾರ್ವತೀದೇವಿಯನ್ನು ಸ್ತೋತ್ರಮಾಡಿದಳು.

ತದಾ ಪ್ರಾಪ್ತ ಇಲೋ ವಿಪ್ರಸ್ತಸ್ಯಾ ರೂಪೇಣ ಮೋಹಿತಃ ।
ಪಸ್ಪರ್ಶ ತಾಂ ಮದವತೀಂ ರಾಜ್ಞೀಂ ಕಾಮವಿಮೋಹಿತಃ ॥ ೩೦ ॥

ಏತಸ್ಮಿನ್ನಂತರೇ ತತ್ರ ವಾಗುವಾಚಾಶರೀರಿಣೀ ।
ಇಲೋ ನಾಯಂ ದ್ವಿಜಶ್ಚಾಯಂ ತವರೂಪವಿಮೋಹಿತಃ ॥ ೩೧ ॥

ಅನಿಲೋ ನಾಮ ತತ್ರೈವ ವಿಖ್ಯಾತೋಽಭೂದ್ದ್ವಿಜಸ್ಯ ವೈ ।
ಕಾಮಾಗ್ನಿ ಪೀಡಿತೋ ವಿಪ್ರಸ್ಸ ತುಷ್ಟಾವ ಚ ಪಾವಕಂ ॥ ೩೨ ॥

ಛಿತ್ವಾ ಛಿತ್ವಾ ಶಿರೋ ರಮ್ಯಂ ತಸ್ಮೈ ಜಾತಂ ಪುನಃಪುನಃ ।
ದತ್ವಾ ತುಷ್ಟಾವ ತಂ ದೇವಂ ಪ್ರಸನ್ನೋಽಭೂದ್ಧನಂಜಯಃ ॥ ೩೩ ॥

---

೩೦. ಹಿಂದೆ ಹೇಳಿದ ಇಲನೆಂಬ ಬ್ರಾಹ್ಮಣನು ಆಗ ಅಲ್ಲಿಗೆ ಬಂದು ಅವಳ ಸೌಂದರ್ಯಕ್ಕೆ ಬೆರಗಾಗಿ ಮನ್ಮಥಪರವಶತೆಯಿಂದ ರಾಣಿಯಾದ, ಮದವತಿಯನ್ನು ಸ್ಪರ್ಶಮಾಡಿದನು.

೩೧. ಆ ವೇಳೆಗೆ ಸರಿಯಾಗಿ “ ಇವನು ನಿನ್ನ ಪತಿಯಾದ ಇಲಮಹಾರಾಜನಲ್ಲ ನಿನ್ನ ರೂಪಕ್ಕೆ ಬೆರಗಾಗಿ ಬಂದಿರುವ ಬ್ರಾಹ್ಮಣನು ” ಎಂದು ಅಶರೀರವಾಣಿಯಾಯಿತು.

೩೨. ಅಲ್ಲಿಂದಮುಂದೆ ಆ ಬ್ರಾಹ್ಮಣನಿಗೆ ಅನಿಲನೆಂಬ ಹೆಸರು ಪ್ರಸಿದ್ಧಿಯಾಯಿತು. ಆ ಬ್ರಾಹ್ಮಣನು ಆಗ ಮನ್ಮಥವಿಕಾರದಿಂದ ಪೀಡಿತನಾಗಿ ಆ ಸಮಯದಲ್ಲಿ ಅಗ್ನಿದೇವನನ್ನು ಬಹುವಾಗಿ ಸ್ತೋತ್ರಮಾಡಿದನು.

೩೩. ಅಷ್ಟೇ ಅಲ್ಲದೆ ಹೋಮಮಾಡಲುತೊಡಗಿ ತನ್ನ ಸುಂದರವಾದ ತಲೆಯನ್ನೇ ಕತ್ತರಿಸಿ ಆ ಯಜ್ಞೇಶ್ವರನಿಗೆ ಸಮರ್ಪಿಸುತ್ತಾ ಬಂದನು. ತಲೆಯನ್ನು ಕತ್ತರಿಸಿದಹಾಗೆಲ್ಲಾ ಪುನಃ ತಲೆಯು ಉಂಟಾಗುತ್ತಲೇ ಇದ್ದಿತು. ಹೀಗೆ ಅನೇಕ ಬಾರಿ ಕತ್ತರಿಸಿ ಹೋಮಮಾಡುತ್ತಲೇ ಇದ್ದನು. ಧನಂಜಯ (ಅಗ್ನಿಯು) ನು ಇವನ ಭಕ್ತಿಗೆ ಮೆಚ್ಚಿ ಪ್ರಸನ್ನನಾಗಿ,

ಪ್ರಾಹ ತ್ವಮೂನಪಂಚಾಶದ್ವಿಭೇದಾಞ್ಜನಯಿಷ್ಯಸಿ ।
ತಥಾಹಂ ಮಿತ್ರವಾನ್ಭೂತ್ವಾ ತತ್ಸಂಖ್ಯಸ್ತವ ಕಾಮದಃ ॥ ೩೪ ॥

ಯಥಾ ಕುಬೇರೋ ಭಗವಾನ್ ಷಡ್ವಿಂಶದ್ವರುಣಪ್ರಿಯಃ ।
ತಥಾಹಮೂನಪಂಚಾಶದ್ವಿಭೇದಸ್ತವ ವೈ ಸಖಾ ॥ ೩೫ ॥

ಇತ್ಯುಕ್ತೇ ವಚನೇ ತಸ್ಮಿನ್ದಿತಿಕುಕ್ಷೌ ದ್ವಿಜೋತ್ತಮಃ ।
ವಾಯುರ್ನಾಮ ಸ ವೈ ಜಾತಃ ಪಾವಕಸ್ಯ ಪ್ರಿಯಸ್ಸಖಾ ॥ ೩೬ ॥

॥ ಸೂತ ಉವಾಚ ॥

ಇತಿ ಶ್ರುತ್ವಾ ಗುರೋರ್ವಾಕ್ಯಂ ವೈಶ್ಯಜಾತ್ಯಾಂ ಸಮುದ್ಭವಃ ।
ಧಾನ್ಯಪಾಲಸ್ಯ ವೈ ಗೇಹೇ ಮೂಲಗಂಡಾಂತಜಃ ಸುತಃ ॥ ೩೭ ॥

---

೩೪. "ನೀನು ನಲವತ್ತೊಂಬತ್ತು ವಿಭೇದಗಳನ್ನು ಉಂಟುಮಾಡುವೆ. ನಾನೂ ಸಹ ನಿನಗೆ ಮಿತ್ರನಾಗಿ ಅಷ್ಟೇಸಂಖ್ಯೆಯ ಪಾವಕರನ್ನು ಸೃಷ್ಟಿಸಿ ನಿನ್ನ ಇಷ್ಟಾರ್ಥವನ್ನು ಪೂರ್ಣಮಾಡುವೆನು."

೩೫. "ಇಪ್ಪತ್ತಾರು ವಿಭೇದಗಳುಳ್ಳ ಕುಬೇರನು ಹೇಗೆ ಅದೇ ಇಪ್ಪತ್ತಾರು ಭೇದವುಳ್ಳ ವರುಣನಿಗೆ ಮಿತ್ರನಾಗಿರುವನೋ ಹಾಗೆಯೇ ನಾನೂ ನಲವತ್ತೊಂಭತ್ತು ವಿಭೇದವುಳ್ಳವನಾಗಿ ನಿನಗೆ ಮಿತ್ರನಾಗುವೆನು" ಎಂದು ಹೇಳಿದನು.

೩೬. ಆರೀತಿ ಪಾವಕನು ಹೇಳಿ ಅದೃಶ್ಯನಾಗಲು ಬ್ರಾಹ್ಮಣೋತ್ತಮನಾದ ಈ ಅನಿಲನು ದಿತಿಯ ಹೊಟ್ಟೆಯಲ್ಲಿ ವಾಯುವೆಂಬ ಹೆಸರಿನಿಂದ ಅವತರಿಸಿ ಅಗ್ನಿ ಪುರುಷನಿಗೆ ಪ್ರಿಯಸ್ನೇಹಿತನಾದನು.

೩೭. ಸೂತಮುನಿವರ್ಯನು ಹೇಳುತ್ತಾನೆ—ಈರೀತಿ ಬೃಹಸ್ಪತ್ಯಾಚಾರ್ಯರ ಮಾತನ್ನು ಕೇಳಿ ಪಾವಕನು ವೈಶ್ಯಜಾತಿಸಮುತ್ಪನ್ನನಾದ ಧಾನ್ಯಪಾಲನೆಂಬವನ ಮನೆಯಲ್ಲಿ ಅವರಿಗೆ ಮಗನಾಗಿ ಮೂಲನಕ್ಷತ್ರದಲ್ಲಿ ಗಂಡಾಂತರವನ್ನುಂಟುಮಾಡುವ ಅಂಶದಲ್ಲಿ ಜನಿಸಿದನು.

ಪಿತೃಮಾತೃಪರಿತ್ಯಕ್ತಃ ಕಾಶ್ಯಾಂ ವಿಂಧ್ಯವನೇ ತದಾ ।
ಅಲಿಕೋ ನಾಮ ವೈ ಮ್ಲೇಚ್ಛಸ್ತತ್ರ ಸ್ಥಾನೇ ಸಮಾಗತಃ ॥ ೩೮ ॥

ಅನಪತ್ಯೋ ವಸ್ತ್ರಕಾರೀ ಸುತಂ ಪ್ರಾಪ್ಯ ಗೃಹಂ ಯಯೌ ।
ಕಬೀರ ಇತಿ ವಿಖ್ಯಾತಃ ಸ ಪುತ್ರೋ ಮಧುರಾನನಃ ॥ ೩೯ ॥

ಸ ಸಪ್ತಾಬ್ದವಪುರ್ಭೂತ್ವಾ ಗೋದುಗ್ಧೇಪಾನತತ್ಪರಃ ।
ರಾಮಾನಂದಂ ಗುರುಂ ಮತ್ವಾ ರಾಮಧ್ಯಾನಪರೋಽಭವತ್ ॥ ೪೦ ॥

ಸ್ವಹಸ್ತೇನೈವ ಸಂಸ್ಕೃತ್ಯ ಭೋಜನಂ ಹರಯೇಽರ್ಪಯತ್ ।
ತತ್ಪ್ರಿಯಾರ್ಥಂ ಹರಿಸ್ಸಾಕ್ಷಾತ್ಸರ್ವಕಾಮಪ್ರದೋಽಭವತ್ ॥ ೪೧ ॥

---

೩೮. ಆಗ ತಂದೆತಾಯಿಗಳು ಆ ಮಗುವನ್ನು ಕಾಶಿಯ ಆಚೆ ವಿಂಧ್ಯಾರಣ್ಯಕ್ಕೆ ತೆಗೆದುಕೊಂಡುಹೋಗಿ ಬಿಟ್ಟುಬಂದರು. ಆ ಸಮಯಕ್ಕೆ ಅಲಿಕನೆಂಬ ಮ್ಲೇಚ್ಛನು ಆ ಕಾಡಿಗೆ ಬಂದನು.

೩೯. ಅನಂತರ ಅಲ್ಲಿ ಮಗುವು ಇರುವುದನ್ನು ನೋಡಿ ಪುತ್ರಸಂತಾನವಿಲ್ಲದವನೂ ಬಟ್ಟೆನೇಯುವವೃತ್ತಿಯವನೂ ಆದ ಆ ಮ್ಲೇಚ್ಛನು ಆ ಶಿಶುವನ್ನು ತೆಗೆದುಕೊಂಡು ಮನೆಗೆ ಹೋದನು. ಅನಂತರ ಆ ಮಗುವು ಸುಂದರಾಂಗನಾಗಿ ಕಬೀರನೆಂಬ ಹೆಸರಿನಿಂದ ಪ್ರಸಿದ್ಧಿಪಡೆಯಿತು.

೪೦. ಆ ಕಬೀರನಿಗೆ ಏಳುವರ್ಷವಯಸ್ಸಾಗಲು ಅವನು ಹಸುವಿನಹಾಲನ್ನೇ ಕುಡಿಯುವ ಅಭಿಲಾಷೆಯುಳ್ಳವನಾದನು. ಅನಂತರ ಆ ಕಬೀರನು ರಾಮಾನಂದರನ್ನು ಗುರುವನ್ನಾಗಿ ಸ್ವೀಕರಿಸಿ ಅವರ ಶಿಷ್ಯನಾಗಿ ಯಾವಾಗಲೂ ರಾಮಧ್ಯಾನತತ್ಪರನಾಗಿದ್ದನು.

೪೧. ಆ ಕಬೀರನು ಹೀಗೆ ರಾಮಧ್ಯಾನಮಾಡುತ್ತಾ ತಾನು ಸ್ವಹಸ್ತದಿಂದಲೇ ಸಿದ್ಧಪಡಿಸಿದ ಭೋಜನವನ್ನು ಶ್ರೀ ಹರಿಸ್ವರೂಪಿಯಾದ ರಾಮನಿಗೆ ಸಮರ್ಪಿಸಿದನು. ಇದರಿಂದ ಶ್ರೀರಾಮಚಂದ್ರನು ಸಂತುಷ್ಟನಾಗಿ ಆ ಕಬೀರನಿಗೆ ಸಕಲ ಅಭೀಷ್ಟಗಳನ್ನೂ ಕೃಪೆಮಾಡುತ್ತಿದ್ದನು.

॥ ಬೃಹಸ್ಪತಿರುವಾಚ ॥

ಉತ್ತಾನಪಾದತನಯೋ ಧ್ರುವೋಽಭೂತ್ಕ್ಷತ್ರಿಯಃ ಪುರಾ ।
ಪಿತೃಮಾತೃಪರಿತ್ಯಕ್ತಃ ಸ ಬಾಲಃ ಪಂಚಹಾಯನಃ ॥ ೪೨ ॥

ಗೋವರ್ಧನಗಿರೌ ಪ್ರಾಪ್ಯ ನಾರದಸ್ಯೋಪದೇಶತಃ ।
ಸ ಚಕ್ರೇ ಭಗವದ್ಧ್ಯಾನಂ ಮಾಸಾನ್ ಷಟ್ ಚ ಮಹಾವ್ರತೀ ॥ ೪೩ ॥

ತದಾ ಪ್ರಸನ್ನೋ ಭಗವಾನ್ವಿಷ್ಣುರ್ನಾರಾಯಣಃ ಪ್ರಭುಃ ।
ಖಮಂಡಲೇ ಪದಂ ತಸ್ಮೈ ದದೌ ಪ್ರೀತ್ಯಾ ನಭೋಮಯಂ ॥ ೪೪ ॥

ದೃಷ್ಟ್ವಾ ತದ್ವದನಂ ರಮ್ಯಂ ಮಾಯಾಶಕ್ತ್ಯಾ ದಿಶೋ ದಶ ।
ಸ್ವಾಮಿನಂ ಚ ಧ್ರುವಂ ಮತ್ವಾ ಭಕ್ತಿನಮ್ರಾ ಬಭೂವಿರೇ ॥ ೪೫ ॥

ಧ್ರುವೋಽಪಿ ಭಗವಾನ್ಸಾಕ್ಷಾತ್ಸರ್ವಪೂಜ್ಯೋ ಬಭೂವ ಹ ।
ದಿಕ್ಪತಿಃ ಸ ತು ವಿಜ್ಞೇಯೋ ಭಗಣಾನಾಂ ಪತಿಃ ಸ್ವಯಂ ॥ ೪೬ ॥

---

೪೨. ಬೃಹಸ್ಪತ್ಯಾಚಾರ್ಯರು ಹೇಳುತ್ತಾರೆ—ಹಿಂದೆ ಉತ್ತಾನಪಾದರಾಜನಿಗೆ ಧ್ರುವನೆಂಬ ಕುಮಾರನಿದ್ದನು. ಆ ಧ್ರುವನನ್ನು ಬಾಲ್ಯದಲ್ಲಿಯೇ ತಂದೆತಾಯಿಗಳು ವರ್ಜ್ಯಮಾಡಿದರು.

೪೩. ಐದುವರ್ಷದವನಾಗಿದ್ದಾಗಲೇ ಅವನು ಗೋವರ್ಧನಗಿರಿಗೆ ಬಂದು ಅಲ್ಲಿ ನಾರದಮಹರ್ಷಿಯ ಉಪದೇಶದಿಂದ ಮಹಾವ್ರತವನ್ನಾಚರಿಸುತ್ತಾ ಆರುತಿಂಗಳು ಕಾಲ ಭಗವದ್ಧ್ಯಾನತತ್ಪರನಾಗಿದ್ದನು.

೪೪. ಆಗ ಸರ್ವವ್ಯಾಪಿಯೂ ಸರ್ವಸಮರ್ಥನೂ ಭಗವಂತನೂ ಆದ ನಾರಾಯಣನು ಪ್ರಸನ್ನನಾಗಿ ಅವನಿಗೆ ನಕ್ಷತ್ರಮಂಡಲದಲ್ಲಿ ನಭೋಮಯವಾದ ಒಂದು ಸ್ಥಾನವನ್ನು ಕೊಟ್ಟನು.

೪೫. ಮಾಯಾಶಕ್ತಿಯಿಂದ ಹತ್ತುದಿಕ್ಕುಗಳಿಗೂ ಮನೋಹರವಾಗಿ ಕಾಣುವ ಧ್ರುವನಕ್ಷತ್ರವನ್ನು ನೋಡಿ ಅವನನ್ನೇ ತಮ್ಮ ಸ್ವಾಮಿಯೆಂದು ನಕ್ಷತ್ರಗಳು ಭಕ್ತಿಯುಳ್ಳವರಾಗಿ ವಿನೀತರಾದರು.

೪೬. ಸಾಕ್ಷಾತ್‌ಭಗವಂತನಾದ ಧ್ರುವನು ಸಕಲರಿಂದಲೂ ಪೂಜ್ಯನಾದನು ಮತ್ತು ದಿಕ್ಪತಿಯೂ ನಕ್ಷತ್ರಸಮೂಹಗಳ ಅಧಿಪತಿಯೂ ಆದನು.

ನಭಃಪತಿಃ ಕಾಲಕರಃ ಶಿಶುಮಾರಪತಿಸ್ಸ ವೈ ।
ಪಂಚತತ್ವಾ ಹಿ ವೈ ಮಾಯಾ ಪ್ರಕೃತಿಸ್ತತ್ಪತಿಃ ಸ್ವಯಂ ॥ ೪೭ ॥

ತಸ್ಮಾದ್ಧರಾಯಾಂ ಸಂಭೂತೋ ಭೌಮೋ ನಾಮ ಮಹಾಗ್ರಹಃ ।
ಜಲದೇವ್ಯಾಸ್ತತೋ ಜಾತಃ ಶುಕ್ರೋ ನಾಮ ಮಹಾಗ್ರಹಃ ॥ ೪೮ ॥

ವಹ್ನಿದೇವ್ಯಾಂ ತತೋ ಜಾತಶ್ಚಾಹಂ ತತ್ರ ಮಹಾಗ್ರಹಃ ।
ವಾಯುದೇವ್ಯಾಂ ಧ್ರುವಾಜ್ಜಾತಃ ಕೇತುರ್ನಾಮ ಮಹಾಗ್ರಹಃ ॥ ೪೯ ॥

ಗ್ರಹಭೂತಃ ಸ್ಥಿತಸ್ತತ್ರ ನಭೋದೇವ್ಯಾಂ ತದುದ್ಭವಃ ।
ರಾಹುರ್ನಾಮ ತಥಾ ಘೋರೋ ಮಹಾಗ್ರಹ ಉಪಗ್ರಹಃ ॥ ೫೦ ॥

ಪೂರ್ವಸ್ಯಾಂ ದಿಶಿ ವೈ ತಸ್ಮಾಜ್ಜಾತಶ್ಚೈರಾವತೋ ಗಜಃ ।
ಆಗ್ನೇಯ್ಯಾಂ ದಿಶಿ ವೈ ತಸ್ಮಾತ್ಪುಂಡರೀಕೋ ಗಜೋಽಭವತ್ ॥ ೫೧ ॥

---

೪೭. ಆತನು ನಭಃಪತಿಯೂ ಕಾಲನಿಯಾಮಕನೂ ಮತ್ತು ಶಿಶುಮಾರ ಪತಿಯೂ, ಅದಲ್ಲದೆ ಪಂಚತತ್ವವುಳ್ಳದ್ದೂ ಮಾಯಾಸ್ವರೂಪವೂ ಆದ ಪ್ರಕೃತಿಗೂ ತಾನೇ ಪತಿಯಾದನು.

೪೮. ಆ ಧ್ರುವನಿಂದ ಭೂದೇವಿಯಲ್ಲಿ ಭೌಮನೆಂಬ ಮಹಾಗ್ರಹವೂ, ಜಲ ದೇವಿಯಲ್ಲಿ ಶುಕ್ರನೆಂಬ ಮಹಾಗ್ರಹವೂ ಉತ್ಪನ್ನವಾದುವು.

೪೯. ಆ ಧ್ರುವನಿಂದಲೇ ವಹ್ನಿದೇವಿಯಲ್ಲಿ ಮಹಾಗ್ರಹವಾದ ನಾನು ಉದಯಿಸಿದೆನು. ಆತನಿಂದಲೇ ವಾಯುದೇವಿಯಲ್ಲಿ ಕೇತುವೆಂಬ ಮಹಾಗ್ರಹವು ಹುಟ್ಟಿತು.

೫೦. ಆ ಧ್ರುವನಿಂದ ನಭೋದೇವಿಯಲ್ಲಿ ರಾಹುವೆಂಬ ಘೋರವಾದ ಮಹಾಗ್ರಹವು ಉತ್ಪನ್ನವಾಯಿತು. ಇದನ್ನು ಉಪಗ್ರಹವೆಂದೂ ಹೇಳುವರು.

೫೧. ಪೂರ್ವದಿಕ್ಕಿನಲ್ಲಿ ಆ ಧ್ರುವನಿಂದ ಐರಾವತವೆಂಬ ಗಜವು ಹುಟ್ಟಿತು. ಆಗ್ನೇಯದಿಕ್ಕಿನಲ್ಲಿ ಪುಂಡರೀಕವೆಂಬ ಗಜವೂ, ಅವನಿಂದಲೇ ಜನಿಸಿತು.

ವಾಮನಃ ಕುಮುದಶ್ಚೈವ ಪುಷ್ಪದಂತಃ ಕ್ರಮಾದ್ಗಜಾಃ ।
ಸಾರ್ವಭೌಮಃ ಸುಪ್ರತೀಕೋ ನಭೋದಿಕ್ಷು ತು ತತ್ಸುತಾಃ ॥ ೫೨ ॥

ಅಭ್ರಮುಃ ಕಪಿಲಾ ಚೈವ ಪಿಂಗಲಾಖ್ಯಾ ಇಮಾಃ ಕ್ರಮಾತ್ ।
ತಾಮ್ರಕರ್ಣೀ ಶುಭ್ರದಂತೀ ಚಾಂಗನಾ ಚಾಂಜನಾವತೀ ॥ ೫೩ ॥

ಭೂಮಿದಿಕ್ಷು ಕರಿಣ್ಯಶ್ಚ ಜಾತಾಸ್ತಸ್ಯಾಸ್ತು ತತ್ಪ್ರಿಯಾಃ ।
ಭಗಿನೀ ಚ ತಥಾ ಮಾತಾ ಸುತಾ ಚೈವ ಸ್ನುಷಾ ತಥಾ ॥ ೫೪ ॥

ಪಶುಯೋನ್ಯುದ್ಭವಾನಾಂ ಚ ನೃಣಾಂ ತಾ ಯೋಷಿತಸ್ಸದಾ ।
ದೇವಯೋನ್ಯುದ್ಭವಾನಾಂ ಚ ನೃಣಾಂ ಪತ್ನೀ ಸ್ಮೃತಾ ಸ್ವಸಾ ॥ ೫೫ ॥

---

೫೨. ಇದೇ ಪ್ರಕಾರ ಇತರದಿಕ್ಕುಗಳಲ್ಲಿ ವಾಮನ, ಕುಮುದ, ಅಂಜನ, ಪುಷ್ಪದಂತ, ಸಾರ್ವಭೌಮ, ಸುಪ್ರತೀಕ ಎಂಬ ಗಜಗಳೂ ಸಹ ಹುಟ್ಟಿದುವು.

೫೩. ಧ್ರುವನ ಊರ್ಧ್ವ (ಅಂತರಿಕ್ಷ) ದಿಕ್ಕಿನಿಂದ ಅಭ್ರಮು, ಕಪಿಲಾ, ಪಿಂಗಲಾ, ಅನುಪಮಾ ಎಂಬ ನಾಲ್ಕು ಹೆಣ್ಣಾನೆಗಳೂ ಅಧೋಭಾಗದ (ಭೂಮಿಯ ಕಡೆಯ) ದಿಕ್ಕಿನಿಂದ ತಾಮ್ರಪರ್ಣೀ, ಶುಭ್ರದಂತೀ, ಅಂಗನಾ, ಅಂಜನಾವತೀ ಎಂಬ ನಾಲ್ಕು ಹೆಣ್ಣಾನೆಗಳೂ ಕ್ರಮವಾಗಿ ಜನಿಸಿದವು.

೫೪. ಈ ಹೆಣ್ಣಾನೆಗಳು ತಮ್ಮ ಸಹೋದರರಾದ ಐರಾವತಾದಿ ಗಜಗಳಿಗೆ ಪ್ರಿಯವಾದುವು. ಎಂದರೆ ಐರಾವತಾದಿ ಗಜಗಳಿಗೆ ಅಭ್ರಮು ಮೊದಲಾದ ಹೆಣ್ಣಾನೆಗಳು ಪ್ರೀತಿಪಾತ್ರಗಳಾದವು.

೫೫ ಪಶುಜಾತಿಯಲ್ಲಿ ಹುಟ್ಟಿದ ಗಂಡುಪ್ರಾಣಿಗಳಿಗೆ ಸಹೋದರಿ, ತಾಯಿ, ಮಗಳು ಮತ್ತು ಸೊಸೆ ಇವೆಲ್ಲವೂ ಪತ್ನಿಆಗಬಹುದು. ಪಶುಜಾತಿಯಲ್ಲಿ ತಾಯಿ, ತಂಗಿ ಎಂಬ ಭೇದವಿಲ್ಲದೆ ವಿಹರಿಸುವುವು. ದೇವಯೋನ್ಯುದ್ಭವರಾದ ಪುರುಷರಿಗೆ ತಂಗಿಯೇ ಪತ್ನಿಯಾಗುವಳು.

ಮನುವಂಶೋದ್ಭವಾನಾಂ ಚ ನೃಣಾಂ ಚಾನ್ಯೋದ್ಭವಾಃ ಸ್ತ್ರಿಯಃ ।
ಇತಿ ಧರ್ಮೋ ವಿಧಾತ್ರೋಕ್ತೋ ಮಯಾ ಪ್ರೋಕ್ತಸ್ಸುರಾ ಹಿ ವಃ ॥೫೬॥

ದ್ವಿಧಾ ಧ್ರುವಸ್ಯ ವಿಜ್ಞೇಯೋ ಭೂಮೇರೂರ್ಧ್ವಮಧಸ್ತಥಾ ।
ಸದ್ಗುಣಸ್ಸ ದಿವಾರೂಪೋ ರಾತ್ರಿರೂಪಸ್ತಮೋಗುಣಃ ॥ ೫೭ ॥

ಅಧೋಧ್ರುವೇ ಸದಾ ರಾತ್ರಿರ್ನಾರಕಾಸ್ತತ್ರ ವೈ ಸ್ಥಿತಾಃ ।
ಊರ್ಧ್ವಧ್ರುವೇ ದಿವಾ ನಿತ್ಯಂ ತಯೋರ್ಮಧ್ಯೇ ನಿಶಾ ದಿವಾ ॥ ೫೮ ॥

ಮಹೋ ಜನಸ್ತಪಸ್ಸತ್ಯಂ ತೇಷು ನಿತ್ಯಂ ದಿನಂ ಸ್ಮೃತಂ ।
ರೌರವಶ್ಚಾಂಧಕೂಪಶ್ಚ ತಾಮಿಸ್ರಂ ಚ ತಮೋಮಯಂ ॥ ೫೯ ॥

---

೫೬. ಮನುವಿನ ವಂಶದಲ್ಲಿ ಜನಿಸಿದ ಮನುಷ್ಯರಿಗೆಮಾತ್ರ ಅನ್ಯಕುಲದಲ್ಲಿ (ಎಂದರೆ ತನ್ನ ಮನುಷ್ಯವರ್ಗದಲ್ಲೇ ತನ್ನ ಗೋತ್ರವನ್ನು ಬಿಟ್ಟು ಬೇರೆಗೋತ್ರವಾಗಿ ಸಜಾತಿಯಲ್ಲಿ) ಹುಟ್ಟಿದ ಸ್ತ್ರೀಯರು ಪತ್ನಿಯರಾಗುವರು ಎಂದು ಬ್ರಹ್ಮನು ಧರ್ಮ ನಿಯಮವನ್ನು ನಿರ್ಣಯಿಸಿರುವನು. ಎಲೈ ದೇವತೆಗಳಿರಾ! ಅದನ್ನು ಈಗ ನಿಮಗೆ ನಾನು ತಿಳಿಸಿದೆನು.

೫೭. ಎಲೈ ದೇವತೆಗಳಿರಾ! ಹಿಂದೆ ಹೇಳಿದ ಮಹಾಮಹಿಮನಾದ ಆ ಧ್ರುವನ ಸ್ಥಾನವು ಎರಡು ವಿಧವಾಗಿದೆ ಎಂದರೆ ಭೂಮಿಯ ಮೇಲ್ಭಾಗ (ಭೂಮಿಗಿಂತಲೂಮೇಲೆ) ಮತ್ತು ಕೆಳಭಾಗ ಎರಡು ಕಡೆಯಲ್ಲಿಯೂ ಇರುವದು. ಮೇಲಿರುವ ಧ್ರುವನು ದಿವಾರೂಪನೆನಿಸಿ (ಸ್ವರ್ಗ ಅಥವಾ ಅಂತರಿಕ್ಷರೂಪವೆನಿಸಿ) ಸದ್ಗುಣಗಳಿಂದ ಕೂಡಿರುವನು. ಕೆಳಗಿರುವ ಧ್ರುವನು ರಾತ್ರಿಸ್ವರೂಪನೆನಿಸಿ ಅಂಧಕಾರಸ್ವರೂಪನಾಗಿರುವನು.

೫೮. ಕೆಳಗಿನ ಧ್ರುವದಲ್ಲಿ ಯಾವಾಗಲೂ ಕತ್ತಲೆಯಾಗಿರುವುದು. ಅಲ್ಲಿಯೇ ನರಕಗಳಿರುವುವು. ಮೇಲಿನ ಧ್ರುವದಲ್ಲಿ ಯಾವಾಗಲೂ ಕತ್ತಲೆಯಿಲ್ಲದೆ ಬೆಳಕೇ ಇರುವುದು. ಇವೆರಡರ ಎಂದರೆ ಊರ್ಧ್ವ ಮತ್ತು ಅಧೋಧ್ರುವಗಳ ಮಧ್ಯದಲ್ಲಿ ಹಗಲು ರಾತ್ರಿ ಇವೆರಡೂ ಇರುವುವು.

೫೯. ಮಹರ್ಲೋಕ, ಜನೋಲೋಕ, ತಪೋಲೋಕ, ಸತ್ಯಲೋಕ ಇವುಗಳು ಊರ್ಧ್ವಧ್ರುವದಲ್ಲಿರುವ ಲೋಕಗಳು. ಇವುಗಳಲ್ಲಿ ಸದಾ ಬೆಳಕೇ ಇರುವುದು. ರೌರವ, ಅಂಧಕೂಪ, ತಮೋಮಯ, ತಾಮಿಸ್ರ ಇವುಗಳು ನರಕಗಳು.

ತೇಷು ನಿತ್ಯಂ ಸ್ಮೃತಾ ರಾತ್ರಿಃ ಕಲ್ಪಮಾನಂ ಚ ಕೋವಿದೈಃ ।
ಸ ತು ಪೂರ್ವಭವೇ ಚಾಸೀದ್ಬ್ರಾಹ್ಮಣೋ ಮಾಧವಪ್ರಿಯಃ ॥
ಷಷ್ಟ್ಯಬ್ದಂ ಸರ್ವತೀರ್ಥೇಷು ಪ್ರಾತಃಸ್ನಾನಂ ಚಕಾರ ಹ ॥ ೬೦ ॥

ತೀರ್ಥಪುಣ್ಯಾತ್ಸ ವೈ ವಿಪ್ರೋ ಮಾಧವೋ ಮಾಧವಪ್ರಿಯಃ ।
ಸುನೀತ್ಯಾಂ ಗರ್ಭಮಾಸಾದ್ಯ ಧ್ರುವೋ ಭೂತ್ವಾ ರರಾಜ ಹ ॥ ೬೧ ॥

ಷಟ್ತ್ರಿಂಶಚ್ಚ ಸಹಸ್ರಾಬ್ದಂ ರಾಜ್ಯಂ ಕೃತ್ವಾ ಧ್ರುವೋಽಭವತ್ ॥
॥ ಸೂತ ಉವಾಚ ॥
ಇತಿ ಶ್ರುತ್ವಾ ಗುರೋರ್ವಾಕ್ಯಂ ಸ ಧ್ರುವಃ ಪಂಚಮೋ ವಸುಃ ।
ಗುರ್ಜರೇ ದೇಶ ಆಗಮ್ಯ ವೈಶ್ಯಜಾತ್ಯಾಂ ಸಮುದ್ಭವಃ ॥ ೬೨ ॥

ನರಶ್ರೀರ್ನಾಮ ವಿಖ್ಯಾತೋ ಗುಣಮೈಶ್ಯಸ್ಯ ವೈ ಸುತಃ ॥
ಕುಸೀದಗುಣಗುಪ್ತಶ್ಚ ನರಶ್ರೀಃ ಪುತ್ರವತ್ಸಲಃ ।
ತ್ಯಕ್ತ್ವಾ ಪ್ರಾಣಾನ್ಯಯೌ ಸ್ವರ್ಗಂ ಸ ವೈಶ್ಯತನಯೋ ಧ್ರುವಃ ॥ ೬೩ ॥

---

೬೦. ಇವುಗಳಲ್ಲಿ ಯಾವಾಗಲೂ ರಾತ್ರಿಯೇ ಆಗಿರುವುದು. ಪ್ರಳಯಕಾಲ ಪರ್ಯಂತ ಈರೀತಿಯೇ ಇರುವುದೆಂದು ವಿದ್ವಾಂಸರು ಹೇಳುವರು. ಈ ಧ್ರುವನು ತನ್ನ ಹಿಂದಿನ ಜನ್ಮದಲ್ಲಿ ವಿಷ್ಣುಭಕ್ತನಾದ ಬ್ರಾಹ್ಮಣನಾಗಿದ್ದನು. ಅರವತ್ತು ವರ್ಷಗಳು ಎಡೆಬಿಡದೆ ಸಕಲ ತೀರ್ಥಗಳಲ್ಲಿಯೂ ಪ್ರಾತಸ್ಸ್ನಾನಮಾಡಿದನು.

೬೧ ಈರೀತಿ ತೀರ್ಥಸ್ನಾನಮಾಡುವುದರಿಂದ ಉಂಟಾದ ಪುಣ್ಯದಿಂದ ನಾರಾಯಣಪ್ರಿಯನಾದ ಮಾಧವನೆಂಬ ಈ ಬ್ರಾಹ್ಮಣನು ಉತ್ತಾನಪಾದರಾಯನ ಪತ್ನಿಯಾದ ಸುನೀತಿದೇವಿಯ ಗರ್ಭದಲ್ಲಿ ಧ್ರುವನೆಂಬ ಹೆಸರಿನಿಂದ ಅವತರಿಸಿ ಪ್ರಕಾಶಿಸಿದನು. ಮತ್ತು ಮೂವತ್ತಾರುಸಾವಿರವರ್ಷಗಳವರೆಗೆ ರಾಜ್ಯವಾಳಿ ಕೊನೆಗೆ ನಕ್ಷತ್ರಸ್ವರೂಪವನ್ನು ಹೊಂದಿ ಧ್ರುವಪದವಿಯನ್ನು ಪಡೆದನು.

೬೨. ಸೂತಮುನಿವರ್ಯನು ಹೇಳುತ್ತಾನೆ—ಈರೀತಿ ಹೇಳಿದ ಬೃಹಸ್ಪತ್ಯಾಚಾರ್ಯರ ಮಾತನ್ನು ಕೇಳಿ ಐದನೆಯ ವಸುವಾದ ಆ ಧ್ರುವನು ಗುರ್ಜರದೇಶಕ್ಕೆ ಬಂದು ಅಲ್ಲಿ ವೈಶ್ಯಜಾತಿಯಲ್ಲಿ ಜನಿಸಲು ಸಂಕಲ್ಪಿಸಿದನು.

೬೩. ಅಲ್ಲಿ ಗುಣಗುಪ್ತನೆಂಬ ವೈಶ್ಯನ ಮಗನಾಗಿ ನರಶ್ರೀ ಎಂಬ ಹೆಸರಿನಿಂದ ಪ್ರಸಿದ್ಧಿಹೊಂದಿದನು. ವ್ಯಾಪಾರಿಯೂ ಪುತ್ರವತ್ಸಲನೂ ಆದ ಆ ಗುಣಗುಪ್ತನು ಸ್ವಲ್ಪದಿನದಲ್ಲಿಯೇ ಮೃತನಾಗಿ ಸ್ವರ್ಗವನ್ನು ಸೇರಿದನು.

ಪ್ರತ್ಯಹಂ ಸ ಹರೇಃ ಕ್ರೀಡಾಂ ವೃಂದಾವನಮಹೋತ್ತಮೇ ।
ಶಿವಪ್ರಸಾದಾತ್ಪ್ರತ್ಯಕ್ಷಾಂ ದೃಷ್ಟ್ವಾ ಹರ್ಷಮವಾಪ್ತವಾನ್ ॥ ೬೪ ॥

ಯಸ್ಯ ಪುತ್ರವಿವಾಹೇ ಚ ಭಗವಾನ್ಭಕ್ತವತ್ಸಲಃ ।
ಯಾದವೈಸ್ಸಹ ಸಂಪ್ರಾಪ್ತಸ್ತಸ್ಯ ವಾಂಛಿತದಾಯಕಃ ॥ ೬೫ ॥

ಪುರೀಂ ಕಾಶೀಂ ಸಮಾಗಮ್ಯ ನರಶ್ರೀರ್ಭಕ್ತರಾಟ್ ಸ್ವಯಂ ।
ರಾಮಾನಂದಸ್ಯ ಶಿಷ್ಯೋಽಭೂದ್ವಿಷ್ಣುಧರ್ಮವಿಶಾರದಃ ॥ ೬೬ ॥

॥ ಬೃಹಸ್ಪತಿರುವಾಚ ॥

ಕದಾಚಿದ್ಭಗವಾನತ್ರಿರ್ಗಂಗಾಕೂಲೇಽನಸೂಯಯಾ ।
ಸಾರ್ಧಂ ತಪೋ ಮಹತ್ಕುರ್ವನ್ ಬ್ರಹ್ಮಧ್ಯಾನಪರೋಽಭವತ್ ॥ ೬೭ ॥

---

೬೪. ಅನಂತರ ವೈಶ್ಯಪುತ್ರನಾದ ನರಶ್ರೀಯು ಪರಮೇಶ್ವರನ ಅನುಗ್ರಹದಿಂದ ಮಹಾಶ್ರೇಷ್ಠವಾದ ಬೃಂದಾವನದಲ್ಲಿ ನಿತ್ಯವೂ ಶ್ರೀಕೃಷ್ಣನ ವಿಹಾರವನ್ನು ಪ್ರತ್ಯಕ್ಷವಾಗಿ ನೋಡಿ ತುಂಬ ಆನಂದದಿಂದ ಕೂಡಿದನು.

೬೫. ಈ ನರಶ್ರೀನಾಮಕನಾದ ಧ್ರುವನ ಮಗನ ಮದುವೆಯಲ್ಲಿ ಭಗವಂತನೂ ಭಕ್ತವತ್ಸಲನೂ ಆದ ಪರಮಾತ್ಮನು (ಶ್ರೀ ಕೃಷ್ಣನು) ಯಾದವರೊಡನೆ ಬಂದು ಆ ನರಶ್ರೀಗೆ ಇಷ್ಟಾರ್ಥವನ್ನು ಕರುಣಿಸಿದನು.

೬೬. ಅನಂತರ ಭಕ್ತರಾಜನಾದ ನರಶ್ರೀಯು ಕಾಶೀನಗರಕ್ಕೆ ಬಂದು ಅಲ್ಲಿ ರಾಮಾನಂದರಿಗೆ ಶಿಷ್ಯನಾಗಿ ವಿಷ್ಣುಧರ್ಮದಲ್ಲಿ ಮಹಾಪ್ರಾಜ್ಞನಾದನು.

೬೭. ಬೃಹಸ್ಪತ್ಯಾಚಾರ್ಯರು ಹೇಳುತ್ತಾರೆ—ಷಡ್ಗುಣೈಶ್ವರ್ಯಸಂಪನ್ನನಾದ ಅತ್ರಿಮಹರ್ಷಿಯು ಒಂದುದಿನ ತನ್ನ ಧರ್ಮಪತ್ನಿಯಾದ ಅನಸೂಯೆಯೊಡನೆ ಗಂಗಾನದಿಯ ದಡದಲ್ಲಿ ಮಹಾತಪಸ್ಸನ್ನು ಮಾಡುತ್ತಾ ಬ್ರಹ್ಮಧ್ಯಾನತತ್ಪರನಾಗಿದ್ದನು.

ತದಾ ಬ್ರಹ್ಮಾ ಹರಿಶ್ಶಂಭುಃ ಸ್ವಸ್ವವಾಹನಮಾಸ್ಥಿತಾಃ ।
ವರಂ ಬ್ರೂಹೀತಿ ವಚನಂ ತಮಾಹುಸ್ತೇ ಸನಾತನಾಃ ॥ ೬೮ ॥

ಇತಿ ಶ್ರುತ್ವಾ ವಚಸ್ತೇಷಾಂ ಸ್ವಯಂಭೂತನಯೋ ಮುನಿಃ ।
ನೈವ ಕಿಂಚಿದ್ವಚಃ ಪ್ರಾಹ ಸಂಸ್ಥಿತಃ ಪರಮಾತ್ಮನಿ ॥ ೬೯ ॥

ತಸ್ಯ ಭಾವಂ ಸಮಾಲೋಕ್ಯ ತ್ರಯೋ ದೇವಾಸ್ಸನಾತನಾಃ ।
ಅನಸೂಯಾಂ ತಸ್ಯ ಪತ್ನೀಂ ಸಮಾಗಮ್ಯ ವಚೋಽಬ್ರುವನ್ ॥ ೭೦ ॥

ಲಿಂಗಹಸ್ತಃ ಸ್ವಯಂ ರುದ್ರೋ ವಿಷ್ಣುಸ್ತದ್ರಸವರ್ಧನಃ ।
ಬ್ರಹ್ಮಾ ಕಾಮುಬ್ರಹ್ಮಜಾಪಃ ಸ್ಥಿತಸ್ತಸ್ಯಾ ವಶಂ ಗತಃ ॥ ೭೧ ॥

---

೬೮. ಆಗ ಬ್ರಹ್ಮ, ವಿಷ್ಣು, ಮಹೇಶ್ವರ ಈ ಮೂರುಮಂದಿಯೂ ತಮ್ಮ ತಮ್ಮ ವಾಹನಗಳನ್ನೇರಿ ಆ ಅತ್ರಿಮಹರ್ಷಿಯ ಸಮೀಪಕ್ಕೆ ಬಂದರು. ಪುರಾಣ ಪುರುಷರಾದ ಆ ತ್ರಿಮೂರ್ತಿಗಳು " ನಿನಗೆ ಬೇಕಾದ ವರವನ್ನು ಕೇಳು " ಎಂದು ಅತ್ರಿಮಹರ್ಷಿಗೆ ಹೇಳಿದರು.

೬೯. ಹೀಗೆ ತ್ರಿಮೂರ್ತಿಗಳು ಹೇಳಿದ ಮಾತನ್ನು ತಾನು ಕೇಳಿದರೂ ಪರಮಾತ್ಮನಲ್ಲಿ ಏಕಾಗ್ರಚಿತ್ತದಿಂದಕೂಡಿ ಧ್ಯಾನಮಾಡುತ್ತಿದ್ದ ಬ್ರಹ್ಮಪುತ್ರನಾದ ಅತ್ರಿ ಮುನಿಯು ಏನೊಂದೂ ಉತ್ತರವನ್ನು ಹೇಳಲಿಲ್ಲ.

೭೦. ಆಗ ಆ ಮುನಿಯ ಅಭಿಪ್ರಾಯವನ್ನು ತಿಳಿದು ಪುರಾಣಪುರುಷರಾದ ಆ ತ್ರಿಮೂರ್ತಿಗಳೂ ಆ ಅತ್ರಿಮುನಿಯ ಪತ್ನಿಯಾದ ಅನಸೂಯೆಯ ಸಮೀಪಕ್ಕೆ ಬಂದು ನಿಂತರು.

೭೧. ಆಗ ರುದ್ರನು ತನ್ನ ಶಿಶ್ನ (ಲಿಂಗ) ವನ್ನು ಕೈಯಲ್ಲಿ ಹಿಡಿದುಕೊಂಡಿದ್ದನು. ವಿಷ್ಣುವು ಆ ಲಿಂಗದ-ರಸವನ್ನು (ವೀರ್ಯವನ್ನು) ಅಭಿವೃದ್ಧಿಮಾಡುತ್ತಿದ್ದನು. ಬ್ರಹ್ಮನು ಕಾಮವೆಂಬ ಬ್ರಹ್ಮನನ್ನು ಪ್ರೋತ್ಸಾಹಿಸುತ್ತಿದ್ದನು. ಆ ಅನಸೂಯೆಯ ರೂಪಕ್ಕೆ ಬೆರಗಾಗಿ ಹೀಗೆ ತ್ರಿಮೂರ್ತಿಗಳೂ ಮೋಹಗೊಂಡರು.

ರತಿಂ ದೇಹಿ ಮದಾಘೂರ್ಣೇ ನೋ ಚೇತ್ಪ್ರಾಣಾಂಸ್ತ್ಯಜಾಮ್ಯಹಂ ॥
ಪತಿವ್ರತಾಽನಸೂಯಾ ಚ ಶ್ರುತ್ವಾ ತೇಷಾಂ ವಚೋಽಶುಭಂ ।
ನೈವ ಕಿಂಚಿದ್ವಚಃ ಪ್ರಾಹ ಕೋಪಭೀತಾ ಸುರಾನ್ಪ್ರತಿ ॥ ೭೨ ॥

ಮೋಹಿತಾಸ್ತತ್ರ ತೇ ದೇವಾ ಗೃಹೀತ್ವಾ ತಾಂ ಬಲಾತ್ತದಾ ।
ಮೈಥುನಾಯ ಸಮುದ್ಯೋಗಂ ಚಕ್ರುರ್ಮಾಯಾವಿಮೋಹಿತಾಃ ॥ ೭೩ ॥

ತದಾ ಕ್ರುದ್ಧಾ ಸತೀ ಸಾ ವೈ ತಾಞ್ಛಶಾಪ ಮುನಿಪ್ರಿಯಾ ।
ಮಮ ಪುತ್ರಾ ಭವಿಷ್ಯಂತಿ ಯೂಯಂ ಕಾಮವಿಮೋಹಿತಾಃ ॥ ೭೪ ॥

ಮಹಾದೇವಸ್ಯ ವೈ ಲಿಂಗ ಬ್ರಹ್ಮಣೋಽಸ್ಯ ಮಹಾಶಿರಃ ।
ಚರಣೌ ವಾಸುದೇವಸ್ಯ ಪೂಜನೀಯಾ ಸರ್ವೈಸ್ಸದಾ ॥
ಭವಿಷ್ಯಂತಿ ಸುರಶ್ರೇಷ್ಠಾ ಉಪಹಾಸೋಽಯಮುತ್ತಮಃ ॥ ೭೫ ॥

---

೭೨. ಅನಂತರ ಅವರೆಲ್ಲರೂ "ಮದದಿಂದ ಚಂಚಲವಾದ ನೇತ್ರವುಳ್ಳ ಎಲೌ! ಅನಸೂಯೆಯೇ! ನಮಗೆ ರತಿಸೌಖ್ಯವನ್ನು ಕರುಣಿಸಿ ಕಾಪಾಡು; ಇಲ್ಲದಿದ್ದರೆ ನಾವು ಇಲ್ಲೇ ಪ್ರಾಣವನ್ನು ಬಿಡುವೆವು" ಎಂದು ಹೇಳಲು ಪತಿವ್ರತೆಯಾದ ಅನಸೂಯೆಯು ಆ ತ್ರಿಮೂರ್ತಿಗಳಾಡಿದ ಅಸಹ್ಯವಾದ ಈ ಮಾತನ್ನು ಕೇಳಿ ಏನನ್ನೂ ಉತ್ತರಹೇಳದೆ ಕೋಪದಿಂದ ಭಯಗೊಂಡವಳಾಗಿ ಸುಮ್ಮನೆ ಇದ್ದಳು

೭೩. ಆಗ ಮಾಯೆಯಿಂದ ಮೋಹಿತರಾದ ಆ ತ್ರಿಮೂರ್ತಿಗಳು ಬಲಾತ್ಕಾರದಿಂದ ಅವಳನ್ನು ಹಿಡಿದುಕೊಂಡು ಸಂಭೋಗಮಾಡಲುಪಕ್ರಮಿಸಿದರು.

೭೪. ಆಗ ಅತ್ರಿಮುನಿಗೆ ಅತ್ಯಂತ ಪ್ರಿಯಳೂ ಮಹಾಪತಿವ್ರತೆಯೂ ಆದ ಅನಸೂಯೆಯು, ಕೋಪಹೊಂದಿ ಆ ತ್ರಿಮೂರ್ತಿಗಳನ್ನು ಕುರಿತು "ಕಾಮದಿಂದ ಮೋಹಗೊಂಡಿರುವ ನೀವೆಲ್ಲರೂ ನನ್ನ ಪುತ್ರರಾಗಿ ಹುಟ್ಟಿರಿ" ಎಂಬದಾಗಿ ಶಾಪ ಕೊಟ್ಟುದಲ್ಲದೆ,

೭೫. "ಮಹಾದೇವನ (ಈಶ್ವರನ) ಲಿಂಗವೂ, ಬ್ರಹ್ಮನತಲೆಯೂ, ವಿಷ್ಣುವಿನ ಕಾಲುಗಳೂ ಸಹ ಮನುಷ್ಯರಿಂದ ಪೂಜಾರ್ಹವಾಗಲಿ, ಎಲೈ ದೇವಶ್ರೇಷ್ಠರುಗಳಿರಾ! ನಿಮ್ಮ ಅಪರಾಧಕ್ಕೆ ಇದೇ ಅನುರೂಪವಾದ ಉಪಹಾಸವೆಂದು ಜನಗಳಿಗೆ ತಿಳಿಯಲಿ" ಎಂದು ಅನಸೂಯೆಯು ತ್ರಿಮೂರ್ತಿಗಳನ್ನು ಮತ್ತೆ ಶಪಿಸಿದಳು.

ಇತಿ ಶ್ರುತ್ವಾ ವಚೋ ಘೋರಂ ನಮಸ್ಕೃತ್ಯ ಮುನಿಪ್ರಿಯಾಂ ।
ತುಷ್ಟುವುರ್ಭಕ್ತಿನಮ್ರಾಶ್ಚ ದೇವಪಾಠೈಶ್ಚ ರುಙ್ಮಯೈಃ ॥ ೭೬ ॥

ಅನಸೂಯಾ ತದಾ ಪ್ರಾಹ ಭವಂತೋ ಮಮ ಪುತ್ರಕಾಃ ।
ಭೂತ್ವಾ ಶಾಪಂ ಮದೀಯಂ ಚ ತ್ಯಕ್ತ್ವಾ ತೃಪ್ತಿಮವಾಪ್ಸ್ಯಥ ॥ ೭೭ ॥

ಇತ್ಯುಕ್ತೇ ವಚನೇ ಬ್ರಹ್ಮಾ ಚಂದ್ರಮಾಶ್ಚ ತದಾ ಹ್ಯಭೂತ್ ।
ದತ್ತಾತ್ರೇಯೋ ಹರಿಃ ಸಾಕ್ಷಾದ್ದುರ್ವಾಸಾ ಭಗವಾನ್ ಹರಃ ॥ ೭೮ ॥

ತತ್ಪಾಪಪರಿಹಾರಾರ್ಥಂ ಯೋಗವಂತೋ ಬಭೂವಿರೇ ॥
ಏತಸ್ಮಿನ್ನಂತರೇ ದೇವೀ ಪ್ರಕೃತಿಸ್ಸರ್ವಧರ್ಮಿಣೀ ।
ವಿಧಿಂ ವಿಷ್ಣುಂ ಹರಂ ಚಾನ್ಯಂ ಚಕ್ರೇ ಸಾ ಗುಣರೂಪಿಣೀ ॥ ೭೯ ॥

---

೭೬. ಅನಸೂಯೆಯು ಈರೀತಿ ಘೋರವಾದ ಶಾಪಕೊಟ್ಟುದನ್ನು ಕೇಳಿ, ಆ ತ್ರಿಮೂರ್ತಿಗಳೂ ಅತ್ರಿಮುನಿಗೆ ಪ್ರೀತಿಪಾತ್ರಳಾದ ಆ ಅನಸೂಯೆಗೆ ನಮಸ್ಕರಿಸಿ, ಭಕ್ತಿಯಿಂದ ವಿನೀತರಾಗಿ ವೇದಸಾರಸ್ವರೂಪವಾದ ದೇವತಾಸ್ತೋತ್ರಗಳಿಂದ ಸ್ತುತಿ ಮಾಡಿದರು.

೭೭. ಆಗ ಆ ಸ್ತೋತ್ರದಿಂದ ಅನಸೂಯೆಯು ತೃಪ್ತಿಗೊಂಡು "ನೀವೆಲ್ಲರೂ ನನಗೆ ಪುತ್ರರಾಗಿ ಜನಿಸಿ ನಿಮ್ಮ ಶಾಪವನ್ನು ಅನುಭವಿಸಿ ಅದನ್ನು ಪರಿಹರಿಸಿಕೊಂಡು ತೃಪ್ತಿಯನ್ನು ಹೊಂದುವಿರಿ" ಎಂದು ವಿಶಾಪವಿತ್ತಳು.

೭೮. ಅನಸೂಯೆಯು ಹೀಗೆ ಹೇಳಲು ಬ್ರಹ್ಮನು ಆಗ ಚಂದ್ರನಾದನು. ಮಹಾವಿಷ್ಣುವು ದತ್ತಾತ್ರೇಯನಾದನು. ಮತ್ತು ಪರಮೇಶ್ವರನು ದೂರ್ವಾಸ ಮುನಿಯಾದನು.

೭೯. ಅನಂತರ ಈ ಮೂರುಮಂದಿಯೂ ತಮಗೆ ಪ್ರಾಪ್ತವಾದ ಪಾಪಗಳನ್ನು ಪರಿಹರಿಸಿಕೊಳ್ಳಲು ಯೋಗಿಗಳಾದರು. ಹೀಗೆ ಬ್ರಹ್ಮ ವಿಷ್ಣು ಮಹೇಶ್ವರರು ಯೋಗವನ್ನವಲಂಬಿಸಿ ಧ್ಯಾನಾಸಕ್ತರಾಗಲು ಪ್ರಪಂಚದ ಸೃಷ್ಟಿ ಸ್ಥಿತಿ ಸಂಹಾರಕಾರ್ಯಗಳನ್ನು ಹಿಂದಿನಂತೆಯೇ ನಡೆಸುವುದಕ್ಕೋಸ್ಕರ ಸರ್ವಧರ್ಮಸ್ವರೂಪಿಣಿಯೂ ತ್ರಿಗುಣಾತ್ಮಿಕೆಯೂ ಆದ ಪ್ರಕೃತಿದೇವಿಯು ಬ್ರಹ್ಮ ವಿಷ್ಣು ಮಹೇಶ್ವರ ಎಂಬ ಬೇರೆ ಮೂರುಮಂದಿಗಳನ್ನು ನಿರ್ಮಿಸಿದಳು.

ಮನ್ವಂತರಮತೋ ಜಾತಂ ತೇಷಾಂ ಯೋಗಂ ಪ್ರಕುರ್ವತಾಂ ।
ಹೃಷಿತಾಶ್ಚ ತ್ರಯೋ ದೇವಾಸ್ಸಮಾಗಮ್ಯ ಚ ತಾನ್ ಪ್ರತಿ ॥ ೮೦ ॥

ಉವಾಚ ವಚನಂ ರಮ್ಯಂ ತೇಷಾಂ ಮಂಗಲಹೇತವೇ ।
ಚಂದ್ರಮಾಶ್ಚ ಭವೇತ್ಸೋಮೋ ವಸುಃ ಷಷ್ಠಃ ಸುರಪ್ರಿಯಃ ॥ ೮೧ ॥

ರುದ್ರಾಂಶಶ್ಚೈವ ದುರ್ವಾಸಾಃ ಪ್ರತ್ಯೂಷಃ ಸಪ್ತಮೋ ವಸುಃ ।
ದತ್ತಾತ್ರೇಯಮಯೋ ಯೋಗೀ ಪ್ರಭಾಸಶ್ಚಾಷ್ಟಮೋ ವಸುಃ ॥ ೮೨ ॥

ತೇಷಾಂ ವಾಕ್ಯಂ ಸಮಾಕರ್ಣ್ಯ ವಸವಸ್ತೇ ತ್ರಯೋಽಭವತ್ ॥

॥ ಸೂತ ಉವಾಚ ॥

ಇತಿ ಶ್ರುತ್ವಾ ಗುರೋರ್ವಾಕ್ಯಂ ವಸವೋ ಹರ್ಷಿತಾಸ್ತ್ರಯಃ ।

---

೮೦. ಶಾಪಗ್ರಸ್ತರಾಗಿ ಯೋಗವನ್ನವಲಂಬಿಸಿ ಧ್ಯಾನಾಸಕ್ತರಾಗಿ ಕುಳಿತ ತ್ರಿಮೂರ್ತಿಗಳಿಗೆ ಒಂದು ಮನ್ವಂತರವು ಕಳೆಯಿತು. ಆನಂತರ ಪ್ರಕೃತಿದೇವಿಯಿಂದ ನಿರ್ಮಿತರಾದ ಬ್ರಹ್ಮ ವಿಷ್ಣು ಮಹೇಶ್ವರರು ಆ ಮೂರುಮಂದಿ ಇದ್ದೆಡೆಗೆ ಸಂತೋಷ ದಿಂದ ಬಂದರು.

೮೧. ಆ ಮೂರುಜನಗಳಿಗೂ ಸಂತೋಷವೂ ಶುಭವೂ ಉಂಟಾಗುವಂತೆ ಅವರನ್ನು ಕುರಿತು ಹಿತವಾದ ಮಾತನ್ನಾಡಿದರು. ಅನಂತರ ಈ ತ್ರಿಮೂರ್ತಿಗಳ ಮಾತಿನ ಪ್ರಭಾವದಿಂದ ಆ ತ್ರಿಮೂರ್ತಿಗಳಲ್ಲಿ ಬ್ರಹ್ಮಾಂಶಸ್ವರೂಪನಾದ ಚಂದ್ರನು ಸೋಮನೆಂಬ ಹೆಸರಿನ ಆರನೆಯ ವಸುವಾಗಿ ದೇವತೆಗಳಿಗೆ ಪ್ರೀತಿಪಾತ್ರನೆನಿಸಿದನು.

೮೨. ರುದ್ರಾಂಶನಾದ ದೂರ್ವಾಸನು ಪ್ರತ್ಯೂಷನೆಂಬ ಹೆಸರಿನ ಏಳನೆಯ ವಸುವೆನಿಸಿದನು. ಅನಂತರ ವಿಷ್ಣ್ವಂಶನಾದ ದತ್ತಾತ್ರೇಯನು ಪ್ರಭಾಸನೆಂಬ ಹೆಸರಿನಿಂದ ಎಂಟನೆಯ ವಸುವೆನಿಸಿ ಪ್ರಸಿದ್ಧನಾದನು. ಈರೀತಿ ಈ ಮೂರು ಮಂದಿಯೂ ಆ ತ್ರಿಮೂರ್ತಿಗಳ ಮಾತಿನಂತೆ ಮೂರುಮಂದಿ ವಸುಗಳಾದರು.

೮೩. ಸೂತಮುನಿವರ್ಯನು ಹೇಳುತ್ತಾನೆ—ಈರೀತಿ ಬೃಹಸ್ಪತ್ಯಾಚಾರ್ಯರು ಹೇಳಿದ ಮಾತನ್ನು ಕೇಳಿ ಆ ಮೂರುಮಂದಿ ವಸುಗಳೂ ಸಂತೋಷಹೊಂದಿ ತಮ್ಮ

ಸ್ವಾಂಶೇನ ಭೂತಲಂ ಜಗ್ಮುಃ ಕಲಿಶುದ್ಧ್ಯಾಯ ದಾರುಣೇ ॥
ದಾಕ್ಷಿಣಾತ್ಯೇ ರಾಜಗೃಹೇ ವೈಶ್ಯಜಾತ್ಯಾಂ ಸಮುದ್ಭವಃ ॥ ೮೩ ॥

ಪೀಪಾ ನಾಮ ಸುತಃ ಸೋಮಃ ಸುದೇವಸ್ಯ ತದಾಹ್ಯಭೂತ್ ।

ಕೃತಂ ರಾಜ್ಯಪದಂ ತೇನ ಯಥಾ ಭೂಪೇನ ತತ್ಪುರೇ ॥ ೮೪ ॥
ರಾಮಾನಂದಸ್ಯ ಶಿಷ್ಯೋಽಭೂದ್ದ್ವಾರಕಾಂ ಸ ಸಮಾಗತಃ ।

ಹರೇರ್ಮುದ್ರಾಂ ಸ್ವರ್ಣಮಯೀಂ ಪ್ರಾಪ್ಯ ಕೃಷ್ಣಾತ್ಸ ವೈ ನೃಪಃ ॥
ವೈಷ್ಣವೇಭ್ಯೋ ದದೌ ತತ್ರ ಪ್ರೇತತತ್ತ್ವವಿನಾಶಿನೀಂ ॥ ೮೫ ॥

ಪ್ರತ್ಯೂಷಶ್ಚೈವ ಪಾಂಚಾಲೇ ವೈಶ್ಯಜಾತ್ಯಾಂ ಸಮುದ್ಭವಃ ।
ಮಾರ್ಗಪಾಲಸ್ಯ ತನಯೋ ನಾನಕೋ ನಾಮ ವಿಶ್ರುತಃ ॥ ೮೬ ॥

---

ತಮ್ಮ ಅಂಶದಿಂದ ಕಲಿಭಯಂಕರವಾದ ಕಲಿಯುಗದ ಕಲ್ಮಷವನ್ನು ಪರಿಹರಿಸಿ ಶುದ್ಧಗೊಳಿಸುವುದಕ್ಕೋಸ್ಕರ ಭೂಮಿಯಲ್ಲಿ ಅವತರಿಸಲು ನಿಶ್ಚಯಿಸಿದರು. ದಕ್ಷಿಣ ದೇಶದಲ್ಲಿ ವೈಶ್ಯಜಾತಿಯಲ್ಲಿ ಹುಟ್ಟಿದ ಸುದೇವನೆಂಬುವನು ಪ್ರಸಿದ್ಧನಾಗಿದ್ದನು.

೮೪ ಸೋಮನು ಅವನ ಮಗನಾಗಿ ಜನಿಸಿ ಪೀಪಾ ಎಂಬ ಹೆಸರಿನಿಂದ ಪ್ರಸಿದ್ಧನಾದನು. ಈತನು ವೈಶ್ಯನಾಗಿದ್ದರೂ ಕ್ಷತ್ರಿಯನಂತೆಯೇ ಆ ಊರಿನಲ್ಲಿ ವಿವೇಚನೆಯಿಂದ ರಾಜ್ಯಭಾರಮಾಡಿದನು.

೮೫ ಅನಂತರ ರಾಮಾನಂದರ ಶಿಷ್ಯನಾಗಿ ದ್ವಾರಕಾನಗರಕ್ಕೆ ಬಂದು ಅಲ್ಲಿ ಶ್ರೀ ಕೃಷ್ಣನ ಸಾನ್ನಿಧ್ಯದಲ್ಲಿ ಸ್ವರ್ಣಮಯವಾದ ಮುದ್ರೆಯನ್ನು ಪಡೆದನು. ಆ ಮೇಲೆ ಪ್ರೇತಪಿಶಾಚಾದಿಬಾಧೆಗಳನ್ನು ನಾಶಮಾಡುವ ಆ ಹರಿಮುದ್ರೆಯನ್ನು ವೈಷ್ಣವರಿಗೆಲ್ಲಾ ಕೊಟ್ಟನು.

೮೬. ರುದ್ರಾಂಶನಾದ ಪ್ರತ್ಯೂಷನು ಪಾಂಚಾಲದೇಶದಲ್ಲಿ ಮಾರ್ಗಪಾಲನೆಂಬ ವೈಶ್ಯನಿಗೆ ಪುತ್ರನಾಗಿಹುಟ್ಟಿ ನಾನಕನೆಂಬ ಹೆಸರಿನಿಂದ ಪ್ರಸಿದ್ಧಿಪಡೆದನು.

ರಾಮಾನಂದಂ ಸಮಾಗಮ್ಯ ಶಿಷ್ಯೋ ಭೂತ್ವಾ ಸ ನಾನಕಃ ।
ಸ ವೈ ಮ್ಲೇಚ್ಛಾನ್ವಶೀಕೃತ್ಯ ಸೂಕ್ಷ್ಮಮಾರ್ಗಮದರ್ಶಯತ್ ॥ ೮೭ ॥

ಪ್ರಭಾಸೋ ವೈ ಶಾಂತಿಪುರೇ ಬ್ರಹ್ಮಜಾತ್ಯಾಂ ಸಮುದ್ಭವಃ ।
ಶುಕ್ಲದತ್ತಸ್ಯ ತನಯೋ ನಿತ್ಯಾನಂದ ಇತಿ ಸ್ಮೃತಃ ॥
ಇತಿ ತೇ ವಸುಮಾಹಾತ್ಮ್ಯಂ ಮಯಾ ಶೌನಕ ವರ್ಣಿತಂ ॥ ೮೮ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಪ್ರತಿಸರ್ಗಪರ್ವಣಿ ಚತುರ್ಥಖಂಡೇ ಕಲಿಯುಗೀಯೇತಿಹಾಸಸಮುಚ್ಚಯೇ ವಸುಮಾಹಾತ್ಮ್ಯೇ ಕಬೀರ ನರಶ್ರೀ ಪೀಪಾ ನಾನಕ ನಿತ್ಯಾನಂದ ಸಮುತ್ಪತ್ತಿವರ್ಣನಂ ನಾಮ ಸಪ್ತದಶೋಽಧ್ಯಾಯಃ.



---

೮೭. ಅನಂತರ ಆ ನಾನಕನೂ ರಾಮಾನಂದರ ಸಮೀಪಕ್ಕೆ ಬಂದು ಅವರ ಶಿಷ್ಯನಾಗಿ ಮ್ಲೇಚ್ಛರನ್ನೆಲ್ಲಾ ತನ್ನ ವಶವರ್ತಿಗಳಾಗಿಮಾಡಿಕೊಂಡು ಅವರಿಗೆ ಸೂಕ್ಷ್ಮ ಮಾರ್ಗವನ್ನು ತೋರಿಸಿಕೊಟ್ಟನು. (ಮುಕ್ತಿಹೊಂದಲು ಸಾಧನವಾದ ಸೂಕ್ಷ್ಮ ಮಾರ್ಗವನ್ನು ಉಪದೇಶಮಾಡಿದನೆಂದು ತಿಳಿಯಬೇಕು.)

೮೮. ಅನಂತರ ವಿಷ್ಣ್ವಂಶನಾದ ಪ್ರಭಾಸನು ದತ್ತಾತ್ರೀ ಶಾಂತಿಪುರದಲ್ಲಿ ಶುಕ್ಲದತ್ತನೆಂಬ ಬ್ರಾಹ್ಮಣನಿಗೆ ಪುತ್ರನಾಗಿ ಜನಿಸಿ ನಿತ್ಯಾನಂದನೆಂಬ ಹೆಸರಿನಿಂದ ಪ್ರಸಿದ್ಧಿಪಡೆದನು. ಎಲೈ ಶೌನಕನೇ ! ಈರೀತಿ ನಿನಗೆ ವಸುಗಳಮಹಿಮೆಯನ್ನು ತಿಳಿಸಿದೆನು ಎಂದು ಸೂತರು ಹೇಳಿದರು

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಪ್ರತಿಸರ್ಗಪರ್ವದ ನಾಲ್ಕನೆಯ ಖಂಡದ ವಸು ಮಹಾತ್ಮೆಯಲ್ಲಿ ಕಬೀರ, ನರಶ್ರೀ, ಪೀಪಾ, ನಾನಕ, ನಿತ್ಯಾನಂದ, ಇವರುಗಳ ಉತ್ಪತ್ತಿವರ್ಣನೆಯೆಂಬ ಹದಿನೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಪ್ರತಿಸರ್ಗಪರ್ವಣಿ ಚತುರ್ಥಖಂಡೇ

## ಅಷ್ಟಾದಶೋಽಧ್ಯಾಯಃ

---

॥ ಸೂತ ಉವಾಚ ॥

ಇತ್ಯುಕ್ತ್ವಾ ತಾನ್ಸುಸುರಾನ್ದೇವೋ ಭಗವಾನ್ ಬೃಹತಾಂಪತಿಃ ।
ಅಶ್ವಿನೌ ಚ ಸಮಾಲೋಕ್ಯ ತಯೋರ್ಗಾಥಾಮವರ್ಣಯತ್ ॥ ೧ ॥

ವೈವಸ್ವತೇಽಂತರೇ ಪೂರ್ವಂ ವಿಶ್ವಕರ್ಮಾ ವಿಚಿತ್ರಕೃತ್ ।
ಚಿತ್ರಗುಪ್ತಶ್ರಿಯಂ ದೃಷ್ಟ್ವಾ ಚಿತ್ರಲೇಖಾವಿನಿರ್ಮಿತಾಂ ॥
ಸ್ಪರ್ಧಾಭೂತೋ ಮಹಾಮಾಯಾಂ ತುಷ್ಟಾವ ಬಹುಪೂಜನೈಃ ॥ ೨ ॥

---

### ಹದಿನೆಂಟನೆಯ ಅಧ್ಯಾಯ

೧. ಸೂತಮುನಿವರ್ಯನು ಹೇಳುತ್ತಾನೆ—ಬೃಹಸ್ಪತ್ಯಾಚಾರ್ಯರು ಈರೀತಿ ಹೇಳಿದನಂತರ ಅಶ್ವಿನೀದೇವತೆಗಳು ಅವರ ಕಣ್ಣಿಗೆಬೀಳಲು ಅವರ ಗಾಥೆಯನ್ನು ಮುಂದೆ ಹೇಳುವಂತೆ ದೇವತೆಗಳಿಗೆ ತಿಳಿಸಿದನು.

೨. ಹಿಂದೆ ವೈವಸ್ವತಮನ್ವಂತರದಲ್ಲಿ ದೇವಶಿಲ್ಪಿಯಾದ ವಿಶ್ವಕರ್ಮನು ಚಿತ್ರಲೇಖಾ ನಿರ್ಮಿತವಾಗಿರುವ ಚಿತ್ರಗುಪ್ತನ ಕಲಾಸಂಪತ್ತನ್ನು ನೋಡಿ ಅವನ ಮೇಲಿನ ಹುರುಡಿನಿಂದ ಮಹಾಮಾಯೆಯನ್ನು ಅನೇಕಪ್ರಕಾರ ಪೂಜೆಮಾಡಿ ಸ್ತೋತ್ರಮಾಡಿದನು.

ಪ್ರಸನ್ನಾ ಸಾ ತದಾ ದೇವೀ ಚಿತ್ರಾಯಾಂ ತಸ್ಯ ಯೋಷಿತಿ ।
ಸ್ವಾಂಶಾಜ್ಜಾತಾ ಸ್ಮೃತಾ ಸಂಜ್ಞಾ ಸರ್ವಜ್ಞಾನಕರೀ ಸ್ವಯಂ ॥ ೩ ॥

ಷೋಡಶಾಬ್ದೇ ವಯಃಪ್ರಾಪ್ತೇ ಸಂಜ್ಞಾಯಾಸ್ತತ್ಪಿತಾ ಸುಖೀ ।
ವಿವಾಹಾರ್ಥೀ ಸುರಾನ್ಸರ್ವಾನಾಹ್ವಯನ್ಮೇರುಮೂರ್ಧನಿ ॥ ೪ ॥

ಯಕ್ಷಾಧೀಶಾಶ್ಚ ಷಡ್ವಿಂಶತ್ಕುಬೇರಾದ್ಯಾಸ್ಸಮಾಗತಾಃ ।
ಯಾದಸಾಂ ಪತಯಃ ಪ್ರಾಪ್ತಾ ದಶ ತತ್ರೈವ ಕಾಮುಕಾಃ ॥ ೫ ॥

ಪಾವಕಾ ಊನಪಂಚಾಶದ್ವಾಯವಶ್ಚ ತಥಾ ಸ್ಮೃತಾಃ ।
ಧ್ರುವೌ ದ್ವೌ ಚ ಸ್ವಯಂ ಪ್ರಾಪ್ತೌ ಸೋಮಾಸ್ತತ್ರೈವ ಷೋಡಶ ॥ ೬ ॥

ತ್ರಯೋದಶ ಚ ಪ್ರತ್ಯೂಷಾಃ ಪ್ರಾಪ್ತಾ ವಿಶ್ವಪ್ರರಕ್ಷಕಾಃ ।
ಷಷ್ಟ್ಯುತ್ತರಂ ಚ ತ್ರಿಶತಂ ಪ್ರಭಾಸಾ ದಿನರಕ್ಷಕಾಃ ॥ ೭ ॥

---

೩. ಆಗ ಆ ಮಾಯೆಯು ಇವನ ಸ್ತೋತ್ರದಿಂದ ಪ್ರಸನ್ನಳಾಗಿ ವಿಶ್ವಕರ್ಮನ ಪತ್ನಿಯಾದ ಚಿತ್ರಾ ಎಂಬುವಳಲ್ಲಿ ತನ್ನ ಅಂಶದಿಂದ ಅವತರಿಸಿ, ಸಂಜ್ಞಾ ಎಂಬ ಹೆಸರಿನಿಂದ ಪ್ರಸಿದ್ಧಳಾಗಿ ತಾನೇ ಸಕಲ ಜ್ಞಾನವನ್ನೂ ಕರುಣಿಸುವವಳಾಗಿದ್ದಳು.

೪. ಆ ಸಂಜ್ಞಾದೇವಿಗೆ ಹದಿನಾರುವರ್ಷ ವಯಸ್ಸಾಯಿತು. ಆಗ ವಿಶ್ವಕರ್ಮನು ಮಗಳಿಗೆ ಮದುವೆಮಾಡುವುದಕ್ಕೋಸ್ಕರ ಸರಿಯಾದ ವರನನ್ನು ಗೊತ್ತುಮಾಡುವುದಕ್ಕಾಗಿ ಮೇರುಪರ್ವತದ ಮೇಲುಭಾಗದಲ್ಲಿ ಇರುವ ದೇವತೆಗಳನ್ನೆಲ್ಲಾ ಕರೆಯಿಸಿದನು.

೫-೬. ಆ ಸಂದರ್ಭದಲ್ಲಿ ಕುಬೇರನೇ ಮೊದಲಾದ ಇಪ್ಪತ್ತಾರುಜನ ಯಕ್ಷಾಧಿಪತಿಗಳೂ, ಹತ್ತುಮಂದಿ ವರುಣರೂ, ಕನ್ಯಾಭಿಲಾಷೆಯುಳ್ಳವರಾಗಿ ಅಲ್ಲಿಗೆ ಬಂದರು. ಅಲ್ಲದೆ ನಲವತ್ತೊಂಬತ್ತುಜನ ಪಾವಕರೂ, (ಅಗ್ನಿ ಪುರುಷರೂ), ಹಾಗೆಯೇ ನಲವತ್ತೊಂಬತ್ತುಮಂದಿ, ವಾಯುಗಳೂ, ಇಬ್ಬರು ಧ್ರುವರೂ, ಹದಿನಾರುಜನ ಚಂದ್ರರೂ, ಸಹ ಬಂದರು.

೭. ಮತ್ತು ಜಗದ್ರಕ್ಷಕರಾದ ಹದಿಮೂರುಮಂದಿ ಪ್ರತ್ಯೂಷರೂ, ದಿನರಕ್ಷಕರಾದ ಮುನ್ನೂರರವತ್ತುಮಂದಿ ಪ್ರಭಾಸರೂ ಬಂದರು.

ಭವಾದ್ಯಾಶ್ಚ ತದಾ ರುದ್ರಾಃ ಶಶಿಮಂಡಲರಕ್ಷಕಾಃ ।
ಆದಿತ್ಯಾಶ್ಚ ಸ್ಥಿತಾಸ್ಸರ್ವೇ ಸಂಜ್ಞಾಯಾಶ್ಚ ಸ್ವಯಂವರೇ ॥ ೮ ॥

ದಾನವಾ ವಿಪ್ರಚಿತ್ತ್ಯಾದ್ಯಾಶ್ಚತುರಾಶೀತಿರಾಯಯುಃ ।
ಪ್ರಹ್ಲಾದಾದ್ಯಾಸ್ತದಾ ದೈತ್ಯಾ ವಾಸುಕ್ಯಾದ್ಯಾಶ್ಚ ಪನ್ನಗಾಃ ॥ ೯ ॥

ಶೇಷಾದ್ಯಾಶ್ಚ ತದಾ ನಾಗಾಸ್ತಾರ್ಕ್ಷ್ಯಾದ್ಯಾ ಗರುಡಾಃ ಸ್ಮೃತಾಃ ।
ಸರ್ವೇ ಸ್ವಯಂವರೇ ಪ್ರಾಪ್ತಾ ಮಹಾನ್ಕೋಲಾಹಲೋ ಹ್ಯಭೂತ್ ॥ ೧೦ ॥

ಏತಸ್ಮಿನ್ನಂತರೇ ದೇವೀ ದೇವಕನ್ಯಾಸಮನ್ವಿತಾ ।
ಸಂಜ್ಞಾ ದೇವಾನ್ಪ್ರತಿ ತದಾ ಪ್ರತ್ಯಕ್ಷಮಭವದ್ದಿವಿ ॥ ೧೧ ॥

ತಾಂ ಸಮಾಲೋಕ್ಯ ಬಲವಾನ್ಬಲಿಃ ಕಾಮವಿಮೋಹಿತಃ ।
ಕರೇ ಗೃಹೀತ್ವಾ ಪ್ರಯಯೌ ಪಶ್ಯತಾಂ ಸರ್ವಧನ್ವಿನಾಂ ॥ ೧೨ ॥

---

೮. ಚಂದ್ರಮಂಡಲವನ್ನು ರಕ್ಷಣೆಮಾಡುವ ಭವನೇ ಮೊದಲಾದ ಹನ್ನೊಂದು ಜನ ರುದ್ರರೂ, ಹನ್ನೆರಡುಜನ ಸೂರ್ಯರೂ, ಸಂಜ್ಞಾದೇವಿಯನ್ನು ಮದುವೆಮಾಡಿ ಕೊಳ್ಳುವುದಕ್ಕಾಗಿ ಸ್ವಯಂವರಮಹೋತ್ಸವಕ್ಕೆ ಬಂದಿದ್ದರು.

೯. ಇಷ್ಟೇ ಅಲ್ಲದೆ ವಿಪ್ರಚಿತ್ತಿಯೇ ಮೊದಲಾದ ಎಂಬತ್ತುನಾಲ್ಕುಮಂದಿ ದಾನವರೂ, ಪ್ರಹ್ಲಾದನೇ ಮೊದಲಾದ ದೈತ್ಯರೂ, ವಾಸುಕಿಯೇ ಮೊದಲಾದ ಪನ್ನಗರೂ (ಬಂದರು.)

೧೦. ಮತ್ತು ಆದಿಶೇಷನೇ ಮೊದಲಾದ ನಾಗರೂ, ತಾರ್ಕ್ಷ್ಯನೇ ಮೊದಲಾದ ಗರುಡರೂ ಸಹ ಸ್ವಯಂವರಕ್ಕೆ ಬಂದಿದ್ದರು. ಇವರೆಲ್ಲರೂ ಒಟ್ಟಿಗೆ ಸೇರಿದ್ದುದರಿಂದ ತುಂಬ ಕೋಲಾಹಲವುಂಟಾಯಿತು.

೧೧. ಹೀಗೆ ಸಕಲ ದೇವದಾನವ ಯಕ್ಷ ರಾಕ್ಷಸ ಪನ್ನಗರೇ ಮೊದಲಾದ ವರೆಲ್ಲರೂ ನೆರೆದಿರುವ ಸಂದರ್ಭದಲ್ಲಿ ಸಂಜ್ಞಾದೇವಿಯು ದೇವಕನ್ಯೆಯಿಂದೊಡಗೂಡಿ ದೇವತೆಗಳಿಗೆಲ್ಲಾ ಗೋಚರವಾಗುವಂತೆ ಆಕಾಶದಲ್ಲಿ ಕಾಣಿಸಿದಳು.

೧೨. ಆ ಸುಂದರಾಂಗಿಯಾದ ಸಂಜ್ಞಾದೇವಿಯನ್ನು ನೋಡಿ ಬಲಶಾಲಿ ಯಾದ ಬಲಿದೈತ್ಯನು ಕಾಮಮೋಹಿತನಾಗಿ ಅವಳನ್ನು ಕೈಗಳಿಂದ ಹಿಡಿದುಕೊಂಡು ಎಲ್ಲ ಧನುರ್ಧಾರಿಗಳೂ ನೋಡುತ್ತಿರುವಂತೆಯೇ ಹೊರಟು ಹೋದನು.

ತದಾ ಕ್ರೋಧಾತುರಾ ದೇವಾ ರುರುಧುರ್ದೈತ್ಯಸತ್ತಮಂ ।
ಶಸ್ತ್ರಾಸ್ತ್ರೈಸ್ತರ್ಪಯಿತ್ವಾ ತಂ ಮಹದ್ಯುದ್ಧಮಕಾರಯನ್ ॥ ೧೩ ॥

ದಾನವಾಶ್ಚ ತದಾ ದೈತ್ಯಾ ನಾನಾವಾಹನಸಂಸ್ಥಿತಾಃ ।
ದೇವೈಃ ಸಾರ್ಧಂ ಮಹದ್ಯುದ್ಧಂ ತುಮುಲಂ ಚಕ್ರಿರೇ ಮುದಾ ॥ ೧೪ ॥

ದಾನವೈಶ್ಚ ಹತಾ ದೇವಾಃ ಸುರೈರ್ದೈತ್ಯಾ ವಿನಾಶಿತಾಃ ।
ಶವಭೂತೈರಿಲಾವರ್ತೇಽಭೂದಗಮ್ಯಾ ವಸುಂಧರಾ ॥ ೧೫ ॥

ಪಕ್ಷಮಾತ್ರಮಭೂದ್ಯುದ್ಧಂ ದಿವ್ಯಂ ದಾನವದೇವಯೋಃ ।
ಪಾಂಚಜನ್ಯಸ್ತಥಾ ಧಾತಾ ಹಯಗ್ರೀವಶ್ಚ ಮಿತ್ರಕಃ ॥ ೧೬ ॥

ಅಘಾಸುರೋಽರ್ಯಮಾ ಚೈವ ಬಲಃ ಶಕ್ರಸ್ತಥೈವ ಚ ।
ಬಕಾಸುರಶ್ಚ ವರುಣಃ ಶಕಟಃ ಪ್ರಾಂಶುರೇವ ಚ ॥ ೧೭ ॥

---

೧೩. ಆ ಅಲ್ಲಿ ನೆರೆದಿದ್ದ ದೇವತೆಗಳೆಲ್ಲರೂ ಕೋಪಾವೇಶದಿಂದ ದೈತ್ಯಶ್ರೇಷ್ಠನಾದ ಆ ಬಲಿಯ ಸುತ್ತಲೂ ಮುತ್ತಿಕೊಂಡು ಅನೇಕ ಶಸ್ತ್ರಾಸ್ತ್ರಗಳಿಂದ ಹೊಡೆಯುತ್ತಾ ಮಹಾಯುದ್ಧವನ್ನು ಮಾಡಿದರು.

೧೪. ಆಗ ಬಲಿದೈತ್ಯನ ಪಕ್ಷದವರಾದ ದಾನವರೂ ದೈತ್ಯರೂ ಸಹ ಸಂತೋಷದಿಂದ ತಮ್ಮ ತಮ್ಮ ವಾಹನಗಳನ್ನೇರಿ ದೇವತೆಗಳೊಡನೆ ಘೋರವಾದ ಸಂಕುಲ ಯುದ್ಧವನ್ನು ಮಾಡಿದರು.

೧೫. ದೇವತೆಗಳನ್ನು ರಾಕ್ಷಸರೂ, ದೈತ್ಯರನ್ನು ದೇವತೆಗಳೂ ಸಹ ಪರಸ್ಪರ ಕೊಂದುಹಾಕಲು ಇಲಾವರ್ತದ ಭೂಪ್ರದೇಶವೆಲ್ಲಾ ಹೆಣಗಳಿಂದ ತುಂಬಿ ಪ್ರವೇಶಿಸಲಸಾಧ್ಯವಾಯಿತು.

೧೬-೧೯. ಹೀಗೆ ದೇವದಾನವರಿಗೆ ದೇವಮಾನದ ಒಂದುಪಕ್ಷಕಾಲ ಯುದ್ಧ ನಡೆಯಿತು. ಅದರಲ್ಲಿ ಪಾಂಚಜನ್ಯನನ್ನು ಧಾತ ಎಂಬವನೂ ಹಯಗ್ರೀವನನ್ನು ಮಿತ್ರಕನೂ, ಅಘಾಸುರನನ್ನು ಅರ್ಯಮನೂ, ಬಲಲಾಸುರನನ್ನು ಶಕ್ರನೂ, ಬಕಾಸುರನನ್ನು ವರುಣನೂ, ಶಕಟಾಸುರನನ್ನು ಪ್ರಾಂಶುವೂ, ವತ್ಸಾಸುರನನ್ನು ಭಗನೂ, ವಿವಸ್ವಂತನನ್ನು ಬಲಿಯೂ, ಪ್ರಲಂಬನನ್ನು ಪೂಷಾ ಎಂಬವನೂ, ಗರ್ದಭಾಸುರ

ವತ್ಸಾಸುರೋ ಭಗಶ್ಚೈವ ವಿವಸ್ವಾಂಶ್ಚ ಬಲಿಃ ಸ್ವಯಂ ।
ಪ್ರಲಂಬಶ್ಚ ತಥಾ ಪೂಷಾ ಗರ್ದಭಃ ಸವಿತಾ ಯುಧಿ ॥ ೧೮ ॥

ವಿಶ್ವಕರ್ಮಾ ಮಯಶ್ಚೈವ ಕಾಲನೇಮಿರ್ಹರಿಃ ಸ್ವಯಂ ।
ಕಾಂಕ್ಷಮಾಣೌ ಚ ವಿಜಯಂ ಯುಯುಧಾತೇ ಪರಸ್ಪರಂ ॥ ೧೯ ॥

ಪರಾಜಿತಾಶ್ಚ ತೇ ದೈತ್ಯಾ ಯುದ್ಧಂ ತ್ಯಕ್ತ್ವಾ ಪ್ರದುದ್ರುವುಃ ॥
ವಿವಸ್ವಾಂಶ್ಚ ತದಾ ಸಂಜ್ಞಾಂ ಗೃಹೀತ್ವಾ ರಥಸಂಸ್ಥಿತಾಂ ।
ವಿಶ್ವಕರ್ಮಾಣಮಾಗಮ್ಯ ದದೌ ತಸ್ಮೈ ಪ್ರಸನ್ನಧೀಃ ॥ ೨೦ ॥

ವಿವಸ್ವಂತಂ ಸುರಶ್ರೇಷ್ಠಂ ದೃಷ್ಟ್ವಾ ಸಂಜ್ಞಾ ವಚೋಽಬ್ರವೀತ್ ।
ಮತ್ಪತಿಶ್ಚ ಭವಾನ್ದೇವೋ ಭವೇತ್ಕಾರ್ಯಕರಸ್ಸದಾ ॥ ೨೧ ॥

ತ್ವಯಾ ಜಿತಾಹಂ ಭಗವಾನ್ ಬಲೇರ್ವಿಪ್ರಿಯಕಾರಿಣಃ ।
ಭ್ರಾತೃಜಾಗ್ರಹಣೇ ದೋಷೋ ನ ಭವೇತ್ಸ ಕದಾಚನ ॥ ೨೨ ॥

---

ನನ್ನು ಸವಿತಾ ಎಂಬವನೂ, ವಿಶ್ವಕರ್ಮನನ್ನು ಮಯನೂ, ಕಾಲನೇಮಿಯನ್ನು ಹರಿಯೂ ಸಹ, ಪರಸ್ಪರ ಎದುರಿಸಿ ಜಯವನ್ನು ಅಪೇಕ್ಷಿಸುತ್ತಾ ಘೋರಯುದ್ಧ ಮಾಡಿದರು. ಅನಂತರ ದೈತ್ಯರೆಲ್ಲರೂ ದೇವತೆಗಳಿಗೆ ಸೋತು ಯುದ್ಧವನ್ನು ಬಿಟ್ಟು ಓಡಿದರು.

೨೦. ಹೀಗೆ ಬಲಿಯು ತನ್ನ ಪರಿವಾರದೊಡನೆ ಸೋತು ಓಡಿಹೋಗಲು ಆಗ ವಿವಸ್ವಾನನು (ವಿವಸ್ವಂತನು) ರಥದಲ್ಲಿ ಕುಳಿತಿದ್ದ ಆ ಸಂಜ್ಞಾದೇವಿಯನ್ನು ಕರೆದು ಕೊಂಡು ಬಂದು ಸಂತೋಷದಿಂದ ವಿಶ್ವಕರ್ಮನಿಗೆ ಸಮರ್ಪಿಸಿದನು.

೨೧. ಆಗ ದೇವಶ್ರೇಷ್ಠನಾದ ವಿವಸ್ವಂತನನ್ನು ನೋಡಿ ಸಂಜ್ಞಾಕುಮಾರಿಯು "ಸ್ವಾಮಿ ! ಕಾರ್ಯತತ್ಪರನಾದ ನೀನೇ ನನಗೆ ಪತಿಯಾಗಲು ಯೋಗ್ಯನು."

೨೨. "ನನಗೆ ಕೇಡನ್ನುಂಟುಮಾಡಲು ಬಯಸಿ ಅಪಹರಿಸಿದ್ದ ಬಲಶಾಲಿ ಯಾದ ಬಲಿದೈತ್ಯನನ್ನು ನೀನು ಸೋಲಿಸಿ ನನ್ನನ್ನು ಕಾಪಾಡಿರುವೆ. ನಿನ್ನ ಸಹೋದರನ ಕುಮಾರಿಯಾದ ನನ್ನನ್ನು ವಿವಾಹಮಾಡಿಕೊಳ್ಳುವುದರಲ್ಲಿ ಯಾವದೋಷವೂ ಇಲ್ಲ" (ವಿಶ್ವಕರ್ಮತ್ವಷ್ಟೃ, ವಿವಸ್ವಂತ ಇವರಿಬ್ಬರೂ ದ್ವಾದಶಾದಿತ್ಯರಲ್ಲಿ ಇಬ್ಬರಾದುದರಿಂದ ಹೀಗೆ ಹೇಳಿದೆ.)

ವೀರಭುಕ್ತಾ ಸದಾ ನಾರೀ ಸ್ತ್ರೀರತ್ನಂ ಮುನಿಭಿಃ ಸ್ಮೃತಂ ।
ಚತುರ್ಧಾ ಪ್ರಕೃತಿರ್ದೇವೀ ಗುಣಭಿನ್ನಾ ಗುಣೈಕಿಕಾ ॥ ೨೩ ॥

ಏಕಾ ಸಾ ಪ್ರಕೃತಿರ್ಮಾತಾ ಗುಣಸಾಮ್ಯಾತ್ಸನಾತನೀ ॥
ಸತ್ತ್ವಭೂತಾ ಚ ಭಗಿನೀ ರಜೋಭೂತಾ ಚ ಗೇಹಿನೀ ।
ತಮೋಭೂತಾ ಚ ಸಾ ಕನ್ಯಾ ತಸ್ಯೈ ದೇವ್ಯೈ ನಮೋನಮಃ ॥ ೨೪ ॥

ಬಹವಃ ಪುರುಷಾ ಯೇ ವೈ ನಿರ್ಗುಣಾಶ್ಚೈಕರೂಪಿಣಃ ।
ಚೈತನ್ಯಾಽಜ್ಞಾನವಂತಶ್ಚ ಲೋಕೇ ಪ್ರಕೃತಿಸಂಭವಾಃ ॥ ೨೫ ॥

ಭೂಲೋಕೇ ಪಾಪಜಾಸ್ಸರ್ವೇ ದೇವಬ್ರಹ್ಮಸಮುದ್ಭವಾಃ ।
ಯಾ ತು ಜ್ಞಾನಮಯೀ ನಾರೀ ವೃಣೇದ್ಯಂ ಪುರುಷಂ ಶುಭಂ ॥ ೨೬ ॥

---

೨೩. "ಸ್ತ್ರೀಯು ಯಾವಾಗಲೂ ವೀರನಿಂದ ಉಪಭೋಗಾರ್ಹಳೆಂದು ಮುನಿಗಳು ಹೇಳಿರುವರು. ಆದುದರಿಂದ ವೀರನಾದ ನೀನು ನನ್ನನ್ನು ಪರಿಗ್ರಹಿಸುವುದರಲ್ಲಿ ಯಾವದೋಷವೂ ಇಲ್ಲವೆಂದು ತಿಳಿ. ಪ್ರಕೃತೀದೇವಿಯು ಒಬ್ಬಳೇ ಆದರೂ ನಾಲ್ಕುರೂಪಗಳುಳ್ಳವಳಾಗಿರುವಳು. ಬೇರೆಬೇರೆ ಗುಣಗಳನ್ನು ಆಶ್ರಯಿಸಿರುವುದರಿಂದ ಆರೀತಿ ಬೇರೆಬೇರೆ ಆಕಾರಗಳು ತೋರಿಬರುವುವು.

೨೪. ಒಬ್ಬಳೇ ಆದ ಪ್ರಕೃತಿಯು ಸತ್ತ್ವರಜಸ್ತಮೋಗುಣಗಳ ಸಮಾನವಾದ ಹೊಂದಿಕೆಯಿಂದಕೂಡಿದಾಗ-ಪುರಾತನೆಯೆನಿಸಿ ಸಕಲ ಪ್ರಪಂಚಗಳಿಗೂ ತಾಯಿಯೆನಿಸುವಳು ಕೇವಲ-ಸತ್ತ್ವಗುಣವನ್ನು ಆಶ್ರಯಿಸಿದಾಗ ಸಹೋದರಿ (ತಂಗಿ) ಎನಿಸುವಳು. ರಜೋಗುಣವನ್ನಾಶ್ರಯಿಸಿದಾಗ ಪತ್ನಿ ಎನಿಸುವಳು. ಮತ್ತು ತಮೋಗುಣವನ್ನಾಶ್ರಯಿಸಿದಾಗ ಕನ್ಯೆಯೆನಿಸುವಳು. ಆದುದರಿಂದ ಸರ್ವಗುಣಸ್ವರೂಪಳಾದ ಆ ಪ್ರಕೃತಿ ದೇವಿಗೆ ನಮಸ್ಕಾರ.

೨೫. ಸಮಾನವಾದ ರೂಪವುಳ್ಳ ಗುಣರಹಿತವಾದ ಅನೇಕ ಪುರುಷರೂ, ಚೈತನ್ಯಸ್ವರೂಪವನ್ನರಿಯದ ಪುರುಷರೂ ಸಹ ಆ ಪ್ರಕೃತಿಯಿಂದಲೇ ಜನಿಸಿದರು.

೨೬. ಅವರು ಭೂಲೋಕದಲ್ಲಿ ತಮ್ಮ ತಮ್ಮ ಪಾಪಗಳಿಗನುಸಾರವಾದ ಜನ್ಮದಲ್ಲಿ ಬ್ರಹ್ಮನಿರ್ಮಿತರಾಗಿ ಜನಿಸುವರು. ಜ್ಞಾನಪ್ರಾಪ್ತಿಹೊಂದಿದ (ಬುದ್ಧಿ ತಿಳಿದ) ಸ್ತ್ರೀಯು ಸುಂದರನಾದ ಪುರುಷನನ್ನು ಕಂಡು ಅವನಲ್ಲಿ ಅಪೇಕ್ಷೆಪಟ್ಟಳೆಂದರೆ,

ಕೋಽಪಿ ಪುತ್ರಃ ಪಿತಾ ಭ್ರಾತಾ ಸ ಚ ತಸ್ಯಾಃ ಪತಿರ್ಭವೇತ್ ॥
ಸ್ವಕೀಯಾಂ ಚ ಸುತಾಂ ಬ್ರಹ್ಮಾ ವಿಷ್ಣುರ್ದೇವಃ ಸ್ವಮಾತರಂ ।
ಭಗಿನೀಂ ಭಗವಾಞ್ಛಂಭುರ್ಗೃಹೀತ್ವಾ ಶ್ರೇಷ್ಠತಾಮಗಾತ್ ॥ ೨೭ ॥

ಇತಿ ಶ್ರುತ್ವಾ ವೇದಮಯಂ ವಾಕ್ಯಂ ಚಾದಿತಿಸಂಭವಃ ।
ವಿವಸ್ವಾನ್ಭ್ರಾತೃಜಾಂ ಸಂಜ್ಞಾಂ ಗೃಹೀತ್ವಾ ಶ್ರೇಷ್ಠವಾನಭೂತ್ ॥ ೨೮ ॥

ಸುತಾಃ ಕನ್ಯಾಸ್ತಯೋರ್ಜಾತಾ ಮನುರ್ವೈವಸ್ವತಸ್ತಥಾ ।
ಯಮಶ್ಚ ಯಮುನಾ ಚೈವ ದಿವ್ಯತೇಜೋಭಿರನ್ವಿತಾಃ ॥ ೨೯ ॥

---

೨೭. ಅವನು ಮಗನಾಗಲಿ, ತಂದೆಯಾಗಲಿ, ಸಹೋದರನಾಗಲಿ ಯಾರಾದರೂ ಆಗಿರಲಿ ಹಾಗೆ ಅಪೇಕ್ಷಿಸಿದ ಜ್ಞಾನಿಯಾದ ಸ್ತ್ರೀಗೆ ಆತನು ಪತಿಯಾಗಬಹುದು. ಅದಕ್ಕೆ ದೃಷ್ಟಾಂತವನ್ನು ಹೇಳುವೆನು ಕೇಳು. ಸೃಷ್ಟಿಕರ್ತನಾದ ಬ್ರಹ್ಮನು ತನ್ನ ಮಗಳಾದ ಸರಸ್ವತೀದೇವಿಯನ್ನು ಪ್ರೇಮಿಸಿದನು. ವಿಷ್ಣುವು ಮಹಾಮಾಯಾಸ್ವರೂಪಿಣಿಯೂ, ಲೋಕಮಾತೆಯೂ, ಪ್ರಕೃತಿದೇವಿಸ್ವರೂಪಳೂ ಆದ ಲಕ್ಷ್ಮಿಯನ್ನು ವರಿಸಿದನು. ಆದ್ದರಿಂದ ವಿಷ್ಣುವು ತನ್ನ ತಾಯಿಯನ್ನೇ ವಿವಾಹವಾದಂತೆ ಆಯ್ತು. ಭಗವಂತನಾದ ಪರಮೇಶ್ವರನು ತನ್ನ ಸಹೋದರಿಯನ್ನು (ವಿಷ್ಣುವಿನ ಸಹೋದರಿಯಾದ ಪಾರ್ವತಿಯನ್ನು) ವರಿಸಿದನು. (ಬ್ರಹ್ಮ ವಿಷ್ಣು ಮಹೇಶ್ವರರೆಲ್ಲರೂ ಪ್ರಕೃತಿದೇವಿಯ ಕುಮಾರರೆಂದು ಹೇಳಿರುವುದರಿಂದ ವಿಷ್ಣು ಸಹೋದರಿಯಾದ ಪಾರ್ವತಿಯು ಶಿವನಿಗೂ ಸಹೋದರಿಯಾದ ಹಾಗಾಯಿತು.) ಆದಾಗ್ಯೂ ಯಾವ ಅಪವಾದಕ್ಕೂ ಗುರಿಯಾಗದೆ ಶ್ರೇಷ್ಠತ್ವವನ್ನು ಹೊಂದಿ ಪೂಜ್ಯರಾಗಿರುವರು ” ಎಂದು ಹೇಳಿದಳು.

೨೮. ಈರೀತಿ ಸಂಜ್ಞೆಯು ವೇದಪ್ರತಿಪಾದ್ಯವಾದ ವಾಕ್ಯಗಳನ್ನು ಹೇಳಲು ಅದಿತಿದೇವಿಯ ಕುಮಾರನಾದ ವಿವಸ್ವಂತನು ಅವೆಲ್ಲವನ್ನೂ ಕೇಳಿ ತನ್ನ ಸಹೋದರನ (ವಿಶ್ವಕರ್ಮನ) ಮಗಳಾದ ಸಂಜ್ಞಾದೇವಿಯನ್ನು ಪಾಣಿಗ್ರಹಣಮಾಡಿಕೊಂಡು ಶ್ರೇಷ್ಠನಾದನು.

೨೯. ಅನಂತರ ವಿವಸ್ವಂತನಿಂದ ಆ ಸಂಜ್ಞಾದೇವಿಯಲ್ಲಿ ವೈವಸ್ವತಮನು, ಯಮ, ಎಂಬ ಇಬ್ಬರು ಗಂಡುಮಕ್ಕಳೂ ಯಮುನಾ ಎಂಬ ಒಬ್ಬ ಹೆಣ್ಣುಮಗಳೂ ದಿವ್ಯತೇಜಸ್ವಿಗಳಾಗಿ ಜನಿಸಿದರು.

ತದಾ ಸಂಜ್ಞಾ ಸತೀ ಸಾಕ್ಷಾತ್ತೇಜೋಭೂತಂ ಪತಿಂ ಸ್ವಕಂ ।
ಜ್ಞಾತ್ವಾ ಛಾಯಾಂ ಸಮುತ್ಪಾದ್ಯ ತಪಸೇ ವನಮಾಗತಾ ॥ ೩೦ ॥

ಸಾವರ್ಣಿಶ್ಚ ಮನುಸ್ತಸ್ಯಾಂ ಶನಿಶ್ಚ ತಪತೀ ತಥಾ ।
ಛಾಯಾಯಾಂ ಚ ಸಮುದ್ಭೂತಾಃ ಕ್ರೂರದೃಷ್ಟ್ಯಾ ವಿವಸ್ವತಃ ॥ ೩೧ ॥

ಪುತ್ರಭೇದೇನ ತಾಂ ನಾರೀಂ ಮತ್ವಾ ಛಾಯಾಂ ರುಷಾನ್ವಿತಃ ।
ಚಕಾರ ಭಸ್ಮಭೂತಾಂ ತಾಂ ವಿವಸ್ವಾನ್ ಭಗವಾನ್ರವಿಃ ॥ ೩೨ ॥

ತದಾ ಶನಿಶ್ಚ ಸಾವರ್ಣಿರ್ವಿವಸ್ವಂತಂ ರುಷಾನ್ವಿತಂ ।
ಜ್ಞಾತ್ವಾ ಚ ಕ್ರೋಧತಾಮ್ರಾಕ್ಷೌ ಯುಯುಧಾತೇ ಪರಸ್ಪರಂ ॥ ೩೩ ॥

ಕಿಯತಾ ಚೈವಕಾಲೇನ ಭಗ್ನಭೂತೌ ವಿವಸ್ವತಾ ।
ಹಿಮಾಚಲೇ ಗಿರೌ ಪ್ರಾಪ್ಯ ತೇಪತುಃ ಪರಮಂ ತಪಃ ॥ ೩೪ ॥

---

೩೦. ಸ್ವಲ್ಪದಿನ ಕಳೆಯುತ್ತಲೆ ಪತಿವ್ರತೆಯಾದ ಸಂಜ್ಞಾದೇವಿಯು ತೇಜಃ ಸ್ವರೂಪನಾದ ತನ್ನ ಪತಿಯ ಕಾಂತಿಯನ್ನು ತಾಳಲಾರದೆ ತಾನು ಛಾಯಾದೇವಿಯನ್ನು ಸೃಷ್ಟಿಮಾಡಿ ಅಲ್ಲಿಟ್ಟು ತಾನು ತಪಸ್ಸನ್ನುಮಾಡಲು ಕಾಡಿಗೆಹೋದಳು.

೩೧. ಆಗ ಆ ಛಾಯಾದೇವಿಯಲ್ಲಿ ವಿವಸ್ವಂತನ ಕ್ರೂರದೃಷ್ಟಿಯಿಂದ ಸಾವರ್ಣೀಯಮನುವೂ, ಶನೈಶ್ಚರನೂ, ತಪತೀದೇವಿಯೂ ಸಹ ಹುಟ್ಟಿದರು.

೩೨. ಆ ಛಾಯಾದೇವಿಯು ಹಿರಿಯಹೆಂಡತಿಯ (ತನ್ನ ಸವತಿಯ) ಮಕ್ಕಳಲ್ಲಿ ಭೇದಭಾವವನ್ನು ತೋರ್ಪಡಿಸಿದುದರಿಂದ ವಿವಸ್ವಂತನು ಕುಪಿತನಾಗಿ ಆ ಛಾಯೆಯನ್ನು ಭಸ್ಮಮಾಡಿದನು.

೩೩. ತಮ್ಮ ತಾಯಿಯು ಭಸ್ಮೀಭೂತಳಾದುದನ್ನು ನೋಡಿ ಆಗ ಸಾವರ್ಣೀಯಮನುವೂ ಶನೈಶ್ಚರನೂ ಸಹ ತುಂಬ ಕೋಪದಿಂದ ಕೆಂಪಾದಕಣ್ಣುಳ್ಳವರಾಗಿ ತಂದೆಯಾದ ವಿವಸ್ವಂತನಮೇಲೆ ಯುದ್ಧಮಾಡಿದರು.

೩೪. ಸ್ವಲ್ಪಕಾಲದಲ್ಲಿಯೇ ಅವರಿಬ್ಬರೂ ವಿವಸ್ವಂತನಿಂದ ಪರಾಜಿತರಾಗಿ ಹಿಮಾಲಯಪರ್ವತಕ್ಕೆ ಹೋಗಿ ಅಲ್ಲಿ ಉಗ್ರವಾದ ತಪಸ್ಸನ್ನು ಮಾಡಿದರು.

**ತ್ರಿವರ್ಷಾಂತೇ ಚ ಸಾ ದೇವೀ ಮಹಾಕಾಲೀ ಸಮಾಗತಾ ।**
**ಅರ್ಚಿತಂ ಚ ವರಂ ತಾಭ್ಯಾಂ ದದೌ ತದ್ಭಕ್ತಿವತ್ಸಲಾ ॥ ೩೫ ॥**

**ಪುನಸ್ತೌ ಚ ಸಮಾಗಮ್ಯ ಯುಯುಧಾತೇ ವಿವಸ್ವತಾ ।**
**ವಿವಸ್ವಾನ್ ಭಯಭೀತಶ್ಚ ತ್ಯಕ್ತ್ವಾ ಯುದ್ಧಂ ಪರಾಭವತ್ ॥ ೩೬ ॥**

**ತತ್ರ ಸ್ಥಿತಾ ಪ್ರಿಯಾ ಸಂಜ್ಞಾ ವಡವಾರೂಪಧಾರಿಣೀ ।**
**ಕುರುಖಂಡೇ ಮಹಾರಮ್ಯೇ ತಪಂತೀ ತಪ ಉಲ್ಬಣಂ ॥ ೩೭ ॥**

**ಗತ್ವಾ ದದರ್ಶ ಭಗವಾನ್‌ಸಂಜ್ಞಾಂ ಸಂಬೋಧಕಾರಿಣೀಂ ।**
**ಕಾಮಾತುರೋ ಹಯೋ ಭೂತ್ವಾ ತತ್ರ ರೇಮೇ ತಯಾ ಸಹ ॥ ೩೮ ॥**

---

೩೫. ಹೀಗೆ ಮೂರುವರ್ಷಗಳು ಆಚರಿಸುತ್ತಿರಲು ಭಕ್ತವತ್ಸಲೆಯಾದ ಮಹಾಕಾಲಿಕಾದೇವಿಯು ಇವರ ತಪಸ್ಸಿಗೆ ಮೆಚ್ಚಿ ಅವರಿಬ್ಬರಿಗೂ ಬೇಕಾದ ವರಗಳನ್ನು ಕೊಟ್ಟಳು.

೩೬. ದೇವಿಯ ವರವನ್ನು ಪಡೆದ ಅವರಿಬ್ಬರೂ ಪುನಃ ತಂದೆಯಾದ ವಿವಸ್ವಂತನ ಬಳಿಗೆ ಬಂದು ಯುದ್ಧಮಾಡಿದರು. ಆಗ ವಿವಸ್ವಂತನು ಭಯದಿಂದ ಹೆದರಿ ಯುದ್ಧವನ್ನು ಬಿಟ್ಟು ಓಡಿದನು.

೩೭. ಹೀಗೆ ಓಡಿದ ವಿವಸ್ವಂತನು ತನ್ನ ಪತ್ನಿಯಾದ ಸಂಜ್ಞಾದೇವಿಯು ಮಹಾಸುಂದರವಾದ ಉತ್ತರ ಕುರುಖಂಡವೆಂಬ ಸ್ಥಳದಲ್ಲಿ ಹೆಣ್ಣುಕುದುರೆಯರೂಪವನ್ನು ಧರಿಸಿ ಘೋರವಾದ ತಪಸ್ಸು ಮಾಡುತ್ತಿರುವುದನ್ನು ತಿಳಿದು ಅಲ್ಲಿಗೆ ಹೋದನು.

೩೮. ಅಲ್ಲಿ ಅವಳನ್ನು ಎಚ್ಚರಗೊಳಿಸಿ ಕಾಮಾತುರನಾಗಿ ತಾನೂ ಕುದುರೆಯ ರೂಪವನ್ನು ಧರಿಸಿ ಅವಳೊಡನೆ ಕ್ರೀಡಿಸಿದನು.

ಪಂಚವರ್ಷಾಂತರೇ ಸಂಜ್ಞಾ ಗರ್ಭಂ ತಸ್ಮಾದ್ದಧೌ ಸ್ವಯಂ ।
ತನಯೌ ಚ ಸಮುದ್ಭೂತೌ ದಿವ್ಯರೂಪಪರಾಕ್ರಮೌ ॥ ೩೯ ॥

ಪಿತುರ್ದುಃಖಂ ಸಮಾಲೋಕ್ಯ ಜಗ್ಮತೂ ರವಿಮಂಡಲಂ ।
ಜಿತ್ವಾ ಬಂಧೂ ದುರಾಚಾರೌ ಕ್ರೂರದೃಷ್ಟ್ಯಾ ತದಾ ಸ್ವಯಂ ॥ ೪೦ ॥

ಬದ್ಧ್ವಾ ತೌ ಸ್ವಪಿತುಃ ಪಾರ್ಶ್ವಂ ಸಂಪ್ರಾಪ್ತೌ ವಡವಾಸುತೌ ।
ದೃಷ್ಟ್ವಾ ವಿವಸ್ವಾನ್ಭಗವಾನ್ ವೈರಿಣೌ ಸಮುಪಾಗತೌ ॥ ೪೧ ॥

ಸಂಪೀಡ್ಯ ತಾಡಯಾಮಾಸ ಲೋಹದಂಡೈರ್ಭಯಾನಕೈಃ ।
ಪಂಗುಭೂತೌ ಪುನಸ್ತ್ಯಕ್ತ್ವಾ ಛಾಯಾಪುತ್ರೌ ದಿವಾಕರಃ ॥ ೪೨ ॥

---

೩೯. ಹೀಗೆ ಐದುವರ್ಷ ವಿಹಾರಮಾಡುವುದರಲ್ಲಿ ಸಂಜ್ಞಾದೇವಿಯು ಗರ್ಭಿಣಿಯಾದಳು. ಅನಂತರ ಅವಳು ದಿವ್ಯವಾದ ರೂಪವುಳ್ಳವರೂ ಪರಾಕ್ರಮಿಗಳೂ ಆದ ಇಬ್ಬರು ಪುತ್ರರನ್ನು ಹಡೆದಳು.

೪೦. ಪರಾಕ್ರಮಿಗಳಾದ ಆ ಮಕ್ಕಳಿಬ್ಬರೂ ತಂದೆಗೆ ಉಂಟಾಗಿರುವ ದುಃಖವನ್ನು ನೋಡಿ ಸೂರ್ಯಮಂಡಲವನ್ನು ಸೇರಿ ತಮ್ಮ ಸಹೋದರರೂ ದುರಾಚಾರಿಗಳೂ ಆದ ಸಾವರ್ಣೀಯಮನು ಮತ್ತು ಶನೈಶ್ಚರ ಇವರಿಬ್ಬರನ್ನೂ ಜಯಿಸಿ ಕ್ರೂರವಾದ ನೋಟದಿಂದ ಅವರನ್ನು ಬಂಧಿಸಿದರು.

೪೧. ವಡವಾರೂಪಧರಿಸಿದ ಸಂಜ್ಞೆಯ ಮಕ್ಕಳಾದ ಆ ಇಬ್ಬರೂ, ಸೋತುಹೋದ ಸಾವರ್ಣೀಯಮನು ಶನೈಶ್ಚರ ಇವರನ್ನು ಬಂಧಿಸಿ ತಂದೆಯ ಸಮೀಪಕ್ಕೆ ತೆಗೆದುಕೊಂಡು ಬಂದರು. ಭಗವಂತನಾದ ವಿವಸ್ವಂತನು ತನ್ನ ವೈರಿಗಳು ತನ್ನ ಎದುರಿಗೆ ಬಂದಿರುವುದನ್ನು ನೋಡಿದನು.

೪೨. ಅವರನ್ನು ಭಯಂಕರವಾದ ಲೋಹದ ಕೋಲುಗಳಿಂದ ಚೆನ್ನಾಗಿ ಹೊಡೆಸಿದನು. ಅದರಿಂದ ಅವರು ಕುಂಟರಾಗಲು ಅಷ್ಟಕ್ಕೇ ಬಿಟ್ಟು ಸೂರ್ಯನು ಅಶ್ವಿನೀಕುಮಾರರನ್ನು ನೋಡಿ,

ಆಶ್ವಿನೇಯೌ ಸಮಾಲೋಕ್ಯ ವಚನಂ ಪ್ರಾಹ ತೌ ಮುದಾ ।
ಜೀವ ಈಶೋ ಯಥಾ ಮಿತ್ರೇ ನರನಾರಾಯಣೌ ಯಥಾ ॥
ಏಕನಾಮ್ನಾ ಯುವಾಂ ಪ್ರೀತೌ ನಾಸತ್ಯೌ ಚ ಭವಿಷ್ಯಥಃ ॥ ೪೩ ॥

ಸೋಮಶಕ್ತಿರಿಡಾದೇವೀ ಜ್ಯೇಷ್ಠಪತ್ನೀ ಭವಿಷ್ಯತಿ ।
ಪಿಂಗಲಾ ಸೂರ್ಯಶಕ್ತಿಶ್ಚ ಲಘುಪತ್ನೀ ಭವಿಷ್ಯತಿ ॥ ೪೪ ॥

ಇಡಾಪತಿಸ್ಸ ವೈ ನಾಮ ದ್ವಿತೀಯಃ ಪಿಂಗಲಾಪತಿಃ ।
ದ್ವಾದಶಸ್ಸ ನೃಣಾಂ ರಾಶೇಃ ಕ್ರೂರದೃಷ್ಟಿಃ ಶನೈಶ್ಚರಃ ॥ ೪೫ ॥

ತಸ್ಯ ಶಾಂತಿಕರೋ ಜ್ಯೇಷ್ಠೋ ಭವಿಷ್ಯತಿ ಮಹೀತಲೇ ॥
ದ್ವಿತೀಯಶ್ಚ ನೃಣಾಂ ರಾಶೇಃ ಸಾವರ್ಣಿರ್ಭ್ರಮಕಾರಕಃ ।
ತಸ್ಯ ಶಾಂತಿಕರೋ ಭೂಮೌ ಭವಿತಾ ಪಿಂಗಲಾಪತಿಃ ॥ ೪೬ ॥

---

೪೩. ಸಂತೋಷದಿಂದ ಅವರನ್ನು ಕುರಿತು ಜೀವನು ಮತ್ತು ಪರಮಾತ್ಮನೂ ಹೇಗೆ ಮಿತ್ರರೋ, ನರನಾರಾಯಣರು ಹೇಗೆ ಸ್ನೇಹಿತರೋ, ಹಾಗೆಯೇ ನೀವಿಬ್ಬರೂ ಒಂದೇಮನಸ್ಸಿನಿಂದ ಸುಪ್ರೀತರಾಗಿಬಾಳಿ; ನಾಸತ್ಯರೆಂಬ ಒಂದೇ ಹೆಸರಿನಿಂದ ಇಬ್ಬರೂ ಪ್ರಸಿದ್ಧಿಪಡೆಯಿರಿ.

೪೪. ಸೋಮ (ಚಂದ್ರ) ಶಕ್ತಿಸ್ವರೂಪಿಣಿಯಾದ ಇಡಾದೇವಿಯು ನಿಮಗೆ ಹಿರಿಯಹೆಂಡತಿಯಾಗುವಳು. ಸೂರ್ಯಶಕ್ತಿಸ್ವರೂಪಿಣಿಯಾದ ಪಿಂಗಲಾದೇವಿಯು ಎರಡನೆ (ಉಪ) ಪತ್ನಿಯಾಗುವಳು.

೪೫. ಇಡಾಪತಿಯೆಂದೂ ಪಿಂಗಲಾಪತಿಯೆಂದೂ ನಿಮಗೆ ಎರಡು ಹೆಸರುಂಟಾಗುವುದು. ಕ್ರೂರದೃಷ್ಟಿಯುಳ್ಳ ಶನೈಶ್ಚರನು ಮನುಜರ ರಾಶಿಗಳಲ್ಲಿ ಹನ್ನೆರಡನೆಯರಾಶಿಗೆ ಬಂದಾಗ ತುಂಬ ತೊಂದರೆಯು ಉಂಟಾಗುವುದು.

೪೬. ಆಗ ಆ ದೋಷಕ್ಕೆ ಶಾಂತಿಯನ್ನುಂಟುಮಾಡುವುದಕ್ಕೆ ಇಡಾಪತಿಯು ಭೂಮಿಯಲ್ಲಿ ಅವತರಿಸುವನು. ಎಂದರೆ ಇಡಾಪತಿಯನ್ನು ಪೂಜೆಮಾಡಿದರೆ ಶನೈಶ್ಚರನಿಂದಾಗುವ ಉಪದ್ರವವೆಲ್ಲಾ ಪರಿಹಾರವಾಗುವುದು. ಮನುಷ್ಯರ ಎರಡನೆಯ ರಾಶಿಗೆ ಸಾವರ್ಣಿಮನುವು ಬಂದಾಗ ಭ್ರಮುವನ್ನುಂಟುಮಾಡುವನು. ಆಗ ಪಿಂಗಲಾಪತಿಯು ಭೂಮಿಯಲ್ಲಿ ಅವತರಿಸಿ ಅದರಿಂದಾಗುವ ತೊಂದರೆಗಳನ್ನೆಲ್ಲಾ ಪರಿಹಾರಮಾಡುವನು.

ಜನ್ಮರಾಶಿಸ್ಥಿತಾ ದೇವೀ ತಪಂತೀ ತಾಪಕಾರಿಣೀ ।
ಇಡಾ ಚ ಪಿಂಗಲಾ ತಸ್ಯಾಃ ಶಾಂತಿಕರ್ತ್ರ್ಯೌ ಭವಿಷ್ಯತಃ ॥ ೪೭ ॥

ಇತಿ ಶ್ರುತ್ವಾ ವಚಸ್ತಸ್ಯ ಸುರವೈದ್ಯೌ ಬಭೂವತುಃ ।
ಸಾವರ್ಣಿಶ್ಚ ಶನೀ ರಾಹುಃ ಕೇತುಃ ಸ್ವರ್ಗಪ್ರತಾಪನಃ ॥
ತೇಷಾಂ ತು ಪರಿಹಾರಾರ್ಥೌ ದಸ್ರೌ ಚಾಶ್ವಿನಿಸಂಭವೌ ॥ ೪೮ ॥

॥ ಸೂತ ಉವಾಚ ॥

ಇತಿ ಶ್ರುತ್ವಾ ಗುರೋರ್ವಾಕ್ಯಂ ಪ್ರಸನ್ನೌ ಸುರಸತ್ತಮೌ ।
ಸ್ವಾಂಶಾನ್ಮಹೀತಲೇ ಜಾತೌ ಶೂದ್ರಯೋನ್ಯಾಂ ರವೇಸ್ಸುತೌ ॥ ೪೯ ॥

ಇಡಾಪತಿಸ್ತು ಸಧನೋ ರೈದಾಸಃ ಪಿಂಗಳಾಪತಿಃ ।
ಆವಿರ್ಭೂತ್ವಾ ರೇಜತುಸ್ತೌ ರಾಮಾನಂದಾನುಯಾಯಿನೌ ॥ ೫೦ ॥

---

೪೭. ತಪತೀದೇವಿಯು ಮನುಜರ ಜನ್ಮರಾಶಿಯಲ್ಲಿರುವಾಗ ತುಂಬ ತಾಪವನ್ನುಂಟುಮಾಡುವಳು. ಆಗ ಆ ತಾಪವು, ಇಡಾದೇವಿ ಮತ್ತು ಪಿಂಗಲಾದೇವಿಯುರಿಂದ ಪರಿಹಾರವಾಗುವುದು ಎಂದು ಸೂರ್ಯನು ಹೇಳಿದನು.

೪೮. ಇದನ್ನು ಕೇಳಿ ಆ ಅಶ್ವಿನೀದೇವತೆಗಳು ದೇವವೈದ್ಯರೆನಿಸಿದರು ಅನಂತರ ಸಾವರ್ಣೀಯಮನು ಶನಿ ರಾಹು ಮತ್ತು ಕೇತುಗಳು ಸ್ವರ್ಗವನ್ನು ಪೀಡಿಸಲು ಪ್ರಾರಂಭಿಸಿದರು. ಅಶ್ವಿನೀಕುಮಾರರಾದ ಈ ದೇವವೈದ್ಯರು ಅದನ್ನು ಪರಿಹಾರ ಮಾಡುವುದಕ್ಕೆ ಪ್ರಾರಂಭಮಾಡಿದರು ಎಂದು ಬೃಹಸ್ಪತ್ಯಾಚಾರ್ಯರು ದೇವತೆಗಳಿಗೆ ಹೇಳಿದರು.

೪೯-೫೦. ಸೂತಮುನಿವರ್ಯನು ಹೇಳುತ್ತಾನೆ—ಹೀಗೆ ಬೃಹಸ್ಪತ್ಯಾಚಾರ್ಯರು ಹೇಳಿದ ಮಾತನ್ನು ಕೇಳಿ ಸೂರ್ಯಪುತ್ರರೂ, ದೇವಶ್ರೇಷ್ಠರೂ ಆದ ಅಶ್ವಿನೀದೇವತೆಗಳು ತಮ್ಮ ಅಂಶಗಳಿಂದ ಭೂಮಿಯಲ್ಲಿ ಶೂದ್ರರಾಗಿ ಜನಿಸಿದರು. ಇಡಾಪತಿಯು ಸಧನ ಎಂಬ ಹೆಸರಿನಿಂದಲೂ ಪಿಂಗಲಾಪತಿಯು ರೈದಾಸ ಎಂಬ ಹೆಸರಿನಿಂದಲೂ ಜನಿಸಿ ರಾಮಾನಂದರ ಶಿಷ್ಯರಾಗಿ ವಿರಾಜಿಸಿದರು.

ಇತಿ ತೇ ಕಥಿತಂ ವಿಪ್ರ ಸುರಾಂಶಾಶ್ಚ ಯಥ್ಯಾಽಭವನ್ ।
ಕಲಿಶುದ್ಧಿಕರೀ ಲೀಲಾ ತೇಷಾಂ ಮಾರ್ಗಪ್ರದರ್ಶಿನಾಂ　　　　॥ ೫೧ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಪ್ರತಿಸರ್ಗಪರ್ವಣಿ ಚತುರ್ಥಖಂಡೇ
ಕಲಿಯುಗೀಯೇತಿಹಾಸಸಮುಚ್ಚಯೇ ಅಶ್ವಿನೀ ಕುಮಾರಾವತಾರೇ
ಸಧನ, ರೈದಾಸ, ಸಮುತ್ಪತ್ತಿವರ್ಣನಂ ನಾಮಾಽಷ್ಟಾದಶೋಽಧ್ಯಾಯಃ



---

೫೧. ಎಲೈ ಶೌನಕನೇ! ಈರೀತಿ ದೇವತಾಂಶಗಳು ಅವತರಿಸಿದ ಕಥೆಯನ್ನೆಲ್ಲಾ ನಿನಗೆ ಹೇಳಿದೆನು. ಸನ್ಮಾರ್ಗಪ್ರವರ್ತಕರಾದ ಈ ಮಹಾಪುರುಷರ ಲೀಲೆಯನ್ನು ಕೇಳಿದರೆ ಕಲಿಯಿಂದುಂಟಾದ ದೋಷಗಳು ತೊಲಗುವುವು ಎಂದು ಸೂತರು ಶೌನಕನಿಗೆ ಹೇಳಿದರು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಪ್ರತಿಸರ್ಗಪರ್ವದ ನಾಲ್ಕನೆಯ ಖಂಡದಲ್ಲಿ ಅಶ್ವಿನೀಕುಮಾರರ ಅವತಾರ ಸ್ವರೂಪರಾದ ಸಧನ ರೈದಾಸ ಇವರ ಉತ್ಪತ್ತಿ ವರ್ಣನೆಯೆಂಬ ಹದಿನೆಂಟನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಪ್ರತಿಸರ್ಗಪರ್ವಣಿ ಚತುರ್ಥಖಂಡೇ
## ಏಕೋನವಿಂಶೋಽಧ್ಯಾಯಃ

॥ ಸೂತ ಉವಾಚ ॥

ಇತ್ಯುಕ್ತ್ವಾ ಭಗವಾಞ್ಜೀವೋ ದೇವಮಾಹಾತ್ಮ್ಯಮುತ್ತಮಂ ।
ಸ್ವಮುಖಾತ್ಸ್ವಾಂಶಮುತ್ಪಾದ್ಯ ಬ್ರಹ್ಮಯೋನೌ ಬಭೂವ ಹ ॥ ೧ ॥

ಇಷ್ಟಿಕಾ ನಗರೀ ರಮ್ಯಾ ಗುರುದತ್ತಸ್ಯ ವೈ ಸುತಃ ।
ರೋಪಣೋ ನಾಮ ವಿಖ್ಯಾತೋ ಬ್ರಹ್ಮಮಾರ್ಗಪ್ರದರ್ಶಕಃ ॥ ೨ ॥

ಸೂತ್ರಗ್ರಂಥಮಯೀಂ ಮಾಲಾಂ ತಿಲಕಂ ಜಲನಿರ್ಮಿತಂ ।
ವಾಸುದೇವೇತಿ ತನ್ಮಂತ್ರಂ ಕಲೌ ಕೃತ್ವಾ ಜನೇಜನೇ ॥ ೩ ॥

---

## ಹತ್ತೊಂಭತ್ತನೆಯ ಅಧ್ಯಾಯ

೧. ಸೂತಮುನಿವರ್ಯನು ಹೇಳುತ್ತಾನೆ—ಷಡ್ಗುಣೈಶ್ವರ್ಯಸಂಪನ್ನನಾದ ಬೃಹಸ್ಪತ್ಯಾಚಾರ್ಯನು ಈರೀತಿ ದೇವತೆಗಳ ಮಹಿಮೆಯನ್ನು ತಿಳಿಸಿ ಅನಂತರ ತನ್ನ ಮುಖದಿಂದ ತೇಜಸ್ಸಿನ ಅಂಶವನ್ನು ತೆಗೆದು ಆ ಅಂಶದಿಂದ ಬ್ರಾಹ್ಮಣಜಾತಿಯಲ್ಲಿ ಜನಿಸಿದನು.

೨. ಈ ಬೃಹಸ್ಪತಿಯ ಅಂಶವು ಸುಂದರವಾದ ಇಷ್ಟಿಕಾನಗರದಲ್ಲಿ ಗುರುದತ್ತನೆಂಬುವನಿಗೆ ಮಗನಾಗಿ ಜನಿಸಿ ರೋಪಣನೆಂಬ ಹೆಸರುಳ್ಳವನಾಗಿ ಬ್ರಹ್ಮಮಾರ್ಗ ಪ್ರದರ್ಶಕನಾಗಿ ಪ್ರಸಿದ್ಧಿಪಡೆದನು.

೩. ಈ ರೋಪಣನು ಕಲಿಯುಗದಲ್ಲಿ ಸೂತ್ರಗ್ರಂಥಗಳನ್ನೇ ಜಪಮಾಲೆಯಂತೆ ಧರಿಸಿರಿ; ನೀರಿನಿಂದಲೇ ತಿಲಕವನ್ನು ನಿರ್ಮಿಸಿ; ವಾಸುದೇವ ಎಂಬ ಮಂತ್ರವನ್ನೇ ಜಪಿಸಿ; ಎಂದು ಮನೆಮನೆಗಳಲ್ಲಿಯೂ ಪ್ರತಿಯೊಬ್ಬರಿಗೂ ಉಪದೇಶಮಾಡಿದನು.

ಕೃಷ್ಣಚೈತನ್ಯಮಾಗಮ್ಯ ಕಂಬಲಂ ಚ ತದಾಜ್ಞಯಾ ।
ಗೃಹೀತ್ವಾ ಸ್ವಪುರೀಂ ಪ್ರಾಪ್ಯ ಕೃಷ್ಣಧ್ಯಾನಪರೋऽಭವತ್ ॥ ೪ ॥

ಅತಃ ಪರಂ ಶೃಣು ಮುನೇ ಚರಿತ್ರಂ ಚ ಹರೇರ್ಮುದಾ ।
ಯಚ್ಛ್ರುತ್ವಾ ಚ ಕಲೌ ಘೋರೇ ಜನೋ ನೈವ ಭಯಂ ವ್ರಜೇತ್॥ ೫ ॥

ಪಂಚಾಬ್ದೇ ಕೃಷ್ಣಚೈತನ್ಯೇ ಯಜ್ಞಾಂಶೇ ಯಜ್ಞಕಾರಿಣಿ ।
ವಂಗದೇಶಭವೋ ವಿಪ್ರ ಈಶ್ವರಃ ಶಾರದಾಪ್ರಿಯಃ ॥ ೬ ॥

ಪ್ರಾಪ್ತಃ ಶಾಂತಿಪುರೇ ಗ್ರಾಮೇ ವಾಗ್ದೇವೀವರದರ್ಪಿತಃ ।
ಸತಾಂ ದಿಗ್ವಿಜಯಂ ಕೃತ್ವಾ ಸರ್ವಶಾಸ್ತ್ರವಿಶಾರದಃ ॥ ೭ ॥

---

೪. ಅನಂತರ ಕೃಷ್ಣಚೈತನ್ಯನ ಸಮೀಪಕ್ಕೆ ಬಂದು ಅವನ ಅಪ್ಪಣೆಯಂತೆ ಕಂಬಳಿಯನ್ನು (ಶಾಲನ್ನು) ತೆಗೆದುಕೊಂಡು ಅಲ್ಲಿಂದ ತನ್ನ ಊರಿಗೆ ಹೋಗಿ ಅಲ್ಲಿ ಕೃಷ್ಣಧ್ಯಾನತತ್ಪರನಾದನು.

೫. ಎಲೈ ಶೌನಕಮುನಿಯೇ ! ಅಲ್ಲಿಂದ ಮುಂದೆನಡೆದ ಮಹಾವಿಷ್ಣುವಿನ ಚರಿತ್ರೆಯನ್ನು ಸಂತೋಷದಿಂದ ನಿನಗೆ ತಿಳಿಸುವೆನು ಕೇಳು. ಈ ಕೃಷ್ಣಪರಮಾತ್ಮನ ಚರಿತ್ರಶ್ರವಣದಿಂದ ಭಯಂಕರವಾದ ಕಲಿಯುಗದಲ್ಲಿ ಯಾವ ಭಯವೂ ಜನಗಳಿಗುಂಟಾಗುವುದಿಲ್ಲ.

೬. ಯಜ್ಞಾಂಶನೂ, ಯಾಗಮಾಡತಕ್ಕವನೂ ಆದ ಕೃಷ್ಣಕಚೈತನ್ಯನಿಗೆ ಐದುವರ್ಷ ವಯಸ್ಸಾಗಲು ಆ ಸಮಯದಲ್ಲಿ ಶಾರದಾದೇವಿಗೆ ಪ್ರೀತಿಪಾತ್ರನಾದ ಈಶ್ವರನೆಂಬ ಬ್ರಾಹ್ಮಣನು ವಂಗದೇಶದಲ್ಲಿ ಹುಟ್ಟಿದನು.

೭. ಆ ಈಶ್ವರಬ್ರಾಹ್ಮಣನು ವಾಗ್ದೇವಿಯಾದ ಸರಸ್ವತಿಯ ವರಪ್ರಭಾವದಿಂದ ಹೆಮ್ಮೆಯುಳ್ಳವನಾಗಿ ಶಾಂತಿಪುರವೆಂಬ ಗ್ರಾಮಕ್ಕೆ ಬಂದನು. ಸಕಲಶಾಸ್ತ್ರವಿಶಾರದನಾದ ಈ ಬ್ರಾಹ್ಮಣನು ಅಲ್ಲಿ ಸತ್ಪುರುಷರೂ ಪಂಡಿತರೂ ಆದ ಬ್ರಾಹ್ಮಣರನ್ನೆಲ್ಲಾ ವಾದದಲ್ಲಿ ಜಯಿಸಿ ದಿಗ್ವಿಜಯಮಾಡಿದನು.

ಗಂಗಾಕೂಲೇ ಸ್ತವಂ ದಿವ್ಯಂ ರಚಿತ್ವಾ ಸೋಽಪಠದ್ದ್ವಿಜಃ ।
ಏತಸ್ಮಿನ್ನಂತರೇ ತತ್ರ ಯಜ್ಞಾಂಶಸ್ಸಮುಪಾಗತಃ ॥
ಉವಾಚ ವಚನಂ ರಮ್ಯಮೀಶ್ವರಂ ಸ್ತುತಿಕಾರಿಣಂ ॥ ೮ ॥

ಸುಕೃತಂ ಪೂರ್ತಮರ್ಣಂ ಚ ಶ್ರುತೀನಾಂ ಸಾರಮೇವ ಹಿ ।
ಇತ್ಯುಕ್ತಂ ಭವತಾ ಸ್ತೋತ್ರೇ ದೂಷಣಂ ಭೂಷಣಂ ವದ ॥ ೯ ॥

ತಥಾಹ ಚೇಶ್ವರೋ ಧೀಮಾನ್ ದೂಷಣಂ ನೈವ ದೃಶ್ಯತೇ ।
ಇತ್ಯುಕ್ತ್ವಾ ಪ್ರಾಹ ಭಗವಾನ್ ಭೂಷಣಂ ನೈವ ದೃಶ್ಯತೇ ॥ ೧೦ ॥

ಸುಕೃತಂ ಚ ಸ್ಮೃತಂ ಧರ್ಮಃ ಪೂರ್ತಂ ಚೈತನ್ಯಮುಚ್ಯತೇ ।
ಅರ್ಣಂ ವೀರ್ಯಮಿತಿ ಜ್ಞೇಯಂ ಶ್ರುತಿಸಾರಮತಸ್ತ್ರಯಂ ॥
ಗಂಗಾಜಲೇ ದೂಷಣೋಽಯಂ ಭೂಷಣೋಽಯಂ ಕಲೇವರೇ ॥ ೧೧ ॥

---

೮. ಅನಂತರ ಈ ಈಶ್ವರಬ್ರಾಹ್ಮಣನು ಗಂಗಾನದಿಯತೀರದಲ್ಲಿ ದಿವ್ಯವಾದ ಗಂಗಾಸ್ತೋತ್ರವನ್ನು ತಾನೇ ರಚಿಸಿ ಪಠಿಸುತ್ತಿದ್ದನು. ಇದೇ ಸಂದರ್ಭದಲ್ಲಿ ಯಜ್ಞಾಂಶ (ಕೃಷ್ಣಚೈತನ್ಯ) ನು ಗಂಗಾಸ್ತೋತ್ರಮಾಡುತ್ತಿರುವ ಈಶ್ವರವಿಪ್ರನ ಸಮೀಪಕ್ಕೆ ಬಂದು ಅವನನ್ನು ಕುರಿತು ಮನೋಹರವಾಗಿ ಇಂತೆಂದನು.

೯. "ಎಲೈ ಬ್ರಾಹ್ಮಣನೇ! ನೀನು ಗಂಗಾದೇವಿಯನ್ನು ಸ್ತೋತ್ರಮಾಡುವಾಗ "ಸುಕೃತಂ" "ಪೂರ್ತಂ" "ಅರ್ಣಂ" ಎಂದು ಹೇಳಿರುವೆ. ಈ ಮೂರು ಪದಗಳಿಂದ ತೋರುವ ಅರ್ಥಗಳೂ ಶ್ರುತಿಯ ಸಾರವೇ ಆಗಿರುವುದು. ಇದು ಗಂಗಾ ದೇವಿಯ ಸ್ತೋತ್ರಕ್ಕೆ ದೂಷಣವಾಗಿರುವುದೇ ವಿನಾ ಭೂಷಣವಾಗಿಲ್ಲ. ಆದುದರಿಂದ ಭೂಷಣವಾಗುವಂತೆ ಸ್ತೋತ್ರಮಾಡು" ಎಂದನು.

೧೦-೧೧. ಇದನ್ನು ಕೇಳಿ ಮೇಧಾವಿಯಾದ ಈಶ್ವರಬ್ರಾಹ್ಮಣನು ಯಜ್ಞಾಂಶನನ್ನು ಕುರಿತು "ನಾನು ಹೇಳಿರುವ ಸ್ತೋತ್ರದಲ್ಲಿ ಯಾವ ದೂಷಣವೂ ಇಲ್ಲವೇಇಲ್ಲ" ವೆಂದನು. ಅನಂತರ ಹೀಗೆ ಹೇಳಿದ ಈಶ್ವರಬ್ರಾಹ್ಮಣನನ್ನು ಕುರಿತು ಪುನಃ ಯಜ್ಞಾಂಶನು "ಇದರಲ್ಲಿ ಭೂಷಣವಿಚಾರ ಇಲ್ಲವೇಇಲ್ಲ. "ಸುಕೃತ" ವೆಂದರೆ ಧರ್ಮವು; "ಪೂರ್ತ" ವೆಂದರೆ ಚೈತನ್ಯವು; "ಅರ್ಣ" ವೆಂದರೆ ವೀರ್ಯ. ಈ ಮೂರೂವೇದದ ಸಾರಾಂಶವು. ಇದು ಶರೀರಕ್ಕೆ ಭೂಷಣವಾಗಿರುವುದೇ ಹೊರತು ಗಂಗಾನದಿಯ ಜಲಕ್ಕೆ ಧೂಷಣವಾಗುವ ಸಂಭವವಿಲ್ಲ. ಕೇವಲ ದೂಷಣವೇಸರಿ" ಎಂದನು.

ಇತಿ ಶ್ರುತ್ವಾ ಸ ವೈ ಭಿಕ್ಷುರ್ವಿಸ್ಮಿತೋಽಭೂಚ್ಚ ಗೀಃಪ್ರಿಯಃ ।
ಲಜ್ಜಿತಂ ಸ್ವಜನಂ ದೃಷ್ಟ್ವಾ ಶಾರದಾ ಸರ್ವಮಂಗಲಾ ॥
ವಿಹಸ್ಯೇಶ್ವರಮಿತ್ಯಾಹ ಕೃಷ್ಣಶ್ಚೈತನ್ಯಸಂಜ್ಞಕಃ ॥ ೧೨ ॥

ಇತಿ ಶ್ರುತ್ವಾ ತು ತಚ್ಛಿಷ್ಯಃ ಕೃಷ್ಣಮಂತ್ರಉಪಾಸಕಃ ।
ಬಭೂವ ವೈಷ್ಣವಶ್ರೇಷ್ಠಃ ಕೃಷ್ಣಚೈತನ್ಯಸೇವಕಃ ॥ ೧೩ ॥

॥ ಸೂತ ಉವಾಚ ॥

ಶ್ರೀಧರೋ ನಾಮ ವಿಖ್ಯಾತೋ ಬ್ರಾಹ್ಮಣಃ ಶಿವಪೂಜಕಃ ।
ಪತ್ತನೇ ನಗರೇ ರಮ್ಯೇ ತಸ್ಯ ಸಪ್ತಾಹಮುತ್ತಮಂ ॥ ೧೪ ॥

ರಾಜ್ಞಾ ಭಾಗವತಂ ತತ್ರ ಕಾರಿತಂ ಸಧನಂ ಬಹು ।
ಗೃಹೀತ್ವಾ ಶ್ರೀಧರೋ ವಿಪ್ರೋ ಜಗಾಮ ಶ್ವಶುರಾಲಯೇ ॥ ೧೫ ॥

---

೧೨. ಹೀಗೆ ಯಜ್ಞಾಂಶನು ಹೇಳಿದುದನ್ನು ಕೇಳಿ, ಶಾರದಾಭಕ್ತನಾದ ಆ ಈಶ್ವರಬ್ರಾಹ್ಮಣನು ಆಶ್ಚರ್ಯಹೊಂದಿದನು. ತನ್ನ ಭಕ್ತನು ಹೀಗೆ ನಾಚಿಕೆಯಿಂದ ತಲೆತಗ್ಗಿಸಿಕೊಂಡಿರುವುದನ್ನು ನೋಡಿ, ಸರ್ವಮಂಗಳಸ್ವರೂಪಳಾದ ಶಾರದಾಂಬಿಕೆಯು ಸ್ವಲ್ಪನಕ್ಕು, ಈಶ್ವರವಿಪ್ರನನ್ನು ಕುರಿತು "ಕೃಷ್ಣನೇ ಚೈತನ್ಯಸಂಜ್ಞೆಯಿಂದಕೂಡಿ ಕೃಷ್ಣಚೈತನ್ಯನಾಗಿರುವನು" ಎಂದು ಹೇಳಿದಳು.

೧೩. ದೇವಿಯು ಹಾಗೆ ಹೇಳಿದುದನ್ನು ಕೇಳಿ ಆ ಈಶ್ವರಬ್ರಾಹಣನು ಕೃಷ್ಣ ಚೈತನ್ಯನ ಶಿಷ್ಯನಾಗಿ ಕೃಷ್ಣಮಂತ್ರವನ್ನು ಉಪಾಸನೆಮಾಡುತ್ತಾ ವೈಷ್ಣವಶ್ರೇಷ್ಠ ನಾಗಿ ಯಾವಾಗಲೂ ಕೃಷ್ಣಚೈತನ್ಯನನ್ನು ಸೇವೆಮಾಡುತ್ತಿದ್ದನು.

ಸೂತಮುನಿವರ್‍ಯನು ಹೇಳುತ್ತಾನೆ

೧೪-೧೫. ಸುಂದರವಾದ ಪಾಟ್ನಾನಗರದಲ್ಲಿ ಶಿವನನ್ನು ಪೂಜಿಸುವ ಶ್ರೀಧರ ನೆಂಬ ಬ್ರಾಹ್ಮಣೋತ್ತಮನಿದ್ದನು. ಆ ಊರಿನ ರಾಜನು ತುಂಬ ದ್ರವ್ಯವ್ಯಯಮಾಡಿ ವಿಜೃಂಭಣೆಯಾಗುವಂತೆ ಏಳುದಿವಸ ಶ್ರೀಧರನಿಂದ ಶ್ರೀಮದ್ಭಾಗವತವನ್ನು ಓದಿಸಿದನು. ಅನಂತರ ರಾಜನು ಆ ಬ್ರಾಹ್ಮಣನಿಗೆ ತುಂಬ ದ್ರವ್ಯವನ್ನು ಕೊಡಲು ಆ ಶ್ರೀಧರನು ಅದನ್ನು ತೆಗೆದುಕೊಂಡು ತನ್ನ ಮಾವನ ಮನೆಗೆ ಹೋದನು.

ತತ್ರೋಷ್ಯ ಮಾಸಮಾತ್ರಂ ಚ ಸ್ವಪತ್ನ್ಯಾ ಸಹ ವೈ ದ್ವಿಜಃ ।
ಸ್ವಗೇಹಮಗಮನ್ಮಾರ್ಗೇ ಚೋರಾಃ ಸಪ್ತ ತು ತಂ ಪ್ರತಿ ॥
ಶಪಥಂ ರಾಮದೇವಸ್ಯ ಕೃತ್ವಾ ಸಾರ್ಧಮುಪಾಯಯುಃ ॥ ೧೬ ॥

ಸಮಾಪ್ತೇ ವಿಪಿನೇ ರಮ್ಯೇ ಹತ್ವಾ ತೇ ಶ್ರೀಧರಂ ದ್ವಿಜಂ ।
ಗೋರಥಂ ಸಧನಂ ತತ್ರ ಸಭಾರ್ಯಂ ಜಗೃಹುಸ್ತದಾ ॥ ೧೭ ॥

ಏತಸ್ಮಿನ್ನಂತರೇ ರಾಮಃ ಸಚ್ಚಿದಾನಂದವಿಗ್ರಹಃ ।
ಸಪ್ತ ತಾಂಶ್ಚ ಶರೈರ್ಹತ್ವಾ ಪುನರುಜ್ಜೀವ್ಯ ತಂ ದ್ವಿಜಂ ॥ ೧೮ ॥

ಪ್ರೇಷಯಾಮಾಸ ಭಗವಾಂಸ್ತದಾ ವೃಂದಾವನೇ ಪ್ರಭುಃ ।
ತದಾಪ್ರಭೃತಿ ವೈ ವಿಪ್ರಃ ಶ್ರೀಧರೋ ವೈಷ್ಣವೋಽಭವತ್ ॥ ೧೯ ॥

---

೧೬. ಅಲ್ಲಿ ಹೋಗಿ ತನ್ನ ಪತ್ನಿಯೊಡನೆ ಆ ಶ್ರೀಧರನು ಒಂದುತಿಂಗಳವರೆಗೆ ಇದ್ದು, ಅನಂತರ ಅಲ್ಲಿಂದ ಹೊರಟು ತನ್ನ ಮನೆಗೆ ಹಿಂದಿರುಗುತ್ತಾ ಮಾರ್ಗದಲ್ಲಿ ಪ್ರಯಾಣಮಾಡುತ್ತಿರಲು, ಏಳುಜನ ಕಳ್ಳರು ಬಂದು ಆ ಶ್ರೀಧರನನ್ನು ಕಂಡು "ರಾಮ ದೇವರ ಸತ್ಯವಾಗಿಯೂ ನಾವು ನಿಮಗೆ ಯಾವತೊಂದರೆಯನ್ನೂ ಮಾಡುವುದಿಲ್ಲ" ವೆಂದು ಹೇಳಿ ಜೊತೆಯಲ್ಲಿಯೇ ಹೊರಟರು.

೧೭. ಪ್ರಯಾಣಮಾಡುತ್ತಾ ಸ್ವಲ್ಪದೂರ ಜೊತೆಯಲ್ಲಿ ಹೋಗಿ ಅನಂತರ ಸುಂದರವಾದ ಒಂದು ಅರಣ್ಯಮಧ್ಯಕ್ಕೆ ಒರುತ್ತಲೆ, ಆ ಕಳ್ಳರು ಆ ಶ್ರೀಧರಬ್ರಾಹ್ಮಣ ನನ್ನು ಕೊಂದು ಅವನ ಪತ್ನಿಯನ್ನೂ ದ್ರವ್ಯಸಮೇತವಾದ ಆ ಎತ್ತಿನಗಾಡಿಯನ್ನೂ ಸಹ ಅಪಹರಿಸಿದರು.

೧೮. ಇಷ್ಟರಲ್ಲಿ ಸಚ್ಚಿದಾನಂದಸ್ವರೂಪಿಯಾದ ಶ್ರೀರಾಮನು ಪ್ರತ್ಯಕ್ಷವಾಗಿ ಬಂದು, ಆ ಏಳುಜನ ಕಳ್ಳರನ್ನೂ ಬಾಣದಿಂದ ಕೊಂದು ಆ ಶ್ರೀಧರನನ್ನು ಪುನಃ ಬದುಕಿಸಿದನು.

೧೯. ಭಗವಂತನಾದ ಶ್ರೀರಾಮನು ಅನಂತರ ಆ ಬ್ರಾಹ್ಮಣನನ್ನು ಬೃಂದಾ ವನಕ್ಕೆ ಕಳುಹಿಸಿಕೊಟ್ಟನು. ಅದುಮೊದಲುಗೊಂಡು ಆ ಬ್ರಾಹ್ಮಣೋತ್ತಮನಾದ ಶ್ರೀಧರನು ವೈಷ್ಣವನಾದನು.

ಸಪ್ತಾಬ್ದೇ ಚೈವ ಯಜ್ಞಾಂಶೇ ಗತ್ವಾ ಶಾಂತಿಪುರೀಂ ಶುಭಾಂ ।
ಬ್ರಹ್ಮಜ್ಞಾನಮುಪಾಗಮ್ಯ ಯಜ್ಞಾಂಶಾಚ್ಛಿಷ್ಯತಾಂ ಗತಃ ।
ಟೀಕಾ ಭಾಗವತಸ್ಯೈವ ಕೃತಾ ತೇನ ಮಹಾತ್ಮನಾ　　॥ ೨೦ ॥

॥ ಸೂತ ಉವಾಚ ॥

ರಾಮಶರ್ಮಾ ಸ್ಥಿತಃ ಕಾಶ್ಯಾಂ ಶಂಕರಾರ್ಚನತತ್ಪರಃ ॥
ಶಿವರಾತ್ರೇ ದ್ವಿಜೋ ಧೀಮಾನವಿಮುಕ್ತೇಶ್ವರಸ್ಥಲೇ ।
ಏಕಾಕೀ ಜಾಗರನ್ ಧ್ಯಾನೀ ಜಪ್ತ್ವಾ ಪಂಚಾಕ್ಷರಂ ಶುಭಂ　　॥ ೨೧ ॥

ತದಾ ಪ್ರಸನ್ನೋ ಭಗವಾಞ್ಛಂಕರೋ ಲೋಕಶಂಕರಃ ।
ವರಂ ಬ್ರೂಹೀತಿ ವಚನಂ ತಮಾಹ ದ್ವಿಜಸತ್ತಮಂ　　॥ ೨೨ ॥

ರಾಮಶರ್ಮಾ ಶಿವಂ ನತ್ವಾ ವಚನಂ ಪ್ರಾಹ ನಮ್ರಧೀಃ ।
ಭವಾನ್ಯಸ್ಯ ಸಮಾಧಿಸ್ಥೋ ಧ್ಯಾನೇ ಯಸ್ಯ ಪರೋ ಭವಾನ್　　॥ ೨೩ ॥

---

೨೦. ಯಜ್ಞಾಂಶನಿಗೆ ಏಳುವರ್ಷ ವಯಸ್ಸಾಗಲು ಆಮೇಲೆ ಆ ಶ್ರೀಧರನು ಶಾಂತಿಪುರಕ್ಕೆ ಹೋಗಿ ಆ ಯಜ್ಞಾಂಶನಿಂದ ಬ್ರಹ್ಮಜ್ಞಾನವನ್ನು ಪಡೆದು ಅವನ ಶಿಷ್ಯನಾಗಿ ಶ್ರೀಮದ್ಭಾಗವತಕ್ಕೆ ವ್ಯಾಖ್ಯಾನವನ್ನು ರಚಿಸಿದನು.

೨೧ ಸೂತಮುನಿವರ್ಯನು ಪುನಃ ಹೇಳುತ್ತಾನೆ—ಮೇಧಾವಿಯೂ ಶಿವಪೂಜಾ ಧುರಂಧರನೂ ಆದ ರಾಮಶರ್ಮನೆಂಬ ಬ್ರಾಹ್ಮಣನು ಕಾಶಿಯಲ್ಲಿದ್ದನು. ಶಿವರಾತ್ರಿಯ ದಿವಸ ಆ ಬ್ರಾಹ್ಮಣನು ಅವಿಮುಕ್ತೇಶ್ವರ ಸ್ಥಳದಲ್ಲಿ ಒಬ್ಬನೇ ಜಾಗರಣೆಮಾಡುತ್ತಾ ನಿಯಮದಿಂದ ಶಿವಪಂಚಾಕ್ಷರೀ ಮಂತ್ರವನ್ನು ಜಪಮಾಡಿದನು.

೨೨. ಲೋಕಕ್ಕೆ ಕಲ್ಯಾಣವನ್ನುಂಟುಮಾಡುವ ಪರಮೇಶ್ವರನು ಆಗ ಪ್ರಸನ್ನ ನಾಗಿ, ಬ್ರಾಹ್ಮಣಶ್ರೇಷ್ಠನಾದ ಆ ರಾಮಶರ್ಮನನ್ನು ಕುರಿತು “ ಅಯ್ಯಾ! ನಿನಗೆ ಬೇಕಾದ ವರವನ್ನು ಬೇಡು ” ಎಂದನು.

೨೩. ಹೀಗೆ ಪರಮೇಶ್ವರನು ಪ್ರಸನ್ನನಾಗಿ ಹೇಳಿದ ಮಾತನ್ನು ಕೇಳಿ, ಆ ರಾಮ ಶರ್ಮನು ಪರಮೇಶ್ವರನನ್ನು ಕುರಿತು “ ದೇವಾ ! ನೀನು ಯಾವಾಗಲೂ ಯಾರ ನ್ನುದ್ದೇಶಿಸಿ ಸಮಾಧಿಮಗ್ನನಾಗಿರುವೆಯೋ ಮತ್ತು ಪೂಜ್ಯನಾದ ನೀನೂ ಸಹ ಯಾವನ ಧ್ಯಾನದಲ್ಲಿ ತತ್ಪರನಾಗಿರುವೆಯೋ,

ಸ ದೇವೋ ಹೃದಯೇ ಮಹ್ಯಂ ವಸೇತ್ತ್ವವ ವರಾತ್ಪ್ರಭೋ ।
ಇತ್ಯುಕ್ತವಚನೇ ತಸ್ಮಿನ್ ವಿಹಸ್ಯಾಹ ಮಹೇಶ್ವರಃ ॥ ೨೪ ॥

ಏಕಾ ವೈ ಪ್ರಕೃತಿರ್ಮಾಯಾ ತ್ರಿಧಾ ಬ್ರಹ್ಮಸ್ವರೂಪಿಣೀ ।
ಶೂನ್ಯಭೂತಾವ್ಯಯಸ್ಯೈವ ಪುರುಷಸ್ಯಾರ್ಧತೈಜಸಂ ॥
ಗೃಹೀತ್ವಾ ಲೋಕಜನನೀಂ ಪುಂಕ್ಲೀಬೌ ಸುಷುವೇ ಸುತೌ ॥ ೨೫ ॥

ಪುಮಾನ್ನಾರಾಯಣಃ ಸಾಕ್ಷಾದ್ಗೌರಶ್ಚಾಷ್ಟಭುಜೈರ್ಯುತಃ ।
ತ್ರಿಧಾ ಬಭೂವ ಭಗವಾನ್ ಸ್ವೇಚ್ಛಯಾ ವಿಶ್ವರಕ್ಷಕಃ ॥ ೨೬ ॥

---

೨೪. ಆ ದೇವನು ನನ್ನ ಹೃದಯದಲ್ಲಿ ವಾಸಮಾಡುವಂತೆ ವರವನ್ನು ಕೊಡು" ಎಂದು ಬೇಡಿದನು. ಆ ರಾಮಶರ್ಮನು ಹೀಗೆ ವರವನ್ನು ಕೇಳಲು ಆಗ ಪರಮೇಶ್ವರನು ಸ್ವಲ್ಪನಕ್ಕು ಆ ಬ್ರಾಹ್ಮಣನನ್ನು ಕುರಿತು ಇಂತೆಂದನು.

೨೫. "ಬ್ರಾಹ್ಮಣೋತ್ತಮನೇ! ಪ್ರಕೃತಿಯು ಒಬ್ಬಳೇ. ಆಕೆ ಅದ್ವಿತೀಯಳು. ಮತ್ತು ಮಾಯಾಸ್ವರೂಪಿಣಿಯು. ಆವಳೇ ಮೂರು ಸ್ವರೂಪವನ್ನುಹೊಂದಿ ಪ್ರಪಂಚವನ್ನೆಲ್ಲಾ ವ್ಯಾಪಿಸಿರುವಳು. ಸರ್ವವ್ಯಾಪಕಳೂ ಮಾಯಾವಿಯೂ ಆದ ಈ ಪ್ರಕೃತಿಯು ; ಶೂನ್ಯಸ್ವರೂಪನೂ, (ನಿರಾಕಾರನೂ) ನಾಶರಹಿತನೂ ಆದ ಪುರುಷನ ಅರ್ಧತೇಜಸ್ಸನ್ನು ಸ್ವೀಕರಿಸಿ ಪುರುಷ ಮತ್ತು ನಪುಂಸಕ ಎಂಬ ಇಬ್ಬರು ಮಕ್ಕಳನ್ನು ಪಡೆದಳು. (ಸಾಂಖ್ಯಮತರೀತ್ಯಾ ಪ್ರಕೃತಿ ಮತ್ತು ಪುರುಷ ಎಂಬವರಿಬ್ಬರೇ ಸಕಲ ಜಗತ್ತಿನ ಸೃಷ್ಟಿಸ್ಥಿತಿಸಂಹಾರಕಾರ್ಯಗಳಿಗೂ, ಅಧಿಕಾರಿಗಳು. ಆದುದರಿಂದ ಆ ಮತಪ್ರಕ್ರಿಯೆಯನ್ನನುಸರಿಸಿ ಈರೀತಿ ಇಲ್ಲಿ ಹೇಳಿದೆಯೆಂದು ತಿಳಿಯಬೇಕು.)

೨೬. ಇಬ್ಬರು ಮಕ್ಕಳಲ್ಲಿ ಪುರುಷನು ಸಾಕ್ಷಾತ್ ನಾರಾಯಣನೆನಿಸಿದನು. ಇವನು ಶುಭ್ರವರ್ಣವುಳ್ಳವನಾಗಿಯೂ ಎಂಟುಭುಜಗಳಿಂದ ಕೂಡಿದವನಾಗಿಯೂ ಇದ್ದನು. ಈ ನಾರಾಯಣನು ಪುನಃ ತಾನೇ ಮೂರು ರೂಪವನ್ನುತಾಳಿ ಪ್ರಪಂಚದ ರಕ್ಷಣೆಯಲ್ಲಿ ನಿಯುಕ್ತನಾದನು.

ಅರ್ಧತೇಜಾಸ್ಸ ವೈ ವಿಷ್ಣುರ್ವನಮಾಲೀ ಚತುರ್ಭುಜಃ ।
ಕ್ಷೀರಶಾಯೀ ಸ ಆದಿತ್ಯಃ ಸ್ವಯಂ ಸದ್ಗುಣದೇವತಾ ॥ ೨೭ ॥

ಅರ್ಧತೇಜಾ ದ್ವಿಧಾ ಸೈವ ನರನಾರಾಯಣಾವೃಷೀ ।
ಜಿಷ್ಣುರ್ವಿಷ್ಣುಃ ಸ ವೈ ಜ್ಞೇಯೋ ಪರ್ವತೇ ಗಂಧಮಾದನೇ ॥ ೨೮ ॥

ಕ್ಲೀಬಃ ಸಂಕರ್ಷಣಃ ಸಾಕ್ಷಾದ್ಬ್ರಹ್ಮರೂಪಂ ತ್ರಿಧಾಭವತ್ ।
ಪೂರ್ವಾರ್ಧಾದ್ಗೌರಶೇಷಶ್ಚ ಪರಾರ್ಧಾದ್ರಾಮಲಕ್ಷ್ಮಣೌ ॥ ೨೯ ॥

ಗೌರಶೇಷೋ ದ್ವಾಪರಾಂತೇ ಬಲಭದ್ರಃ ಸ ವೈ ಸ್ವಯಂ ।
ರಾಮಲಕ್ಷ್ಮಣಯೋರ್ಧ್ಯಾನಂ ಬಲಭದ್ರಸ್ಯ ಪೂಜನಂ ॥ ೩೦ ॥

---

೨೭. ಆ ನಾರಾಯಣನ ಅರ್ಧತೇಜಸ್ಸಿನ ಅಂಶದಿಂದ ವಿಷ್ಣುವು ಅವತರಿಸಿದನು. ಅವನು ನಾಲ್ಕುಭುಜಗಳಿಂದಕೂಡಿ ವನಮಾಲಿಯೆನಿಸಿದನು. ಸದ್ಗುಣಗಳಿಗೆ ಆಶ್ರಯನಾದ ಇವನೇ ಕ್ಷೀರಶಾಯಿಯೆಂದೂ ಆದಿತ್ಯನೆಂದೂ ಬೇರೆಬೇರೆ ಹೆಸರುಗಳಿಂದ ಕರೆಯಲ್ಪಡುವನು.

೨೮. ನಾರಾಯಣನ ಉಳಿದ ಅರ್ಧತೇಜಸ್ಸಿನಿಂದ ನರನಾರಾಯಣಸ್ವರೂಪರೂ ಜ್ಞಾನಿಗಳೂ ಆದ ಇಬ್ಬರು ಏರ್ಪಟ್ಟರು. ಇವರಿಬ್ಬರೇ ಗಂಧಮಾದನಪರ್ವತದಲ್ಲಿ ಜಿಷ್ಣು ವಿಷ್ಣು ಎಂಬ ನಾಮಾಂತರವನ್ನು ಪಡೆದು ವಾಸಮಾಡಿದರು.

೨೯. ಆ ಪ್ರಕೃತಿದೇವಿಯ ಇಬ್ಬರು ಮಕ್ಕಳಲ್ಲಿ ಎರಡನೆಯವನಾದ ಕ್ಲೀಬನೇ ಸಂಕರ್ಷಣನೆನಿಸಿದನು. ಸಂಕರ್ಷಣನ ಶರೀರದ ಪೂರ್ವಾರ್ಧದಿಂದ ಗೌರವರ್ಣದ ಶೇಷನೂ, ಪರಾರ್ಧದಿಂದ ರಾಮಲಕ್ಷ್ಮಣರೂ ಉಂಟಾದರು. ಈರೀತಿ ಆ ಸಂಕರ್ಷಣನೂ ಮೂರು ರೂಪವನ್ನು ತಾಳಿದನು.

೩೦. ದ್ವಾಪರಯುಗದ ಕೊನೆಯಲ್ಲಿ ಗೌರವರ್ಣದಶೇಷನೇ ಬಲಭದ್ರನೆಂದು ಪ್ರಸಿದ್ಧಿಹೊಂದಿದನು. ಆ ರಾಮಲಕ್ಷ್ಮಣರ ಧ್ಯಾನವನ್ನೂ ಬಲಭದ್ರನ ಪೂಜೆಯನ್ನೂ ಸಹ ನಾನು ಯಾವಾಗಲೂ ಮಾಡುತ್ತಿರುವೆನು. ಆದುದರಿಂದ ನೀನೂ ಅವರನ್ನು ಸೇವಿಸಿ ಸುಖವನ್ನುಪಡೆ " ಎಂದನು.

ಸದಾ ಮಯಾ ಚ ಕರ್ತವ್ಯಂ ತತ್ಪ್ರಾಸ್ಯ ತ್ವಂ ಸುಖೀ ಭವ ।
ಇತ್ಯುಕ್ತ್ವಾಂತರ್ದಧೇ ದೇವೋ ರಾಮಾನಂದಸ್ಯ ಚಾಭವತ್ ।
ಕೃಷ್ಣಚೈತನ್ಯಮಾಗಮ್ಯ ದ್ವಾದಶಾಬ್ದವಯೋವೃತಂ ॥ ೩೧ ॥

ಶಿಷ್ಯೋ ಭೂತ್ವಾ ಸ್ಥಿತಸ್ತತ್ರ ಕೃಷ್ಣಚೈತನ್ಯಪೂಜಕಃ ।
ಕೃತಂ ತದಾಜ್ಞಯಾ ತೇನಾಧ್ಯಾತ್ಮರಾಮಾಯಣಂ ಶುಭಂ ॥ ೩೨ ॥

॥ ಸೂತ ಉವಾಚ ॥

ಜೀವಾನಂದಸ್ಸ ವೈ ವಿಪ್ರೋ ರೂಪಾನಂದಸಮನ್ವಿತಃ ।
ಶ್ರುತ್ವಾ ಚೈತನ್ಯಚರಿತಂ ಪುರೀಂ ಶಾಂತಿಮಯೀಂ ಗತಃ ॥ ೩೩ ॥

ಚೈತನ್ಯೇ ಷೋಡಶಾಬ್ದೇ ಚ ನತ್ವಾ ತಂ ತೌ ಸಮಾಸ್ಥಿತೌ ।
ಊಚತುಃ ಕೃಷ್ಣಚೈತನ್ಯಂ ಭವತಾ ಕಿಂ ಮತಂ ಸ್ಮೃತಂ ॥ ೩೪ ॥

---

೩೧. ಈರೀತಿ ಹೇಳಿ ಪರಮೇಶ್ವರನು ಅದೃಶ್ಯನಾದನು. ಅನಂತರ ಆ ರಾಮು ಶರ್ಮನು ರಾಮಾನಂದನೆಂದು ಹೆಸರನ್ನು ಧರಿಸಿ ಹನ್ನೆರಡುವರ್ಷವಯಸ್ಸಿನಾದ ಕೃಷ್ಣಚೈತನ್ಯನ ಸಮೀಪಕ್ಕೆ ಬಂದು,

೩೨. ಅವನ ಶಿಷ್ಯನಾಗಿ ಅಲ್ಲಿಯೇ ಗುರುಶುಶ್ರೂಷೆಯನ್ನು ಮಾಡುತ್ತಾ ಇದ್ದನು. ಒಂದುದಿನ ಗುರುವಾದ ಆ ಕೃಷ್ಣಚೈತನ್ಯನು ಆಜ್ಞೆಮಾಡಲು ಅದರಂತೆ ಮಂಗಳಕರವಾದ ಅಧ್ಯಾತ್ಮರಾಮಾಯಣವನ್ನು ರಚಿಸಿದನು.

೩೩. ಪುನಃ ಸೂತಮುನಿವರ್ಯನು ಹೇಳುತ್ತಾನೆ—ಪ್ರಸಿದ್ಧನಾದ ಜೀವಾನಂದನೆಂಬ ಬ್ರಾಹ್ಮಣನು ಕೃಷ್ಣಚೈತನ್ಯನ ಚರಿತ್ರೆಯನ್ನು ಕೇಳಿ ಅವನನ್ನು ದರ್ಶನ ಮಾಡಲು ರೂಪಾನಂದನ ಜೊತೆಯಲ್ಲಿ ಹೊರಟು ಶಾಂತಿಪುರಕ್ಕೆ ಬಂದನು.

೩೪. ಈ ಸಮಯದಲ್ಲಿ ಕೃಷ್ಣಚೈತನ್ಯನಿಗೆ ಹದಿನಾರನೆಯವರ್ಷ ನಡೆಯುತ್ತಿತ್ತು. ಆಗ ಆ ಬ್ರಾಹ್ಮಣರಿಬ್ಬರೂ ಅಲ್ಲಿಗೆ ಬಂದು ಅವನಿಗೆ ನಮಿಸಿ "ನಿನಗೆ ಅಭೀಷ್ಟವಾದ ಮತವಾವುದು?" ಎಂದು ಕೃಷ್ಣಚೈತನ್ಯನನ್ನು ಪ್ರಶ್ನೆ ಮಾಡಿದರು.

ವಿಹಸ್ಯಾಹ ಸ ಚೈತನ್ಯಃ ಶಾಕ್ತೋಽಹಂ ಶಕ್ತಿಪೂಜಕಃ ।
ಶೈವೋಽಹಂ ವೈ ದ್ವಿಜೌ ನಿತ್ಯಂ ಲೋಕಾರ್ಥೇ ಶಂಕರವ್ರತೀ ।
ವೈಷ್ಣವೋಽಹಂ ಧ್ಯಾನಪರೋ ದೇವದೇವಸ್ಯ ಭಕ್ತಿಮಾನ್ ॥ ೩೫ ॥

ಅಹಂ ಭಕ್ತಿಮದಂ ಪೀತ್ವಾ ಪಾಪಪುಂಸೋ ಬಲಿಂ ಶುಭಂ ।
ಶಕ್ತ್ಯೈ ಸಮರ್ಪ್ಯ ಹೋಮಾಂತೇ ಜ್ಞಾನಾಗ್ನೌ ಯಜ್ಞತತ್ಪರಃ ॥ ೩೬ ॥

---

೩೫. ಆಗ ಆ ಕೃಷ್ಣಚೈತನ್ಯನು ಆ ಬ್ರಾಹ್ಮಣರ ಮಾತನ್ನು ಕೇಳಿ ಸ್ವಲ್ಪನಕ್ಕು ಅವರನ್ನು ಕುರಿತು " ನಾನು ಶಕ್ತಿದೇವತೆಯನ್ನು ಪೂಜಿಸುವ ಶಾಕ್ತಮತವನ್ನವಲಂಬಿಸಿರುವೆನು. ಮತ್ತು ನಾನು ಶಿವಭಕ್ತಿಪರಾಯಣನು. ಎಲೈ ಬ್ರಾಹ್ಮಣೋತ್ತಮರೇ ! ನಾನು ಯಾವಾಗಲೂ ಲೋಕಕಲ್ಯಾಣಕ್ಕೋಸ್ಕರ ಮಂಗಳಕರವಾದ ಶಂಕರ ವ್ರತವನ್ನು ಆಚರಿಸುವೆನು. ಅಲ್ಲದೆ ದೇವದೇವನಾದ ಮಹಾವಿಷ್ಣುಧ್ಯಾನತತ್ಪರನಾದ ನಾನು ವೈಷ್ಣವನೆನಿಸಿ ವಿಷ್ಣುಭಕ್ತನೂ ಆಗಿರುವೆನು." (ಮೂರು ಮತವನ್ನೂ ಆಶ್ರಯಿಸಿರುವೆನೆಂದು ಭಾವವು.)

೩೬. " ನಾನು ವಿಷ್ಣುಭಕ್ತಿಯೆಂಬ ಮದ್ಯಪಾನಮಾಡಿ ಪಾಪಸ್ವರೂಪವೆಂಬ ಪುರುಷನೇ ಶುಭಕರವಾದ ಬಲಿಯೆಂದು ತಿಳಿದು, ಅದನ್ನು ಶಕ್ತಿದೇವತೆಗೆ ಹೋಮದ ಕೊನೆಯಲ್ಲಿ ಸಮರ್ಪಿಸಿ, ಜ್ಞಾನವೆಂಬ ಅಗ್ನಿಯಲ್ಲಿ ಯಾವಾಗಲೂ ಹೋಮ ಮಾಡುತ್ತಾ ಯಜ್ಞಶೀಲನಾಗಿರುವೆನು. " ಎಂದು ಹೇಳಿದನು. (ಎಂದರೆ ವಿಷ್ಣುಭಕ್ತಿಯಿಂದ ನನ್ನಲ್ಲಿರುವ ಅಜ್ಞಾನವೆಲ್ಲವೂ ನಾಶವಾಗಿ ಕೇವಲ ಜ್ಞಾನಸ್ವರೂಪನಾಗಿರುವೆನು. ಸಕಲ ಪಾಪಕಾರ್ಯಗಳಿಗೂ ಅಜ್ಞಾನವೇ ಮೂಲಕಾರಣವಾದುದು. ಅದನ್ನು ದೂರಮಾಡಿದಹೊರತು ಪಾಪನಿವೃತ್ತಿಯಿಲ್ಲ. ಪಾಪನಿವೃತ್ತಿಯಿಲ್ಲದೆ ಜ್ಞಾನೋತ್ಪತ್ತಿಯಾಗಲಾರದು. ಆದುದರಿಂದ ಮೊದಲು ಅಜ್ಞಾನಜನ್ಯಗಳಾದ ಪಾಪಕರ್ಮಗಳನ್ನು ತೊರೆದು ಅನಂತರ ಜ್ಞಾನಾರ್ಜನೆಮಾಡಿದರೆ ಸುಖವುಂಟು. ಇಲ್ಲದಿದ್ದರೆ ಕೇವಲ ಮತಭಾವನೆಗಳಿಂದ ಏನೂ ಪ್ರಯೋಜನವಿಲ್ಲ. " ಅವಿದ್ಯಯಾ ಮೃತ್ಯುಂ ತೀರ್ತ್ವಾವಿದ್ಯಯಾಽಮೃತಮಶ್ನುತೇ " ಎಂಬ ಸ್ಮೃತಿಯು ಇದಕ್ಕೆ ಆಧಾರವೆಂದು ತಿಳಿಯಬೇಕು.)

ಇತಿ ಶ್ರುತ್ವಾ ದ್ವಿಜೌ ತೌ ತು ತಸ್ಯ ಶಿಷ್ಯತ್ವಮಾಗತೌ ।
ಆಚಾರಮಾರ್ಗಮಾಗಮ್ಯ ಸರ್ವಪೂಜ್ಯೌ ಬಭೂವತುಃ ॥ ೩೭ ॥

ತದಾಜ್ಞಯಾ ಷಟ್‌ಸಂದರ್ಭಂ ಜೀವಾನಂದಶ್ಚಕಾರ ವೈ ।
ಉವಾಸ ತತ್ರ ಮತಿಮಾನ್‌ಕೃಷ್ಣಚೈತನ್ಯಸೇವಕಃ ॥ ೩೮ ॥

ರೂಪಾನಂದೋ ಗುರೋರಾಜ್ಞಾಂ ಪುರಸ್ಕೃತ್ಯ ಮಹಾಮುನಿಃ ।
ಕೃಷ್ಣಖಂಡಂ ಪುರಾಣಾಂಗಂ ಚಕ್ರೇ ದಶಸಹಸ್ರಕಂ ।
ತತ್ರೋಷ್ಯ ಗುರುಸೇವಾಢ್ಯೋ ರಾಧಾಕೃಷ್ಣಪ್ರಪೂಜಕಃ ॥ ೩೯ ॥

॥ ಸೂತ ಉವಾಚ ॥

ವಿಷ್ಣುಸ್ವಾಮೀ ಸ ವೈ ವಿಪ್ರೋ ಗತಃ ಶಾಂತಿಪುರೀಂ ಶುಭಾಂ ।
ಯಜ್ಞಾಂಶ ಊನವಿಂಶಾಬ್ದೇ ನತ್ವಾ ತಂ ಪ್ರಾಹ ಸ ದ್ವಿಜಃ ॥ ೪೦ ॥

---

೩೭. ಹೀಗೆ ಕೃಷ್ಣಚೈತನ್ಯನು ಜೀವಾನಂದ ರೂಪಾನಂದರಿಗೆ ಜ್ಞಾನೋಪದೇಶಮಾಡಲಾಗಿ ಅವರಿಬ್ಬರೂ ಆಚಾರಮಾರ್ಗವನ್ನು ಅವಲಂಬಿಸಿ ಕೃಷ್ಣಚೈತನ್ಯನ ಶಿಷ್ಯರಾಗಿ ಎಲ್ಲರಿಂದಲೂ ಪೂಜಾರ್ಹರಾದರು.

೩೮. ಅನಂತರ ಜೀವಾನಂದನು ತನ್ನ ಗುರುವಿನ ಅಪ್ಪಣೆಯಂತೆ ಷಟ್ಸಂದರ್ಭವೆಂಬ ಗ್ರಂಥವನ್ನು ರಚಿಸಿದನು. ಮತ್ತು ಮೇಧಾವಿಯಾಗಿ ಗುರುಶುಶ್ರೂಷೆ ಮಾಡುತ್ತಾ ಅಲ್ಲಿಯೇ ನಿಂತನು.

೩೯. ಮಹಾಮುನಿಯಾದ ರೂಪಾನಂದನೂ ಸಹ ಗುರುವಿನ ಮಾತಿನಂತೆ ಹತ್ತುಸಾವಿರಗ್ರಂಥವುಳ್ಳ ಪುರಾಣಾಂಗನಾದ ಕೃಷ್ಣಖಂಡವನ್ನು ರಚಿಸಿ, ಅಲ್ಲಿಯೇ ಗುರುಸೇವಾತತ್ಪರನಾಗಿ ರಾಧಾಕೃಷ್ಣರ ಪೂಜೆಯನ್ನುಮಾಡುತ್ತಾ ತನ್ನ ಆಯುಷ್ಯವನ್ನು ಕಳೆದನು.

೪೦. ಸೂತಮುನಿವರ್ಯನು ಪುನಃ ಕೃಷ್ಣಚೈತನ್ಯರ ದಿಗ್ವಿಜಯವನ್ನು ಹೇಳುತ್ತಾನೆ—ಯಜ್ಞಾಂಶನಾದ ಕೃಷ್ಣಚೈತನ್ಯನಿಗೆ ಹತ್ತೊಂಬತ್ತನೆಯ ವರ್ಷನಡೆಯುತ್ತಿರಲು, ವಿಷ್ಣುಸ್ವಾಮಿಯೆಂಬ ಬ್ರಾಹ್ಮಣೋತ್ತಮನು ಮಂಗಳಕರವಾದ ಶಾಂತಿಪುರಕ್ಕೆ ಬಂದು ಅಲ್ಲಿ ಯಜ್ಞಾಂಶನನ್ನು ಕಂಡು ನಮಸ್ಕಾರಮಾಡಿ ಹೀಗೆಂದನು

ಕೋ ದೇವಃ ಸರ್ವದೇವಾನಾಂ ಪೂಜ್ಯೋ ಬ್ರಹ್ಮಾಂಡಗೋಚರೇ ।
ಇತಿ ಶ್ರುತ್ವಾ ಸ ಭಗವಾನುವಾಚ ದ್ವಿಜಸತ್ತಮಂ ॥ ೪೧ ॥

ಸರ್ವಪೂಜ್ಯೋ ಮಹಾದೇವೋ ಭಕ್ತಾನುಗ್ರಹಕಾರಕಃ ।
ವಿಷ್ಣ್ವೀಶ್ವರಶ್ಚ ರುದ್ರೇಶೋ ಬ್ರಹ್ಮೇಶೋ ಭಗವಾನ್ ಹರಃ ॥ ೪೨ ॥

ವಿನಾ ತತ್ಪೂಜಕೇನ್ನೈವ ಪದಾರ್ಥಾ ನಿಷ್ಫಲಾ ಹಿ ತೇ ।
ಯೇತು ವೈ ವಿಷ್ಣುಭಕ್ತಾಶ್ಚ ಶಂಕರಾರ್ಚನತತ್ಪರಾಃ ॥ ೪೩ ॥

ಶಿವಪ್ರಸಾದಾತ್ಸುಲಭಾ ವೈಷ್ಣವೀ ಭಕ್ತಿರುತ್ತಮಾ ।
ವೈಷ್ಣವಃ ಪುರುಷೋ ಭೂತ್ವಾ ಶಂಕರಂ ಲೋಕಶಂಕರಂ ॥ ೪೪ ॥

---

೪೧. "ಎಲೈ ಪೂಜ್ಯನೇ ! ದೃಷ್ಟಿಗೆ ಗೋಚರವಾಗುತ್ತಿರುವ ಈ ಬ್ರಹ್ಮಾಂಡ ದಲ್ಲಿ ಅನೇಕ ದೇವತೆಗಳುಂಟಷ್ಟೆ. ಅವುಗಳಲ್ಲಿ ಮುಖ್ಯವಾಗಿ ಪೂಜಾರ್ಹವಾದ ದೇವತೆ ಯಾವುದು? ಎಂದು ಪ್ರಶ್ನೆ ಮಾಡಲು, ಆ ಯಜ್ಞಾಂಶನು ವಿಷ್ಣುಸ್ವಾಮಿಯ ಮಾತನ್ನು ಕೇಳಿ ಉತ್ತರಹೇಳತೊಡಗಿದನು.

೪೨. "ಎಲೈ ಬ್ರಾಹ್ಮಣನೇ! ಮುಖ್ಯವಾಗಿ ಭಕ್ತಾನುಗ್ರಹಕಾರಕನಾದ ಮಹಾ ದೇವನೇ ಎಲ್ಲರಿಂದಲೂ ಪೂಜಾರ್ಹನು. ಈ ಮಹಾದೇವನು ವಿಷ್ಣು, ರುದ್ರ ಮತ್ತು ಬ್ರಹ್ಮ ಈ ತ್ರಿಮೂರ್ತಿಗಳಿಗೂ ಒಡೆಯನು. ಇವನೇ ಭಗವಂತನಾದ ಹರನು ಎಂದು ತಿಳಿಯಬೇಕು."

೪೩. "ಆ ಮಹಾದೇವನನ್ನು ಪೂಜೆಮಾಡದ ಜನರೂ, ಮತ್ತು ಅವನಿಗೆ ಸಮ ರ್ಪಿಸದೆ ಇರುವ ಪದಾರ್ಥಗಳೂ ನಿಷ್ಪ್ರಯೋಜನ. ವೈಷ್ಣವನಾಗಿ ತಾನು ವಿಷ್ಣು ಭಕ್ತನಾಗಿದ್ದರೂ ಶಿವನನ್ನು ಪೂಜಿಸಲೇಬೇಕು."

೪೪. "ಹೀಗೆ ಪರಮೇಶ್ವರನನ್ನು ಪೂಜೆಮಾಡಿದರೆ ಅವನ ಅನುಗ್ರಹದಿಂದ ಶ್ರೇಷ್ಠವಾದ ವಿಷ್ಣುಭಕ್ತಿಯು ಸುಲಭವಾಗಿ ಲಭಿಸುವುದು. ಕರ್ಮಭೂಮಿಯಲ್ಲಿ ವಾಸಿಸುವ ಮಾನವನು ವೈಷ್ಣವನಾಗಿದ್ದರೂ ಲೋಕಕಲ್ಯಾಣವನ್ನುಂಟುಮಾಡುವ ಶಂಕರನನ್ನು ಪೂಜಿಸಲೇಬೇಕು."

ಕರ್ಮಭೂಮ್ಯಾಂ ಸಮಾಗಮ್ಯ ನ ಪೂಜಯತಿ ನಾರಕಃ ।
ವಿಷ್ಣುಸ್ವಾಮೀತಿ ತಚ್ಛ್ರುತ್ವಾ ಶಿಷ್ಯೋ ಭೂತ್ವಾ ಚ ತದ್ಗುಣೈಃ ॥ ೪೫ ॥

ಕೃಷ್ಣಮಂತ್ರಮುಪಾಸಿತ್ವಾ ಸ ಬಭೂವ ಶಿವಾರ್ಚಕಃ ॥ ೪೬ ॥

ವೈಷ್ಣವೀ ಸಂಹಿತಾ ತೇನ ನಿರ್ಮಿತಾ ಚ ತದಾಜ್ಞಯಾ ।
ತತ್ರೋಷ್ಯ ವಿಷ್ಣುಭಕ್ತಶ್ಚ ಕೃಷ್ಣಚೈತನ್ಯಪೂಜಕಃ ॥ ೪೭ ॥

॥ ಸೂತ ಉವಾಚ ॥

ಮಧ್ವಾಚಾರ್ಯಃ ಕೃಷ್ಣಪರೋ ಜ್ಞಾತ್ವಾ ಯಜ್ಞಾಂಶಮುತ್ತಮಂ ।
ಗತ್ವಾ ಶಾಂತಿಪುರೀಂ ರಮ್ಯಾಂ ನತ್ವಾ ತಂ ಪ್ರಾಹ ಸ ದ್ವಿಜಃ ॥ ೪೮ ॥

---

೪೫ "ಹೀಗೆ ಪೂಜೆಮಾಡದೆಹೋದರೆ ಅವನಿಗೆ ನಿಜವಾಗಿಯೂ ನರಕಪ್ರಾಪ್ತಿಯಾಗುವುದು" ಎಂದು ಹೇಳಿದನು. ಹೀಗೆ ಯಜ್ಞಾಂಶನು ಹೇಳಿದುದನ್ನು ಕೇಳಿ ವಿಷ್ಣುಸ್ವಾಮಿಯು ಆ ಯಜ್ಞಾಂಶನಾದ ಕೃಷ್ಣಚೈತನ್ಯನ ಸದ್ಗುಣಗಳಿಗೆ ಸೋತು ಅವನ ಶಿಷ್ಯನೆನಿಸಿದನು.

೪೬-೪೭. ಬಳಿಕ ಆತನು ಕೃಷ್ಣಮಂತ್ರವನ್ನು ಉಪಾಸನೆಮಾಡುವವನೂ ಮತ್ತು ಶಿವಪೂಜಾಧುರಂಧರನೂ ಆದನು. ಅನಂತರ ಗುರುವಾದ ಕೃಷ್ಣಚೈತನ್ಯನ ಅಪ್ಪಣೆಯಂತೆ ವೈಷ್ಣವೀಸಂಹಿತೆಯನ್ನು ನಿರ್ಮಿಸಿ ಗುರುವಿನ ಸನ್ನಿಧಾನದಲ್ಲಿ ವಾಸಮಾಡುತ್ತಾ ವಿಷ್ಣುಭಕ್ತನೂ ಮತ್ತು ಕೃಷ್ಣಚೈತನ್ಯಪೂಜಕನೂ ಆಗಿ ಕಾಲ ಕಳೆಯುತ್ತಿದ್ದನು

೪೮. ಪುನಃ ಸೂತಮುನಿವರ್ಯನು ಕೃಷ್ಣಚೈತನ್ಯನ ಮಹಿಮೆಯನ್ನು ಹೇಳುತ್ತಾನೆ—ಒಂದು ಸಲ ಕೃಷ್ಣಧ್ಯಾನಪರರಾದ ಮಧ್ವಾಚಾರ್ಯರು ಮನೋಹರವಾದ ಶಾಂತಿಗ್ರಾಮಕ್ಕೆ ತೆರಳಿ ಅಲ್ಲಿ ಶ್ರೇಷ್ಠನಾದ ಯಜ್ಞಾಂಶನನ್ನು ಕಂಡು ನಮಸ್ಕರಿಸಿ ಅವನನ್ನು ಕುರಿತು ಹೀಗೆ ಪ್ರಶ್ನೆಮಾಡಿದರು.

ಕೃಷ್ಣೋಽಯಂ ಭಗವಾನ್ಸಾಕ್ಷಾತ್ತದನ್ಯೇ ವಿಶ್ವಕಾರಕಾಃ ।
ದೇವಾ ಧಾತ್ರಾದಯೋ ಜ್ಞೇಯಾಸ್ತೈರ್ಹಿ ತತ್ಪೂಜನೇನ ಕಿಂ ॥ ೪೯ ॥

ಶಕ್ತಿಮಾರ್ಗಪರಾ ವಿಪ್ರಾ ವೃಥಾಹಿಂಸಾಮಯೈರ್ಮಖೈಃ ।
ಅಶ್ವಮೇಧಾದಿಭಿರ್ದೇವಾನ್ ಪೂಜಯಂತಿ ಮಹೀತಲೇ ॥ ೫೦ ॥

ಇತಿ ಶ್ರುತ್ವಾ ವಿಹಸ್ಯಾಹ ಯಜ್ಞಾಂಶಶ್ಚ ಶಚೀಸುತಃ ।
ನ ಕೃಷ್ಣೋ ಭಗವಾನ್ ಸಾಕ್ಷಾತ್ತಾಮಸೋಽಯಂ ಚ ಶಕ್ತಿಜಃ ॥ ೫೧ ॥

ಚೌರೋಽಯಂ ಸರ್ವಭೋಗೀ ಚ ಹಿಂಸಕೋ ಮಾಂಸಭಕ್ಷಕಃ ।
ಪರಸ್ತ್ರಿಯಂ ಭಜೇದ್ಯೋ ವೈ ಸ ಗಚ್ಛೇದ್ಯಮಮಂದಿರಂ ॥ ೫೨ ॥

---

೪೯. " ಎಲೈ ಪೂಜ್ಯನೇ ! ಭಗವಂತನಾದ ಕೃಷ್ಣನು ಸಾಕ್ಷಾದ್ದೇವಶ್ರೇಷ್ಠನು ಮತ್ತು ಪೂಜಾರ್ಹನು. ಬ್ರಹ್ಮನೇ ಮೊದಲಾದ ಇತರ ದೇವತೆಗಳೆಲ್ಲರೂ ಇವನ ಅಪ್ಪಣೆಯಂತೆ ಪ್ರಪಂಚ ಸೃಷ್ಟಿ ಸ್ಥಿತಿ ಸಂಹಾರಕಾರ್ಯಗಳಲ್ಲಿ ಆಸಕ್ತರಾಗಿರುವರು. ಹೀಗಿರುವಾಗ ಅವರನ್ನು ಪೂಜಿಮಾಡುವುದು ಏತಕ್ಕೆ ? ಅದರಿಂದ ಯಾವಫಲ ಬರುವುದು. ? "

೫೦. " ಈ ಭೂಮಂಡಲದಲ್ಲಿ ಶಕ್ತಿಮಾರ್ಗವನ್ನವಲಂಬಿಸಿರುವ ಬ್ರಾಹ್ಮಣರು ಹಿಂಸಾಮಯವಾದ ಅಶ್ವಮೇಧವೇ ಮೊದಲಾದ ಯಾಗಗಳನ್ನು ಮಾಡುತ್ತಾ ಅದರಿಂದ ದೇವತೆಗಳನ್ನು ಪೂಜಿಸುವರು. ಹೀಗೆಮಾಡಲು ಕಾರಣವೇನು? ಇದನ್ನು ತಿಳಿಸಬೇಕು " ಎಂದು ಪ್ರಾರ್ಥಿಸಿದನು.

೫೧. ಶಚೀಕುಮಾರನಾದ ಯಜ್ಞಾಂಶನು ಈ ಮಾತನ್ನು ಕೇಳಿ " ಅಯ್ಯಾ ಬ್ರಾಹ್ಮಣನೇ ! ನೀನು ಹೇಳಿದ ಶ್ರೇಷ್ಠನಾದ ಸಾಕ್ಷಾತ್ಕೃಷ್ಣಭಗವಂತನೂ ಸಹ ತಮೋಗುಣಸ್ವರೂಪನು ಮತ್ತು ಶಕ್ತಿಯಿಂದಲೇ ಜನಿಸಿದವನು.

೫೨. ಇವನು ಬಾಲ್ಯದಲ್ಲಿ ಗೊಲ್ಲರಮನೆಯಲ್ಲಿ ಬೆಣ್ಣೆಯನ್ನು ಕದಿಯುತ್ತಿದ್ದ ಕಳ್ಳನು. ಪರಸ್ತ್ರೀಯರೆಂದು ಲೆಕ್ಕಿಸದೆ ಎಲ್ಲರೊಡನೆಯೂ ಕ್ರೀಡಿಸಿರುವನು. ಮತ್ತು ಹಿಂಸೆಮಾಡುವನು. ಅಲ್ಲದೆ ಮಾಂಸವನ್ನು ತಿನ್ನುವನು. ಪರಸ್ತ್ರೀಯನ್ನು ಭೋಗಿಸುವ ಪುರುಷನು ಯಮಪುರಿಯನ್ನು (ನರಕವನ್ನು) ಹೊಂದುವನು.

ಚೌರೋ ಯಮಾಲಯಂ ಗಚ್ಛೇಜ್ಜೀವಹಂತಾ ವಿಶೇಷತಃ ।
ಏಭಿಶ್ಚ ಲಕ್ಷಣೈರ್ಹೀನೋ ಭಗವಾನ್ ಪ್ರಕೃತೇಃ ಪರಃ ॥ ೫೩ ॥

ಯಸ್ಯ ಬುದ್ಧಿಃ ಸ ವೈ ಬ್ರಹ್ಮಾ ಹ್ಯಹಂಕಾರೋ ಯಸ್ಯ ವೈ ಶಿವಃ ।
ಶಬ್ದಮಾತ್ರಾ ಗಣೇಶಶ್ಚ ಸ್ಪರ್ಶಮಾತ್ರಾ ಯಮಃ ಸ್ವಯಂ ॥ ೫೪ ॥

ರೂಪಮಾತ್ರಾ ಕುಮಾರೋಽವೈ ರಸಮಾತ್ರಾ ಚ ಯಕ್ಷರಾಟ್ ।
ಗಂಧಮಾತ್ರಾ ವಿಶ್ವಕರ್ಮಾ ಶ್ರವಣಂ ಭಗವಾಞ್ಛನಿಃ ॥ ೫೫ ॥

ಯಸ್ಯ ತ್ವಕ್ಸ ಬುಧೋ ಜ್ಞೇಯಶ್ಚಕ್ಷುಸ್ಸೂರ್ಯಃ ಸನಾತನಃ ।
ಯಜ್ಜಿಹ್ವಾ ಭಗವಾಞ್ಛುಕ್ರೋ ಘ್ರಾಣಸ್ತಸ್ಯಾಶ್ವಿನೀಸುತೌ ॥ ೫೬ ॥

---

೫೩. ಕಳ್ಳನೂ ಹಾಗೆಯೇ ನರಕವನ್ನೇ ಪಡೆಯುವನು. ಇಷ್ಟಲ್ಲದೆ ಜೀವ ಹಿಂಸೆ ಮಾಡಿರುವುದಕ್ಕೆ ವಿಶೇಷ ಶಿಕ್ಷೆಗಳುಂಟು. ಈಗ ಹೇಳಿದ ಯಾವ ಕೆಟ್ಟಲಕ್ಷಣ ಗಳೂ ಇಲ್ಲದೆಇರುವನೇ ಶ್ರೇಷ್ಠನಾದ ದೈವವೆನಿಸುವನು. ಪ್ರಕೃತಿಗಿಂತಲೂ ಶ್ರೇಷ್ಠ ನಾದ ಪುರುಷನೇ ಇಂತಹ ಸ್ವರೂಪವುಳ್ಳವನೆನಿಸಿ ಭಗವಂತನೆನಿಸುವನು.

೫೪. ಈ ಪರಮಪುರುಷನ ಬುದ್ಧಿಯೇ ಬ್ರಹ್ಮಸ್ವರೂಪವು. ಅಹಂಕಾರವೇ ಶಿವಸ್ವರೂಪವು. ಶಬ್ದರೂಪವೇ ಗಣೇಶನು. ಸ್ಪರ್ಶರೂಪವೇ ಸಾಕ್ಷಾತ್ ಯಮನು.

೫೫. ರೂಪವೇ ಷಣ್ಮುಖನು. ರಸಸ್ವರೂಪವೇ ಯಕ್ಷರಾಜನಾದ ಕುಬೇ ರನು. ಗಂಧಸ್ವರೂಪವೇ ವಿಶ್ವಕರ್ಮನು. ಆ ಪರಮಾತ್ಮನ ಕಿವಿಯೇ ಭಗವಂತ ನಾದ ಶನಿಯೆನಿಸುವನು.

೫೬. ಚರ್ಮವೇ ಬುಧನು. ಪರಮಾತ್ಮನ ಕಣ್ಣುಗಳೇ ಸೂರ್ಯನಾಗಿರು ವನು. ನಾಲಗೆಯೇ ಭಗವಂತನಾದ ಶುಕ್ರನು. ಭಗವಂತನ ಮೂಗಿನಹೊಳ್ಳೆಗಳೇ ಅಶ್ವಿನೀದೇವತೆಗಳು

ಯನ್ಮುಖಂ ಭಗವಾಞ್ಜೀವೋ ಯಸ್ಯ ಹಸ್ತಸ್ತು ದೇವರಾಟ್ ।
ಕೃಷ್ಣೋಽಯಂ ತಸ್ಯ ಚರಣೌ ಲಿಂಗಂ ದಕ್ಷಃ ಪ್ರಜಾಪತಿಃ ॥
ಗುದಂ ತದ್ಭಗವಾನ್ಮೃತ್ಯುಸ್ತಸ್ಮೈ ಭಗವತೇ ನಮಃ　　　॥ ೫೭ ॥

ಹಿಂಸಾಯಜ್ಞೈಶ್ಚ ಭಗವಾನ್ಸ ಚ ತೃಪ್ತಿಮವಾಪ್ನುಯಾತ್ ।
ಸ ಚ ಯಜ್ಞಪಶುರ್ವಹ್ನೌ ಬ್ರಹ್ಮಭೂಯಾಯ ಕಲ್ಪತೇ　　　॥ ೫೮ ॥
ತಸ್ಯ ಮೋಕ್ಷಪ್ರಭಾವೇನ ಮಹತ್ಪುಣ್ಯಮವಾಪ್ನುಯಾತ್ ।

ವಿಧಿಹೀನೋ ನರಃ ಪಾಪೀ ಹಿಂಸಾಯಜ್ಞಂ ಕರೋತಿ ಯಃ ॥
ಅಂಧತಾಮಿಸ್ರನರಕಂ ತದ್ದೋಷೇಣ ವಸೇಚ್ಚಿರಂ　　　॥ ೫೯ ॥

---

೫೭. ಪರಮಪುರುಷನ ಮುಖವೇ ಭಗವಂತನಾದ ಬೃಹಸ್ಪತಿ. ಕೈಗಳೇ ದೇವೇಂದ್ರ ಪರಮಾತ್ಮನ ಕಾಲುಗಳೇ ಶ್ರೀಕೃಷ್ಣನು. ಆ ಪರಮಪುರುಷನ ಲಿಂಗವೇ ದಕ್ಷಬ್ರಹ್ಮನಾಗಿರುವನು. ಭಗವಂತನ ಗುದಸ್ಥಾನವೇ ಮೃತುವಾಗಿರುವನು. ಈರೀತಿ ಸಕಲದೇವತೆಗಳನ್ನೇ ಅವಯುವವಾಗಿ ಧರಿಸಿರುವ ಪರಮಪುರುಷನಾದ ಆ ದೇವನಿಗೆ ನಮಸ್ಕಾರ. (ಆದುದರಿಂದ ಎಲೈ ಬ್ರಾಹ್ಮಣನೇ! ನೀನು ಹೇಳಿದ ಕೃಷ್ಣನೂ, ಪರಮ ಪುರುಷನ ಒಂದು ಅವಯುವವಾಗಿರುವುದರಿಂದ ಅವನೇ ದೇವದೇವನೆಂದು ಹೇಳು ವುದು ಸರಿಯಲ್ಲ. ಹಿಂಸಾಮಯವಾದ ಯಜ್ಞಮಾಡುವುದರಿಂದ ಪ್ರಯೋಜನವಿಲ್ಲ ವೆಂದು ನೀನು ಕೇಳಿದ ಪ್ರಶ್ನೆಗೆ ಇನ್ನುಮುಂದೆ ಉತ್ತರ ಹೇಳುವೆನು ಕೇಳು " ಎಂದು ಇಂತೆಂದನು.)

೫೮. ಸ್ವಾಮಿಾ ಮಧ್ವಾಚಾರ್ಯರೇ! ನಾನು ನಿಮಗೆ ಈಗ ಹೇಳಿದ ದೇವದೇವ ನಾದ ಪರಮಪುರುಷನು ಹಿಂಸಾಮಯವಾದ ಯಜ್ಞಗಳನ್ನು ಮಾಡುವುದರಿಂದ ಸಂತೋಷಹೊಂದುವನು. ಆ ಯಜ್ಞಕ್ಕೋಸ್ಕರ ಅಗ್ನಿದೇವನಿಗೆ ಸಮರ್ಪಣೆಮಾಡುವ ಯಜ್ಞಪಶುವು ಬ್ರಹ್ಮಸಾಯುಜ್ಯವನ್ನು ಪಡೆಯುವುದು. ಅದಕ್ಕೆ ದೊರೆತ ಮೋಕ್ಷದ ಮಹಿಮೆಯಿಂದ ಯಜ್ಞಕರ್ತೃವಿಗೆ ತುಂಬ ಪುಣ್ಯವುಂಟಾಗುವುದು.

೫೯. ಆದರೆ ಹಿಂಸಾಮಯವಾದ ಯಜ್ಞವನ್ನು ವೇದೋಕ್ತರೀತಿಯನ್ನನು ಸರಿಸಿ ಕ್ರಮವಾಗಿ ನಡೆಯಿಸಬೇಕು. ವಿಧಿಯನ್ನು ಅತಿಕ್ರಮಿಸಿ ಹಿಂಸಾತ್ಮಕಯಾಗ ವನ್ನು ಆಚರಿಸುವ ಪುರುಷನು ಅಂಧತಾಮಿಸ್ರವೆಂಬ ನರಕವನ್ನುಹೊಂದಿ ಚಿರಕಾಲ ಅಲ್ಲೇ ಬಿದ್ದು ನರಳುವನು

ಮಹತ್ಪುಣ್ಯಂ ಮಹತ್ಪಾಪಂ ಹಿಂಸಾಯಜ್ಞೇಷು ವರ್ತತೇ ।
ಅತಸ್ತು ಭಗವಾನ್‌ಕೃಷ್ಣೋ ಹಿಂಸಾಯಜ್ಞಂ ಕಲೌ ಯುಗೇ ॥ ೬೦ ॥

ಸಮಾಪ್ಯ ಕಾರ್ತಿಕೇ ಮಾಸಿ ಪ್ರತಿಪಚ್ಛುಕ್ಲಪಕ್ಷಕೇ ।
ಅನ್ನಕೂಟಮಯಂ ಯಜ್ಞಂ ಸ್ಥಾಪಯಾಮಾಸ ಭೂತಲೇ ॥ ೬೧ ॥

ದೇವರಾಜಸ್ತದಾ ಕ್ರುದ್ಧೋ ಹ್ಯನುಜಂ ಪ್ರತಿ ದುಃಖಿತಃ ।
ವ್ರಜಂ ಸಂಪ್ಲಾವಯಾಮಾಸ ತದಾ ಕೃಷ್ಣಃ ಸನಾತನೀ ॥
ಪ್ರಕೃತಿಂ ಸ ಚ ತುಷ್ಟಾವ ಲೋಕಮಂಗಲಹೇತವೇ ॥ ೬೨ ॥

ತದಾ ಸಾ ಪ್ರಕೃತಿರ್ಮಾತಾ ಸ್ವಪೂರ್ವಾದ್ದಿವ್ಯವಿಗ್ರಹಂ ।
ರಾಧಾರೂಪಂ ಮಹತ್ಕೃತ್ವಾ ಹೃದಿ ಕೃಷ್ಣಸ್ಯ ಚಾಗತಾ ॥ ೬೩ ॥

---

೬೦. ಹಿಂಸಾತ್ಮಕವಾದ ಯಜ್ಞವು ವಿಧ್ಯುಕ್ತಕ್ರಮದಲ್ಲಿ ನಡೆದರೆ ತುಂಬಾ ಪುಣ್ಯವುಂಟು. ಅದಕ್ಕೆ ವಿಪರ್ಯಯವಾಗಿ ನಡೆದರೆಮಾತ್ರ ಮಹಾಪಾಪವನ್ನುಂಟು ಮಾಡುವುದು. ಆದುದರಿಂದಲೇ ಭಗವಂತನಾದ ಕೃಷ್ಣನು ಹಿಂಸಾತ್ಮಕವಾದ ಯಜ್ಞವನ್ನು ಕಲಿಯುಗದಲ್ಲಿ,

೬೧. ಕಾರ್ತಿಕಮಾಸದ ಶುಕ್ಲಪಕ್ಷದ ಪಾಡ್ಯದದಿನಕ್ಕೆ ಮುಗಿಸಿ ಅಲ್ಲಿಂದಮುಂದೆ ಗೋಕುಲದಲ್ಲಿ ಕೃಷ್ಣನು ಗೋವರ್ಧನಗಿರಿಯ ಸಮೀಪದಲ್ಲಿ ಅನ್ನದಾನಮಯ (ಅನ್ನಕೂಟಮಯ) ಯಜ್ಞವನ್ನುಮಾತ್ರ ಭೂಮಂಡಲದಲ್ಲಿ ಆಚರಿಸಿ ಸ್ಥಾಪಿಸಿದನು.

೬೨. ಹೀಗೆ ಕೃಷ್ಣಪರಮಾತ್ಮನು ಹಿಂಸಾಮಯವಾದ ಯಜ್ಞವನ್ನುಬಿಟ್ಟು ಅನ್ನಮಯವಾದ ಯಜ್ಞವನ್ನು ಆಚರಿಸಿದುದರಿಂದ ದೇವೇಂದ್ರನು ತನ್ನ ತಮ್ಮನಾದ ಉಪೇಂದ್ರನು ಹೀಗೆ ತನಗೆ ವಿರುದ್ಧವಾಗಿ ಆಚರಿಸಿದುದನ್ನು ನೋಡಿ, ಕೋಪಗೊಂಡು ಭಯಂಕರವಾಗಿ ಮಳೆಗರೆದು ಕೃಷ್ಣನು ವಾಸಿಸುತ್ತಿದ್ದ ಗೋಕುಲವನ್ನೇ ಮುಳುಗಿ ಹೋಗುವಂತೆ ಮಾಡಿದನು. ಆಗ ಕೃಷ್ಣನು ಲೋಕಕಲ್ಯಾಣವನ್ನು ಉಂಟುಮಾಡುವುದಕ್ಕೋಸ್ಕರ ಸನಾತನಸ್ವರೂಪಳಾದ ಪ್ರಕೃತಿಯನ್ನು ಸ್ತೋತ್ರಮಾಡಿದನು.

೬೩ ಆಗ ಪ್ರಕೃತಿಮಾತೆಯು ಸಂತುಷ್ಟಳಾಗಿ ತನ್ನ ಶರೀರದಿಂದ ರಾಧಾರೂಪವಾದ ದಿವ್ಯವಿಗ್ರಹವನ್ನು ನಿರ್ಮಿಸಿ ಅದನ್ನು ಶ್ರೀಕೃಷ್ಣನ ಹೃದಯದಲ್ಲಿ ನೆಲಸುವಂತೆ ಮಾಡಿದಳು.

ತಚ್ಛ್ರುತ್ವಾ ಭಗವಾನ್‌ಕೃಷ್ಣೋ ಧೃತ್ವಾ ಗೋವರ್ಧನಂ ಗಿರಿಂ ।
ನಾಮ್ನಾ ಗಿರಿಧರೋ ದೇವಃ ಸರ್ವಪೂಜ್ಯೋ ಬಭೂವ ಹ ॥ ೬೪ ॥

ರಾಧಾಕೃಷ್ಣಸ್ಸ ಭಗವಾನ್‌ಪೂರ್ಣಬ್ರಹ್ಮ ಸನಾತನಃ ।
ಅತಃ ಕೃಷ್ಣೋ ನ ಭಗವಾನ್ರಾಧಾಕೃಷ್ಣಃ ಪರಃ ಪ್ರಭುಃ ॥ ೬೫ ॥

ಇತಿ ಶ್ರುತ್ವಾ ವಚಸ್ತಸ್ಯ ಮಧ್ವಾಚಾರ್ಯೋ ಹರಿಪ್ರಿಯಃ ।
ಶಿಷ್ಯೋ ಭೂತ್ವಾ ಸ್ಥಿತಸ್ತತ್ರ ಕೃಷ್ಣಚೈತನ್ಯಪೂಜಕಃ ॥ ೬೬ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಪ್ರತಿಸರ್ಗಪರ್ವಣಿ ಚತುರ್ಥಖಂಡೇ ಕಲಿಯುಗೀಯೇತಿಹಾಸಸಮುಚ್ಚಯೇ·ಕೃಷ್ಣಚೈತನ್ಯಯಜ್ಞಾಂಶಶಿಷ್ಯ ಬಲಭದ್ರ ವಿಷ್ಣುಸ್ವಾಮಿ ಮಧ್ವಾಚಾರ್ಯಾದಿವೃತ್ತಾಂತ ವರ್ಣನಂ ನಾಮೈಕೋನವಿಂಶೋಽಧ್ಯಾಯಃ.

---

೬೪. ಆ ಪ್ರಕೃತಿದೇವಿಯ ಸ್ವರೂಪಳಾದ ರಾಧಾಶಕ್ತಿಯಿಂದ ಭಗವಂತನಾದ ಕೃಷ್ಣನು ಗೋವರ್ಧನಗಿರಿಯನ್ನು ಕೈಯಿಂದ ಎತ್ತಿಹಿಡಿದು, ಆ ಗೋಕುಲದವರನ್ನೆಲ್ಲಾ ಭಯಂಕರವಾದ ಮಳೆಯಿಂದ ಪಾರುಮಾಡಿ, ಗಿರಿಧರನೆಂಬ ಹೆಸರಿನಿಂದ ಪ್ರಸಿದ್ಧಿ ಪಡೆದು ಎಲ್ಲರಿಂದಲೂ ಪೂಜಾರ್ಹನಾದನು.

೬೫. ರಾಧಾಕೃಷ್ಣಸ್ವರೂಪನಾದ ಆ ಭಗವಂತನೇ ಪುರಾತನನಾದ ಪರಬ್ರಹ್ಮ ಸ್ವರೂಪನು. ಆದುದರಿಂದ ಎಲೈ ಮಧ್ವಾಚಾರ್ಯರೇ ! ನೀವು ಹೇಳಿದ ಕೇವಲ ಕೃಷ್ಣನು, ಭಗವಂತನೂ, ಸರ್ವಶ್ರೇಷ್ಠನೂ ಎನಿಸಲಾರನು. ರಾಧಾಕೃಷ್ಣನುಮಾತ್ರ ಪರಮಶ್ರೇಷ್ಠನಾದ ದೇವನೆಂದು ತಿಳಿಯಬೇಕು." ಎಂದು ಯಜ್ಞಾಂಶನು ಮಧ್ವಾಚಾರ್ಯರನ್ನು ಕುರಿತು ಹೇಳಿದನು.

೬೬. ಹೀಗೆ ಯಜ್ಞಾಂಶನಾದ ಕೃಷ್ಣಚೈತನ್ಯನು ಹೇಳಿದಮಾತನ್ನು ಕೇಳಿ ವಿಷ್ಣುಭಕ್ತರಾದ ಆ ಮಧ್ವಾಚಾರ್ಯರು ಆ ಕೃಷ್ಣಚೈತನ್ಯನ ಶಿಷ್ಯರಾಗಿ ಅವನನ್ನೇ ಸೇವೆಮಾಡುತ್ತಾ ಅಲ್ಲಿಯೇ ವಾಸಮಾಡಿದರು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಪ್ರತಿಸರ್ಗಪರ್ವದ ನಾಲ್ಕನೆಯ ಖಂಡದಲ್ಲಿ ಕೃಷ್ಣಚೈತನ್ಯಯಜ್ಞಾಂಶಶಿಷ್ಯರಾದ ಬಲಭದ್ರ ವಿಷ್ಣುಸ್ವಾಮಿ ಮಧ್ವಾಚಾರ್ಯರ ಇವರ ವೃತ್ತಾಂತವರ್ಣನೆಯೆಂಬ ಹತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಪ್ರತಿಸರ್ಗಪರ್ವಣಿ ಚತುರ್ಥಖಂಡೇ

## ವಿಂಶೋಽಧ್ಯಾಯಃ

---

॥ ಸೂತ ಉವಾಚ ॥

ಭಟ್ಟೋಜಿಸ್ಸ ಚ ಶುದ್ಧಾತ್ಮಾ ಶಿವಭಕ್ತಿಪರಾಯಣಃ ।
ಕೃಷ್ಣಚೈತನ್ಯಮಾಗಮ್ಯ ನಮಸ್ಕೃತ್ಯ ವಚೋಽಬ್ರವೀತ್ ॥ ೧ ॥

ಮಹಾದೇವೋ ಗುರುಃ ಸೋ ವೈ ಶಿವ ಆತ್ಮಾ ಶರೀರಿಣಾಂ ।
ವಿಷ್ಣುರ್ಬ್ರಹ್ಮಾ ಚ ತದ್ದಾಸೌ ತರ್ಹಿ ತತ್ಪೂಜನೇನ ಕಿಂ ॥ ೨ ॥

---

### ಇಪ್ಪತ್ತನೆಯ ಅಧ್ಯಾಯ

೧. ಸೂತಮುನಿವರ್ಯನು ಕೃಷ್ಣಚೈತನ್ಯರ ಚರಿತ್ರೆಯನ್ನು ಮುಂದುವರಿಸಿ ಹೇಳುತ್ತಾನೆ—ಪರಿಶುದ್ಧವಾದ ಅಂತಃಕರಣವುಳ್ಳವನೂ ಶಿವಭಕ್ತಿಪರಾಯಣನೂ ಆದ ಭಟ್ಟೋಜಿಯೆಂಬ ಬ್ರಾಹ್ಮಣೋತ್ತಮನಿದ್ದನು. ಒಂದುದಿನ ಆ ಭಟ್ಟೋಜಿಯು ಕೃಷ್ಣಚೈತನ್ಯರ ಅದ್ಭುತವಾದ ಚರಿತ್ರೆಯನ್ನು ಕೇಳಿ ಅವರ ಸಮೀಪಕ್ಕೆ ಬಂದು ನಮಸ್ಕಾರಮಾಡಿ ಇಂತೆಂದನು.

೨. "ಸ್ವಾಮಿ ಕೃಷ್ಣಚೈತನ್ಯಪ್ರಭೊ ! ಮಹೇಶ್ವರನೇ ಎಲ್ಲರಿಗೂ ಗುರುವು. ಅವನೇ ಸಕಲಪ್ರಾಣಿಗಳಿಗೂ ಆತ್ಮಸ್ವರೂಪನು. ವಿಷ್ಣು ಬ್ರಹ್ಮ ಇವರಿಬ್ಬರೂ ಅವನ ಸೇವಕರು. ಹೀಗಿರುವಾಗ ಬ್ರಹ್ಮವಿಷ್ಣುಗಳನ್ನು ಪೂಜೆಮಾಡುವುದರಿಂದ ಪ್ರಯೋಜನವೇನು ?" ಎಂದು ಪ್ರಶ್ನಿಸಿದನು.

ಇತಿ ಶ್ರುತ್ವಾ ಸ ಯಜ್ಞಾಂಶೋ ವಿಂಶದಬ್ದವಯೋಽನ್ವಿತಃ ।
ವಿಹಸ್ಯಾಹ ಸ ಭಟ್ಟೋಜಿಂ ನಾಯಂ ಶಂಭುರ್ಮಹೇಶ್ವರಃ ॥ ೩ ॥

ಸಮರ್ಥೋ ಭಗವಾಞ್ಛಂಭುಃ ಕರ್ತಾ ಕಿನ್ನ ಶರೀರಿಣಾಂ ।
ನ ಭರ್ತಾ ಚ ವಿನಾ ವಿಷ್ಣುಂ ಸಂಹರ್ತಾಯಂ ಸದಾ ಶಿವಃ ॥ ೪ ॥

ಏಕಮೂರ್ತಿಸ್ತ್ರಿಧಾ ಜಾತಾ ಬ್ರಹ್ಮಾವಿಷ್ಣುರ್ಮಹೇಶ್ವರಃ ।
ಶಾಕ್ತಮಾರ್ಗೇಣ ಭಗವಾನ್ ಬ್ರಹ್ಮಾ ಮೋಕ್ಷಪ್ರದಾಯಕಃ ॥ ೫ ॥

ವಿಷ್ಣುರ್ವೈಷ್ಣವಮಾರ್ಗೇಣ ಜೀವಾನಾಂ ಮೋಕ್ಷದಾಯಕಃ ।
ಶಂಭುರ್ವೈ ಶೈವಮಾರ್ಗೇಣ ಮೋಕ್ಷದಾತಾ ಶರೀರಿಣಾಂ ॥ ೬ ॥

---

೩. ಭಟ್ಟೋಜಿಯು ಹೀಗೆ ಪ್ರಶ್ನೆ ಮಾಡಲು ಇಪ್ಪತ್ತುವರ್ಷವಯಸ್ಕನಾದ ಆ ಯಜ್ಞಾಂಶನು ಸ್ವಲ್ಪನಕ್ಕು ಆ ಭಟ್ಟೋಜಿಯನ್ನು ಕುರಿತು "ಅಯ್ಯಾ ಬ್ರಾಹ್ಮಣೋತ್ತಮನೇ ! ನೀನು ಹೇಳಿದ ಶಂಭುವು ಮಹೇಶ್ವರನೆನಿಸನು."

೪. ಹಾಗೆ ನೀನು ಹೇಳಿದ ಮಹೇಶ್ವರನೇ ಸರ್ವಸಮರ್ಥನಾಗಿದ್ದರೆ ಅವನು ಪ್ರಾಣಿಗಳ ಸೃಷ್ಟಿಯನ್ನು ಏಕೆಮಾಡಲಾರನು ? ವಿಷ್ಣುವಿಲ್ಲದೆಹೋದರೆ ಪ್ರಪಂಚದ ರಕ್ಷಣಾಕಾರ್ಯವು ಅವನಿಂದ ಮಾಡಲುಸಾಧ್ಯವಿಲ್ಲ. ಆ ಶಿವನು ಯಾವಾಗಲೂ ಪ್ರಪಂಚಸಂಹಾರಕಾರ್ಯವನ್ನು ಮಾತ್ರ ಮಾಡತಕ್ಕವನು.

೫. ಅಖಂಡವಾದ ಒಂದೇ ಶಕ್ತಿಯು ಬ್ರಹ್ಮ ವಿಷ್ಣು ಮತ್ತು ಮಹೇಶ್ವರರೆಂಬ ಮೂರು ಮೂರ್ತಿಯನ್ನು ತಾಳಿದೆ. ಈ ಶಕ್ತಿಯ ಬಲದಿಂದಲೇ ಭಗವಂತನಾದ ಬ್ರಹ್ಮನು ಶಕ್ತಿಮಾರ್ಗಾವಲಂಬಿ ಪ್ರಾಣಿಗಳಿಗೆ ಮೋಕ್ಷವನ್ನು ಕೊಡುವನು.

೬. ವಿಷ್ಣುವು ವೈಷ್ಣವಮಾರ್ಗವನ್ನವಲಂಬಿಸಿದ ಪ್ರಾಣಿಗಳಿಗೆ ಮೋಕ್ಷಪ್ರದನಾಗುವನು. ಶಂಭುವು ಶೈವಮಾರ್ಗವಲಂಬಿಗಳಾದ ಪ್ರಾಣಿಗಳಿಗೆ ಮೋಕ್ಷವನ್ನು ಕರುಣಿಸುವನು.

ಶಾಕ್ತಃ ಸದಾಶ್ರಮೋ ಗೇಹೀ ಯಜ್ಞಭುಕ್ ಪಿತೃದೇವಗಃ ।
ವಾನಪ್ರಸ್ಥಾಶ್ರಮೀ ಯೋ ವೈ ವೈಷ್ಣವಃ ಕಂದಮೂಲಭುಕ್ ॥ ೭ ॥

ಯತ್ಯಾಶ್ರಮಃ ಸದಾ ರೌದ್ರೋ ನಿರ್ಗುಣಃ ಶುದ್ಧವಿಗ್ರಹಃ ।
ಬ್ರಹ್ಮಚರ್ಯಾಶ್ರಮಸ್ತೇಷಾಮನುಗಾಮೀ ಮಹಾಶ್ರಮಃ ॥ ೮ ॥

ಇತಿ ಶ್ರುತ್ವಾ ಗುರೋರ್ವಾಕ್ಯಂ ಶಿಷ್ಯೋ ಭೂತ್ವಾ ಸ ವೈ ದ್ವಿಜಃ ।
ತೃತೀಯಾಂಗಂ ಚ ವೇದಾನಾಂ ವ್ಯಾಚಖ್ಯೌ ಪಾಣಿನೇರ್ಮತಂ ॥ ೯ ॥

ತದಾಜ್ಞಯಾ ಚ ಸಿದ್ಧಾಂತಕೌಮುದ್ಯಾಸ್ಸ ಚಕಾರ ಹ ।
ತತ್ರೋಷ್ಯ ದೀಕ್ಷಿತೋ ಧೀಮಾನ್ ಕೃಷ್ಣಚೈತನ್ಯಸೇವಕಃ ॥ ೧೦ ॥

---

೭. ಶಕ್ತಿಮಾರ್ಗವನ್ನವಲಂಬಿಸಿದ ಗೃಹಸ್ಥಾಶ್ರಮಿಯು ಯಾವಾಗಲೂ ಯಜ್ಞ ಮಾಡುತ್ತಾ ಪಿತೃಗಳನ್ನೂ ದೇವತೆಗಳನ್ನೂ ಸಂತೋಷಪಡಿಸಿ ಸದ್ಗತಿಪಡೆಯುವನು. ವೈಷ್ಣವಮಾರ್ಗಾವಲಂಬಿಯು ಯಾವಾಗಲೂ ಕಂದಮೂಲಫಲಾಹಾರಿಯಾಗಿ ವಾನಪ್ರಸ್ಥಾಶ್ರಮದಲ್ಲಿ ಕಾಲಕಳೆಯುವನು.

೮. ಶೈವಮಾರ್ಗವನ್ನವಲಂಬಿಸುವವನು ಯಾವಾಗಲೂ ಸಂನ್ಯಾಸಾಶ್ರಮವನ್ನು ಸ್ವೀಕರಿಸಿ, ಗುಣರಹಿತನು ಪರಿಶುದ್ಧಸ್ವರೂಪನು ಎಂದು ಕರೆಯಲ್ಪಡುವನು. ಬ್ರಹ್ಮಚರ್ಯಾಶ್ರಮವು ಗೃಹಸ್ಥ, ವಾನಪ್ರಸ್ಥ, ಸನ್ಯಾಸ ಈ ಮೂರು ಆಶ್ರಮಗಳಿಗೂ ಅನುಗಾಮಿಯಾಗಿ ಶ್ರೇಷ್ಠವೆನಿಸುವುದು" ಎಂದು ಹೇಳಿದನು.

೯. ಹೀಗೆ ಯಜ್ಞಾಂಶನು ದೈವಸ್ವರೂಪವನ್ನು ಸ್ಪಷ್ಟವಾಗಿ ತಿಳಿಸಿದಮೇಲೆ ಆ ಭಟ್ಟೋಜಿಯು ಯಜ್ಞಾಂಶನ ಶಿಷ್ಯನಾಗಿ ತನ್ನ ಗುರುವಿನ ಅನುಮತಿಯನ್ನು ತೆಗೆದುಕೊಂಡು ಪಾಣಿನಿಮಹರ್ಷಿ ಮತವೂ ವೇದದ ಮೂರನೆಯ ಅಂಗವೂ ಆದ ಅಷ್ಟಾಧ್ಯಾಯಿ ಸೂತ್ರರೂಪದ ವ್ಯಾಕರಣಶಾಸ್ತ್ರಕ್ಕೆ ವ್ಯಾಖ್ಯಾನವನ್ನು ರಚಿಸಿದನು.

೧೦. ಗುರುವಿನ ಅಪ್ಪಣೆಯನ್ನು ತೆಗೆದುಕೊಂಡು ನಿರ್ಮಿಸಿದ ಆ ವ್ಯಾಕರಣ ಗ್ರಂಥಕ್ಕೆ ಸಿದ್ಧಾನ್ತಕೌಮುದೀ ಎಂದು ಹೆಸರು ಬಂದಿತು. ಅನಂತರ ಬುದ್ಧಿಶಾಲಿಯಾದ ಆ ಭಟ್ಟೋಜೀದೀಕ್ಷಿತನು ತನ್ನ ಗುರುವಾದ ಕೃಷ್ಣಚೈತನ್ಯನ ಸಮೀಪದಲ್ಲೇ ಇದ್ದು ಅವರ ಸೇವೆಮಾಡುತ್ತಾ ಕಾಲಕಳೆದನು.

॥ ಸೂತ ಉವಾಚ ॥

ವರಾಹಮಿಹಿರೋ ಧೀಮಾನ್ಸ ಚ ಸೂರ್ಯಪರಾಯಣಃ ।
ದ್ವಾವಿಂಶಾಬ್ದೇ ಚ ಯಜ್ಞಾಂಶೇ ತಮಾಗತ್ಯ ವಚೋಽಬ್ರವೀತ್ ॥ ೧೧ ॥

ಸೂರ್ಯೋಽಯಂ ಭಗವಾನ್ಸಾಕ್ಷಾತ್ತ್ರಯೋ ದೇವಾ ಯತೋಽಭವನ್ ।
ಪ್ರಾತರ್ಬ್ರಹ್ಮಾ ಚ ಮಧ್ಯಾಹ್ನೇ ವಿಷ್ಣುಃ ಸಾಯಂ ಸದಾಶಿವಃ ॥ ೧೨ ॥

ಅತೋ ರವೇಃ ಶುಭಾ ಪೂಜಾ ತ್ರಿದೇವಯಜನೇನ ಕಿಂ ।
ಇತಿ ಶ್ರುತ್ವಾ ಸ ಯಜ್ಞಾಂಶೋ ವಿಹಸ್ಯಾಹ ಶುಭಂ ವಚಃ ॥ ೧೩ ॥

ದ್ವಿಧಾ ಬಭೂವ ಪ್ರಕೃತಿರಪರಾ ಚ ಪರಾ ತಥಾ ।
ನಾಮಮಾತ್ರಾ ತಥಾ ಪುಷ್ಪಮಾತ್ರಾ ತನ್ಮಾತ್ರಿಕಾ ತಥಾ ॥ ೧೪ ॥

---

೧೧. ಸೂತಮುನಿವರ್ಯನು ಕೃಷ್ಣಚೈತನ್ಯನ ದಿಗ್ವಿಜಯವನ್ನು ಮುಂದುವರಿಸಿ ಹೇಳುತ್ತಾನೆ—ಯಜ್ಞಾಂಶನು ಇಪ್ಪತ್ತೆರಡು ವಯಸ್ಸಿನವನಾಗಲು ಮೇಧಾವಿಯೂ ಸೂರ್ಯಭಕ್ತನೂ ಆದ ವರಾಹಮಿಹಿರನೆಂಬ ಬ್ರಾಹ್ಮಣನು ಒಂದುದಿನ ಆ ಯಜ್ಞಾಂಶನ ಸಮೀಪಕ್ಕೆ ಬಂದು ಅವನನ್ನು ಕುರಿತು ಹೀಗೆ ಹೇಳಿದನು.

೧೨-೧೩. "ಎಲೈ ಯಜ್ಞಾಂಶನೇ! ಈ ಸೂರ್ಯದೇವನೇ ಸಾಕ್ಷಾದ್ಭಗವಂತನು. ದೇವಶ್ರೇಷ್ಠನು. ಬ್ರಹ್ಮ ವಿಷ್ಣು ಮಹೇಶ್ವರರೆಂಬ ಈ ತ್ರಿಮೂರ್ತಿಗಳೂ ಅವನಿಂದಲೇ ಜನಿಸಿದರು. ಈ ಸೂರ್ಯಭಗವಂತನು ಪ್ರಾತಃಕಾಲದಲ್ಲಿ ಬ್ರಹ್ಮಸ್ವರೂಪನು. ಮಧ್ಯಾಹ್ನಕಾಲದಲ್ಲಿ ವಿಷ್ಣುಸ್ವರೂಪನು. ಸಾಯಂಕಾಲದಲ್ಲಿ ಶಿವಸ್ವರೂಪನು. (ಇಲ್ಲಿ "ಉದಯೇ ಬ್ರಹ್ಮರೂಪೋಽಯಂ ಮಧ್ಯಾಹ್ನೇತು ಮಹೇಶ್ವರಃ । ಅಸ್ತಮಾನೇ ಸ್ವಯಂ ವಿಷ್ಣುಃ ತ್ರಯೀಮೂರ್ತಿರ್ದಿವಾಕರಃ" ಎಂಬ ಸೂರ್ಯಸ್ತೋತ್ರಕ್ಕೆ ಸ್ವಲ್ಪ ವ್ಯತ್ಯಾಸವಾಗಿದೆ.) ಆದುದರಿಂದ ತ್ರಿಮೂರ್ತಿಸ್ವರೂಪನೂ ಪ್ರತ್ಯಕ್ಷದೈವವೂ ಆದ ಈ ಸೂರ್ಯನನ್ನೇ ಪೂಜಿಸಬೇಕು. ಬ್ರಹ್ಮ ವಿಷ್ಣು ಮಹೇಶ್ವರರನ್ನು ಪೂಜಿಸುವುದರಿಂದ ಫಲವಿಲ್ಲ." ಎಂದು ಹೇಳಲು ಆ ಯಜ್ಞಾಂಶನು ಇದನ್ನು ಕೇಳಿ ಸ್ವಲ್ಪನಕ್ಕು ಅನಂತರ ಆ ವರಾಹಮಿಹಿರನನ್ನು ಕುರಿತು ಮುಂದೆ ಹೇಳುವಂತೆ ಶುಭಕರವಾದ ಮಾತುಗಳನ್ನು ಹೇಳಿದನು.

೧೪-೧೫. ಪ್ರಕೃತಿಯು ಮೊದಲು ಅಪರಾ ಮತ್ತು ಪರಾ ಎಂದು ಎರಡು ರೂಪವನ್ನು ತಾಳಿದಳು. ಆ ಪರಾಪ್ರಕೃತಿಯು ನಾಮಮಾತ್ರಾ, ಪುಷ್ಪಮಾತ್ರಾ,

ಶಬ್ದಮಾತ್ರಾ ಸ್ಪರ್ಶಮಾತ್ರಾ ರೂಪಮಾತ್ರಾ ರಸಾ ತಥಾ ।
ಗಂಧಮಾತ್ರಾ ತಥಾ ಜ್ಞೇಯಾ ಪರಾ ಪ್ರಕೃತಿರಷ್ಟಧಾ
ಅಪರಾಯಾಂ ಜೀವಭೂತಾ ನಿತ್ಯಶುದ್ಧಾ ಜಗನ್ಮಯೀ । ॥ ೧೫ ॥

ಭೂಮಿರಾಪೋಽನಲೋ ವಾಯುಃ ಖಂ ಮನೋ ಬುದ್ಧಿರೇವ ಚ ।
ಅಹಂಕಾರ ಇತಿ ಜ್ಞೇಯಾ ಪ್ರಕೃತಿಶ್ಚಾಪರಾಷ್ಟಧಾ ॥ ೧೬ ॥

ವಿಷ್ಣುರ್ಬ್ರಹ್ಮಾ ಮಹಾದೇವೋ ಗಣೇಶೋ ಯಮರಾಡ್ ಗುಹಃ ।
ಕುಬೇರೋ ವಿಶ್ವಕರ್ಮಾ ಚ ಪರಾ ಪ್ರಕೃತಿದೇವತಾ ॥ ೧೭ ॥

ಶೇಷೋ ರವಿಸ್ತಥಾ ಸೋಮೋ ಸುಮೇರುರ್ವರುಣಸ್ತಥಾ ।
ವಹ್ನಿರ್ವಾಯುರ್ಧ್ರುವಶ್ಚೈತೇಽಪರಾ ಪ್ರಕೃತಿದೇವತಾ ॥ ೧೮ ॥

---

ತನ್ಮಾತ್ರಾ, (ಸೂಕ್ಷ್ಮಗಳು) ಶಬ್ದಮಾತ್ರಾ, ಸ್ಪರ್ಶಮಾತ್ರಾ, ರೂಪಮಾತ್ರಾ, ರಸಮಾತ್ರಾ, ಮತ್ತು ಗಂಧಮಾತ್ರಾ ಎಂದು ಎಂಟು ಬಗೆಯಾದಳು. (ಇಲ್ಲಿ ಸರ್ವತ್ರ ಮಾತ್ರಾಶಬ್ದಕ್ಕೆ ಸೂಕ್ಷ್ಮಾವಸ್ಥಾಪನ್ನಳು ಎಂದು ತಿಳಿಯಬೇಕು.) ನಿತ್ಯಶುದ್ಧಳೂ, ಜಗದ್ವ್ಯಾಪಕಳೂ ಆದ ಪರಾಪ್ರಕೃತಿಯು ಅಪರಾಪ್ರಕೃತಿಗೆ ಮುಖ್ಯ ಪ್ರಾಣಸ್ವರೂಪಳೆಂದು ತಿಳಿಯಬೇಕು.

೧೬. ಪೃಥಿವೀ, ಅಪ್, (ನೀರು) ತೇಜಸ್ಸು, ವಾಯು, ಆಕಾಶ, ಮನಸ್ಸು, ಬುದ್ಧಿ, ಮತ್ತು ಅಹಂಕಾರ ಈರೀತಿ ಅಪರಾಪ್ರಕೃತಿಯು ಎಂಟು ಬಗೆಯಾದಳು.

೧೭. ವಿಷ್ಣು, ಬ್ರಹ್ಮ, ಮಹಾದೇವ, ಗಣಪತಿ, ಯಮ, ಷಣ್ಮುಖ, ಕುಬೇರ ಮತ್ತು ವಿಶ್ವಕರ್ಮ ಈ ಎಂಟುಮಂದಿಯೂ ಪರಾಪ್ರಕೃತಿದೇವತೆಗಳು.

೧೮. ಆದಿಶೇಷ, ಸೂರ್ಯ, ಚಂದ್ರ, ಸುಮೇರು, ವರುಣ, ಅಗ್ನಿ, ವಾಯು ಮತ್ತು ಧ್ರುವ ಈ ಎಂಟುಮಂದಿಯೂ ಅಪರಾಪ್ರಕೃತಿಯ ಅಂಶಸಂಭೂತ ದೇವತೆಗಳು.

**ಅತಃ ಸೋಮಪತೀ ರುದ್ರೋ ರವಿಃ ಸ್ವಾಮೀ ವಿಧಿಃ ಸ್ವಯಂ ।**
**ಶೇಷಸ್ವಾಮೀ ಹರಿಃ ಸಾಕ್ಷಾನ್ನಮಸ್ತೇಭ್ಯೋ ನಮೋನಮಃ ॥ ೧೯ ॥**

**ಇತಿ ಶ್ರುತ್ವಾ ತದಾ ವಿಪ್ರಃ ಶಿಷ್ಯೋ ಭೂತ್ವಾ ಚ ತದ್ಗುರೋಃ ।**
**ತದಾಜ್ಞಯಾ ಚತುರ್ಥಾಂಗಂ ಜ್ಯೋತಿಃಶಾಸ್ತ್ರಂ ಚಕಾರ ಹ ॥ ೨೦ ॥**

**ವರಾಹಸಂಹಿತಾ ನಾಮ ಬೃಹಜ್ಜಾತಕಮೇವ ಹಿ ।**
**ಕ್ಷುದ್ರತಂತ್ರಾಂಸ್ತಥಾನ್ಯಾನ್ಸ್ವೈ ಕೃತ್ವಾ ತತ್ರ ಸ ಚಾಽವಸತ್ ॥ ೨೧ ॥**

---

೧೯. "ಪರಾಪ್ರಕೃತಿಯು ಅಪರಾಪ್ರಕೃತಿಯು ಪ್ರಾಣಸ್ಥಾನವಾಗಿರುವುದರಿಂದ ಚಂದ್ರನಿಗೆ ರುದ್ರನು ಸ್ವಾಮಿಯಾದನು. ಬ್ರಹ್ಮನು ಸೂರ್ಯನಿಗೆ ಸ್ವಾಮಿಯೆನಿಸಿದನು. ಮತ್ತು ಸಾಕ್ಷಾನ್ಮಹಾವಿಷ್ಣುವು ಆದಿಶೇಷನಿಗೆ ಸ್ವಾಮಿಯೆನಿಸಿದನು. ಅಂತಹ ತ್ರಿಮೂರ್ತಿಗಳಿಗೆ ನಮಸ್ಕಾರ. ಎಲೈ ವರಾಹಮಿಹಿರನೇ ! ಬ್ರಹ್ಮ ವಿಷ್ಣು ಮಹೇಶ್ವರರೆಲ್ಲರೂ ಸೂರ್ಯನ ಸ್ವರೂಪವೇ ಆಗಿರುವುದರಿಂದ ಆ ತ್ರಿಮೂರ್ತಿಸ್ವರೂಪನಾದ ಸೂರ್ಯನೇ ಶ್ರೇಷ್ಠನು, ಪೂಜಾರ್ಹನು ಎಂದು ನೀನು ಹೇಳಿದೆ. ಈಗ ಆ ಸೂರ್ಯದೇವನಿಗೆ ಬ್ರಹ್ಮನು ಸ್ವಾಮಿಯು. ಇವರೆಲ್ಲರಿಗೂ ಪ್ರಕೃತಿದೇವಿಯು ಮೂಲಕಾರಣಳು. ತಿಳಿಯಿತೇ ? ಎಲೈ ಬ್ರಾಹ್ಮಣೋತ್ತಮಾ ! ಆದುದರಿಂದ ಪ್ರಕೃತಿದೇವಿಯೇ ಸಕಲ ಪ್ರಪಂಚಕ್ಕೂ ಮೂಲಕಾರಣಳು; ಪೂಜಾರ್ಹಳು" ಎಂದು ಕೃಷ್ಣಚೈತನ್ಯನು ವರಾಹಮಿಹಿರನಿಗೆ ಹೇಳಿದನು.

೨೦. ಕೃಷ್ಣಚೈತನ್ಯನು ಹೀಗೆ ಹೇಳಲು ಬ್ರಾಹ್ಮಣೋತ್ತಮನಾದ ಆ ವರಾಹಮಿಹಿರನು ಅವನ ಮಾತನ್ನು ಕೇಳಿ ಸಂತೋಷಪಟ್ಟು ಅವನಿಗೆ ಶಿಷ್ಯನಾದನು. ಆ ಕೃಷ್ಣಚೈತನ್ಯ ಗುರುವಿನ ಅಪ್ಪಣೆಪಡೆದು ವೇದದ ನಾಲ್ಕನೆಯ ಅಂಗವಾದ ಜ್ಯೋತಿಶ್ಶಾಸ್ತ್ರದಲ್ಲಿ ಗ್ರಂಥವನ್ನು ರಚಿಸಿದನು.

೨೧. ಅವನು ಮಾಡಿದ ಜ್ಯೋತಿಶ್ಶಾಸ್ತ್ರದ ಗ್ರಂಥಗಳಲ್ಲಿ ವರಾಹಸಂಹಿತಾ, ಮತ್ತು ಬೃಹಜ್ಜಾತಕ ಇವೆರಡೂ ಪ್ರಸಿದ್ಧವಾದ ಗ್ರಂಥಗಳು. ಇವಲ್ಲದೆ ಜ್ಯೋತಿಶ್ಶಾಸ್ತ್ರದಲ್ಲಿ ಇತರ ಅನೇಕ ಕ್ಷುದ್ರಗ್ರಂಥಗಳನ್ನೂ ರಚಿಸಿ ತನ್ನ ಗುರುವಿನ ಸಮೀಪದಲ್ಲಿಯೇ ವಾಸಮಾಡತೊಡಗಿದನು.

॥ ಸೂತ ಉವಾಚ ॥
ವಾಣೀಭೂಷಣ ಏವಾಪಿ ಶಿವಭಕ್ತಿಪರಾಯಣಃ ।
ಕೃಷ್ಣಚೈತನ್ಯಮಾಗಮ್ಯ ವಚಃ ಪ್ರಾಹ ವಿನಮ್ರಧೀಃ ॥ ೨೨ ॥

ವಿಷ್ಣುಮಾಯಾ ಜಗದ್ಧಾತ್ರೀ ಸೈಕಾ ಪ್ರಕೃತಿರುತ್ಕೃತಾ ।
ತಯಾ ಜಾತಮಿದಂ ವಿಶ್ವಂ ವಿಶ್ವಾದ್ದೇವಸಮುದ್ಭವಃ ॥ ೨೩ ॥

ವಿಶ್ವೇದೇವಾತ್ಸ ಪುರುಷಶ್ಶಕ್ತಿಜೋ ಬಹುಧಾಭವತ್ ।
ಬ್ರಹ್ಮಾ ವಿಷ್ಣುರ್ಹರಶ್ಚೈವ ದೇವಾಃ ಪ್ರಕೃತಿಸಂಭವಾಃ ॥
ಅತೋ ಭಗವತೀ ಪೂಜ್ಯಾ ತರ್ಹಿ ತತ್ಪೂಜನೇನ ಕಿಂ ॥ ೨೪ ॥

ಇತಿ ಶ್ರುತ್ವಾ ಸ ಯಜ್ಞಾಂಶೋ ವಿಹಸ್ಯಾಹ ದ್ವಿಜೋತ್ತಮಂ ।
ನ ವೈ ಭಗವತೀ ಶ್ರೇಷ್ಠಾ ಜಡರೂಪಾ ಗುಣಾತ್ಮಿಕಾ ॥ ೨೫ ॥

---

೨೨. ಪುನಃ ಸೂತಮುನಿವರ್ಯನು ಯಜ್ಞಾಂಶನ ಚರಿತ್ರೆಯನ್ನು ಹೇಳುತ್ತಾನೆ—ಶಿವಭಕ್ತಿಪರಾಯಣನಾದ ವಾಣೀಭೂಷಣನೆಂಬವನು ಒಂದುದಿನ ಕೃಷ್ಣಚೈತನ್ಯನ ಸಮೀಪಕ್ಕೆ ಬಂದು ಅವನನ್ನು ಕುರಿತು ವಿನಯದಿಂದ ಹೀಗೆ ವಾದಿಸಿದನು.

೨೩-೨೪. ವಿಷ್ಣುಮಾಯೆಯೂ, ಜಗದ್ರಕ್ಷಕಳೂ, ಅದ್ವಿತೀಯಳೂ ಆದ ಪ್ರಕೃತಿದೇವಿಯೊಬ್ಬಳೇ ಶ್ರೇಷ್ಠಳು ಈ ಪ್ರಪಂಚವೆಲ್ಲವೂ ಆ ಪ್ರಕೃತಿಯಿಂದಲೇ ಉತ್ಪನ್ನವಾಯಿತು. ಅನಂತರ ಆ ವಿಶ್ವದಿಂದ ದೇವತೆಗಳು ಅವತರಿಸಿದರು. ಆಮೇಲೆ ಆ ದೇವತೆಗಳಿಂದ ಪುರುಷನು ಜನಿಸಿದನು ಈರೀತಿ ಶಕ್ತಿಸ್ವರೂಪಿಣಿಯಾದ ಆ ಪ್ರಕೃತಿದೇವಿಯಿಂದ ಅನೇಕ ಸೃಷ್ಟಿಯುಂಟಾಯಿತು. ಬ್ರಹ್ಮ ವಿಷ್ಣು ಮಹೇಶ್ವರರೆಂಬ ತ್ರಿಮೂರ್ತಿಗಳೂ ಆ ಪ್ರಕೃತಿದೇವಿಯಿಂದಲೇ ಜನಿಸಿದವರು. ಹೀಗಿರುವಾಗ ಭಗವತಿಯಾದ ಪ್ರಕೃತಿದೇವಿಯೇ ಪೂಜಾರ್ಹಳು. ಇತರರು ಪೂಜಾರ್ಹರಲ್ಲ" ಎಂದು ಹೇಳಿದನು.

೨೫ ವಾಣೀಭೂಷಣನು ಹೀಗೆ ಹೇಳಿದುದನ್ನು ಕೇಳಿ ಆ ಯಜ್ಞಾಂಶನು ನಗೆಮೊಗವುಳ್ಳವನಾಗಿ ಆಬ್ರಾಹ್ಮಣನನ್ನು ಕುರಿತು "ಅಯ್ಯಾ ಬ್ರಾಹ್ಮಣೋತ್ತಮ ! ನೀನು ಹೇಳಿದ ಪ್ರಕೃತಿದೇವಿಯು ಗುಣಾಶ್ರಯಳಾದರೂ ಜಡರೂಪವುಳ್ಳವಳಾದ್ದರಿಂದ ಶ್ರೇಷ್ಠಳಲ್ಲ.

ಏಕಾ ಸಾ ಪ್ರಕೃತಿರ್ಮಾಯಾ ರಚಿತುರ್ಜಗತಾಂ ಕ್ಷಮಾ ।
ಪುರುಷಸ್ಯ ಸಹಾಯೇನ ಯೋಷಿತೇವ ನರಸ್ಯ ಚ ॥ ೨೬ ॥

ದೇವೀಭಾಗವತೇ ಶಾಸ್ತ್ರೇ ಪ್ರಸಿದ್ಧೇಯಂ ಕಥಾ ದ್ವಿಜ ।
ಕದಾಚಿತ್ಪ್ರಕೃತಿರ್ದೇವೀ ಸ್ವೇಚ್ಛಯೇದಂ ಜಗತ್ಖಲು ॥ ೨೭ ॥

ನಿರ್ಮಿತಂ ಜಡಭೂತಂ ತದ್ಬಹುಧಾ ಭೋಧಿತಂ ತಯಾ ।
ನ ಚೈತನ್ಯಮಭೂದ್ವಿಪ್ರಾ ವಿಸ್ಮಿತಾ ಪ್ರಕೃತೇಸ್ತದಾ ॥ ೨೮ ॥

ಶೂನ್ಯಭೂತಂ ಚ ಪುರುಷಂ ಚೈತನ್ಯಂ ಸಮತೋಷಯತ್ ।
ಪ್ರವಿಷ್ಟೋ ಭಗವಾನ್‌ದೇವೀಮಾಯಾಜನಿತಗೋಲಕೇ ॥ ೨೯ ॥

---

೨೬. ಲೋಕದಲ್ಲಿ ಪುರುಷನ ಸಹಾಯವನ್ನು ಹೊಂದಿದ ಸಾಧಾರಣ ಸ್ತ್ರೀಯಂತೆ ಅದ್ವಿತೀಯಳೂ ಮಾಯಾಸ್ವರೂಪಿಣಿಯೂ ಆದ ಆ ಪ್ರಕೃತಿಯು ಪುರುಷನ ಸಹಾಯಪಡೆದು, ಸಕಲ ಜಗತ್ತಿನ ಸೃಷ್ಟಿ ಸ್ಥಿತಿ ಸಂಹಾರಕಾರ್ಯಗಳನ್ನೆಸಗಲು ಸಮರ್ಥಳಾಗುವಳು. (ಪುರುಷನ ಸಹಾಯವಿಲ್ಲದೆ ಪ್ರಕೃತಿಯೊಬ್ಬಳೇ ಪ್ರಪಂಚದ ಸೃಷ್ಟ್ಯಾದಿಕಾರ್ಯದಲ್ಲಿ ಅಸಮರ್ಥಳೆಂದು ತಿಳಿಯಬೇಕು.)

೨೭. ಎಲೈ ಬ್ರಾಹ್ಮಣನೇ ! ಇದಕ್ಕೆ ದೇವೀಭಾಗವತದಲ್ಲಿ ಒಂದು ದೃಷ್ಟಾಂತವು ಪ್ರಸಿದ್ಧವಾಗಿರುವುದು. ಅದನ್ನು ಹೇಳುವೆನು ಕೇಳು. ಒಂದುಸಲ ಪ್ರಕೃತಿಯು ಪುರುಷನ ಸಹಾಯವಿಲ್ಲದೆ ತಾನೊಬ್ಬಳೇ ಈ ಪ್ರಪಂಚವನ್ನು ನಿರ್ಮಿಸಿದಳು.

೨೮. ಆದರೆ ಆ ಜಗತ್ತೆಲ್ಲವೂ (ಪ್ರಾಣಿಗಳೆಲ್ಲವೂ) ಜಡವಾಗಿ ಪರಿಣಮಿಸಿತು. (ಪ್ರಕೃತಿಯು ಜಡಸ್ವರೂಪಳಾದುದರಿಂದ ಅವಳಿಂದ ನಿರ್ಮಿತವಾದ ಜಗತ್ತೂ ಜಡವಾಯಿತೆಂದು ತಿಳಿಯಬೇಕು.) ಅನಂತರ ಆ ಪ್ರಕೃತಿಯು ಆ ಜಡಪ್ರಾಣಿಗಳನ್ನು ಎಚ್ಚರಗೊಳ್ಳುವಂತೆ ಅನೇಕರೀತಿ ಪ್ರಯತ್ನ ಮಾಡಿದಳು. ಆದರೂ ಯಾವಪ್ರಾಣಿಯೂ ಚೈತನ್ಯವನ್ನು ಹೊಂದಲಿಲ್ಲ. ಆಗ ಆ ಪ್ರಕೃತಿಯು ಬಹಳ ಆಶ್ಚರ್ಯಹೊಂದಿ,

೨೯. ಶೂನ್ಯಭೂತನೂ, ಚೈತನ್ಯಸ್ವರೂಪನೂ ಆದ ಪುರುಷನನ್ನು ಒಲಿಸಿಕೊಂಡಳು. ಅನಂತರ ಪುರುಷನು ಪ್ರಕೃತಿದೇವಿಯು ತನ್ನ ಮಾಯೆಯಿಂದ ನಿರ್ಮಿಸಿದ್ದ ಜಡವಸ್ತುಗಳಲ್ಲಿ ಪ್ರವೇಶಿಸಿದನು.

**ಸ್ವಪ್ನವದ್ವಾ ಸ್ವಯಂ ಜಾತಶ್ಚೈತನ್ಯಮಭವಜ್ಜಗತ್ ।**
**ಅತಃ ಶ್ರೇಷ್ಠಃ ಸ ಭಗವಾನ್ಪುರುಷೋ ನಿರ್ಗುಣಃ ಪರಃ ॥ ೩೦ ॥**

**ಪ್ರಕೃತ್ಯಾಂ ಸ್ವೇಚ್ಛಯಾ ಜಾತೋ ಲಿಂಗರೂಪಸ್ತ್ವದಾsಭವತ್ ।**
**ಪುಲ್ಲಿಂಗಪ್ರಕೃತೌ ಜಾತಃ ಪುಲ್ಲಿಂಗೋsಯಂ ಸನಾತನಃ ॥ ೩೧ ॥**

**ಸ್ತ್ರೀಲಿಂಗಪ್ರಕೃತೌ ಜಾತಃ ಸ್ತ್ರೀಲಿಂಗೋsಯಂ ಸನಾತನಃ ।**
**ನಪುಂಸ್ಕಪ್ರಕೃತೌ ಜಾತಃ ಕ್ಲೀಬರೂಪಃ ಸ ವೈ ಪ್ರಭುಃ ॥ ೩೨ ॥**

**ಅವ್ಯಯಪ್ರಕೃತೌ ಜಾತೋ ನಿರ್ಗುಣೋsಯಮಧೋಕ್ಷಜಃ ।**
**ನಮಸ್ತಸ್ಮೈ ಭಗವತೇ ಶೂನ್ಯರೂಪಾಯ ಸಾಕ್ಷಿಣೇ ॥ ೩೩ ॥**

---

೩೦. ಆಗ ಆ ಸ್ಥಾವರಜಂಗಮಾತ್ಮಕವಾದ ಪ್ರಪಂಚವೆಲ್ಲವೂ ನಿದ್ರೆಯಿಂದ ಎಚ್ಚೆತ್ತುಗೊಳ್ಳುವಂತೆ ತೋರುತ್ತಾ ಚೈತನ್ಯವನ್ನು ಪಡೆಯಿತು. ಆದುದರಿಂದ ಎಲೈ ಬ್ರಾಹ್ಮಣನೇ! ನಿರ್ಗುಣನೂ (ಗುಣರಹಿತನೂ) ಭಗವಂತನೂ ಆದ ಪುರುಷನೇ ಶ್ರೇಷ್ಠನೆಂದು ತಿಳಿ.

೩೧. ಈ ಪುರುಷನು ತನ್ನ ಅಪೇಕ್ಷೆಯಿಂದಲೇ ಪ್ರಕೃತಿಯಲ್ಲಿ ಜನಿಸಿ ನಾನಾ ಲಿಂಗರೂಪವನ್ನು ತಾಳಿದನು. ಇವನೇ ಪುಲ್ಲಿಂಗರೂಪ ಪ್ರಕೃತಿಯಲ್ಲಿ ಜನಿಸಿ ಸನಾತನನಾದ ಪುಲ್ಲಿಂಗ ವ್ಯಕ್ತಿಯೆನಿಸಿದನು.

೩೨. ಈ ಪುರುಷನೇ ಸ್ತ್ರೀಲಿಂಗಪ್ರಕೃತಿಯಲ್ಲಿ ಜನಿಸಿ ಪುರಾತನವಾದ ಸ್ತ್ರೀಲಿಂಗ ವ್ಯಕ್ತಿಯೆನಿಸಿದನು. ಸರ್ವಸಮರ್ಥನಾದ ಆ ಪುರುಷನೇ ನಪುಂಸಕಪ್ರಕೃತಿಯಲ್ಲಿ ಜನಿಸಿ ನಪುಂಸಕ ವ್ಯಕ್ತಿಯೆನಿಸಿದನು.

೩೩. ನಿರ್ಗುಣಸ್ವರೂಪನಾದ ಈ ಪರಮಪುರುಷನು ಅವ್ಯಯಪ್ರಕೃತಿಯಲ್ಲಿ ಜನಿಸಿ ಅಧೋಕ್ಷಜ ಎಂಬ ಹೆಸರಿನಿಂದ ಪ್ರಸಿದ್ಧನಾದನು. ಶೂನ್ಯಸ್ವರೂಪನೂ ಭಗವಂತನೂ ಆದ ಆ ಪರಮಪುರುಷನಿಗೆ ನಮಸ್ಕಾರ. (ಪ್ರಕೃತಿಯು ಜಡಸ್ವರೂಪಳು ಮತ್ತು ಗುಣಾಶ್ರಯಳು. ಪುರುಷನು ನಿರ್ಗುಣಸ್ವರೂಪನು. ಮತ್ತು ಚೈತನ್ಯ ರೂಪನು. ಚೈತನ್ಯವಿಲ್ಲದ ಶರೀರವು ಗುಣಾಶ್ರಯವಾಗಿದ್ದರೂ ನಿಷ್ಪ್ರಯೋಜನವಾಗಿದ್ದು ಮತ್ತೆ ಅದೇ ಚೈತನ್ಯಸ್ವರೂಪವು ಬಂದನಂತರ ಪ್ರಯೋಜನಸಹಿತವಾಗುವುದರಿಂದ ಚೈತನ್ಯಸ್ವರೂಪನಾದ ಪುರುಷನೇ ಪ್ರಕೃತಿಗಿಂತಲೂ ಶ್ರೇಷ್ಠನೆನಿಸಿದನು. ಪುರುಷನು ನಿರ್ಗುಣನೂ ರೂಪರಹಿತನೂ ಆಗಿದ್ದರೂ ತಾನು ರೂಪವನ್ನು ತಾಳಬೇಕೆಂದು

ಇತಿ ಶ್ರುತ್ವಾ ತು ತದ್ವಾಕ್ಯಂ ಶಿಷ್ಯೋ ಭೂತ್ವಾ ಸ ವೈ ದ್ವಿಜಃ ।
ತ್ರಿವಿಂಶಾಬ್ದೇ ಚ ಯಜ್ಞಾಂಶೇ ತತ್ರ ವಾಸಮಕಾರಯತ್ ॥ ೩೪ ॥

ಛಂದೋಗ್ರಂಥಂ ತು ವೇದಾಂಗಂ ಸ್ವನಾಮ್ನಾ ತೇನ ನಿರ್ಮಿತಂ ।
ರಾಧಾಕೃಷ್ಣಪರಂ ನಾಮ ಜಪ್ತ್ವಾ ಹರ್ಷಮವಾಪ್ತವಾನ್ ॥ ೩೫ ॥

॥ ಸೂತ ಉವಾಚ ॥

ಧನ್ವಂತರಿರ್ದ್ವಿಜೋ ನಾಮ ಬ್ರಹ್ಮಭಕ್ತಿಪರಾಯಣಃ ।
ಕೃಷ್ಣಚೈತನ್ಯಮಾಗಮ್ಯ ನತ್ವಾ ವಚನಮಬ್ರವೀತ್ ॥ ೩೬ ॥

ಭವಾಂಸ್ತು ಪುರುಷಃ ಶ್ರೇಷ್ಠೋ ನಿತ್ಯಶುದ್ಧಸ್ಸನಾತನಃ ।
ಜಡಭೂತಾ ಚ ತನ್ಮಾಯಾ ಸಮರ್ಥೋ ಭಗವಾನ್ ಸ್ವಯಂ ॥ ೩೭ ॥

---

ಸಂಕಲ್ಪಿಸಿದಾಗ ಮಾಯಾಸ್ವರೂಪಳೂ ಗುಣಾಶ್ರಯಳೂ ಆದ ಪ್ರಕೃತಿಯೊಡನೆ ಸೇರಿ ರೂಪಾಂತರವನ್ನು ಹೊಂದುವನು ಎಂದು ತಿಳಿಯಬೇಕು.) ಎಂಬದಾಗಿ ಕೃಷ್ಣಚೈತನ್ಯನು ವಾಣೀಭೂಷಣನನ್ನು ಕುರಿತು ಹೇಳಿದನು.

೩೪. ಅನಂತರ ಆ ವಾಣೀಭೂಷಣವಿಪ್ರನು ಇಪ್ಪತ್ತಮೂರನೆಯ ವಯಸ್ಸಿನವನಾದ ಯಜ್ಞಾಂಶನ ಈ ಮಾತನ್ನು ಕೇಳಿ, ಅವನ ಶಿಷ್ಯನಾಗಿ ಗುರುಶೂಶ್ರೂಷೆ ಮಾಡುತ್ತಾ ಅಲ್ಲಿಯೇ ವಾಸಮಾಡಿದನು.

೩೫. ಅನಂತರ ತನ್ನ ಹೆಸರಿನಲ್ಲಿ ವೇದಾಂಗವಾದ ಛಂದಃಶಾಸ್ತ್ರಗ್ರಂಥವನ್ನು ರಚಿಸಿ, ರಾಧಾಕೃಷ್ಣಸ್ವರೂಪವಾದ ಪರಮಾತ್ಮನ ನಾಮವನ್ನು ಜಪಿಸುತ್ತಾ ಸಂತೋಷದಿಂದ ಇದ್ದನು.

೩೬. ಸೂತಮುನಿವರ್ಯನು ಕೃಷ್ಣಚೈತನ್ಯನ ಚರಿತ್ರೆಯನ್ನು ಮುಂದುವರಿಸಿ ಹೇಳುತ್ತಾನೆ—ಬ್ರಹ್ಮಜ್ಞಾನಪರಾಯಣನಾದ ಧನ್ವಂತರಿ ಎಂಬ ಬ್ರಾಹ್ಮಣನಿದ್ದನು. ಅವನು ಒಂದುಸಲ ಕೃಷ್ಣಚೈತನ್ಯನ ಸಮೀಪಕ್ಕೆ ಬಂದು ಅವನಿಗೆ ನಮಸ್ಕಾರಮಾಡಿ ಅವನನ್ನು ಕುರಿತು ಹೀಗೆ ಹೇಳಿದನು.

೩೭. "ಎಲೈ ಯಜ್ಞಾಂಶನೇ! ನಿತ್ಯಶುದ್ಧನೂ, ಸನಾತನನೂ ಆದ ಪುರುಷನೇ ಶ್ರೇಷ್ಠನು. ಮತ್ತು ಪೂಜಾರ್ಹನು. ಪ್ರಕೃತಿಯು ಜಡಸ್ವರೂಪಳು. ಭಗವಂತನಾದ ಪುರುಷನೇ ಸರ್ವಸಮರ್ಥನು."

ನಿತ್ಯೋಽವ್ಯಕ್ತಃ ಪರಃ ಸೂಕ್ಷ್ಮಸ್ತಸ್ಮಾತ್ ಪ್ರಕೃತಿರುದ್ಭವಾ ।
ಅತಃ ಪೂಜ್ಯಸ್ಸ ಭಗವಾನ್ ಪ್ರಕೃತ್ಯಾಃ ಪೂಜನೇನ ಕಿಂ ॥ ೩೮ ॥

ಇತಿ ಶ್ರುತ್ವಾ ವಿಹಸ್ಯಾಹ ಯಜ್ಞಾಂಶಸ್ಸರ್ವಶಾಸ್ತ್ರಗಃ ।
ನಾಯಂ ಶ್ರೇಷ್ಠಸ್ಸ ಪುರುಷೋ ನ ಕ್ಷಮಃ ಪ್ರಕೃತಿಂ ವಿನಾ ॥ ೩೯ ॥

ಪುರಾಣೇ ಚೈವ ವಾರಾಹೇ ಪ್ರಸಿದ್ಧೇಯಂ ಕಥಾ ಶುಭಾ ।
ಕದಾಚಿತ್ ಪುರುಷೋ ನಿತ್ಯೋ ನಾಮಮಾತ್ರಃ ಸ್ವಕೇಚ್ಛಯಾ ॥
ಬಭೂವ ಬಹುಧಾ ತತ್ರ ಯಥಾಪ್ರೇತಸ್ತಥಾ ಸ್ವಯಂ ॥ ೪೦ ॥

ಅಸಮರ್ಥೋ ವಿರಚಿತುಂ ಜಗಂತಿ ಪುರುಷಃ ಪರಃ ।
ತುಷ್ಟಾವ ಪ್ರಕೃತಿಂ ದೇವೀಂ ಚಿರಕಾಲಂ ಸನಾತನೀಂ ॥ ೪೧ ॥

---

೩೮. " ಈ ಪುರುಷನು ನಿತ್ಯನು. ಅವ್ಯಕ್ತಸ್ವರೂಪನು ಶ್ರೇಷ್ಠನು ಮತ್ತು ಸೂಕ್ಷ್ಮಸ್ವರೂಪನು. ಈ ಪುರುಷನಿಂದಲೇ ಪ್ರಕೃತಿಯು ಹುಟ್ಟಿದಳು. ಆದುದರಿಂದ ಭಗವಂತನಾದ ಪುರುಷನೇ ಪೂಜಾರ್ಹನು. ಪ್ರಕೃತಿಯನ್ನು ಪೂಜಿಸುವುದರಿಂದ ಏನೂಪ್ರಯೋಜನವಿಲ್ಲ" ಎಂದು ಹೇಳಿದನು.

೩೯. ಧನ್ವಂತರಿಯು ಹೀಗೆ ಹೇಳಿದುದನ್ನು ಕೇಳಿ ಸರ್ವಶಾಸ್ತ್ರಜ್ಞನಾದ ಯಜ್ಞಾಂಶನು ನಗುತ್ತಾ ಅವನನ್ನು ಕುರಿತು " ಎಲೈ ಬ್ರಾಹ್ಮಣನೇ ! ಪ್ರಕೃತಿಯಿಲ್ಲದೆ ಪುರುಷನು ಶ್ರೇಷ್ಠನೆನಿಸಲಾರನು. ಮತ್ತು ಯಾವಕಾರ್ಯಗಳನ್ನು ಮಾಡಲೂ ಸಮರ್ಥನಾಗುವುದಿಲ್ಲ."

೪೦. ವರಾಹಪುರಾಣದಲ್ಲಿ ಇದಕ್ಕೆ ದೃಷ್ಟಾಂತವಾಗಿ ಒಂದು ಶುಭಕರವಾದ ಕಥೆಯಿರುವುದು. ಅದನ್ನು ಹೇಳುವೆನು ಕೇಳು. ನಿತ್ಯನೂ ನಾಮಮಾತ್ರನೂ ಆದ ಪುರುಷನು ಒಂದುಸಲ ಇಚ್ಛೆಪಟ್ಟು ತಾನು ಪ್ರೀತದಂತೆ ಅನೇಕ ರೂಪಗಳನ್ನು ತಾಳಿದನು.

೪೧. ಹೀಗೆ ಅನೇಕ ರೂಪತಾಳಿದರೂ ಏಕನೆನಿಸಿ ಪ್ರಪಂಚವನ್ನು ಸೃಷ್ಟಿಸಲು ಅಸಮರ್ಥನಾಗಿ, ಕೊನೆಗೆ ಸನಾತನಿಯಾದ ಪ್ರಕೃತಿದೇವಿಯನ್ನು ಬಹಳಕಾಲ ಸ್ತೋತ್ರಮಾಡಿದನು.

ತದಾ ದೇವೀ ಚ ತಂ ಪ್ರಾಪ್ಯ ಮಹತ್ತತ್ತ್ವಂ ಚಕಾರ ಹ ।
ಸೋಽಹಂಕಾರಶ್ಚ ಮಹತೋ ಜಾತಸ್ತನ್ಮಾತ್ರಿಕಾಸ್ತತಃ ॥ ೪೨ ॥

ಮಹಾಭೂತಾನ್ಯತೋಽಸ್ಯಾಸಂಸ್ತೈಃ ಸಂಜಾತಮಿದಂ ಜಗತ್ ॥ ೪೩ ॥

ಅತಸ್ಸನಾತನೌ ಚೋಭೌ ಪುರುಷಾತ್ಪ್ರಕೃತಿಃ ಪರಾ ।
ಪ್ರಕೃತೇಃ ಪುರುಷಶ್ಚೈವ ತಸ್ಮಾತ್ತಾಭ್ಯಾಂ ನಮೋನಮಃ ॥ ೪೪ ॥

ಇತಿ ಧನ್ವಂತರಿಃ ಶ್ರುತ್ವಾ ಶಿಷ್ಯೋ ಭೂತ್ವಾ ಚ ತದ್ಗುರೋಃ ।
ತತ್ರೋಷ್ಯ ಚೈವ ವೇದಾಂಗಂ ಕಲ್ಪವೇದಂ ಚಕಾರ ಹ ॥
ಸುಶ್ರುತಾದಪರೇ ಚಾಪಿ ಶಿಷ್ಯಾ ಧನ್ವಂತರೇಃ ಸ್ಮೃತಾಃ ॥ ೪೫ ॥

---

೪೨. "ಆಗ ಆ ಪ್ರಕೃತಿದೇವಿಯು ಸಂತೋಷದಿಂದ ಬಂದು ಪುರುಷನೊಡನೆ ಸೇರಿ ಮಹತ್ತತ್ತ್ವವನ್ನು ನಿರ್ಮಿಸಿದಳು. ಅನಂತರ ಆ ಮಹತ್ತತ್ತ್ವದಿಂದ ಅಹಂಕಾರ ತತ್ತ್ವವು ಜನಿಸಿತು. ಆನಂತರ ಈ ಅಹಂಕಾರತತ್ತ್ವದಿಂದ ಸೂಕ್ಷ್ಮವಾದ ಪೃಥಿವ್ಯಪ್ತೇಜೋವಾಯ್ವಾಕಾಶವೆಂಬ ಪಂಚಭೂತಗಳು (ತನ್ಮಾತ್ರಗಳು) ಜನಿಸಿದುವು"

೪೩ "ಆಮೇಲೆ ಈ ಪಂಚಸೂಕ್ಷ್ಮಭೂತಗಳಿಂದ ಪಂಚಮಹಾಭೂತಗಳು ಜನಿಸಿದುವು. ಕೊನೆಗೆ ಈ ಪಂಚಮಹಾಭೂತಗಳಿಂದಲೇ ಈ ಪ್ರಪಂಚವೆಲ್ಲವೂ ಹುಟ್ಟಿತು."

೪೪. "ಆದುದರಿಂದ ಪ್ರಕೃತಿ ಮತ್ತು ಪುರುಷ ಇವರಿಬ್ಬರೂ ಸನಾತನರು ಇವರಲ್ಲಿ ಪುರುಷನಿಗಿಂತ ಪ್ರಕೃತಿಯೂ, ಪ್ರಕೃತಿಗಿಂತ ಪುರುಷನೂ, ಮಹಾಶ್ರೇಷ್ಠರಾದವರು. ಎಂದರೆ ಇಬ್ಬರೂ ಶ್ರೇಷ್ಠರು. ಆದುದರಿಂದ ಆ ಪ್ರಕೃತಿ ಮತ್ತು ಪುರುಷ ಇವರಿಗೆ ನಮಸ್ಕಾರ" ಎಂದು ಕೃಷ್ಣಚೈತನ್ಯನು ಹೇಳಿದನು.

೪೫ ಧನ್ವಂತರಿಯು ಯಜ್ಞಾಂಶನ ಈ ಮಾತುಗಳನ್ನು ಕೇಳಿ ಅವನ ಮತವನ್ನು ಅಂಗೀಕರಿಸಿ ಅವನಿಗೆ ಶಿಷ್ಯನಾದನು. ಮತ್ತು ಈ ಗುರುವಿನ ಸಮೀಪದಲ್ಲಿಯೇ ವಾಸಮಾಡುತ್ತಾ ವೇದಾಂಗವಾದ ಕಲ್ಪ (ಆಯುರ್ವೇದ) ವನ್ನು ನಿರ್ಮಿಸಿದನು ಸುಶ್ರುತ ಮತ್ತು ಇತರ ವೈದ್ಯಗ್ರಂಥಪ್ರಣೇತೃಗಳೆಲ್ಲರೂ ಈ ಧನ್ವಂತರಿಯ ಶಿಷ್ಯರೇ ಆಗಿರುವರು.

॥ ಸೂತ ಉವಾಚ ॥

ಜಯದೇವಸ್ಸ ವೈ ವಿಪ್ರೋ ಬೌದ್ಧಮಾರ್ಗಪರಾಯಣಃ ।
ಕೃಷ್ಣಚೈತನ್ಯಮಾಗಮ್ಯ ಪಂಚವಿಂಶವಯೋಽನ್ವಿತಂ ॥
ನತ್ವೋವಾಚ ವಚೋ ರಮ್ಯಂ ಸ ಚ ಶ್ರೇಷ್ಠ ಉಷಾಪತಿಃ ॥ ೪೬ ॥

ಯಸ್ಯ ನಾಭೇರಭೂತ್ಪದ್ಮಂ ಬ್ರಹ್ಮಣಾ ಸಹ ನಿರ್ಗತಂ ।
ಅತಸ್ಸ ಬ್ರಹ್ಮಸೂರ್ನಾಮ ಸಾಮವೇದೇಷು ಗೀಯತೇ ॥ ೪೭ ॥

ವಿಶ್ವೋ ನಾರಾಯಣಸ್ಸಾಕ್ಷಾದ್ಯಸ್ಯ ಕೇತೌ ಸಮಾಸ್ಥಿತಃ ।
ವಿಶ್ವಕೇತುರತೋ ನಾಮ ನ ನಿರುದ್ಧೋಽನಿರುದ್ಧಕಃ ॥ ೪೮ ॥

ಬ್ರಹ್ಮವೇಲಾ ಚ ತತ್ಪತ್ನೀ ನಿತ್ಯಾ ಚೋಷಾ ಮಹೋತ್ತಮಾ ।
ಸ ವೈ ಲೋಕಹಿತಾರ್ಥಾಯ ಸ್ವಯಮರ್ಚಾವತಾರಕಃ ॥ ೪೯ ॥

---

೪೬. ಸೂತಮುನಿವರ್ಯನು ಕೃಷ್ಣಚೈತನ್ಯನ ಚರಿತ್ರೆಯನ್ನು ಹೇಳುತ್ತಾನೆ— ಬೌದ್ಧಮಾರ್ಗಪರಾಯಣನಾದ ಜಯದೇವನೆಂಬ ಒಬ್ಬ ಬ್ರಾಹ್ಮಣನಿದ್ದನು. ಕೃಷ್ಣ ಚೈತನ್ಯನಿಗೆ ಇಪ್ಪತ್ತೈದನೆಯ ವರ್ಷನಡೆಯುತ್ತಿದ್ದಾಗ ಆ ವಿಪ್ರನು ಒಂದುಸಲ ಇವನ ಸಮೀಪಕ್ಕೆ ಬಂದು ನಮಸ್ಕಾರಮಾಡಿ ಅವನನ್ನು ಕುರಿತು "ಸ್ವಾಮೀ! ಲೋಕದಲ್ಲಿ ಉಷಾಪತಿಯೇ ಶ್ರೇಷ್ಠನಾದವನು."

೪೭. "ಈ ಉಷಾಪತಿಯ ನಾಭಿಯಲ್ಲಿ ಹುಟ್ಟಿದ ಕಮಲವು ಬ್ರಹ್ಮನ ಉತ್ಪತ್ತಿಗೆ ಕಾರಣವಾಯಿತು. ಆದುದರಿಂದ ಈ ಉಷಾಪತಿಯು 'ಬ್ರಹ್ಮಸೂಃ' ಎಂಬ ಹೆಸರಿನಿಂದ ಸಾಮವೇದದಲ್ಲಿ ಸ್ತುತಿಸಲ್ಪಡುವನು."

೪೮. "ವಿಶ್ವವೇ (ಪ್ರಪಂಚ) ಸಾಕ್ಷಾತ್ ನಾರಾಯಣನು ಅದು ಇವನ ಧ್ವಜದಲ್ಲಿರುವುದರಿಂದ ಈ ಉಷಾಪತಿಗೆ ವಿಶ್ವಕೇತು ಎಂದು ಹೆಸರಾಯಿತು. ಮತ್ತು ಯಾರಿಂದಲೂ ತಡೆಯಿಲ್ಲದವನಾದುದರಿಂದ ಅನಿರುದ್ಧನೆಂಬ ಹೆಸರೂ ಪ್ರಸಿದ್ಧಿಯಾಯಿತು."

೪೯. "ಬ್ರಹ್ಮನ ಕಾಲಸ್ವರೂಪವೇ ಉಷಾ ಎಂಬ ಹೆಸರಿನಿಂದ ಅವನಿಗೆ ಪತ್ನಿಯಾಗಿರುವಳು. ಈ ಬ್ರಹ್ಮನು ಲೋಕಕಲ್ಯಾಣಕ್ಕೋಸ್ಕರ ತಾನೇ ಅರ್ಚಾವತಾರವನ್ನು ಧರಿಸಿರುವನು" ಎಂದು ಹೇಳಿದನು.

ಇತಿ ಶ್ರುತ್ವಾ ವಿಹಸ್ಯಾಹ ಯಜ್ಞಾಂಶಸ್ತಂ ದ್ವಿಜೋತ್ತಮಂ ।
ವೇದೋ ನಾರಾಯಣಃ ಸಾಕ್ಷಾತ್ ಪೂಜನೀಯೋ ನರೈಃ ಸದಾ ॥ ೫೦ ॥

ತತಃ ಕಾಲಸ್ತತಃ ಕರ್ಮ ತತೋ ಧರ್ಮಃ ಪ್ರವರ್ತತೇ ।
ಧರ್ಮಾತ್ಕಾಮಃ ಸಮುದ್ಭೂತಃ ಕಾಮಪತ್ನೀ ರತಿಃ ಸ್ವಯಂ ॥ ೫೧ ॥

ರತ್ಯಾಂ ಕಾಮಾತ್ಸಮುದ್ಭೂತೋಽನಿರುದ್ಧೋ ನಾಮದೇವತಾ ।
ಉಷಾ ಸಾ ತಸ್ಯ ಭಗಿನೀ ತೇನ ಸಾರ್ಧಂ ಸಮುದ್ಭವಾ ॥ ೫೨ ॥

ಕಾಲೋ ನಾಮ ಸ ವೈ ಕೃಷ್ಣೋ ರಾಧಾ ತಸ್ಯ ಸಹೋದರಾ ।
ಕರ್ಮರೂಪಃ ಸ ವೈ ಬ್ರಹ್ಮಾ ನಿಯತಿಸ್ತತ್ಸಹೋದರಾ ॥ ೫೩ ॥

ಧರ್ಮರೂಪೋ ಮಹಾದೇವಃ ಶ್ರದ್ಧಾ ತಸ್ಯ ಸಹೋದರಾ ।
ಅನಿರುದ್ಧಃ ಕಥಂ ಚೇಶೋ ಭವತೋಕ್ತಃ ಸನಾತನಃ ॥ ೫೪ ॥

---

೫೦. ಬ್ರಾಹ್ಮಣೋತ್ತಮನಾದ ಜಯದೇವನು ಹೀಗೆ ಹೇಳಿದುದನ್ನು ಕೇಳಿ ಯಜ್ಞಾಂಶನು ಸ್ವಲ್ಪ ನಗುತ್ತಾ ಅವನನ್ನು ಕುರಿತು "ಎಲೈ ಬ್ರಾಹ್ಮಣೋತ್ತಮನೇ! ವೇದವು ಸಾಕ್ಷಾನ್ನಾರಾಯಣಸ್ವರೂಪ. ಇದು ಯಾವಾಗಲೂ ಮನುಷ್ಯರಿಗೆ ಪೂಜಾರ್ಹವಾಗಿರುವುದು.''

೫೧. ವೇದದಿಂದಲೇ ಕಾಲವು, ಕಾಲದಿಂದ ಕರ್ಮಾನುಷ್ಠಾನವು ಈ ಕರ್ಮಾಚರಣೆಯಿಂದಲೇ ಧರ್ಮಪ್ರಾಪ್ತಿಯು. ಈರೀತಿ ನಿಯಮವಿರುವುದರಿಂದಲೇ ಕಾಮನು ಜನಿಸಿದನು. ಈ ಮನ್ಮಥನ ಪತ್ನಿಯೇ ರತಿಯು.

೫೨. ಈ ರತಿ ಮತ್ತು ಕಾಮ ಇವರುಗಳಿಂದ ಅನಿರುದ್ಧನೆಂಬ ದೇವತೆ ಜನಿಸಿದನು. ಉಷಾ ಎಂಬುವಳು ಈ ಅನಿರುದ್ಧನೊಡಹುಟ್ಟಿದ ಸಹೋದರಿ.

೫೩. ಕೃಷ್ಣನು ಕಾಲಸ್ವರೂಪನು. ರಾಧೆಯು ಅವನ ಸಹೋದರಿ. ಬ್ರಹ್ಮನು ಕರ್ಮಸ್ವರೂಪನು. ನಿಯತಿಯು ಅವನ ಸಹೋದರಿ.

೫೪. ಮಹಾದೇವನು ಧರ್ಮಸ್ವರೂಪನು. ಶ್ರದ್ಧಾ ಎಂಬುವಳು ಅವನ ಸಹೋದರಿ. ಹೀಗಿರುವಾಗ ನೀನು ಹೇಳಿದ ಅನಿರುದ್ಧನು ಸರ್ವಸಮರ್ಥನೂ, ಸನಾತನನೂ ಎನಿಸಿ ಹೇಗೆತಾನೆ ಪೂಜಾರ್ಹನಾಗುವನು.

ತ್ರಿಧಾ ಸೃಷ್ಟಿಶ್ಚ ಬ್ರಹ್ಮಾಂಡೇ ಸ್ಥೂಲಾ ಸೂಕ್ಷ್ಮಾ ಚ ಕಾರಣಾ ।
ಸ್ಥೂಲಸೃಷ್ಟ್ಯೈ ಸಮುದ್ಭೂತೋ ದೇವೋ ನಾರಾಯಣಃ ಸ್ವಯಂ ॥ ೫೫ ॥

ನಾರಾಯಣೀ ಚ ತಚ್ಛಕ್ತಿಸ್ತಯೋರ್ಜಲಸಮುದ್ಭವಃ ।
ಜಲಾಜ್ಜಾತಸ್ಸ ವೈ ಶೇಷಸ್ತಸ್ಯೋಪರಿ ಸಮಾಸ್ಥಿತೌ ॥ ೫೬ ॥

ಸುಪ್ತೇ ನಾರಾಯಣೇ ದೇವೇ ನಾಭೇಃ ಪಂಕಜಮುತ್ತಮಂ ।
ಅನಂತಯೋಜನಾಯಾಮಮುದಭೂಚ್ಚ ತತೋ ವಿಧಿಃ ॥ ೫೭ ॥

ವಿಧೇಃ ಸ್ಥೂಲಮಯೀ ಸೃಷ್ಟಿರ್ದೇವತಿರ್ಯಙ್ನರಾತ್ಮಿಕಾ ।
ಸೂಕ್ಷ್ಮಸೃಷ್ಟ್ಯೈ ಸಮುದ್ಭೂತಃ ಸೋಽನಿರುದ್ಧ ಉಷಾಪತಿಃ ॥ ೫೮ ॥

ತತೋ ವೀರ್ಯಮಯಂ ತೋಯಂ ಜಾತಂ ಬ್ರಹ್ಮಾಂಡಮಸ್ತಕೇ ।
ವೀರ್ಯಾಜ್ಜಾತಸ್ಸ ವೈ ಶೇಷಸ್ತಸ್ಯೋಪರಿ ಸ ಚಾಸ್ಥಿತಃ ॥ ೫೯ ॥

---

೫೫-೫೬ ಬ್ರಹ್ಮಾಂಡಸೃಷ್ಟಿಯು ಸ್ಥೂಲಸೃಷ್ಟಿ, ಸೂಕ್ಷ್ಮಸೃಷ್ಟಿ ಮತ್ತು ಕಾರಣ ಸೃಷ್ಟಿ ಎಂದು ಮೂರು ಬಗೆಯಾಗಿರುವುದು. ಭಗವಂತನಾದ ನಾರಾಯಣನು ಸ್ಥೂಲಸೃಷ್ಟಿಗೋಸ್ಕರ ತಾನಾಗಿ ಜನಿಸಿದನು. ನಾರಾಯಣೀ ಎಂಬುದೇ ಇವನ ಶಕ್ತಿಯು. ಈ ನಾರಾಯಣ ಮತ್ತು ಇವನ ಶಕ್ತಿಯಾದ ನಾರಾಯಣೀ ಇವರಿಂದ ನೀರು ಹುಟ್ಟಿತು. ಆ ನೀರಿನಿಂದ ಆದಿಶೇಷನು ಜನಿಸಿದನು. ನಾರಾಯಣ ಮತ್ತು ಅವನ ಶಕ್ತಿ ನಾರಾಯಣೀ ಇವರಿಬ್ಬರೂ ಅವನ ಮೇಲೆ ಕುಳಿತುಕೊಂಡರು.

೫೭. ಈ ನಾರಾಯಣನು ಮಲಗಿರುವಾಗ ಇವನ ನಾಭಿಯಿಂದ ಅನಂತ ಯೋಜನ ವಿಸ್ತಾರವುಳ್ಳ ಶ್ರೇಷ್ಠವಾದ ಒಂದು ಕಮಲವು ಹೊರಟಿತು. ಅದರಲ್ಲಿ ಬ್ರಹ್ಮನು ಜನ್ಮ ತಾಳಿದನು.

೫೮. ಈ ಬ್ರಹ್ಮನ ಸ್ಥೂಲಸೃಷ್ಟಿಯಿಂದ ದೇವತೆಗಳೂ, ತಿರ್ಯಕ್ಪ್ರಾಣಿಗಳೂ ಮನುಷ್ಯರೂ ಸಹ ಜನಿಸಿದರು. ಆ ಉಷಾಪತಿಯಾದ ಅನಿರುದ್ಧನು ಸೂಕ್ಷ್ಮ ಸೃಷ್ಟಿಗೋಸ್ಕರ ಜನಿಸಿದನು.

೫೯. ವೀರ್ಯಸ್ವರೂಪವಾದ ನೀರು ಅವನಿಂದ ಬ್ರಹ್ಮಾಂಡದಲ್ಲೆಲ್ಲಾ ಹರಡಿತು. ಆ ವೀರ್ಯದಿಂದ ಶೇಷನು ಜನಿಸಿದನು. ಅವನಮೇಲೆ ಅನಿರುದ್ಧನು ಕುಳಿತುಕೊಂಡನು.

ತಸ್ಯ ನಾಭೇಸ್ಸಮುದ್ಭೂತೋ ಬ್ರಹ್ಮಾ ಲೋಕಪಿತಾಮಹಃ ।
ಸೂಕ್ಷ್ಮಸೃಷ್ಟಿಸ್ತತೋ ಜಾತಾ ಯಥಾ ಸ್ವಪ್ನೇಽಪಿ ದೃಶ್ಯತೇ ॥ ೬೦ ॥

ಹೇತುಸೃಷ್ಟ್ಯೈ ಸಮುದ್ಭೂತೋ ವೇದೋ ನಾರಾಯಣಃ ಸ್ವಯಂ ।
ವೇದಾತ್ಕಾಲಸ್ತತಃ ಕರ್ಮ ತತೋ ಧರ್ಮಾದಯಃ ಸ್ಮೃತಾಃ ॥ ೬೧ ॥

ತ್ವದ್ಗುರುಶ್ಚ ಜಗನ್ನಾಥ ಉಢ್ರದೇಶನಿವಾಸಕಃ ।
ಮಯಾ ತತ್ರೈವ ಗಂತವ್ಯಂ ಸಶಿಷ್ಯೇಣಾಽದ್ಯ ಭೋ ದ್ವಿಜಾಃ ॥ ೬೨ ॥

ಇತಿ ಶ್ರುತ್ವಾ ತು ವಚನಂ ಕೃಷ್ಣಚೈತನ್ಯಕಿಂಕರಾಃ ।
ಸ್ವಾನ್‌ಸ್ವಾಞ್ಶಿಷ್ಯಾನ್ ಸಮಾಹೂಯ ತತ್ಪಶ್ಚಾತ್‌ಪ್ರಯಯುಶ್ಚ ತೇ
॥ ೬೩ ॥

---

೬೦. ಈ ಅನಿರುದ್ಧನ ನಾಭಿಯಿಂದ ಲೋಕಪಿತಾಮಹನಾದ ಬ್ರಹ್ಮನು ಜನಿಸಿದನು. ಸ್ವಪ್ನದಲ್ಲಿ ಗೋಚರವಾಗುವಂತೆ ಬ್ರಹ್ಮನಿಂದಸೂಕ್ಷ್ಮ ಸೃಷ್ಟಿಯು ಉಂಟಾಯಿತು.

೬೧. ವೇದಸ್ವರೂಪನಾದ ನಾರಾಯಣನು ಕಾರಣಸೃಷ್ಟಿಗೋಸ್ಕರ ತಾನೇ ಜನಿಸಿದನು. ಅನಂತರ ವೇದಸ್ವರೂಪನಾದ ಇವನಿಂದ ಕಾಲವೂ, ಕಾಲದಿಂದ ಕರ್ಮವೂ, ಕರ್ಮದಿಂದ ಧರ್ಮಾದಿಗಳೂ ಉಂಟಾದುವು.

೬೨. ಎಲೈ-ಬ್ರಾಹ್ಮಣರೇ! ಈರೀತಿ ಸ್ಥೂಲ, ಸೂಕ್ಷ್ಮ ಮತ್ತು ಕಾರಣ ಸ್ವರೂಪವಾದ ಸೃಷ್ಟಿಯನ್ನು ತಿಳಿಸಿಯಾಯಿತು. ಗುರುವಾದ ಜಗನ್ನಾಥನು ಓಢ್ರದೇಶ (ಒರಿಸ್ಸಾ) ದಲ್ಲಿ ವಾಸಮಾಡುತ್ತಿರುವನು. ನಾನು ನನ್ನ ಶಿಷ್ಯರೊಡನೆ ಅಲ್ಲಿಗೆ ಹೋಗಬೇಕು ಎಂದು ಹೇಳಿ ಆ ಯಜ್ಞಾಂಶನು ಶಿಷ್ಯರಿಗೆ ತನ್ನ ಜತೆಯಲ್ಲಿ ಹೊರಡುವಂತೆ ಹೇಳಿದನು.

೬೩. ಕೃಷ್ಣಚೈತನ್ಯನ ಸೇವಕರೆಲ್ಲರೂ ತಮ್ಮ ಗುರುವಾದ ಆತನ ಅಪ್ಪಣೆ ಯಂತೆ ತಮ್ಮ ತಮ್ಮ ಶಿಷ್ಯರೊಡನೆ ಆತನನ್ನನುಸರಿಸಿ ಹೊರಟರು.

ಶಾಂಕರಾ ದ್ವಾದಶಗಣಾ ರಾಮಾನುಜಮುಪಾಯಯುಃ ।
ನಾಮದೇವಾದಯಸ್ತತ್ರ ಗಣಾಸ್ಸಪ್ತ ಸಮಾಗತಾಃ ॥ ೬೪ ॥

ರಾಮಾನಂದಂ ನಮಸ್ಕೃತ್ಯ ಸಂಸ್ಥಿತಾಸ್ತಸ್ಯ ಸೇವಕಾಃ ।
ರೋಪಣಶ್ಚ ತದಾಗತ್ಯ ಸ್ವಶಿಷ್ಯೈರ್ಬಹುಭಿರ್ವೃತಃ ॥ ೬೫ ॥

ಕೃಷ್ಣಚೈತನ್ಯಮಾಗಮ್ಯ ನಮಸ್ಕೃತ್ಯ ಸ್ಥಿತಃ ಸ್ವಯಂ ।
ಜಗನ್ನಾಥಪುರೀಂ ತೇ ವೈ ಪ್ರಯಯುರ್ಭಕ್ತಿತತ್ಪರಾಃ ॥ ೬೬ ॥

ನಿಧಯಃ ಸಿದ್ಧಯಸ್ತತ್ರ ತೇಷಾಂ ಸೇವಾರ್ಥಮಾಗತಾಃ ।
ಸರ್ವೇ ಚ ದಶಸಾಹಸ್ರಾ ವೈಷ್ಣವಾಃ ಶೈವಶಾಕ್ತಕೈಃ ॥ ೬೭ ॥

ಯಜ್ಞಾಂಶಂ ಚ ಪುರಸ್ಕೃತ್ಯ ಜಗನ್ನಾಥಪುರೀಂ ಯಯುಃ ।
ಅರ್ಚಾವತಾರೋ ಭಗವಾನನಿರುದ್ಧ ಉಷಾಪತಿಃ ॥ ೬೮ ॥

---

೬೪. ಶಾಂಕರಮತಾವಲಂಬಿಗಳ ಹನ್ನೆರಡು ಗುಂಪುಗಳು ಹೊರಟುವು. ರಾಮಾನುಜಾಚಾರ್ಯರನ್ನು ಅನುಸರಿಸಿ ಅವರ ಶಿಷ್ಯರು ಹೊರಟರು. ನಾಮದೇವನೇ ಮೊದಲಾದವರ ಏಳು ಗುಂಪುಗಳು ಅಲ್ಲಿಗೆ ಬಂದರು. ರಾಮಾನಂದನನ್ನು ಅನುಸರಿಸಿ ಅವನ ಸೇವಕರೂ ಬಂದರು.

೬೫. ರೋಪಣನೂ ಸಹ ಆಗ ತನ್ನ ಬಹುಮಂದಿ ಶಿಷ್ಯರೊಡನೆ ಕೃಷ್ಣ ಚೈತನ್ಯನ ಸಮೀಪಕ್ಕೆ ಬಂದನು.

೬೬. ಹೀಗೆ ಬಂದು ಅವನಿಗೆ ನಮಸ್ಕರಿಸಿ ತಾನೂ ಅಲ್ಲಿಯೇ ನಿಂತನು. ಹೀಗೆ ಭಕ್ತಶ್ರೇಷ್ಠರಾದವರೆಲ್ಲರೂ ಜಗನ್ನಾಥನ ಪುರಿಗೆ ಹೊರಡಲು ಅನುವಾದನು.

೬೭. ನವನಿಧಿಗಳೂ ಮತ್ತು ಅಷ್ಟಸಿದ್ಧಿಗಳೂ ಅವರನ್ನು ಸೇವೆ ಮಾಡುವುದಕ್ಕೋಸ್ಕರ ಅವರೊಡನೆ ಹೊರಟವು. ಈರೀತಿ ವೈಷ್ಣವರೂ, ಶೈವರೂ ಮತ್ತು ಶಕ್ತಿ ಮತಾವಲಂಬಿಗಳೂ ಆದ ಹತ್ತುಸಾವಿರ ಜನಗಳು ಯಜ್ಞಾಂಶನನ್ನು ಮುಂದು ಮಾಡಿಕೊಂಡು ಜಗನ್ನಾಥಪುರಿಗೆ ಹೊರಟರು.

೬೮-೬೯. ಆಗ ಅರ್ಚಾವತಾರನೂ ಉಷಾಪತಿ ಅನಿರುದ್ಧನೂ ಷಡ್ಗುಣೈಶ್ವರ್ಯ ಸಂಪನ್ನನೂ ಆದ ಜಗನ್ನಾಥನು ಬ್ರಾಹ್ಮಣಮುನಿಯ ವೇಷವನ್ನು ಧರಿಸಿ ಈ

ತದಾಗಮನಮಾಲೋಕ್ಯ ದ್ವಿಜರೂಪಧರೋ ಮುನಿಃ ।
ಜಗನ್ನಾಥಃ ಸ್ವಯಂ ಪ್ರಾಪ್ತೋ ಯತ್ರ ಯಜ್ಞಾಂಶಕಾದಯಃ ॥ ೭೯ ॥

ಯಜ್ಞಾಂಶಸ್ತಂ ಸಮಾಲೋಕ್ಯ ನತ್ವಾ ವಚನಮಬ್ರವೀತ್ ।
ಕಿಂ ಮತಂ ಭವತಾ ಜ್ಞಾತಂ ಕಲೌ ಪ್ರಾಪ್ತೇ ಭಯಾನಕೇ ॥ ೭೦ ॥

ತತ್ಸರ್ವಂ ಕೃಪಯಾ ಬ್ರೂಹಿ ಶ್ರೋತುಮಿಚ್ಛಾಮಿ ತತ್ವತಃ ।
ಇತಿ ಶ್ರುತ್ವಾ ತು ವಚನಂ ಜಗನ್ನಾಥೋ ಹರಿಃ ಸ್ವಯಂ ॥ ೭೧ ॥

ಉವಾಚ ವಚನಂ ರಮ್ಯಂ ಲೋಕಮಂಗಲಹೇತವೇ ।
ಮಿಶ್ರದೇಶೋದ್ಭವಾ ಮ್ಲೇಚ್ಛಾಃ ಕಾಶ್ಯಪೇನೈವ ಶಾಸಿತಾಃ ॥
ಸಂಸ್ಕೃತಾಃ ಶೂದ್ರವರ್ಣೇನ ಬ್ರಹ್ಮವರ್ಣಮುಪಾಗತಾಃ ॥ ೭೨ ॥

---

ಯಜ್ಞಾಂಶಾದಿಗಳು ಬರುತ್ತಿರುವುದನ್ನು ನೋಡಿ ಆ ಯಜ್ಞಾಂಶಾದಿಗಳಿದ್ದ ಕಡೆಗೆ ತಾನೇ ಬಂದುಬಿಟ್ಟನು.

೭೦. ಆಗ ಯಜ್ಞಾಂಶನು ಆ ಜಗನ್ನಾಥನನ್ನು ನೋಡಿ ನಮಸ್ಕಾರಮಾಡಿ "ಎಲೈ ಪೂಜ್ಯನೇ! ಈ ಭಯಂಕರವಾದ ಕಲಿಯುಗವು ಆರಂಭವಾಗಿರುವಾಗ ನಿನಗೆ ಅಭಿಮತವಾದ ಮತವಾವುದು? ಅದರ ತತ್ವವನ್ನು ತಿಳಿಯಬೇಕೆಂದು ಅಪೇಕ್ಷೆಯಿರುವುದರಿಂದ ಅವೆಲ್ಲವನ್ನೂ ದಯವಿಟ್ಟು ನಮಗೆ ಹೇಳು" ಎಂದು ಪ್ರಾರ್ಥಿಸಿದನು.

೭೧. ಹೀಗೆ ಹೇಳಿದ ಯಜ್ಞಾಂಶನ ಮಾತನ್ನು ಕೇಳಿ ವಿಷ್ಣುಸ್ವರೂಪನಾದ ಜಗನ್ನಾಥನು ಲೋಕಕಲ್ಯಾಣಕ್ಕೋಸ್ಕರ ಅವನನ್ನು ಕುರಿತು ಮನೋಹರವಾಗಿ ಮುಂದೆ ಹೇಳುವಂತೆ ಹೇಳಿದನು.

೭೨. "ಎಲೈ ಯಜ್ಞಾಂಶನೇ! ಮಿಶ್ರದೇಶದಲ್ಲಿ ಜನಿಸಿದ ಮ್ಲೇಚ್ಛರೆಲ್ಲರೂ ಕಾಶ್ಯಪನಿಂದಲೇ ಶಿಕ್ಷಿತರಾಗಿರುವರು. ಇವರು ಶೂದ್ರಜಾತಿಯಲ್ಲಿದ್ದು ಸಂಸ್ಕರಿಸಲ್ಪಟ್ಟು ಬ್ರಾಹ್ಮಣಜಾತಿಯನ್ನು ಹೊಂದಿರುವರು.

ಶಿಖಾಸೂತ್ರಂ ಸಮಾಧಾಯ ಪಠಿತ್ವಾ ವೇದಮುತ್ತಮಂ ।
ಯಜ್ಞೈಶ್ಚ ಪೂಜಯಾಮಾಸುರ್ದೇವದೇವಂ ಶಚೀಪತಿಂ ॥ ೭೩ ॥

ದುಃಖಿತೋ ಭಗವಾನಿಂದ್ರೋ ಶ್ವೇತದ್ವೀಪಮುಪಾಗತಃ ।
ಸ್ತುತ್ವಾ ಮಾಂ ಬೋಧಯಾಮಾಸ ದೇವಮಂಗಲಹೇತವೇ ॥ ೭೪ ॥

ಪ್ರಬುದ್ಧಂ ಮಾಂ ವಚಃ ಪ್ರಾಹ ಶೃಣು ದೇವ ದಯಾನಿಧೇ ।
ಶೂದ್ರಸಂಸ್ಕೃತಮನ್ನಂ ಚ ಖಾದಿತುಂ ನ ದ್ವಿಜೋಽರ್ಹತಿ ॥ ೭೫ ॥

ತಥಾ ಚ ಶೂದ್ರಜನಿತೈರ್ಯಜ್ಞೈಸ್ತೃಪ್ತಿಮವಾಪ್ನುಯಾಂ ।
ಕಾಶ್ಯಪೇ ಸ್ವರ್ಗತೇ ಪ್ರಾಪ್ತೇ ಮಾಗಧೇ ರಾಜ್ಞಿ ಶಾಸತಿ ॥ ೭೬ ॥

ಮಮ ಶತ್ರುರ್ಬಲಿರ್ದೈತ್ಯಃ ಕಲಿಪಕ್ಷಮುಪಾಗತಃ ।
ನಿಸ್ತೇಜಾಶ್ಚ ಯಥಾಽಹಂ ಸ್ಯಾಂ ತಥಾ ವೈ ಕರ್ತುಮುದ್ಯತಃ ॥ ೭೭ ॥

---

೭೩. ಇವರೆಲ್ಲರೂ ಶಿಖಾ ಯಜ್ಞೋಪವೀತಗಳನ್ನು ಧರಿಸಿ ಶ್ರೇಷ್ಠವಾದ ವೇದವನ್ನು ಅಧ್ಯಯನ ಮಾಡಿ ವೇದೋಕ್ತವಾದ ಯಜ್ಞಗಳಿಂದ ದೇವದೇವನಾದ ಇಂದ್ರನನ್ನು ಪೂಜಿಸಿದರು.

೭೪. ಆಗ ಇಂದ್ರನು ಈ ಪೂಜೆಯಿಂದ ಬಹಳ ಖಿನ್ನನಾಗಿ ದೇವತೆಗಳಿಗೆ ಮಂಗಳವಾಗುವುದಕ್ಕೋಸ್ಕರ ಶ್ವೇತದ್ವೀಪಕ್ಕೆ ಬಂದು ಅಲ್ಲಿ ನಿದ್ರಿಸುತ್ತಿದ್ದ ನನ್ನನ್ನು ಸ್ತೋತ್ರಗಳಿಂದ ಎಚ್ಚರಗೊಳಿಸಿದರು.

೭೫. ಅನಂತರ ಎಚ್ಚತ್ತ ನನ್ನನ್ನು ಕುರಿತು ಇಂದ್ರನು " ಎಲೈ ದಯಾನಿಧಿ ಯಾದ ದೇವನೇ ! ಕೇಳು. ಶೂದ್ರನಿಂದ ಸಂಸ್ಕರಿಸಲ್ಪಟ್ಟ ಅನ್ನವನ್ನು ಬ್ರಾಹ್ಮಣನು ತಿನ್ನಲಾಗದು.

೭೬. ಆದರಂತೆ ಶೂದ್ರನು ಮಾಡಿದ ಯಜ್ಞಗಳಿಂದ ನನಗೆ ತೃಪ್ತಿಯಾಗು ವುದಿಲ್ಲ. ಕಾಶ್ಯಪನು ಸ್ವರ್ಗಸ್ಥನಾಗಿ ಈಗ ಮಾಗಧನು ರಾಜ್ಯವಾಳುತ್ತಿರುವನು.

೭೭. ನನ್ನ ಶತ್ರುವಾದ ಬಲಿದೈತ್ಯನು ಇಂಥ ಸಮಯದಲ್ಲಿ ಕಲಿಯ ಪಕ್ಷವನ್ನು ಸೇರಿ ನನ್ನನ್ನು ತೇಜೋಹೀನನಾಗುವಂತೆ ಮಾಡುತ್ತಿರುವನು.

ಮಿಶ್ರದೇಶೋದ್ಭವೇ ಮ್ಲೇಚ್ಛೇ ಸಾಂಸ್ಕೃತೀ ತೇನ ಸಂಸ್ಕೃತಾ ।
ಭಾಷಾ ದೇವವಿನಾಶಾಯ ದೈತ್ಯಾನಾಂ ವರ್ಧನಾಯ ಚ ॥ ೭೮ ॥

ಆರ್ಯೇಷು ಪ್ರಾಕೃತೀ ಭಾಷಾ ಭೂಷಿತಾ ತೇನ ವೈ ಕೃತಾ ।
ಅತೋ ಮಾಂ ರಕ್ಷ ಭಗವನ್‌ಭವಂತಂ ಶರಣಾಗತಂ ॥ ೭೯ ॥

ಇತಿ ಶ್ರುತ್ವಾ ತದಾಽಹಂ ವೈ ದೇವರಾಜಮುವಾಚ ಹ ।
ಭವಂತೋ ದ್ವಾದಶಾದಿತ್ಯಾ ಗಂತುಮರ್ಹಂತಿ ಭೂತಲೇ ॥ ೮೦ ॥

ಅಹಂ ಲೋಕಹಿತಾರ್ಥಾಯ ಜನಿಷ್ಯಾಮಿ ಕಲೌ ಯುಗೇ ।
ಪ್ರವೀಣೋ ನಿಪುಣೋಽಭಿಜ್ಞಃ ಕುಶಲಶ್ಚ ಕೃತೀ ಸುಖೀ ॥ ೮೧ ॥

ನಿಷ್ಣಾತಃ ಶಿಕ್ಷಿತಶ್ಚೈವ ಸರ್ವಜ್ಞಃ ಸುಗತಸ್ತಥಾ ।
ಪ್ರಬುದ್ಧಶ್ಚ ತಥಾ ಬುದ್ಧ ಆದಿತ್ಯಾಃ ಕ್ರಮತೋ ಭವಾಃ ॥ ೮೨ ॥

---

೭೮. "ಮಿಶ್ರದೇಶೋತ್ಪನ್ನರಾದ ಮ್ಲೇಚ್ಛರು ಈಗ ರಾಜ್ಯವಾಳುತ್ತಿರುವುದರಿಂದ ದೇವಭಾಷೆಯಾದ ಸಂಸ್ಕೃತವನ್ನೇ ಅವರೂ ವ್ಯವಹರಿಸುತ್ತಿರುವರು. ಇದರಿಂದ ದೇವತೆಗಳಿಗೆ ಹಾನಿಯೂ ರಾಕ್ಷಸರಿಗೆ ಅಭಿವೃದ್ಧಿಯೂ ಉಂಟಾಗುತ್ತಿದೆ.

೭೯. ಆ ಮ್ಲೇಚ್ಛರಾಜನು ಆರ್ಯರು ಪ್ರಾಕೃತ ಭಾಷೆಯನ್ನು ವ್ಯವಹರಿಸುವಂತೆ ಮಾಡಿರುವನು. ಆದುದರಿಂದ ಎಲೈ ಭಗವಂತನೇ! ಶರಣಾಗತನಾಗಿ ಬಂದಿರುವ ನನ್ನನ್ನು ಈ ತೊಂದರೆಗಳಿಂದ ಪಾರುಮಾಡು" ಎಂದು ಹೇಳಿದನು.

೮೦. ನಾನು (ಅನಿರುದ್ಧನು) ಇದನ್ನು ಕೇಳಿ ಆಗ ದೇವರಾಜನನ್ನು ಕುರಿತು "ಎಲೈ ಇಂದ್ರನೇ! ದ್ವಾದಶಾದಿತ್ಯರಾದ ನೀವೂ ಭೂಮಿಯಲ್ಲಿ ಅವತರಿಸಿರಿ. ನಾನೂ ಲೋಕಕಲ್ಯಾಣಕ್ಕೋಸ್ಕರ ಕಲಿಯುಗದಲ್ಲಿ ಅವತಾರಮಾಡುವೆನು."

೮೧-೮೩. "ಧಾತೃ, ಮಿತ್ರ, ಅರ್ಯಮಾ, ಶಕ್ರ, ಮೇಘ, ಪ್ರಾಂಶು, ಭಗ, ವಿವಸ್ವಾನ್, ಪೂಷಾ, ಸವಿತಾ, ತ್ವಾಷ್ಟ್ರ, ವಿಷ್ಣು ಎಂಬ ಹೆಸರಿನ ಆದಿತ್ಯರು ಪ್ರವೀಣ, ನಿಪುಣ, ಅಭಿಜ್ಞ, ಕುಶಲ, ಕೃತೀ, ಸುಖೀ, ನಿಷ್ಣಾತ, ಶಿಕ್ಷಿತ, ಸರ್ವಜ್ಞ,

ಧಾತಾ ಮಿತ್ರೋಽರ್ಯಮಾ ಶಕ್ರೋ ಮೇಘಃ ಪ್ರಾಂಶುರ್ಭಗಸ್ತಥಾ ।
ವಿವಸ್ವಾಂಶ್ಚ ತಥಾ ಪೂಷಾ ಸವಿತಾ ತ್ವಾಷ್ಟ್ರವಿಷ್ಣುಕೌ ॥ ೮೩ ॥

ಕೀಕಟೇ ದೇಶ ಆಗತ್ಯ ತೇ ಸುರಾ ಜಜ್ಞಿರೇ ಕ್ರಮಾತ್ ॥
ವೇದನಿಂದಾಂ ಪುರಸ್ಕೃತ್ಯ ಬೌದ್ಧಶಾಸ್ತ್ರಮಚೀಕರನ್ ।
ತೇಭ್ಯೋ ವೇದಾನ್ಸಮಾದಾಯ ಮುನಿಭ್ಯಃ ಪ್ರದದುಸ್ಸುರಾಃ ॥ ೮೪ ॥

ವೇದನಿಂದಾಪ್ರಭಾವೇಣ ತೇ ಸುರಾಃ ಕುಷ್ಠಿನೋಽಭವನ್ ।
ವಿಷ್ಣುದೇವಮುಪಾಗಮ್ಯ ತುಷ್ಟುವುರ್ಬೌದ್ಧರೂಪಿಣಂ ॥ ೮೫ ॥

ಹರಿರ್ಯೋಗಬಲೇನೈವ ತೇಷಾಂ ಕುಷ್ಠಮನಾಶಯತ್ ।
ತದ್ದೋಷಾನ್ನಗ್ನಭೂತಶ್ಚ ಬೌದ್ಧೋಽಸೌ ತೇಜಸಾಽಭವತ್ ॥ ೮೬ ॥

---

ಸುಗತ, ಪ್ರಬುದ್ಧ ಮತ್ತು ಬುದ್ಧ ಈ ನಾಮಾಂತರಗಳಿಂದ ಅವತರಿಸಿರಿ" ಎಂದನು.

೮೪. ಆ ದೇವಾದಿಗಳೆಲ್ಲರೂ ಕೀಕಟದೇಶಕ್ಕೆ ಬಂದು ಅಲ್ಲಿ ಕ್ರಮವಾಗಿ ಅವತರಿಸಿದರು. ಇವರೆಲ್ಲರೂ ವೇದನಿಂದೆಯನ್ನು ಮೊದಲುಮಾಡಿಕೊಂಡು ಬೌದ್ಧ ಮತ ಶಾಸ್ತ್ರ ಗ್ರಂಥಗಳನ್ನು ರಚಿಸಿದರು. ಆಗ ದೇವತೆಗಳು ಇವರಿಂದ ವೇದವನ್ನು ಕಿತ್ತುಕೊಂಡು ಮಹರ್ಷಿಗಳ ವಶಕ್ಕೆ ಕೊಟ್ಟರು.

೮೫. ಆಗ ಈ ದೇವತೆಗಳು ತಾವು ಮಾಡಿದ ವೇದನಿಂದೆಯ ಫಲವಾಗಿ ಕುಷ್ಠರೋಗವನ್ನು ಹೊಂದಿದರು. ಕೂಡಲೆ ಇವರೆಲ್ಲರೂ ಬುದ್ಧನ ರೂಪವನ್ನು ಧರಿಸಿರುವ ವಿಷ್ಣುದೇವನ ಬಳಿಗೆ ಹೋಗಿ ಬಹುವಾಗಿ ದುಃಖಿಸುತ್ತಾ ಅವನನ್ನು ಸ್ತೋತ್ರಮಾಡಿದರು.

೮೬. ಆಗ ಮಹಾವಿಷ್ಣುವು ತನ್ನ ಯೋಗಶಕ್ತಿಯಿಂದಲೇ ಅವರಿಗೆ ಉಂಟಾಗಿದ್ದ ಕುಷ್ಠರೋಗವನ್ನು ಹೋಗಲಾಡಿಸಿದನು. ಆ ಬುದ್ಧರೂಪಿಯಾದ ಮಹಾವಿಷ್ಣುವು ಈ ದೋಷದಿಂದ ನಗ್ನನಾದನು. ಮತ್ತು ತನ್ನ ತೇಜಸ್ಸಿನಿಂದ ಬೌದ್ಧನೆನಿಸಿದನು.

ಪೂರ್ವಾರ್ಧಾನ್ನೇಮಿನಾಥಶ್ಚ ಪರಾರ್ಧಾದ್ಬೌದ್ಧ ಏವ ಚ ।
ಬೌದ್ಧರಾಜ್ಯವಿನಾಶಾಯ ದಾರುಪಾಷಾಣರೂಪವಾನ್ ॥ ೮೭ ॥

ಅಹಂ ಸಿಂಧುತಟೇ ಜಾತೋ ಲೋಕಮಂಗಲಹೇತವೇ ।
ಇಂದ್ರದ್ಯುಮ್ನಶ್ಚ ನೃಪತಿಃ ಸ್ವರ್ಗಲೋಕಾದುಪಾಗತಃ ॥
ಮಂದಿರಂ ರಚಿತಂ ತೇನ ತತ್ರಾಹಂ ಸಮುಪಾಗತಃ ॥ ೮೮ ॥

ಅತ್ರ ಸ್ಥಿತಶ್ಚ ಯಜ್ಞಾಂಶಪ್ರಸಾದಮಹಿಮಾ ಮಹಾನ್ ।
ಸರ್ವವಾಂಛಿತದಂ ಲೋಕೇ ಸ್ಥಾಪಯಾಮಾಸ ಮೋಕ್ಷದಂ ॥ ೮೯ ॥

ವರ್ಣಧರ್ಮಶ್ಚ ನೈವಾತ್ರ ವೇದಧರ್ಮಸ್ತಥಾ ನ ಹಿ ।
ವ್ರತಂ ಚಾತ್ರ ನ ಯಜ್ಞಾಂಶಮಂಡಲೇ ಯೋಜನಾಂತರೇ ॥ ೯೦ ॥

---

೮೭. ಅನಂತರ ಆ ಮಹಾವಿಷ್ಣುವು ತನ್ನ ಶರೀರದ ಪೂರ್ವಾರ್ಧದಿಂದ ನೇಮಿನಾಥನೆಂದೂ ಉಳಿದ ಅರ್ಧಶರೀರದಿಂದ ಬೌದ್ಧನೆಂದೂ ವ್ಯವಹೃತನಾದನು. ಅನಂತರ ಈ ಬೌದ್ಧರಾಜ್ಯದ ನಾಶಕ್ಕೋಸ್ಕರವೂ ಲೋಕಕಲ್ಯಾಣಕ್ಕೋಸ್ಕರವೂ ನಾನು ಮರ ಮತ್ತು ಕಲ್ಲಿನ ವಿಗ್ರಹ ರೂಪವನ್ನು ಧರಿಸಿ ಈ ಸಮುದ್ರತೀರದಲ್ಲಿ ಜಗನ್ನಾಥನೆಂಬ ಹೆಸರಿನಿಂದ ನೆಲಸಿದೆನು.

೮೮. ಅನಂತರ ಸ್ವರ್ಗಲೋಕದಿಂದ ಇಂದ್ರದ್ಯುಮ್ನನೆಂಬ ರಾಜನು ಬಂದು ಒಂದು ದೇವಾಲಯವನ್ನು ನಿರ್ಮಿಸಿಕೊಟ್ಟನು. ಆ ಮಂದಿರದಲ್ಲಿ ನಾನು ವಾಸಮಾಡುತ್ತಿರುವೆನು.

೮೯. ಎಲೈ ಯಜ್ಞಾಂಶನೇ! ಇಲ್ಲಿ ನೆಲಸಿರುವ ನನ್ನ ಪ್ರಸಾದಸೇವನೆಯ ಮಹಿಮೆಯು ಮಹತ್ತಾದುದು. ಅದು ಸಕಲ ಇಷ್ಟಾರ್ಥಗಳನ್ನೂ ಉಂಟುಮಾಡುವುದು. ಮತ್ತು ಮೋಕ್ಷವನ್ನೂ ದೊರಕಿಸುವುದು,

೯೦. ಎಲೈ ಯಜ್ಞಾಂಶನೇ! ಈ ಕ್ಷೇತ್ರದ ಸುತ್ತಮುತ್ತಲೂ ಒಂದು ಯೋಜನ ಪರ್ಯಂತ ಇರುವ ಪ್ರದೇಶದಲ್ಲಿ ಯಾವ ವರ್ಣಧರ್ಮವಾಗಲಿ ವೇದಧರ್ಮಗಳಾಗಲಿ ಯಾವ ವ್ರತನಿಯಮವೇ ಆಗಲಿ ಇರುವುದಿಲ್ಲ.

ಯೇನೋಕ್ತಾ ಯಾವನೀ ಭಾಷಾ ಯೇನ ಬೌದ್ಧೋ ವಿಲೋಕಿತಃ ।
ತಸ್ಯ ಪ್ರಾಪ್ತಂ ಮಹತ್ಪಾಪಂ ಸ್ಥಿತೋऽಹಂ ತದಘಾಪಹಃ ॥
ಮಾಂ ವಿಲೋಕ್ಯ ನರಃ ಶುದ್ಧಃ ಕಲಿಕಾಲೇ ಭವಿಷ್ಯತಿ ॥ ೯೧ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಪ್ರತಿಸರ್ಗಪರ್ವಣಿ ಚತುರ್ಥಖಂಡೇ
ಕಲಿಯುಗೀಯೇತಿಹಾಸಸಮುಚ್ಚಯೇ ಕೃಷ್ಣಚೈತನ್ಯ
ಚರಿತ್ರೇ ಜಗನ್ನಾಥಮಾಹಾತ್ಮ್ಯ ವರ್ಣನಂ
ನಾಮವಿಂಶೋऽಧ್ಯಾಯಃ.



---

೯೧. ಯವನ ಭಾಷೆಯನ್ನು ಉಚ್ಚರಿಸುವುದರಿಂದಲೂ, ಬೌದ್ಧರ ದರ್ಶನ ದಿಂದಲೂ ಉಂಟಾಗುವ ಮಹಾಪಾಪವನ್ನು, ಇಲ್ಲಿ ನೆಲಸಿರುವ ನಾನು ಹೋಗಲಾಡಿ ಸುವೆನು. (ಅಂದರೆ ನನ್ನ ದರ್ಶನದಿಂದ ಆ ಪಾಪವು ಪರಿಹಾರವಾಗುವುದು.) ಅಯ್ಯಾ ಯಜ್ಞಾಂಶನೇ! ಈ ಕಲಿಕಾಲದಲ್ಲಿ ನನ್ನನ್ನು ದರ್ಶನಮಾಡಿದ ಮಾನವನು ಪರಿಶುದ್ಧನಾಗುವನು ಎಂದು ಜಗನ್ನಾಥನು ಯಜ್ಞಾಂಶನನ್ನು ಕುರಿತು ಹೇಳಿದನು.

ಇಲ್ಲಿಗೆ ಶ್ರೀಭವಿಷ್ಯಮಹಾಪುರಾಣದ ನಾಲ್ಕನೆಯ ಖಂಡದಲ್ಲಿ ಕೃಷ್ಣಚೈತನ್ಯನ
ಚರಿತ್ರಾಂತರ್ಗತವಾದ ಜಗನ್ನಾಥ ಮಾಹಾತ್ಮ್ಯವರ್ಣನೆಯೆಂಬ
ಇಪ್ಪತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಪ್ರತಿಸರ್ಗಪರ್ವಣಿ ಚತುರ್ಥಖಂಡೇ

## ಏಕವಿಂಶೋಽಧ್ಯಾಯಃ

---

॥ ಸೂತ ಉವಾಚ ॥

ಇತಿ ಶ್ರುತ್ವಾ ವಚಸ್ತಸ್ಯ ಜಗನ್ನಾಥಸ್ಯ ಧೀಮತಃ ।
ಕೃಷ್ಣಚೈತನ್ಯ ಏವಾಪಿ ತಮುವಾಚ ಪ್ರಸನ್ನಧೀಃ ॥ ೧ ॥

ಭಗವನ್ ಪ್ರಾಣಿನಾಂ ಶ್ರೇಯೋ ಯದುಕ್ತಂ ಭವತಾ ಮುನೇ ।
ವಿಸ್ತರಾತ್ತತ್ಕಥಾಂ ಬ್ರೂಹಿ ಯಥಾ ಬೌದ್ಧಸಮುದ್ಭವಃ ॥ ೨ ॥

॥ ಜಗನ್ನಾಥ ಉವಾಚ ॥

ಸಹಸ್ರಾಬ್ದೇ ಕಲೌ ಪ್ರಾಪ್ತೇ ಕರ್ಮಭೂಮ್ಯಾಂ ಚ ಭಾರತೇ ।
ಕಣ್ವೋ ನಾಮ ಮುನಿಶ್ರೇಷ್ಠಸ್ಸಂಪ್ರಾಪ್ತಃ ಕಶ್ಯಪಾತ್ಮಜಃ ॥ ೩ ॥

---

## ಇಪ್ಪತ್ತೊಂದನೆಯ ಅಧ್ಯಾಯ

೧-೨ ಸೂತಮುನಿವರ್ಯನು ಹೇಳುತ್ತಾನೆ—ಯಜ್ಞಾಂಶನೆನಿಸಿದ ಕೃಷ್ಣಚೈತನ್ಯನು ಮೇಧಾವಿಯಾದ ಜಗನ್ನಾಥನ ಮಾತನ್ನು ಕೇಳಿ ತುಂಬಾ ಸಂತೋಷಹೊಂದಿ ಪುನಃ ಆ ಜಗನ್ನಾಥನನ್ನು ಕುರಿತು "ಎಲೈ ಭಗವಂತನೇ! ಪ್ರಾಣಿಗಳಿಗೆ ಶ್ರೇಯಸ್ಸನ್ನುಂಟುಮಾಡುವುದೆಂದು ನೀನು ಹೇಳಿದ ಕಥೆಯನ್ನು ವಿಸ್ತಾರವಾಗಿ ಕೇಳಬೇಕೆಂಬ ಯಿರುವುದು ಬೌದ್ಧನು ಅವತರಿಸಿದುದು ಹೇಗೆ? ಎಂಬುದನ್ನು ನನಗೆ ದಯವಿಟ್ಟು ತಿಳಿಸಬೇಕು" ಎಂದು ಪ್ರಾರ್ಥಿಸಿದನು.

೩ ಇದನ್ನು ಕೇಳಿ ಜಗನ್ನಾಥನು ಹೇಳುತ್ತಾನೆ—"ಎಲೈ ಯಜ್ಞಾಂಶನೇ! ಕಲಿಯುಗದಲ್ಲಿ ಸಾವಿರವರ್ಷ ಕಳೆದಿದ್ದಿತು. ಆಗ ಕಶ್ಯಪನ ಮಗನೂ, ಮುನಿಶ್ರೇಷ್ಠನೂ ಆದ ಕಣ್ವನು ಕರ್ಮಭೂಮಿಯಾದ ಈ ಭಾರತದೇಶಕ್ಕೆ ಬಂದನು.

ಆರ್ಯಾವತೀ ದೇವಕನ್ಯಾ ಕಣ್ವಸ್ಯ ದಯಿತಾ ಪ್ರಿಯಾ ।
ಶಕ್ರಾಜ್ಞಯಾ ಚ ಸಂಪ್ರಾಪ್ತೌ ದಂಪತೀ ಶಾರದಾತಟೇ ॥ ೪ ॥

ಸರಸ್ವತೀಂ ನದೀರೂಪಾಂ ಕುರುಕ್ಷೇತ್ರನಿವಾಸಿನೀಂ ।
ಚತುರ್ವೇದಮಯೈಃ ಸ್ತೋತ್ರೈಃ ಕಣ್ವಸ್ತುಷ್ಟಾವ ನಮ್ರಧೀಃ ॥ ೫ ॥

ವರ್ಷಮಾತ್ರಾಂತರೇ ದೇವೀ ಪ್ರಸನ್ನಾ ಸಮುಪಾಗತಾ ।
ಆರ್ಯಸೃಷ್ಟಿಸಮೃದ್ಧ್ಯಾ ಸಾ ದದೌ ತಸ್ಮೈ ವರಂ ಶುಭಂ ॥ ೬ ॥

ದಶಪುತ್ರಾಸ್ತ್ರಯೋಜಾತಾ ಆರ್ಯಬುದ್ಧಿಕರಾ ಹಿ ತೇ ।
ಉಪಾಧ್ಯಾಯೋ ದೀಕ್ಷಿತಶ್ಚ ಪಾಠಕಃ ಶುಕ್ಲಮಿಶ್ರಕೌ ॥ ೭ ॥

ಅಗ್ನಿಹೋತ್ರೀ ದ್ವಿವೇದೀ ಚ ತ್ರಿವೇದೀ ಪಾಂಡ ಏವ ಚ ।
ಚತುರ್ವೇದೀತಿ ಕಥಿತಾ ಯಥಾ ನಾಮ ತಥಾ ಗುಣಾಃ ॥ ೮ ॥

---

೪. ದೇವಕನ್ಯೆಯಾದ ಆರ್ಯಾವತೀ ಎಂಬವಳು ಇವನಿಗೆ ಪ್ರೀತಿಪಾತ್ರಳಾದ ಪತ್ನಿಯಾಗಿದ್ದಳು. ಈ ದಂಪತಿಗಳು ಇಂದ್ರನ ಅಪ್ಪಣೆಯಂತೆ ಸರಸ್ವತೀನದಿಯ ತೀರಕ್ಕೆ ಬಂದರು.

೫. ಅನಂತರ ಕಣ್ವನು ಕುರುಕ್ಷೇತ್ರದಲ್ಲಿ ಹರಿಯುವ ನದೀರೂಪಳಾದ ಸರಸ್ವತಿಯನ್ನು ಋಗ್ಯಜುಸ್ಸಾಮಾಥರ್ವಣಗಳೆಂಬ ವೇದಮಯವಾದ ಸ್ತೋತ್ರ ಹೇಳಿ ವಿನಯದಿಂದ ಸ್ತೋತ್ರಮಾಡಿದನು.

೬. ಹೀಗೆ ಒಂದುವರ್ಷಕಾಲ ಕಳೆಯಲು ಆಗ ಸರಸ್ವತೀದೇವಿಯು ಪ್ರತ್ಯಕ್ಷಳಾಗಿ ಬಂದು ಆರ್ಯರನ್ನು ಅಭಿವೃದ್ಧಿಪಡಿಸುವ ವಿಷಯದಲ್ಲಿ ತುಂಬ ಸಮೃದ್ಧಿಯಾಗುವಂತೆ ಆ ಕಣ್ವನಿಗೆ ಶುಭಕರವಾದ ವರವನ್ನು ಕೊಟ್ಟಳು.

೭-೮ ಈ ಪ್ರಕಾರವಾದ ದೇವಿಯ ಅನುಗ್ರಹದಿಂದ ಆ ಕಣ್ವ ಮತ್ತು ಆರ್ಯಾವತಿಯರಿಗೆ ಆರ್ಯಧರ್ಮದಲ್ಲಿ ಆಸಕ್ತಿಯುಳ್ಳವರೆನಿಸಿದ ಉಪಾಧ್ಯಾಯ, ದೀಕ್ಷಿತ, ಪಾಠಕ, ಶುಕ್ಲ, ಮಿಶ್ರಕ, ಅಗ್ನಿಹೋತ್ರೀ, ದ್ವಿವೇದೀ, ಪಾಂಡ್ಯ ಮತ್ತು ಚತುರ್ವೇದೀ ಎಂಬ ಹೆಸರುಳ್ಳವರೂ ಮತ್ತು ಹೆಸರಿಗೆ ತಕ್ಕ ಗುಣಗಳುಳ್ಳವರೂ ಆದ ಹತ್ತುಜನ ಮಕ್ಕಳು ಹುಟ್ಟಿದರು

ತೇ ವೈ ಸರಸ್ವತೀಂ ದೇವೀಂ ತುಷ್ಟುವುರ್ನಮ್ರಕಂಧರಾಃ ।
ದ್ವಾದಶಾಬ್ದವಯೋಭ್ಯಶ್ಚ ತೇಭ್ಯೋ ದೇವೀ ಸ್ವಶಕ್ತಿತಃ ॥ ೯ ॥

ಕೃತ್ವಾ ಕನ್ಯಾ ದದೌ ಮಾತಾ ಶಾರದಾ ಭಕ್ತವತ್ಸಲಾ ॥
ಉಪಾಧ್ಯಾಯೀ ದೀಕ್ಷಿತಾ ಚ ಪಾಠಕೀ ಶುಕ್ಲಿಕಾ ಕ್ರಮಾತ್ ।
ಮಿಶ್ರಾಣೀ ಚ ತಥಾ ಜ್ಞೇಯಾ ಷಷ್ಠೀ ಸಾ ಚಾಽಗ್ನಿಹೋತ್ರಿಣೀ ॥ ೧೦ ॥

ದ್ವಿವೇದಿನೀ ತಥಾ ಜ್ಞೇಯಾ ಚಾಷ್ಟಮೀ ಚ ತ್ರಿವೇದಿನೀ ।
ಪಾಂಡಾಯನೀ ಚ ನವಮೀ ದಶಮೀ ತುರ್ಯವೇದಿನೀ ॥ ೧೧ ॥

ತಾಸಾಂ ಚ ಸ್ವಪತಿಭ್ಯೋ ವೈ ಸುತಾಃ ಷೋಡಶ ಷೋಡಶ ।
ತೇ ತು ಗೋತ್ರಕರಾ ಜ್ಞೇಯಾಸ್ತೇಷಾಂ ನಾಮಾನಿ ಮೇ ಶೃಣು ॥ ೧೨ ॥

ಕಶ್ಯಪಶ್ಚ ಭರದ್ವಾಜೋ ವಿಶ್ವಾಮಿತ್ರೋಽಥ ಗೌತಮಃ ।
ಜಮದಗ್ನಿರ್ವಶಿಷ್ಠಶ್ಚ ವತ್ಸೋ ಮುದ್ಗಲ ಏವ ಚ ॥ ೧೩ ॥

---

೯. ಈ ಹತ್ತುಜನ ಮಕ್ಕಳುಗಳೂ ಹನ್ನೆರಡುವರ್ಷದವರಾಗುತ್ತಲೆ, ವಿನಯದಿಂದಕೂಡಿ ಸರಸ್ವತೀದೇವಿಯನ್ನು ಸ್ತೋತ್ರಮಾಡಿದರು. ಆಗ ಸರಸ್ವತೀದೇವಿಯು ಪ್ರಸನ್ನಳಾಗಿ ಅವರಿಗೆ ಅನುರೂಪರಾದ ಕನ್ಯೆಯರನ್ನು ನಿರ್ಮಿಸಿದಳು.

೧೦-೧೧. ಭಕ್ತವತ್ಸಲೆಯಾದ ಆ ಶಾರದಾದೇವಿಯು ನಿರ್ಮಿಸಿದ ಕನ್ಯೆಯರು ಉಪಾಧ್ಯಾಯೀ, ದೀಕ್ಷಿತಾ, ಪಾಠಕೀ, ಶುಕ್ಲಿಕಾ, ಮಿಶ್ರಾಣೀ, ಅಗ್ನಿಹೋತ್ರಿಣೀ, ದ್ವಿವೇದಿನೀ, ತ್ರಿವೇದಿನೀ, ಪಾಂಡ್ಯಾಯನೀ ಮತ್ತು ತುರ್ಯವೇದಿನೀ ಎಂಬ ಹೆಸರುಗಳಿಂದ ಕ್ರಮವಾಗಿ ಪ್ರಸಿದ್ಧಿಪಡೆದರು.

೧೨. ಇವರುಗಳಲ್ಲಿ ಪ್ರತಿಯೊಬ್ಬರೂ ತಮ್ಮ ತಮ್ಮ ಪತಿಯೊಡಗೂಡಿ ಹದಿನಾರುಜನ ಮಕ್ಕಳನ್ನು ಪಡೆದರು. ಇವರೆಲ್ಲರೂ ಗೋತ್ರಾಚಾರ್ಯರೆನಿಸಿದರು. ಈಗ ಕ್ರಮವಾಗಿ ಅವರ ಹೆಸರುಗಳನ್ನು ತಿಳಿಸುವೆನು ಕೇಳು.

೧೩-೧೪. ಕಾಶ್ಯಪ, ಭರದ್ವಾಜ, ವಿಶ್ವಾಮಿತ್ರ, ಗೌತಮ, ಜಮದಗ್ನಿ, ವಸಿಷ್ಠ ವತ್ಸ, ಮುದ್ಗಲ, ಪರಾಶರ, ಗರ್ಗ, ಅತ್ರಿ, ಭೃಗು, ಅಂಗೀರಸ, ಶೃಂಗೀ, ಕಾತ್ಯಾಯನ

ಪರಾಶರಸ್ತಥಾ ಗರ್ಗೋऽತ್ರಿರ್ಭೃಗುಶ್ಚಾಂಗಿರಾಸ್ತಥಾ ।
ಶೃಂಗೀ ಕಾತ್ಯಾಯನಶ್ಚೈವ ಯಾಜ್ಞವಲ್ಕ್ಯಃ ಕ್ರಮಾತ್ಸುತಾಃ ।
ಇತಿ ನಾಮ್ನಾ ಸುತಾಸ್ಸರ್ವೇ ಜ್ಞೇಯಾಃ ಷೋಡಶಷೋಡಶ ॥ ೧೪ ॥

ಸರಸ್ವತ್ಯಾಜ್ಞಯಾ ಕಣ್ವೋ ಮಿಶ್ರದೇಶಮುಪಾಯಯೌ ॥
ಮ್ಲೇಚ್ಛಾನ್ ಸಂಸ್ಕೃತಮಾಭಾಷ್ಯ ತದಾ ದಶಸಹಸ್ರಕಾನ್ ।
ವಶೀಕೃತ್ಯ ಸ್ವಯಂ ಪ್ರಾಪ್ತೋ ಬ್ರಹ್ಮಾವರ್ತೇ ಮಹೋತ್ತಮೇ ॥ ೧೫ ॥

ತೇ ಸರ್ವೇ ತಪಸಾ ದೇವೀಂ ತುಷ್ಟುವುಶ್ಚ ಸರಸ್ವತೀಂ ।
ಪಂಚವರ್ಷಾಂತರೇ ದೇವೀ ಪ್ರಾದುರ್ಭೂತಾ ಸರಸ್ವತೀ ॥
ಸಪತ್ನೀಕಾಂಶ್ಚ ತಾನ್‌ಮ್ಲೇಚ್ಛಾನ್ ಶೂದ್ರವರ್ಣಾಯ ಚಾಕರೋತ್ ॥ ೧೬ ॥

ಕಾರುವೃತ್ತಿಕರಾಸ್ಸರ್ವೇ ಬಭೂವುರ್ಬಹುಪುತ್ರಕಾಃ ।
ದ್ವಿಸಹಸ್ರಾಸ್ತದಾ ತೇಷಾಂ ಮಧ್ಯೇ ವೈಶ್ಯಾ ಬಭೂವಿರೇ ॥ ೧೭ ॥

---

ಮತ್ತು ಯಾಜ್ಞವಲ್ಕ್ಯ ಈರೀತಿ ಪ್ರತಿಯೊಬ್ಬರಿಗೂ ಇದೇ ಹೆಸರುಳ್ಳ ಹದಿನಾರುಜನ ಮಕ್ಕಳಾದರು.

೧೫. ಅನಂತರ ಸರಸ್ವತೀದೇವಿಯ ಅಪ್ಪಣೆಯಂತೆ ಕಣ್ವನು ಮಿಶ್ರ (ಈಗಿನ ಈಜಿಪ್ಟ್) ದೇಶಕ್ಕೆ ಬಂದು ಅಲ್ಲಿ ಹತ್ತುಸಾವಿರ ಮ್ಲೇಚ್ಛರಿಗೆ ಸಂಸ್ಕೃತವನ್ನು ಕಲಿಸಿ ಅವರನ್ನೆಲ್ಲಾ ತನ್ನ ಅನುಯಾಯಿಗಳನ್ನಾಗಿ ಮಾಡಿಕೊಂಡು ತಾನು ಪುನಃ ಮಹಾ ಶ್ರೇಷ್ಠವೆನಿಸಿದ ಬ್ರಹ್ಮಾವರ್ತಕ್ಕೆ ಬಂದನು.

೧೬. ಕಣ್ವನಿಂದ ಸಂಸ್ಕೃತರಾದ ಆ ಮ್ಲೇಚ್ಛರೆಲ್ಲರೂ ಸರಸ್ವತೀದೇವಿಯನ್ನು ಕುರಿತು ತಪಸ್ಸುಮಾಡಿ ಭಕ್ತಿಯಿಂದ ಸ್ತೋತ್ರಮಾಡಿದರು. ಹೀಗೆ ಐದು ವರ್ಷಗಳಕಾಲ ಮಾಡಿದಮೇಲೆ ಸರಸ್ವತೀದೇವಿಯು ಅವರಿಗೆ ಪ್ರತ್ಯಕ್ಷಳಾಗಿ ಪತ್ನೀ ಸಮೇತರಾದ ಆ ಮ್ಲೇಚ್ಛರೆಲ್ಲರನ್ನೂ ಶೂದ್ರರನ್ನಾಗಿ ಮಾಡಿದಳು.

೧೭. ಅನಂತರ ಇವರೆಲ್ಲರೂ ಮರಗೆಲಸಮಾಡಿಕೊಂಡು ಜೀವಿಸುತ್ತಾ ಅನೇಕಮಂದಿ ಪುತ್ರರನ್ನು ಪಡೆದರು. ಇವರಲ್ಲಿ ಎರಡುಸಾವಿರಮಂದಿ ವೈಶ್ಯರಾದರು. ಈ ಎರಡುಸಾವಿರಮಂದಿಯಲ್ಲಿ ಆಚಾರ್ಯಪೃಥು ಎಂಬುವನು ಕಾಶ್ಯಪನ ಪ್ರಮುಖ ಸೇವಕನಾಗಿದ್ದನು.

ತನ್ಮಧ್ಯೇ ಚಾಚಾರ್ಯಪೃಥುರ್ನಾಮ್ನಾ ಕಶ್ಯಪಸೇವಕಃ ।
ತಪಸಾ ಸ ಚ ತುಷ್ಟಾವ ದ್ವಾದಶಾಬ್ದಂ ಮಹಾಮುನಿಂ ॥ ೧೮ ॥

ತದಾ ಪ್ರಸನ್ನೋ ಭಗವಾನ್ ಕಣ್ವೋ ದೇವವರಾದ್ವರಃ ।
ತೇಷಾಂ ಚಕಾರ ರಾಜಾನಂ ರಾಜಪುತ್ರಪುರಂ ದದೌ ॥ ೧೯ ॥

ರಾಜನ್ಯಾ ನಾಮ ತತ್ಪತ್ನೀ ಮಾಗಧಂ ಸುಷುವೇ ತದಾ ।
ತಸ್ಮೈ ಕಣ್ವೋ ದದೌ ಗ್ರಾಮಂ ಪೂರ್ವಸ್ಯಾಂ ದಿಶಿ ಮಾಗಧಂ ॥ ೨೦ ॥

ಸ್ವರ್ಗಲೋಕಂ ಪುನಃ ಪ್ರಾಪ್ತೋ ಸ ಮುನಿಃ ಕಶ್ಯಪಾತ್ಮಜಃ ।
ಸ್ವರ್ಗತೇ ಕಾಶ್ಯಪೇ ವಿಪ್ರೇ ತೇ ಮ್ಲೇಚ್ಛಾಃ ಶೂದ್ರವರ್ಣಕಾಃ ॥ ೨೧ ॥

---

೧೮. ಈರೀತಿ ಆಚಾರ್ಯ ಪೃಥುವು ಸೇವಾವೃತ್ತಿಯನ್ನು ಮಾಡಿಕೊಂಡಿರುತ್ತಾ ಹನ್ನೆರಡು ವರ್ಷಗಳಕಾಲ ತಪಸ್ಸನ್ನು ಮಾಡಿ ಆ ಮಹರ್ಷಿಯನ್ನು ಸ್ತೋತ್ರ ಮಾಡಿದನು.

೧೯. ದೇವತೆಗಳ ವರದಿಂದ ಶ್ರೇಷ್ಠನೆನಿಸಿದ ಕಣ್ವಮುನಿಯು ಆಗ ಪ್ರಸನ್ನನಾಗಿ ಆ ಆ ಶೂದ್ರರು ಮತ್ತು ವೈಶ್ಯರಿಗೆಲ್ಲಾ ಪೃಥುವನ್ನೇ ರಾಜನನ್ನಾಗಿ ಗೊತ್ತು ಮಾಡಿ, ಅವನು ವಾಸಮಾಡುವುದಕ್ಕೋಸ್ಕರ ರಾಜಪುತ್ರಪುರವೆಂಬುದನ್ನು ನಿರ್ಮಿಸಿ ಕೊಟ್ಟನು

೨೦. ಅನಂತರ ಇವನ ಪತ್ನಿಯಾದ ರಾಜನ್ಯೆಯೆಂಬವಳು ಮಾಗಧನೆಂಬ ಮಗನನ್ನು ಪಡೆದಳು. ಆಗ ಕಣ್ವಮುನಿಯು ಅವನ ವಾಸಕ್ಕಾಗಿ ಪೂರ್ವದಿಕ್ಕಿನಲ್ಲಿರುವ ಮಗಧಗ್ರಾಮವನ್ನು ಕೊಟ್ಟನು.

೨೧. ಅನಂತರ ಕಶ್ಯಪನ ಮಗನಾದ ಕಣ್ವಮುನಿಯು ಸ್ವರ್ಗಲೋಕಕ್ಕೆ ಹೋದನು. ಹೀಗೆ ಬ್ರಾಹ್ಮಣನಾದ ಕಾಶ್ಯಪನು ಸ್ವರ್ಗಕ್ಕೆ ತೆರಳಿದನಂತರ ಶೂದ್ರ ವರ್ಣದವರಾದ ಈ ಮ್ಲೇಚ್ಛರು ಯಜ್ಞಗಳನ್ನು ಮಾಡಿ ಅದರಿಂದ ದೇವದೇವನಾದ ಇಂದ್ರನನ್ನು ಪೂಜಿಸಿದರು.

ಯಜ್ಞೈಸ್ಸಮರ್ಚಯಾಮಾಸುರ್ದೇವದೇವಂ ಶಚೀಪತಿಂ ।
ದುಃಖಿತೋ ಭಗವಾನಿಂದ್ರಸ್ಸಬಂಧುರ್ಜಗತೀತಲೇ ॥ ೨೨ ॥

ವೇದಾನಾಹರ್ತುಮಿಚ್ಛಂತೋ ಬ್ರಹ್ಮಯೋನೌ ಬಭೂವಿರೇ ।
ಜಿನೋ ನಾಮ ದ್ವಿಜಃ ಕಶ್ಚಿತ್ತತ್ಪತ್ನೀ ಜಯಿನೀ ಸ್ಮೃತಾ ॥ ೨೩ ॥

ಕಶ್ಯಪಾದದಿತೇರಂಶಾಜ್ಜಾತೌ ತೌ ಕೀಕಟಸ್ಥಲೇ ।
ತಯೋಸ್ಸಕಾಶಾತ್ಸಂಜಾತಾ ಆದಿತ್ಯಾ ಲೋಕಹೇತವೇ ॥ ೨೪ ॥

ಕರ್ಮನಾಶಾನದೀತೀರೇ ಪುರೀ ಬೋಧಗಯಾ ಸ್ಮೃತಾ ।
ತತ್ರೋಷ್ಯ ಬೌದ್ಧಶಾಸ್ತ್ರಾಢ್ಯಾಶ್ಚಕ್ರುಃ ಶಾಸ್ತ್ರಾರ್ಥಮುತ್ತಮಂ ॥ ೨೫ ॥

ವೇದಾಞ್ಛೂದ್ರೇಭ್ಯ ಆಹೃತ್ಯ ವಿಶಾಲಾಂ ಪ್ರಯಯುಃ ಪುರೀಂ ।
ಸಮಾಧಿಸ್ಥಾನ್ಮುನೀನ್ಸರ್ವಾನ್ಸಮುತ್ಥಾಪ್ಯ ದದುಃ ಸ್ವಯಂ ॥ ೨೬ ॥

---

೨೨. ಆಗ ಭಗವಂತನಾದ ಇಂದ್ರನು ದುಃಖಿತನಾಗಿ ತನ್ನ ಪರಿವಾರದೊಡನೆ ಭೂಮಂಡಲಕ್ಕೆ ಬಂದು ಅಲ್ಲಿ ವೇದವನ್ನು ವಶಪಡಿಸಿಕೊಳ್ಳಲು ಅಪೇಕ್ಷೆಯುಳ್ಳವನಾಗಿ ಬ್ರಾಹ್ಮಣಜಾತಿಯಲ್ಲಿ ಹುಟ್ಟಿದನು.

೨೩. ಕೀಕಟವೆಂಬಸ್ಥಳದಲ್ಲಿ ಜಿನನೆಂದು ಹೆಸರುಳ್ಳ ಒಬ್ಬ ಬ್ರಾಹ್ಮಣನಿದ್ದನು. ಇವನಿಗೆ ಜಯಿನೀ ಎಂದು ಹೆಸರುಳ್ಳ ಪತ್ನಿಯಿದ್ದಳು. ಇವರಿಬ್ಬರೂ ಕಶ್ಯಪ ಮತ್ತು ಅದಿತಿ ಇವರುಗಳ ಅಂಶದಿಂದ ಜನಿಸಿದ್ದರು.

೨೪. ಈ ಮಹಾತ್ಮರಿಬ್ಬರ ಸಮಾಗಮದಿಂದ ಕರ್ಮನಾಶಾನದಿಯ ತೀರದಲ್ಲಿರುವ ಬೋಧಗಯಾ ಎಂಬ ಪಟ್ಟಣದಲ್ಲಿ ಲೋಕಕಲ್ಯಾಣಕ್ಕೋಸ್ಕರ ದ್ವಾದಶಾದಿತ್ಯರು ಜನಿಸಿದರು.

೨೫. ಇವರೆಲ್ಲರೂ ಆ ಬೋಧಗಯಾಪಟ್ಟಣದಲ್ಲಿಯೇ ವಾಸಮಾಡುತ್ತಾ ಬೌದ್ಧಶಾಸ್ತ್ರನಿಪುಣರಾಗಿ ಶ್ರೇಷ್ಠವಾದ ಶಾಸ್ತ್ರಾರ್ಥವನ್ನು ರಚಿಸಿದರು.

೨೬. ಮತ್ತು ಶೂದ್ರರಲ್ಲಿದ್ದ ವೇದಗಳನ್ನೆಲ್ಲಾ ತೆಗೆದುಕೊಂಡು ಅಲ್ಲಿಂದ ವಿಶಾಲಾನಗರಿಗೆ ಬಂದು ಸಮಾಧಿಮಗ್ನರಾಗಿದ್ದ ಮಹರ್ಷಿಗಳನ್ನು ಎಚ್ಚರಗೊಳಿಸಿ ಅವರಿಗೆ ಆ ವೇದಗಳನ್ನು ಕೊಟ್ಟರು.

ಗತಾಸ್ಸರ್ವೇ ಸುರಾಃಸ್ಸ್ವರ್ಗೇ ತತಃ ಪ್ರಭೃತಿ ಭೂತಲೇ ।
ಮ್ಲೇಚ್ಛಾ ಬಭೂವಿರೇ ಬೌದ್ಧಾಸ್ತದನ್ಯೇ ವೇದತತ್ಪರಾಃ ॥ ೨೭ ॥

ಸರಸ್ವತ್ಯಾಃ ಪ್ರಭಾವೇಣ ತ ಆರ್ಯಾ ಬಹವೋऽಭವನ್ ।
ತೈಶ್ಚ ದೇವಪಿತೃಭ್ಯಶ್ಚ ಹವ್ಯಂ ಕವ್ಯಂ ಸಮರ್ಪಿತಂ ॥ ೨೮ ॥

ತೃಪ್ತಿಮಂತಃ ಸುರಾಶ್ಚಾಸಂಸ್ತ ಆರ್ಯಾಣಾಂ ಸಹಸ್ರಕಾಃ ।
ಸಪ್ತವಿಂಶಚ್ಛತೇ ಭೂಮೌ ಕಲೌ ಸಂವತ್ಸರೇ ಗತೇ ॥ ೨೯ ॥

ಬಲಿನಾ ಪ್ರೇಷಿತೋ ಭೂಮೌ ಮಯಃ ಪ್ರಾಪ್ತೋ ಮಹಾಸುರಃ ।
ಶಾಕ್ಯಸಿಂಹಗುರುರ್ಜ್ಞೇಯೋ ಬಹುಮಾಯಾಪ್ರವರ್ತಕಃ ॥ ೩೦ ॥

ಸ ನಾಮ್ನಾ ಗೌತಮಾಚಾರ್ಯೋ ದೈತ್ಯಪಕ್ಷವಿವರ್ಧಕಃ ।
ಸರ್ವತೀರ್ಥೇಷು ತೇನೈವ ಯಂತ್ರಾಣಿ ಸ್ಥಾಪಿತಾನಿ ವೈ ॥ ೩೧ ॥

---

೨೭. ಅನಂತರ ದೇವತೆಗಳೆಲ್ಲರೂ ಸ್ವರ್ಗಕ್ಕೆ ಹೋದರು. ಅದುಮೊದಲು ಗೊಂಡು ಈ ಭೂಮಿಯಲ್ಲಿದ್ದ ಮ್ಲೇಚ್ಛರೆಲ್ಲಾ ಬೌದ್ಧರಾದರು. ಉಳಿದವರೆಲ್ಲಾ ವೇದ ತತ್ಪರರಾದರು.

೨೮. ಸರಸ್ವತಿಯ ವರಪ್ರಸಾದದಿಂದ ಅನೇಕಜನ ಆರ್ಯರಾದರು ಇವ ರೆಲ್ಲರೂ ದೇವತೆಗಳಿಗೂ ಪಿತೃಗಳಿಗೂ ಸಹ ಹವ್ಯ ಮತ್ತು ಕವ್ಯಗಳನ್ನು ಸಮರ್ಪಿ ಸಿದರು.

೨೯. ಆದರಿಂದ ದೇವತೆಗಳೆಲ್ಲರೂ ತೃಪ್ತಿಹೊಂದಿದರು. ಮತ್ತು ಸಾವಿರಾರು ಜನ ಆರ್ಯರೂ ಸಹ ತೃಪ್ತಿಹೊಂದಿದರು. ಕಲಿಯುಗವು ಪ್ರಾರಂಭವಾಗಿ ಎರಡು ಸಾವಿರದ ಏಳುನೂರುವರ್ಷಗಳು ಕಳೆಯಲು ಆಗ ಬಲಿಯು ಭೂಲೋಕಕ್ಕೆ ಮಯ ನೆಂಬ ರಾಕ್ಷಸನನ್ನು ಕಳುಹಿಸಿದನು.

೩೦ ಶಾಕ್ಯಸಿಂಹನ ಗುರುವಾದ ಈ ಮಯನು ಅನೇಕ ಮಾಯೆಗಳಲ್ಲಿ ನಿಪುಣನಾಗಿದ್ದನು

೩೧. ಇವನು ಗೌತಮಾಚಾರ್ಯನೆಂಬ ಹೆಸರಿನಿಂದ ರಾಕ್ಷಸಪಕ್ಷಗಳನ್ನು ಅಭಿವೃದ್ಧಿಮಾಡುತ್ತಾ ಎಲ್ಲಾ ತೀರ್ಥಕ್ಷೇತ್ರಗಳಲ್ಲಿಯೂ ಯಂತ್ರಗಳನ್ನು ಸ್ಥಾಪಿಸಿದನು.

ತೇಷಾಮಧೋ ಗತಾ ಯೇ ತು ಬೌದ್ಧಾಶ್ಚಾಸನ್‌ಸಮಂತತಃ ।
ಶಿಖಾಸೂತ್ರವಿಹೀನಾಶ್ಚ ಬಭೂವುರ್ವರ್ಣಸಂಕರಾಃ ॥ ೩೨ ॥

ದಶ ಕೋಟ್ಯಃ ಸ್ಮೃತಾ ಆರ್ಯಾ ಬಭೂವುರ್ಬೌದ್ಧಮಾರ್ಗಿಣಃ ।
ಪಂಚಲಕ್ಷಾಸ್ತದಾ ಶೇಷಾಃ ಪ್ರಯಯುರ್ಗಿರಿಮೂರ್ಧನಿ ॥ ೩೩ ॥

ಚತುರ್ವೇದಪ್ರಭಾವೇಣ ರಾಜನ್ಯಾ ವಹ್ನಿವಂಶಜಾಃ ।
ಚತ್ವಾರಿಂಶಭವಾ ಯೋಧಾಸ್ತೈಶ್ಚ ಬೌದ್ಧಾಸ್ಸಮುಜ್ಝಿತಾಃ ॥ ೩೪ ॥

ಆರ್ಯಾಂಸ್ತಾಂಸ್ತೇ ತು ಸಂಸ್ಕೃತ್ಯ ವಿಂಧ್ಯಾದ್ರೇರ್ದಕ್ಷಿಣೇ ಕೃತಾನ್ ।
ತತ್ರೈವ ಸ್ಥಾಪಯಾಮಾಸುರ್ವರ್ಣರೂಪಾನ್ಸಮಂತತಃ ॥
ಆರ್ಯಾವರ್ತಃ ಪುಣ್ಯಭೂಮಿಸ್ತತ್ರಸ್ಥಾಃ ಪಂಚಲಕ್ಷಕಾಃ ॥ ೩೫ ॥

---

೩೨. ಆ ಯಂತ್ರಗಳ ಕೆಳಗಡೆ ಸಂಚರಿಸಿದ ಜನಗಳೆಲ್ಲರೂ ಬೌದ್ಧರಾಗಿ ಶಿಖಾಯಜ್ಞೋಪವೀತಗಳನ್ನು ವರ್ಜ್ಯಮಾಡಬೇಕಾಯಿತು. ಇವರಿಂದ ಜಾತಿ ಸಾಂಕರ್ಯವೇರ್ಪಟ್ಟಿತು.

೩೩. ಹತ್ತುಕೋಟಿಜನ ಆರ್ಯರು ಇದರಿಂದ ಬೌದ್ಧಮತಾವಲಂಬಿಗಳಾದರು. ಉಳಿದ ಐದುಲಕ್ಷ ಆರ್ಯರು ಓಡಿಹೋಗಿ ಬೆಟ್ಟದಶಿಖರಗಳಲ್ಲಿ ಸೇರಿಕೊಂಡರು.

೩೪. ನಾಲ್ಕುವೇದಗಳ ಮಹಿಮೆಯಿಂದ ಅಗ್ನಿವಂಶೋತ್ಪನ್ನರಾದ ನಲವತ್ತುಜನ ಶೂರರಾದ ಕ್ಷತ್ರಿಯರು ಬೌದ್ಧರ ಸಹವಾಸವನ್ನು ಅಭಿಮತಿಸದೆ ತೊರೆದರು.

೩೫ ಹಿಂದೆ ಓಡಿಹೋಗಿ ವಿಂಧ್ಯಪರ್ವತದಲ್ಲಿ ಅಡಗಿದ್ದ ಆ ಆರ್ಯವಂಶದವರನ್ನು ಇವರು ಪುನಃ ಸಂಸ್ಕಾರಮಾಡಿ ಆ ವಿಂಧ್ಯಪರ್ವತದ ದಕ್ಷಿಣದಿಕ್ಕಿನಲ್ಲಿ ಎಲ್ಲಕಡೆಯಲ್ಲಿಯೂ ಸ್ಥಾಪಿಸಿದರು. ಹೀಗೆ ಪುಣ್ಯಭೂಮಿಯಾದ ಆರ್ಯಾವರ್ತದಲ್ಲಿ ಐದುಲಕ್ಷಜನ ಆರ್ಯರು ವಾಸಿಸುತ್ತಿರುವರು" ಎಂದನು.

॥ ಸೂತ ಉವಾಚ ॥

ಇತಿ ಶ್ರುತ್ವಾ ವಚಸ್ತಸ್ಯ ಯಜ್ಞಾಂಶೋ ಭಗವಾನ್‌ಹರಿಃ ।
ಜಗನ್ನಾಥಸ್ಯ ಶಿಷ್ಯೋಽಭೂದ್ವೇದಮಾರ್ಗಪರಾಯಣಃ ॥ ೩೬ ॥

ಶುಕ್ಲದತ್ತಸ್ಯ ತನಯೋ ನಿತ್ಯಾನಂದೋ ದ್ವಿಜೋತ್ತಮಃ ।
ಜಗನ್ನಾಥಪದಂ ನತ್ವಾ ಶಿಷ್ಯೋ ಭೂತ್ವಾ ರರಾಜ ಹ ॥ ೩೭ ॥

ತದಾ ಪ್ರಸನ್ನೋ ಭಗವಾನನಿರುದ್ಧ ಉಷಾಪತಿಃ ।
ಅಭಿಷೇಕಂ ತಯೋರ್ಭಾಲೇ ಮಹತ್ತ್ವೇ ಚಕಾರ ಹ ॥ ೩೮ ॥

ಮಹತ್ತ್ವಪದವೀ ಜಾತಾ ತದಾಪ್ರಭೃತಿ ಭೂತಲೇ ।
ಗುರುಬಂಧೂ ಪ್ರಸನ್ನೌ ತೌ ಸ್ವಶಿಷ್ಯಾನ್ ಪ್ರೋಚತುರ್ಮುದಾ ॥ ೩೯ ॥

---

೩೬. ಸೂತಮುನಿವರ್ಯನು ಪುನಃ ಹೇಳುತ್ತಾನೆ ಈ ರೀತಿ ಮಹಾವಿಷ್ಣು ಸ್ವರೂಪನಾದ ಜಗನ್ನಾಥ (ವಿಪ್ರ) ನ ಮಾತನ್ನು ಕೇಳಿ ವೇದಮಾರ್ಗಪರಾಯಣನಾದ ಆ ಯಜ್ಞಾಂಶನು ಜಗನ್ನಾಥನ ಶಿಷ್ಯನಾದನು.

೩೭. ಅನಂತರ ಶುಕ್ಲದತ್ತನ ಮಗನಾದ ನಿತ್ಯಾನಂದನೆಂಬ ಬ್ರಾಹ್ಮಣೋತ್ತಮನೂ ಸಹ ಜಗನ್ನಾಥನ ಪಾದಕಮಲಗಳಿಗೆ ನಮಸ್ಕರಿಸಿ ಅವನ ಶಿಷ್ಯನಾಗಿ ಪ್ರಕಾಶಿಸಿದನು.

೩೮. ಅನಂತರ ಷಡ್ಗುಣೈಶ್ವರ್ಯಸಂಪನ್ನನೂ, ಅನಿರುದ್ಧನೂ ಆದ ಉಷಾಪತಿಯು ಪ್ರಸನ್ನನಾಗಿ ಈ ಯಜ್ಞಾಂಶ ಮತ್ತು ನಿತ್ಯಾನಂದ ಇವರುಗಳ ಹಣೆಯಲ್ಲಿ ಮಹತ್ತ್ವಗಳಿಂದ ಪಟ್ಟಾಭಿಷೇಕಮಾಡಿದನು.

೩೯. ಅದು ಮೊದಲುಗೊಂಡು ಯಜ್ಞಾಂಶ ಮತ್ತು ನಿತ್ಯಾನಂದ ಆ ಇಬ್ಬರಿಗೂ ಭೂಮಂಡಲದಲ್ಲಿ ಮಹತ್ವ ಪದವಿಯುಂಟಾಯಿತು. ಗುರುವಿಗೂ ಬಂಧುವಿಗೂ ಸಮಾನರಾದ ಇವರಿಬ್ಬರೂ ಆಗ ಪ್ರಸನ್ನರಾಗಿ ಸಂತೋಷದಿಂದ ತಮ್ಮ ಶಿಷ್ಯರನ್ನು ಕುರಿತು ಹೀಗೆಂದರು.

ಜಗನ್ನಾಥಸ್ಯ ವದನಂ ಪದ್ಮನಾಭೇರುಷಾಪತೇಃ ।
ದೃಷ್ಟ್ವಾ ಯಶ್ಚಾತ್ರ ಸಂಪ್ರಾಪ್ಯ ಸ ವೈ ಸ್ವರ್ಗಮವಾಪ್ನುಯಾತ್ ॥ ೪೦ ॥

ಪ್ರಸಾದಂ ಯಶ್ಚ ಭುಂಜೀಯಾತ್ತಸ್ಯ ದೇವಸ್ಯ ಸಾದರಂ ।
ಕೋಟಿಜನ್ಮ ಭವೇದ್ವಿಪ್ರೋ ವೇದಪಾತ್ರೋ ಮಹಾಧನೀ ॥ ೪೧ ॥

ಮಾರ್ಕಂಡೇಯವಟೇ ಕೃಷ್ಣಂ ದೃಷ್ಟ್ವಾ ಸ್ನಾತ್ವಾ ಮಹೋದಧೌ ।
ಇಂದ್ರದ್ಯುಮ್ನಸರಸ್ಯೇವ ಪುನರ್ಜನ್ಮ ನ ವಿದ್ಯತೇ ॥ ೪೨ ॥

ಇಮಾಂ ಗಾಥಾಂ ಶೃಣೋದ್ಯೋ ವೈ ಶ್ರದ್ಧಾಭಕ್ತಿಸಮನ್ವಿತಃ ।
ಯತ್ಪುರೀಗಮನೇ ಪುಣ್ಯಂ ಫಲಂ ತಚ್ಛೀಘ್ರಮಾಪ್ನುಯಾತ್ ॥ ೪೩ ॥

ಇತಿ ಯಜ್ಞಾಂಶವಚನಂ ಶ್ರುತ್ವಾ ಸ ಹ್ಯವತಾರಕಃ ।
ವೈಷ್ಣವೈಶ್ಚ ತಥೇತ್ಯುಕ್ತ್ವಾ ತತ್ರೈವಾಂತರಧೀಯತ ॥ ೪೪ ॥

---

೪೦. ಈ ಕ್ಷೇತ್ರಕ್ಕೆ ಬಂದು ಪದ್ಮನಾಭನೂ, ಉಷಾಪತಿಯೂ ಎನಿಸಿದ ಈ ಜಗನ್ನಾಥಸ್ವಾಮಿಯ ಮುಖವನ್ನು ದರ್ಶನಮಾಡಿದವರು ಸ್ವರ್ಗಲೋಕವನ್ನು ಹೊಂದುವರು.

೪೧. ಜಗನ್ನಾಥಸ್ವಾಮಿಯ ಪ್ರಸಾದವನ್ನು ಆದರದಿಂದ ಸೇವಿಸುವವನು ಕೋಟಿಜನ್ಮಗಳಲ್ಲಿಯೂ ಬ್ರಾಹ್ಮಣನಾಗಿ ಜನಿಸಿ ವೇದಕ್ಕೆ ಆಶ್ರಯನೂ ಮತ್ತು ತುಂಬ ಧನಿಕನೂ ಆಗುವನು.

೪೨ ಈ ಮಾರ್ಕಂಡೇಯಕ್ಷೇತ್ರದಲ್ಲಿ ಕೃಷ್ಣನನ್ನು ದರ್ಶನಮಾಡಿ ಮಹಾ ಸಮುದ್ರಸ್ನಾನವನ್ನೂ ಅನಂತರ ಇಂದ್ರದ್ಯುಮ್ನಸರೋವರದಲ್ಲಿ ಸ್ನಾನವನ್ನೂ ಮಾಡುವವನಿಗೆ ಪುನರ್ಜನ್ಮವಿಲ್ಲ.

೪೩. ಜಗನ್ನಾಥಪ್ರಭುವು ಹೇಳಿದ ಈ ಕಥೆಯನ್ನು ಶ್ರದ್ಧಾಭಕ್ತಿಗಳಿಂದ ಕೇಳುವ ಮಾನವನು ವಿಷ್ಣುಲೋಕವನ್ನು ಪಡೆಯಲು ಸಾಧಕವಾದ ಪುಣ್ಯಫಲವನ್ನು ಜಾಗ್ರತೆಯಾಗಿ ಪಡೆಯುವನು ಎಂದು ಯಜ್ಞಾಂಶನು ಹೇಳಿದನು.

೪೪. ಹೀಗೆ ಯಜ್ಞಾಂಶನು ಹೇಳಿದ ಮಾತನ್ನು ಕೇಳಿ ವೈಷ್ಣವರೂ ಅನುಮತಿಸುತ್ತಿರಲು ಅವತಾರಪುರುಷನಾದ ಆ ಜಗನ್ನಾಥನು ಅಲ್ಲಿಯೇ ಅದೃಶ್ಯನಾದನು.

ಏತಸ್ಮಿನ್ನಂತರೇ ವಿಪ್ರ ಕಲಿನಾ ಪ್ರಾರ್ಥಿತೋ ಬಲಿಃ ।
ಮಯಂ ದೈತ್ಯಂ ಸಮಾಹೂಯ ವಚನಂ ಪ್ರಾಹ ದುಃಖಿತಃ ॥ ೪೫ ॥

ಸಿಕಂದರೋ ಮ್ಲೇಚ್ಛಪತಿಃ ಸದಾ ಮದ್ವರ್ಧನೇ ರತಃ ।
ಸಹಾಯಂ ತಸ್ಯ ದೈತ್ಯೇಂದ್ರ ಕುರು ಶೀಘ್ರಂ ಮಮಾಜ್ಞಯಾ ॥ ೪೬ ॥

ಇತಿ ಶ್ರುತ್ವಾ ಬಲೇರ್ವಾಕ್ಯಂ ಶತದೈತ್ಯಸಮನ್ವಿತಃ ।
ಕರ್ಮಭೂಮ್ಯಾಂ ಮಯಃ ಪ್ರಾಪ್ತಃ ಕಲವಿದ್ಯಾವಿಶಾರದಃ ॥ ೪೭ ॥

ಮ್ಲೇಚ್ಛಜಾತೀನ್ನರಾನ್ ದುಷ್ಟಾನ್ ರೇಖಾಗಣಿತಮುತ್ತಮಂ ।
ಏಕವಿಂಶತಿಮಧ್ಯಾಯಂ ಕಲವೇದಮಶಿಕ್ಷಯತ್ ॥ ೪೮ ॥

ತದಾ ಕಲಾನ್ವಿತಾ ಮ್ಲೇಚ್ಛಾಃ ಕಲಾವಿದ್ಯಾವಿಶಾರದಾಃ ।
ಯಂತ್ರಾಣಿ ಕಾರಯಾಮಾಸುಃ ಸಪ್ತಸ್ವೇವ ಪುರೀಷು ಚ ॥ ೪೯ ॥

---

೪೫. ಈ ಸನ್ನಿವೇಶದಲ್ಲಿ ಕಲಿಪುರುಷನು ಬಲಿಚಕ್ರವರ್ತಿಯನ್ನು ಪ್ರಾರ್ಥಿಸಲಾಗಿ ಆ ಬಲಿದೈತ್ಯನು ಮಯನೆಂಬ ರಾಕ್ಷಸನನ್ನು ಕರೆದು ಅವನೊಡನೆ ದುಃಖದಿಂದ ಈಪ್ರಕಾರ ಹೇಳಿದನು.

೪೬. "ಎಲೈ ದೈತ್ಯಶ್ರೇಷ್ಠನೇ! ಸಿಕಂದರನೆಂಬ ಮ್ಲೇಚ್ಛರಾಜನು ಯಾವಾಗಲೂ ದೈತ್ಯಪಕ್ಷವನ್ನು ಅಭಿವೃದ್ಧಿಗೊಳಿಸುವುದರಲ್ಲಿ ತತ್ಪರನಾಗಿರುವನು. ನೀನು ನನ್ನ ಅಪ್ಪಣೆಯಂತೆ ಕೂಡಲೇ ಅವನ ಸಮೀಪಕ್ಕೆ ಹೋಗಿ ಅವನಿಗೆ ಸಹಾಯ ಮಾಡು" ಎಂದನು.

೪೭. ಬಲಿಯು ಈರೀತಿ ಆಜ್ಞೆಮಾಡಿದುದನ್ನು ಕೇಳಿ ಮಯನು ನೂರುಜನ ರಾಕ್ಷಸರೊಡನೆ ಹೊರಟು ಕರ್ಮಭೂಮಿಗೆ ಬಂದನು.

೪೮. ರೇಖಾಗಣಿತವಿದ್ಯೆಯಲ್ಲಿ ಪಂಡಿತನಾದ ಈ ಮಯನು ದುಷ್ಟರಾದ ಮ್ಲೇಚ್ಛಜನಗಳಿಗೆ ಇಪ್ಪತ್ತೊಂದು ಅಧ್ಯಾಯವುಳ್ಳ ಕಲವೇದವೆನಿಸಿದ ಉತ್ತಮವಾದ ರೇಖಾಗಣಿತವನ್ನು ಹೇಳಿಕೊಟ್ಟನು.

೪೯. ಈ ಕಲವೇದವನ್ನು ಅಭ್ಯಾಸಮಾಡಿ ಈ ಮ್ಲೇಚ್ಛರೆಲ್ಲರೂ ಕಲಾವಿದ್ಯಾನಿಪುಣರೆನಿಸಿ ಏಳು ಪಟ್ಟಣಗಳಲ್ಲಿಯೂ ಯಂತ್ರಗಳನ್ನು ರಚಿಸಿದರು.

ತದಧೋ ಯೇ ಗತಾ ಲೋಕಾಸ್ತೇ ಸರ್ವೇ ಮ್ಲೇಚ್ಛತಾಂ ಗತಾಃ ।
ಮಹತ್ಕೋಲಾಹಲಂ ಜಾತಮಾರ್ಯಾಣಾಂ ಶೋಕಕಾರಿಣಾಂ ॥ ೫೦ ॥

ಶ್ರುತ್ವಾ ತೇ ವೈಷ್ಣವಾಸ್ಸರ್ವೇ ಕೃಷ್ಣಚೈತನ್ಯಸೇವಕಾಃ ।
ದಿವ್ಯಮಂತ್ರಂ ಗುರೋಶ್ಚೈವ ಪಠಿತ್ವಾ ಪ್ರಯಯುಃ ಪುರೀಂ ॥ ೫೧ ॥

ರಾಮಾನಂದಸ್ಸಶಿಷ್ಯೋ ವೈ ಚಾಯೋಧ್ಯಾಯಾಮುಪಾಗತಃ ।
ಕೃತ್ವಾ ವಿಲೋಮಂ ತಂ ಮಂತ್ರಂ ವೈಷ್ಣವಾಂಸ್ತಾನಕಾರಯತ್ ॥ ೫೨ ॥

ಭಾಲೇ ತ್ರಿಶೂಲಚಿಹ್ನಂ ಚ ಶ್ವೇತರಕ್ತಂ ತದಾಽಭವತ್ ।
ಕಂಠೇ ಚ ತುಲಸೀಮಾಲಾ ಜಿಹ್ವಾ ರಾಮಮಯೀ ಕೃತಾ ॥ ೫೩ ॥

---

೫೦. ಈರೀತಿ ರಚಿಸಿದ ಯಂತ್ರಗಳ ಕೆಳಗಡೆ ಪ್ರವೇಶಮಾಡಿದ ಅಥವಾ ಸಂಚರಿಸಿದ ಆರ್ಯರೆಲ್ಲರೂ ಮ್ಲೇಚ್ಛರಾದರು. ಇದರಿಂದ ಆರ್ಯರೆಲ್ಲರೂ ದುಃಖ ಹೊಂದಿ ತುಂಬಾ ಕೋಲಾಹಲ ಮಾಡತೊಡಗಿದರು.

೫೧. ಈ ಆರ್ಯರ ಕೋಲಾಹಲವನ್ನು ಕೇಳಿ ಕೃಷ್ಣಚೈತನ್ಯನ ಸೇವಕರಾದ ವೈಷ್ಣವರೆಲ್ಲರೂ ತಮ್ಮ ಗುರುವಿನಿಂದ ದಿವ್ಯವಾದ ಮಂತ್ರೋಪದೇಶವನ್ನು ಪಡೆದು ಆ ಪಟ್ಟಣಗಳಿಗೆ ಬಂದರು.

೫೨. ರಾಮಾನಂದನು ತನ್ನ ಶಿಷ್ಯರೊಡನೆ ಅಯೋಧ್ಯಾಪಟ್ಟಣಕ್ಕೆ ಬಂದನು. ಅನಂತರ ಇವರೆಲ್ಲರೂ ಗುರುಗಳಿಂದ ಉಪದೇಶಹೊಂದಿದ ಆ ಮಂತ್ರವನ್ನು ವಿಲೋಮವಾಗಿ ಉಚ್ಚರಿಸಿ ಆ ಮ್ಲೇಚ್ಛರನ್ನೆಲ್ಲಾ ವೈಷ್ಣವರನ್ನಾಗಿ ಮಾಡಿದರು.

೫೩. ಆ ವೈಷ್ಣವರು ಹಣೆಯಲ್ಲಿ ಬಿಳುಪು ಮತ್ತು ಕೆಂಪು ಬಣ್ಣಗಳಿಂದ ಕೂಡಿದ ತ್ರಿಶೂಲಚಿಹ್ನೆಯ (ನಾಮವ) ನ್ನು ಧರಿಸಿದರು. ಕುತ್ತಿಗೆಯಲ್ಲಿ ತುಲಸೀ ಮಾಲಿಕಾಧಾರಣೆಯೂ, ರಾಮನಾಮ ಪಾರಾಯಣವೂ ಸಹ ಅವರಿಗೆ ಮತಾಚಾರವಾಯಿತು.

ಮ್ಲೇಚ್ಛಾಸ್ತೇ ವೈಷ್ಣವಾಶ್ಚಾಸನ್ ರಾಮಾನಂದಪ್ರಭಾವತಃ ।
ಸಂಯೋಗಿನಶ್ಚ ತೇ ಜ್ಞೇಯಾ ರಾಮಾನಂದಮತೇ ಸ್ಥಿತಾಃ ॥
ಆರ್ಯಾಶ್ಚ ವೈಷ್ಣವಾ ಮುಖ್ಯಾ ಅಯೋಧ್ಯಾಯಾಂ ಬಭೂವಿರೇ ॥ ೫೪ ॥

ನಿಂಬಾದಿತ್ಯೋ ಗತೋ ಧೀಮಾನ್ ಸಶಿಷ್ಯಃ ಕಾಂಚಿಕಾಂ ಪುರೀಂ ।
ಮ್ಲೇಚ್ಛಯಂತ್ರಂ ರಾಜಮಾರ್ಗೇ ಸ್ಥಿತಂ ತತ್ರ ದದರ್ಶ ಹ ॥ ೫೫ ॥

ವಿಲೋಮಂ ಸ್ವಗುರೋರ್ಮಂತ್ರಂ ಕೃತ್ವಾ ತತ್ರ ಸ ಚಾವ್ಯವಸತ್ ।
ವಂಶಪತ್ರಸಮಾ ರೇಖಾ ಲಲಾಟೇ ಕಂಠಮಾಲಿಕಾ ॥
ಗೋಪೀವಲ್ಲಭಮಂತ್ರೋ ಹಿ ಮುಖೇ ತೇಷಾಂ ರರಾಜ ಹ ॥ ೫೬ ॥

ತದಧೋ ಯೇ ಗತಾ ಲೋಕಾ ವೈಷ್ಣವಾಶ್ಚ ಬಭೂವಿರೇ ।
ಮ್ಲೇಚ್ಛಾಃ ಸಂಯೋಗಿನೋ ಜ್ಞೇಯಾ ಆರ್ಯಾಸ್ತನ್ಮಾರ್ಗವೈಷ್ಣವಾಃ
॥ ೫೭ ॥

---

೫೪. ಈರೀತಿ ರಾಮಾನಂದನು ಮಯದೈತ್ಯನಿಂದ ಮ್ಲೇಚ್ಛರಾಗಿದ್ದ ಆರ್ಯರೆಲ್ಲರನ್ನೂ ವೈಷ್ಣವರನ್ನಾಗಿ ಮಾಡಿದನು. ರಾಮಾನಂದನ ಮತಾವಲಂಬಿಗಳಾದ ಈ ವೈಷ್ಣವರು ಸಂಯೋಗಿಗಳೆಂದು ಪ್ರಸಿದ್ಧರಾದರು. ಆ ಬಳಿಕ ಆರ್ಯರು ಮತ್ತು ವೈಷ್ಣವರೇ ಆ ಅಯೋಧ್ಯಾಪಟ್ಟಣದ ಮುಖ್ಯನಿವಾಸಿಗಳಾದ ಪ್ರಜೆಗಳಾದರು.

೫೫. ಮೇಧಾವಿಯಾದ ನಿಂಬಾದಿತ್ಯನೆಂಬುವನು ತನ್ನ ಶಿಷ್ಯರೊಡನೆ ಕಾಂಚೀಪಟ್ಟಣಕ್ಕೆ ಬರುವಾಗ ರಾಜಮಾರ್ಗದಲ್ಲಿ ಸ್ಥಾಪಿಸಲ್ಪಟ್ಟಿರುವ ಮ್ಲೇಚ್ಛಯಂತ್ರವನ್ನು ನೋಡಿದನು.

೫೬-೫೭. ಅಲ್ಲಿಯೇ ಅನಂತರ ವಾಸಮಾಡಿ ತನ್ನ ಗುರುವಿನಿಂದ ಉಪದಿಷ್ಟವಾದ ಮಂತ್ರವನ್ನು ವಿಲೋಮವಾಗಿ ಉಚ್ಚರಿಸಿದನು. ಇದರಿಂದ ಆ ಮ್ಲೇಚ್ಛಯಂತ್ರದ ಪ್ರಭಾವವು ನಾಶವಾಯಿತು. ಅನಂತರ ಆ ದೇಶದಲ್ಲಿದ್ದ ಮ್ಲೇಚ್ಛಜನಗಳು ವೈಷ್ಣವರಾಗಿ ಹಣೆಯಲ್ಲಿ ಬಿದುರಿನ ಎಲೆಯಂತೆ ರೇಖೆಯನ್ನಿಡುವುದು. ಕುತ್ತಿಗೆಯಲ್ಲಿ ತುಳಸೀಹಾರ ಧರಿಸುವುದು ; ಬಾಯಲ್ಲಿ ಶ್ರೀಕೃಷ್ಣಮಂತ್ರೋಚ್ಚಾರಣೆ, ಇವುಗಳನ್ನು ಆಚರಿಸಬೇಕೆಂದು ವಿಧಿಸಿದನು. ಈರೀತಿ ನಿಂಬಾದಿತ್ಯನು ನಿರ್ಮಿಸಿದ ಯಂತ್ರದ ಕೆಳಗಡೆ ಸಂಚರಿಸಿದ ಮ್ಲೇಚ್ಛಜನಗಳೆಲ್ಲರೂ ವೈಷ್ಣವರಾದರು. ಈರೀತಿ ಸಂಸ್ಕೃತರಾದ ಮ್ಲೇಚ್ಛರು ಸಂಯೋಗಿಗಳೆನಿಸಿದರು. ಆರ್ಯರೆಲ್ಲರೂ ತಮ್ಮ ಮಾರ್ಗವನ್ನನುಸರಿಸಿ ವೈಷ್ಣವರಾದರು.

ವಿಷ್ಣುಸ್ವಾಮೀ ಹರಿದ್ವಾರೇ ಜಗಾಮ ಸ್ವಜನೈರ್ವೃತಃ ।
ತತ್ರ ಸ್ಥಿತಂ ಮಹಾಯಂತ್ರಂ ವಿಲೋಮಂ ತಚ್ಚಕಾರ ಹ ॥ ೫೮ ॥

ತದಧೋ ಯೇ ಗತಾ ಲೋಕಾ ಆಸನ್ ಸರ್ವೇ ಚ ವೈಷ್ಣವಾಃ ।
ಊರ್ಧ್ವಪುಂಡ್ರಂ ದ್ವಿರೇಖಾಭಂ ತನ್ಮಧ್ಯೇ ಬಿಂದುರುತ್ತಮಃ ॥ ೫೯ ॥

ಲಲಾಟೇ ಚ ಸ್ಥಿತಸ್ತೇಷಾಂ ಕಂಠೇ ತುಲಸಿಗೋಲಕಂ ।
ಮುಖೇ ಮಾಧವಮಂತ್ರಶ್ಚ ಬಭೂವ ಹಿತದಾಯಕಃ ॥ ೬೦ ॥

ಮಧುರಾಯಾಂ ಸಮಾಯಾತೋ ಮಧ್ವಾಚಾರ್ಯೋ ಹರಿಪ್ರಿಯಃ ।
ರಾಜಮಾರ್ಗೇ ಸ್ಥಿತಂ ಯಂತ್ರಂ ವಿಲೋಮಂ ಸ ಚಕಾರ ಹ ॥ ೬೧ ॥

ತದಧೋ ಯೇ ಗತಾ ಲೋಕಾ ವೈಷ್ಣವಾಸ್ತಸ್ಯ ಪಕ್ಷಗಾಃ ।
ಕರವೀರಪತ್ರಸದೃಶಂ ಲಲಾಟೇ ತಿಲಕಂ ಶುಭಂ ॥ ೬೨ ॥

---

೫೮. ಅನಂತರ ವಿಷ್ಣುಸ್ವಾಮಿ ಎಂಬುವನು ತನ್ನ ಶಿಷ್ಯರೊಡನೆ ಹರಿದ್ವಾರಕ್ಕೆ ಹೋದನು. ಅಲ್ಲಿ ಮ್ಲೇಚ್ಛರಿಂದ ಸ್ಥಾಪಿತವಾಗಿದ್ದ ಮಹಾಯಂತ್ರವನ್ನು ತನ್ನ ಮಂತ್ರಪ್ರಭಾವದಿಂದ ವಿಲೋಮಮಾಡಿದನು.

೫೯-೬೦. ಆ ಯಂತ್ರದ ಕೆಳಗಡೆ ಸಂಚರಿಸಿದ ಮ್ಲೇಚ್ಛರೆಲ್ಲರೂ ಮಂತ್ರಪ್ರಭಾವದಿಂದ ವೈಷ್ಣವರಾದರು. ಇವರು ಹಣೆಯಲ್ಲಿ ಎರಡು ರೇಖೆಗಳಿಂದ ಕೂಡಿದ ಒಂದು ಊರ್ಧ್ವಪುಂಡ್ರವನ್ನೂ ಅದರ ಮಧ್ಯೆ ಉತ್ತಮವಾದ ಬಿಂದುವನ್ನೂ ಧರಿಸುವುದೆಂದೂ ಕಂಠದಲ್ಲಿ ತುಳಸೀಮಾಲೆಯನ್ನು ಧರಿಸಿ ಬಾಯಿಯಲ್ಲಿ ಮಾಧವಮಂತ್ರ ಜಪಿಸಬೇಕೆಂದೂ ವಿಧಾಯಕವಾಯಿತು.

೬೧. ಆಮೇಲೆ ವಿಷ್ಣುಪ್ರಿಯರಾದ ಮಧ್ವಾಚಾರ್ಯರು ಮಧುರೆಗೆ ಬಂದು ರಾಜಮಾರ್ಗದಲ್ಲಿ ಸ್ಥಾಪಿಸಿದ್ದ ಮ್ಲೇಚ್ಛಯಂತ್ರವನ್ನು ತಮ್ಮ ಮಂತ್ರಪ್ರಭಾವದಿಂದ ವಿಲೋಮವಾಗಿ ಮಾಡಿದರು.

೬೨-೬೩. ಅನಂತರ ಈ ಯಂತ್ರದ ಕೆಳಗಡೆ ಸಂಚರಿಸಿದ ಜನಗಳೆಲ್ಲರೂ ವೈಷ್ಣವರಾಗಿ ಮಧ್ವಾಚಾರ್ಯ ಮತವನ್ನು ಅವಲಂಬಿಸಿದರು. ಇವರು ತಮ್ಮ ಮೂಗಿನ ಅರ್ಧಭಾಗದ ಮೇಲುಗಡೆಯಿಂದ ಹಣೆಯ ಕೊನೆಯವರೆಗೂ ಕರವೀರ

ಸ್ಥಿತಂ ನಾಸಾರ್ಧಭಾಗಾಂತೇ ಕಂಠೇ ತುಲಸಿಮಾಲಿಕಾ ।
ರಾಧಾಕೃಷ್ಣ ಶುಭಂ ನಾಮ ಮುಖೇ ತೇಷಾಂ ಬಭೂವ ಹ　　॥ ೬೩ ॥

ಶಂಕರಾಚಾರ್ಯ ಏವಾಽಪಿ ಶೈವಮಾರ್ಗಪರಾಯಣಃ ।
ದೇಶಪರ್ಯಟನೇ ಪ್ರಾಪ್ತಃ ಪುರೀಂ ಕಾಶೀಂ ಗಣೈರ್ಯುತಃ　　॥ ೬೪ ॥

ಕೃತ್ವಾ ವಿಲೋಮಂ ತದ್ಯಂತ್ರಂ ಶೈವಾಶ್ಚ ತದಧೋಽಭವನ್ ।
ತ್ರಿಪುಂಡ್ರಂ ಚ ಸ್ಥಿತಂ ಭಾಲೇ ಕಂಠೇ ರುದ್ರಾಕ್ಷಮಾಲಿಕಾ ॥
ಗೋವಿಂದಮಂತ್ರಶ್ಚ ಮುಖೇ ತೇಷಾಂ ತತ್ರ ಬಭೂವಹ　　॥ ೬೫ ॥

ತೋತಾದರ್ಯಾಂ ಚ ಸಂಪ್ರಾಪ್ತಸ್ತದಾ ರಾಮಾನುಜಃ ಸುಖೀ ।
ಊರ್ಧ್ವರೇಖಾದ್ವಯೋರ್ಮಧ್ಯೇ ಸೂಕ್ಷ್ಮರೇಖಾ ಚ ಪೀತಿಕಾ ॥
ಲಲಾಟೇ ತು ತಥಾ ಕಂಠೇ ಮಾಲಾ ತುಲಸಿಕಾ ಶುಭಾ　　॥ ೬೬ ॥

---

ಪತ್ರದಂತೆ ಶುಭಕರವಾದ ತಿಲಕಧಾರಣೆಯೂ, ಕುತ್ತಿಗೆಯಲ್ಲಿ ತುಳಸೀಮಾಲಿಕಾ ಧಾರಣೆಯೂ, ಮುಖದಲ್ಲಿ ಶುಭಕರವಾದ ರಾಧಾಕೃಷ್ಣನಾಮೋಚ್ಚಾರಣೆಯೂ ವ್ಯವಹಾರಕ್ಕೆ ಬಂದಿತು.

೬೪ ಶೈವಮಾರ್ಗಪರಾಯಣರಾದ ಶಂಕರಾಚಾರ್ಯರೂ ಸಹ ದೇಶಸಂಚಾರಮಾಡುತ್ತಾ ತನ್ನ ಪರಿವಾರದೊಡನೆ ಕಾಶೀಪಟ್ಟಣಕ್ಕೆ ಬಂದನು.

೬೫ ಅಲ್ಲಿ ಮ್ಲೇಚ್ಛರಿಂದ ಸ್ಥಾಪಿತವಾಗಿದ್ದ ಯಂತ್ರವನ್ನು ವಿಲೋಮ ಮಾಡಿದರು. ಅನಂತರ ಇದರ ಕೆಳಗೆ ಸಂಚರಿಸಿದ ಜನಗಳೆಲ್ಲರೂ ಶೈವರಾದರು. ಇವರು ಹಣೆಯಲ್ಲಿ ತ್ರಿಪುಂಡ್ರವನ್ನೂ, ಕಂಠದಲ್ಲಿ ರುದ್ರಾಕ್ಷಮಾಲೆಯನ್ನೂ ಧರಿಸಿ ಬಾಯಿಯಲ್ಲಿ ಗೋವಿಂದಮಂತ್ರವನ್ನು ಉಚ್ಚಾರಮಾಡತೊಡಗಿದರು.

೬೬. ಹಾಗೆಯೇ ರಾಮಾನುಜಾಚಾರ್ಯರು ತೋತಾದ್ರಿ ಎಂಬ ನಗರಕ್ಕೆ ಬಂದು, ಅಲ್ಲಿದ್ದ ಮ್ಲೇಚ್ಛಯಂತ್ರವನ್ನು ನಾಶಮಾಡಿ ಅಲ್ಲಿದ್ದ ಜನಗಳನ್ನೆಲ್ಲಾ ಶ್ರೀವೈಷ್ಣವರನ್ನಾಗಿ ಮಾಡಿದರು. ಅವರ ಹಣೆಯಲ್ಲಿ ಮೂರು ಊರ್ಧ್ವರೇಖೆಗಳು ಏರ್ಪಟ್ಟವು. ಅವುಗಳಲ್ಲಿ ಮಧ್ಯರೇಖೆಯು ಸೂಕ್ಷ್ಮವಾಗಿ ಹೊಂಬಣ್ಣದಿಂದ ಕೂಡಿಯೂ, ಉಳಿದ ಎರಡು ರೇಖೆಗಳು ಬಿಳಿಯಬಣ್ಣವುಳ್ಳವುಗಳಾಗಿಯೂ ಇದ್ದುವು. ಇವರೂ ಕಂಠದಲ್ಲಿ ತುಳಸೀಮಾಲೆಯನ್ನು ಧರಿಸತೊಡಗಿದರು.

ಉಜ್ಜಯಿನ್ಯಾಂ ಚ ಸಂಪ್ರಾಪ್ತೋ ವರಾಹಮಿಹಿರೋ ಗುಣೀ ।
ತದ್ಯಂತ್ರಂ ನಿಷ್ಫಲಂ ಕೃತ್ವಾ ನರಾಞ್ಶೈವಾಂಶ್ಚಕಾರಹ ॥ ೬೭ ॥

ಚಿತಾಭಸ್ಮ ಸ್ಥಿತಂ ಭಾಲೇ ಕಂಠೇ ರುದ್ರಾಕ್ಷಮಾಲಿಕಾ ।
ಶಿವೇತಿ ಮಂಗಲಂ ನಾಮ ತೇಷಾಂ ತತ್ರ ಬಭೂವಹ ॥ ೬೮ ॥

ಕಾನ್ಯಕುಬ್ಜೇ ಸ್ವಯಂ ಪ್ರಾಪ್ತೋ ವಾಣೀಭೂಷಣ ಏವ ಹಿ ।
ಅರ್ಧಚಂದ್ರಾಕೃತಿಂ ಪುಂಡ್ರಂ ರಕ್ತಚಂದನಮಾಲಿಕಾ ॥
ದೇವ್ಯಾಶ್ಚ ನಿರ್ಮಲಂ ನಾಮ ತೇಷಾಂ ತತ್ರ ಬಭೂವ ಹ ॥ ೬೯ ॥

ಧನ್ವಂತರಿಃ ಪ್ರಯಾಗೇ ಚ ಗತ್ವಾ ತದ್ಯಂತ್ರಮುತ್ತಮಂ ।
ವಿಲೋಮಂ ಕೃತವಾಂಸ್ತತ್ರ ತದಧೋ ಯೇ ಗತಾ ನರಾಃ ॥ ೭೦ ॥

---

೬೭. ಹೀಗೆಯೇ ಗುಣಶಾಲಿಯಾದ ವರಾಹಮಿಹಿರನು ಉಜ್ಜಯಿನಿಗೆ ಬಂದು ಅಲ್ಲಿದ್ದ ಮ್ಲೇಚ್ಛಯಂತ್ರವನ್ನು ನಿಷ್ಪ್ರಯೋಜನಮಾಡಿ ಅಲ್ಲಿದ್ದ ಜನಗಳನ್ನೆಲ್ಲಾ ಶೈವರನ್ನಾಗಿ ಮಾಡಿದನು.

೬೮. ಆ ಶೈವರ ಹಣೆಯಲ್ಲಿ ಚಿತಾಭಸ್ಮವೂ ಕುತ್ತಿಗೆಯಲ್ಲಿ ರುದ್ರಾಕ್ಷಿಮಾಲಿಕೆಯೂ ಧರಿಸಲ್ಪಟ್ಟವು. ಅವರು ಮಂಗಲಕರವಾದ ಶಿವನಾಮವನ್ನು ಉಚ್ಚರಿಸತೊಡಗಿದರು.

೬೯. ಇದೇರೀತಿ ವಾಣೀಭೂಷಣನೆಂಬವನು ಕಾನ್ಯಕುಬ್ಜನಗರಕ್ಕೆ ಬಂದು ಅಲ್ಲಿದ್ದ ಮ್ಲೇಚ್ಛಯಂತ್ರವನ್ನು ನಾಶಮಾಡಿ ಅಲ್ಲಿದ್ದ ಜನಗಳನ್ನೆಲ್ಲಾ ದೇವೀಭಕ್ತರನ್ನಾಗಿ ಮಾಡಿದನು. ಅವರ ಹಣೆಯಲ್ಲಿ ಅರ್ಧಚಂದ್ರಾಕಾರವಾದ ಕೆಂಪುಚಂದನದ ಪುಂಡ್ರವೂ, ಕುತ್ತಿಗೆಯಲ್ಲಿ ಕೆಂಪುಹೂವಿನ ಮಾಲಿಕೆಯೂ ಧರಿಸಲ್ಪಟ್ಟುವು. ಇವರು ದೇವಿಯ ನಿರ್ಮಲವಾದ ನಾಮವನ್ನು ಜಪಮಾಡತೊಡಗಿದರು.

೭೦-೭೧. ಇದೇರೀತಿ ಧನ್ವಂತರಿಯೆಂಬವನು ಪ್ರಯಾಗಕ್ಕೆ ಹೋಗಿ ಅಲ್ಲಿದ್ದ ಮ್ಲೇಚ್ಛಯಂತ್ರವನ್ನು ನಾಶಮಾಡಿ ಅದರ ಕೆಳಗೆ ಸಂಚರಿಸಿದ ಜನಗಳಿಗೆಲ್ಲಾ ಹಣೆಯಲ್ಲಿ ಕೆಂಪುಬಣ್ಣದ ಅರ್ಧಪುಂಡ್ರವನ್ನೂ ಅದರ ಜೊತೆಯಲ್ಲಿ ಒಂದು ಚುಕ್ಕಿ

ಅರ್ಧಂ ಪುಂಡ್ರಂ ಸ್ಮೃತಂ ರಕ್ತಂ ಸಬಿಂದು ಚ ಲಲಾಟಿಕೇ ।
ರಕ್ತಚಂದನಜಾ ಮಾಲಾ ಕಂಠೇ ತೇಷಾಂ ಬಭೂವ ಹ ॥ ೭೧ ॥

ಭಟ್ಟೋಜಿಃ ಸ ಗತೋ ಧೀಮಾನುತ್ಪಲಾರಣ್ಯಮುತ್ತಮಂ ।
ತ್ರಿಪುಂಡ್ರಂ ಚ ತಥಾ ರಕ್ತಂ ಕಂಠೇ ರುದ್ರಾಕ್ಷಮಾಲಿಕಾ ॥
ವಿಶ್ವನಾಥೇತಿ ತನ್ಮಂತ್ರಂ ತೇಷಾಂ ತತ್ರ ಬಭೂವ ಹ ॥ ೭೨ ॥

ರೋಪಣಶ್ಚೈಷ್ಟಿಕಾಂ ಪ್ರಾಪ್ತಸ್ತದ್ಯಂತ್ರಂ ಚೈವ ನಿಷ್ಫಲಂ ।
ಕೃತ್ವಾ ಜನೇಜನೇ ತತ್ರ ಬ್ರಹ್ಮಮಾರ್ಗಂ ದದರ್ಶ ಹ ॥ ೭೩ ॥

ಜಯದೇವಃ ಸ್ವಯಂ ಪ್ರಾಪ್ತೋ ದ್ವಾರಕಾಂ ವಿಷ್ಣುಭಕ್ತಿಮಾನ್ ।
ತದ್ಯಂತ್ರಂ ನಿಷ್ಫಲಂ ಯಾತಂ ತದಧೋ ಯೇ ಗತಾ ನರಾಃ ॥ ೭೪ ॥

---

ಯನ್ನೂ ಕುತ್ತಿಗೆಯಲ್ಲಿ ರಕ್ತಪುಷ್ಪದ ಮಾಲೆಯನ್ನೂ ಸಹ ಧರಿಸುವಂತೆ ಮಾಡಿದನು.

೭೨. ಬುದ್ಧಿಶಾಲಿಯಾದ ಭಟ್ಟೋಜಿಯು ಹೀಗೆಯೇ ಶ್ರೇಷ್ಠವಾದ ಉತ್ಪಲಾರಣ್ಯಕ್ಕೆ ಹೋಗಿ ಅಲ್ಲಿದ್ದ ಜನಗಳಿಗೆಲ್ಲಾ ಹಣೆಯಲ್ಲಿ ಕೆಂಪು ಗಂಧದ ತ್ರಿಪುಂಡ್ರವನ್ನೂ ಕುತ್ತಿಗೆಯಲ್ಲಿ ರುದ್ರಾಕ್ಷಮಾಲಿಕೆಯನ್ನೂ ಧಾರಣೆಮಾಡಿಸಿ ವಿಶ್ವನಾಥನ ನಾಮೋಚ್ಚಾರಣ ಮಂತ್ರಜಪವನ್ನು ಅವರಿಗೆ ಉಪದೇಶಮಾಡಿದನು.

೭೩. ರೋಪಣನೆಂಬುವನು ಸಹ ಹೀಗೆಯೇ ಇಷ್ಟಿಕಾ ಎಂಬ ಪಟ್ಟಣಕ್ಕೆ ಹೋಗಿ ಅಲ್ಲಿದ್ದ ಮ್ಲೇಚ್ಛಯಂತ್ರವನ್ನು ನಿಷ್ಪ್ರಯೋಜನಮಾಡಿ ಅಲ್ಲಿಯ ಜನಗಳಿಗೆಲ್ಲಾ ಬ್ರಹ್ಮಜ್ಞಾನವನ್ನು ಉಪದೇಶಿಸಿದನು.

೭೪. ಅನಂತರ ವಿಷ್ಣುಭಕ್ತನಾದ ಜಯದೇವನು ದ್ವಾರಕಾಪಟ್ಟಣಕ್ಕೆ ಹೋಗಿ ಅಲ್ಲಿದ್ದ ಮ್ಲೇಚ್ಛಯಂತ್ರವನ್ನು ನಿಷ್ಫಲವನ್ನಾಗಿ ಮಾಡಿ ಅದರ ಕೆಳಗೆ ಸಂಚರಿಸಿದ ಜನಗಳೆಲ್ಲಾ ಹಣೆಯಲ್ಲಿ ಒಂದು ಕೆಂಪುರೇಖೆಯನ್ನಿಡುವಂತೆಯೂ ಕುತ್ತಿಗೆಯಲ್ಲಿ ತಾವರೆಮಣಿಯ ಜಪಮಾಲಿಕೆಯನ್ನು ಧರಿಸಿ ಗೋವಿಂದಮಂತ್ರ ಜಪವನ್ನು ಮಾಡುವಂತೆಯೂ ವಿಧಿಸಿದನು.

ರಕ್ತರೇಖಾ ಸ್ಥಿತಾ ಭಾಲೇ ಚೈಕಾ ಕಂಠೇ ತು ಮಾಲಿಕಾ ।
ಪದ್ಮಾಕ್ಷಾ ಮಂತ್ರಗೋವಿಂದಸ್ತತ್ರ ತೇಷಾಂ ಬಭೂವ ಹ ॥
ಏವಂ ತೇ ವೈಷ್ಣವಾಃ ಶೈವಾಃ ಶಾಕ್ತಿಕಾ ಬಹುಧಾಽಭವನ್ ॥ ೭೫ ॥

ನಿರ್ಗುಣಾಃ ಶಾಕ್ತಿಕಾ ಜ್ಞೇಯಾಃ ಸಗುಣಾ ವೈಷ್ಣವಾಃ ಸ್ಮೃತಾಃ ।
ನಿರ್ಗುಣಾಃ ಸಗುಣಾ ಯೇ ತು ಶೈವಾ ಜ್ಞೇಯಾ ಬುಧೈಸ್ತದಾ ॥ ೭೬ ॥

ಸಮಾಧಿಸ್ಥಾಸ್ತ್ರಯಸ್ತ್ರಿಂಶದ್ದೇವಾಃ ಪುಣ್ಯಾ ಬಭೂವಿರೇ ।
ನಿತ್ಯಾನಂದಃ ಶಾಂತಿಪುರೇ ನದೀಹಾಪತ್ತನೇ ಹರಿಃ ॥ ೭೭ ॥

ಕಬೀರೋ ಮಾಗಧೇ ದೇಶೇ ರೈದಾಸಸ್ತು ಕಲಿಂಜರೇ ।
ಸಧನೋ ನೈಮಿಷಾರಣ್ಯೇ ಸಮಾಧಿಸ್ಥೋ ಬಭೂವ ಹ ॥ ೭೮ ॥

ಅದ್ಯಾಪಿ ಸಂಸ್ಥಿತೋ ವಿಪ್ರ ವೈಷ್ಣವಾನಾಂ ಗಣೋ ಮಹಾನ್ ।
ಯಜ್ಞಭಾಗಮಹಾವೃದ್ಧಿಃ ಸಂಜಾತಾ ಮೇರುಮೂರ್ಧನಿ ॥ ೭೯ ॥

---

೭೫-೭೬. ಈರೀತಿ ವೈಷ್ಣವ, ಶೈವ, ಶಾಕ್ತ ಎಂದು ಅನೇಕ ಮತಗಳು ಏರ್ಪಟ್ಟವು. ಇವರಲ್ಲಿ ಶಾಕ್ತರು ನಿರ್ಗುಣರೆಂದೂ, ವೈಷ್ಣವರು ಸಗುಣರೆಂದೂ, ನಿರ್ಗುಣ ಮತ್ತು ಸಗುಣ ಇವೆರಡನ್ನೂ ಉಳ್ಳವರು ಶೈವರೆಂದೂ ಪಂಡಿತರು ತಿಳಿಯಬೇಕು.

೭೭. ಈರೀತಿ ಇಲ್ಲಿ ಅವತರಿಸಿದ ಮೂವತ್ತುಮೂರುಜನ ದೇವತೆಗಳೂ ಸಹ ಪುಣ್ಯಪುರುಷರೆನಿಸಿ ಸಮಾಧಿಮಗ್ನರಾದರು ಇವರಲ್ಲಿ ನಿತ್ಯಾನಂದನು ಶಾಂತಿ ಪುರದಲ್ಲಿಯೂ, ಹರಿಯು, (ಕೃಷ್ಣಚೈತನ್ಯನು) ನದೀಹಾ ಪಟ್ಟಣದಲ್ಲಿಯೂ, ಸಮಾಧಿ ಯನ್ನೈದಿದರು.

೭೮. ಕಬೀರನು ಮಾಗಧದೇಶದಲ್ಲಿಯೂ, ರೈದಾಸನು ಕಲಿಂಜರ ಎಂಬ ಪಟ್ಟಣದಲ್ಲಿಯೂ ಮತ್ತು ಸಧನನೆಂಬುವನು ನೈಮಿಶಾರಣ್ಯದಲ್ಲಿಯೂ ಸಮಾಧಿ ಮಗ್ನರಾದರು.

೭೯. ಎಲೈ ಶೌನಕನೇ! ಈಗಲೂ ಸಹ ಈ ಪಂಥದ ವೈಷ್ಣವ ಸಮೂಹ ದೊಡ್ಡದಾಗಿಯೇ ಇರುವುದು. ಇವರ ಕಾಲದಲ್ಲಿ ಮೇರುಪರ್ವತದ ಶಿಖರನಿವಾಸಿಗಳಿಗೆ ಯಜ್ಞಭಾಗವು ಸಮೃದ್ಧಿಯಾಗಿ ಲಭಿಸಿತು.

ಇತಿ ತೇ ಕಥಿತಂ ವಿಪ್ರ ಯಜ್ಞಾಂಶಚರಿತಂ ಶುಭಂ ।
ಯಚ್ಛ್ರುತ್ವಾ ಚ ನರಾ ನಾರ್ಯೋ ಮಹತ್ಪುಣ್ಯಮವಾಪ್ನುಯುಃ॥ ೮೦ ॥

ಮಯಾದ್ಯಾ ನಿಷ್ಫಲಾ ದೈತ್ಯಾ ಬಲಿಪಾರ್ಶ್ವಮುಪಾಗತಾಃ ।

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ಚತುರ್ಥಖಂಡೇ
ಕಲಿಯುಗೀಯೇತಿಹಾಸಸಮುಚ್ಚಯೇ ಕೃಷ್ಣಚೈತನ್ಯಚರಿತಂ
ನಾಮ ಏಕವಿಂಶೋಽಧ್ಯಾಯಃ



೮೦ ಎಲೈ ಶೌನಕನೇ! ಈರೀತಿ ಶುಭಕರವಾದ ಯಜ್ಞಾಂಶನ ಚರಿತ್ರೆಯನ್ನು ನಿನಗೆ ಹೇಳಿದೆನು. ಈ ಕಥೆಯನ್ನು ಶ್ರವಣಮಾಡುವ ಸ್ತ್ರೀಪುರುಷರು ತುಂಬ ಪುಣ್ಯವನ್ನು ಹೊಂದುವರು. ಅಯ್ಯಾ ಶೌನಕನೇ! ಈರೀತಿ ಯಜ್ಞಾಂಶನ ಕಾಲದಲ್ಲಿ ವೇದಮಾರ್ಗವೇ ಅಭಿವೃದ್ಧಿಗೆ ಬಂದುದರಿಂದ ಮಯನೇ ಮೊದಲಾದ ರಾಕ್ಷಸರೆಲ್ಲರೂ ನಿರಾಶರಾಗಿ ಬಲಿಯ ಸಮೀಪಕ್ಕೆ ಹಿಂದಿರುಗಿದರು.

ಇಲ್ಲಿಗೆ ಶ್ರೀಭವಿಷ್ಯಮಹಾಪುರಾಣದ ಪ್ರತಿಸರ್ಗಪರ್ವದ ನಾಲ್ಕನೆಯ ಖಂಡದಲ್ಲಿ
ಕೃಷ್ಣಚೈತನ್ಯನ ಚರಿತ್ರೆಯೆಂಬ ಇಪ್ಪತ್ತೊಂದನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಪ್ರತಿಸರ್ಗಪರ್ವಣಿ ಚತುರ್ಥಖಂಡೇ

## ದ್ವಾವಿಂಶೋಽಧ್ಯಾಯಃ

---

॥ ಸೂತ ಉವಾಚ ॥

ಇತಿ ಶ್ರುತ್ವಾ ಬಲಿರ್ದೈತ್ಯೋ ದೇವಾನಾಂ ವಿಜಯಂ ಮಹತ್ ।
ರೋಷಣಂ ನಾಮ ದೈತ್ಯೇಂದ್ರಂ ಸಮಾಹೂಯ ವಚೋಽಬ್ರವೀತ್ ॥ ೧ ॥

ಸುತಸ್ತಿಮಿರಲಿಂಗಸ್ಯ ಸರುಷೋ ನಾಮ ವಿಶ್ರುತಃ ।
ತ್ವಂ ಹಿ ತತ್ರ ಸಮಾಗಮ್ಯ ದೈತ್ಯಕಾರ್ಯಂ ಮಹತ್ಕುರು ॥ ೨ ॥

ಇತಿ ಶ್ರುತ್ವಾ ಸ ವೈ ದೈತ್ಯೋ ಹೃದಿ ವಿಪ್ರಾಪ್ತರೋಷಣಃ ।
ನನಾಶ ವೇದಮಾರ್ಗಸ್ಥಾನ್ ದೇಹಲೀದೇಶಮಾಸ್ಥಿತಃ ॥ ೩ ॥

---

## ಇಪ್ಪತ್ತೆರಡನೆಯ ಅಧ್ಯಾಯ

೧. ಸೂತಮುನಿವರ್ಯನು ಹೇಳುತ್ತಾನೆ—ಬಲಿದೈತ್ಯನು ಹೀಗೆ ದೇವತೆಗಳಿಗೆ ಉಂಟಾದ ದೊಡ್ಡ ವಿಜಯವನ್ನು ಕೇಳಿ ಅಸಮಾಧಾನಹೊಂದಿ ರೋಷಣನೆಂಬ ರಾಕ್ಷಸನನ್ನು ಕರೆಯಿಸಿ ಅವನನ್ನು ಕುರಿತು ಮಾತಾಡತೊಡಗಿ.

೨. "ಎಲೈ ರಾಕ್ಷಸಶ್ರೇಷ್ಠನೇ! ತಿಮಿರಲಿಂಗನ ಮಗನಾದ ಸರುಷನೆಂಬುವನು ಪ್ರಸಿದ್ಧನಾಗಿ ರಾಜ್ಯವಾಳುತ್ತಿದಾನೆ. ನೀನು ಅವನ ಸಮೀಪಕ್ಕೆ ಹೋಗಿ ರಾಕ್ಷಸೋಪಕಾರಕವಾದ ಕಾರ್ಯವನ್ನು ನಡೆಸುತ್ತಾ ಅವನಿಗೆ ಬೆಂಬಲವಾಗು" ಎಂದನು.

೩. ತಮ್ಮ ಪ್ರಭುವಾದ ಬಲಿಯು ಹೇಳಿದುದನ್ನು ಕೇಳಿ ಆ ರೋಷಣನು ಬ್ರಾಹ್ಮಣರಲ್ಲಿ ತುಂಬ ಆಗ್ರಹಯುಕ್ತವಾದ ಮನಸ್ಸುಳ್ಳವನಾಗಿ ದೆಹಲೀರಾಜ್ಯಕ್ಕೆ ನುಗ್ಗಿ ಅಲ್ಲಿ ವೇದಮಾರ್ಗಾವಲಂಬಿಗಳಾಗಿದ್ದವರನ್ನೆಲ್ಲಾ ನಾಶಮಾಡಿದನು.

ಪಂಚವರ್ಷಂ ಕೃತಂ ರಾಜ್ಯಂ ತತ್ಸುತೋ ಬಾಬರೋऽಭವತ್ ।
ವಿಂಶದಬ್ದಂ ಕೃತಂ ರಾಜ್ಯಂ ಹೋಮಾಯುಸ್ತತ್ಸುತೋऽಭವತ್ ॥ ೪ ॥

ಹೋಮಾಯುಷಾ ಮದಾಂಧೇನ ದೇವತಾಶ್ಚ ನಿರಾಕೃತಾಃ ।
ತೇ ಸುರಾಃ ಕೃಷ್ಣಚೈತನ್ಯಂ ನದೀಹೋಪವನೇ ಸ್ಥಿತಂ ॥ ೫ ॥

ತುಷ್ಟುವುರ್ಬಹುಧಾ ತತ್ರ ಶ್ರುತ್ವಾ ಕ್ರುದ್ಧೋ ಹರಿಃ ಸ್ವಯಂ ।
ಸ್ವತೇಜಸಾ ಚ ತದ್ರಾಜ್ಯಂ ವಿಘ್ನಭೂತಂ ಚಕಾರ ಹ ॥ ೬ ॥

ತತ್ಸೈನ್ಯಜನಿತೈರ್ಲೋಕೈರ್ಹೋಮಾಯುಶ್ಚ ನಿರಾಕೃತಃ ।
ಮಹಾರಾಷ್ಟ್ರೈಸ್ತದಾ ತತ್ರ ಶೇಷಶಾಕಃ ಸಮಾಸ್ಥಿತಃ ॥ ೭ ॥

---

೪. ರೋಷಣನು ಹೀಗೆ ಆರ್ಯಧರ್ಮವನ್ನು ನಾಶಮಾಡಿ ದೆಹಲಿಯಲ್ಲಿ ಐದುವರ್ಷಗಳಕಾಲ ರಾಜ್ಯವಾಳಿದನು. ಅನಂತರ ಇವನಿಗೆ ಬಾಬರನೆಂಬ ಒಬ್ಬ ಮಗ ಜನಿಸಿದನು. ಅವನು ತಂದೆಯ ಅನಂತರ ಪಟ್ಟಕ್ಕೆ ಬಂದು ಇಪ್ಪತ್ತುವರ್ಷಗಳ ಕಾಲ ರಾಜ್ಯವಾಳಿದನು. ಇವನಿಗೆ ಹೋಮಾಯುವೆಂಬ (ಹುಮಾಯೂನನೆಂಬ) ಮಗನು ಹುಟ್ಟಿದನು.

೫ ತಂದೆಯನಂತರ ಇವನು ಪಟ್ಟಕ್ಕೆ ಬಂದನು. ಮದಾಂಧನಾದ ಈ ಹೋಮಾಯುವು (ಹುಮಾಯೂನನು) ದೇವತೆಗಳನ್ನೆಲ್ಲಾ ಸಂಪೂರ್ಣವಾಗಿ ನಿರಾಕರಿಸಿಬಿಟ್ಟನು ಆಗ ದೇವತೆಗಳೆಲ್ಲರೂ ನದೀಹಾನಗರದ ಉಪವನದಲ್ಲಿ ನೆಲಸಿದ್ದ ಕೃಷ್ಣಚೈತನ್ಯನ ಸಮಿಾಪಕ್ಕೆ ಹೋದರು.

೬ ಅಲ್ಲಿ ಅವನನ್ನು ಅನೇಕರೀತಿಯಿಂದ ಸ್ತೋತ್ರಮಾಡಿದರು. ಆಗ ಪ್ರಸನ್ನನಾದ ಆ ಕೃಷ್ಣಾಂಶಸ್ವರೂಪನಾದ ಮಹಾವಿಷ್ಣುವು ದೇವತೆಗಳಿಗೊದಗಿದ ವಿಪತ್ತನ್ನೆಲ್ಲಾ ಕೇಳಿ ಹೋಮಾಯುವಿನ ಮೇಲೆ ತುಂಬ ಕೋಪಗೊಂಡು ತನ್ನ ತೇಜಸ್ಸಿನಿಂದ ಅವನ ರಾಜ್ಯವನ್ನು ಅನೇಕ ವಿಘ್ನಗಳಿಗೊಳಗಾಗುವಂತೆ ಮಾಡಿದನು.

೭. ಆಗ ಆ ಹುಮಾಯುವಿನ ಸೈನ್ಯದಲ್ಲಿದ್ದ ಮಹಾರಾಷ್ಟ್ರ ಸೈನಿಕರು ಹುಮಾಯೂನನನ್ನು ರಾಜ್ಯದಿಂದ ತೆಗೆದುಹಾಕಿ ಶೇಷಶಾಕ (ಷೇರ್‌ಷಹ) ನೆಂಬುವನನ್ನು ರಾಜನನ್ನಾಗಿ ಮಾಡಿದರು. (ಅಂದರೆ ಶೇಷಶಾಕನೆಂಬುವನು ಹುಮಾಯೂನನನ್ನು ರಾಜ್ಯದಿಂದ ಓಡಿಸಿ ತಾನು ರಾಜನಾದನು.)

ದೇಹಲೀನಗರೇ ರಮ್ಯೇ ಮ್ಲೇಚ್ಛೋ ರಾಜ್ಯಂ ಚಕಾರ ಹ ।
ಧರ್ಮಕಾರ್ಯಂ ಕೃತಂ ತೇನ ತದ್ರಾಜ್ಯಂ ಪಂಚಹಾಯನಂ ॥ ೮ ॥

ಬ್ರಹ್ಮಚಾರೀ ಮುಕುಂದಶ್ಚ ಶಂಕರಾಚಾರ್ಯಗೋತ್ರಜಃ ।
ಪ್ರಯಾಗೇ ಚ ತಪಃ ಕುರ್ವನ್ವಿಂಶಚ್ಛಿಷ್ಯೈರ್ವೃತಃ ಸ್ಥಿತಃ ॥ ೯ ॥

ಹೋಮಾಯುಷಾ ಚ ಧೂರ್ತೇನ ಮ್ಲೇಚ್ಛರಾಜೇನ ದೇವತಾಃ ।
ಭ್ರಂಶಿತಾಃ ಸ ತದಾ ಜ್ಞಾತ್ವಾ ವಹ್ನೌ ದೇಹಂ ಜುಹಾವ ವೈ ॥ ೧೦ ॥

ತಸ್ಯ ಶಿಷ್ಯಾ ಗತಾ ವಹ್ನೌ ಮ್ಲೇಚ್ಛನಾಶನಹೇತುನಾ ।
ಗೋದುಗ್ಧೇ ಚ ಸ್ಥಿತಂ ರೋಮ ಪೀತ್ವಾ ಸ ಪಯಸಾ ಮುನಿಃ ॥ ೧೧ ॥

ಮುಕುಂದಸ್ತಸ್ಯ ದೋಷೇಣ ಮ್ಲೇಚ್ಛಯೋನೌ ಬಭೂವ ಹ ।
ಹೋಮಾಯುಷಶ್ಚ ಕಾಶ್ಮೀರೇ ಸಂಸ್ಥಿತಸ್ಯೈವ ಪುತ್ರಕಃ ॥ ೧೨ ॥

---

೮. ಈ ಮ್ಲೇಚ್ಛರಾಜನಾದ ಶೇಷಶಾಕನು ಸುಂದರವಾದ ದೆಹಲಿ ಪಟ್ಟಣದಲ್ಲಿಯೇ ಐದುವರ್ಷಗಳಕಾಲ ರಾಜ್ಯವಾಳುತ್ತ ಅನೇಕ ಧರ್ಮಕಾರ್ಯಗಳನ್ನು ಮಾಡಿದನು.

೯. ಶಂಕರಾಚಾರ್ಯರ ಗೋತ್ರದಲ್ಲಿ ಜನಿಸಿದ (ಇಲ್ಲಿ ಅವನ ಶಿಷ್ಯನಾದ ಎಂದು ಅರ್ಥಮಾಡಬೇಕು) ಮುಕುಂದನೆಂಬ ಬ್ರಹ್ಮಚಾರಿಯು ಪ್ರಯಾಗಕ್ಷೇತ್ರದಲ್ಲಿ ತನ್ನ ಇಪ್ಪತ್ತುಜನ ಶಿಷ್ಯರಿಂದ ಆವೃತನಾಗಿ ತಪಸ್ಸನ್ನು ಮಾಡುತ್ತಿದ್ದನು.

೧೦. ಮ್ಲೇಚ್ಛರಾಜನೂ ವಂಚಕನೂ ಆದ ಹುಮಾಯೂನನು ದೇವರುಗಳನ್ನೆಲ್ಲಾ ನಾಶಪಡಿಸಿದನೆಂದು ತಿಳಿದು ಆ ಮುಕುಂದನು ಆಗ ಅಗ್ನಿಪ್ರವೇಶಮಾಡಿ ಮೃತನಾದನು.

೧೧-೧೨. ಅವನ ಶಿಷ್ಯರೂ ಸಹ ಮ್ಲೇಚ್ಛರನ್ನು ನಾಶಮಾಡುವುದಕ್ಕೋಸ್ಕರವಾಗಿ ಅಗ್ನಿಪ್ರವೇಶಮಾಡಿದರು. ಈ ಮುಕುಂದನು ಹಸುವಿನ ಹಾಲನ್ನು ಕುಡಿಯುವಾಗ ಆ ಹಾಲಿನಲ್ಲಿ ಹಸುವಿನ ಒಂದು ರೋಮವಿದ್ದಿತು. ಅದನ್ನು ನೋಡದೆ ಕುಡಿದುದರಿಂದ ಗೋಮಾಂಸ ತಿಂದಂತೆ ದೋಷತಟ್ಟಿ ಆತನು ಮ್ಲೇಚ್ಛಜಾತಿಯಲ್ಲಿ ಹುಟ್ಟಬೇಕಾಗಿ ಬಂದಿತು. ಅದೇವೇಳೆಗೆ ರಾಜ್ಯಭ್ರಷ್ಟನಾಗಿ ಓಡಿ ಕಾಶ್ಮೀರದಲ್ಲಿದ್ದ ಹುಮಾಯೂನನಿಗೆ ಅವನು ಮಗನಾಗಿ ಹುಟ್ಟಿದನು.

**ಜಾತಮಾತ್ರೇ ಸುತೇ ತಸ್ಮಿನ್ವಾಗುವಾಚಾsಶರೀರಿಣೀ ।**
**ಅಕಸ್ಮಾಚ್ಚ ವರೋ ಜಾತಃ ಪುತ್ರೋsಯಂ ಸರ್ವಭಾಗ್ಯವಾನ್ ॥ ೧೩ ॥**

**ಪೈಶಾಚೇ ದಾರುಣೇ ಮಾರ್ಗೇ ನ ಭೂತೋ ನ ಭವಿಷ್ಯತಿ ।**
**ಅತಃ ಸೋಕಬರೋ ನಾಮ ಹೋಮಾಯುಸ್ತನಯಸ್ತವ ॥ ೧೪ ॥**

**ಶ್ರೀಧರಃ ಶ್ರೀಪತಿಃ ಶಂಭುರ್ವರೇಣ್ಯಶ್ಚ ಮಧುವ್ರತೀ ।**
**ವಿಮಲೋ ದಿವ್ಯವಾನ್ಸೋಮೋ ವರ್ಧನೋ ವರ್ತಕೋ ರುಚಿಃ ॥ ೧೫ ॥**

**ಮಾಂಧಾತಾ ಮಾನಕಾರೀ ಚ ಕೇಶವೋ ಮಾಧವೋ ಮಧುಃ ।**
**ದೇವಾಪಿಃ ಸೋಮಪಾಃ ಶೂರೋ ಮದನೋ ಯಸ್ಯ ಶಿಷ್ಯಕಾಃ ॥ ೧೬ ॥**

**ಸ ಮುಕುಂದೋ ದ್ವಿಜಃ ಶ್ರೀಮಾನ್ದೈವಾತ್ತ್ವದ್ಗೇಹಮಾಗತಃ ।**
**ಇತ್ಯಾಕಾಶವಚಃ ಶ್ರುತ್ವಾ ಹೋಮಾಯುಶ್ಚ ಪ್ರಸನ್ನಧೀಃ ॥ ೧೭ ॥**

---

೧೩. ಇವನು ಹುಟ್ಟುವ ಸಮಯದಲ್ಲಿ ಎಲೈ " ಹುಮಾಯೂನನೇ ! ಯಾವ ಕಾರಣವೂ ಇಲ್ಲದೆ (ಆಕಸ್ಮಾತ್ತಾಗಿ) ಶ್ರೇಷ್ಠನಾದ ಮಗನು ನಿನಗೆ ಹುಟ್ಟಿರುವನು. ಇವನು ಸಕಲ ಸೌಭಾಗ್ಯವನ್ನೂ ಪಡೆಯುವನು "

೧೪. " ಭಯಂಕರರೂ ಪಿಶಾಚಸ್ವಭಾವದವರೂ ಆದ ನಿಮ್ಮ ಮ್ಲೇಚ್ಛ ರಾಜರಲ್ಲಿ ಇದಕ್ಕೆ ಹಿಂದೆ ಇಂತಹ ವ್ಯಕ್ತಿಯು ಹುಟ್ಟಿರಲಿಲ್ಲ. ಇನ್ನು ಮುಂದೂ ಹುಟ್ಟುವುದಿಲ್ಲ. ಆದುದರಿಂದ ನಿನ್ನ ಮಗನಾದ ಇವನು ಅಕಬರನೆಂಬ ಹೆಸರಿನಿಂದ ಪ್ರಸಿದ್ಧನಾಗುವನು "

೧೫. " ಈ ವ್ಯಕ್ತಿಯು ಹಿಂದೆ ಶ್ರೀಧರ, ಶ್ರೀಪತಿ, ಶಂಭು, ವರೇಣ್ಯ, ಮಧುವ್ರತ, ವಿಮಲ, ದಿವ್ಯವಾ, ಸೋಮ, ವರ್ಧನ, ವರ್ತಕ, ರುಚಿ."

೧೬. " ಮಾಂಧಾತಾ, ಮಾನಕಾರೀ, ಕೇಶವ, ಮಾಧವ, ಮಧು, ದೇವಾಪಿ, ಸೋಮಪ, ಶೂರ ಮತ್ತು ಮದನ ಈ ಇಪ್ಪತ್ತುಮೂರು ಶಿಷ್ಯರನ್ನು ಪಡೆದಿದ್ದನು "

೧೭. " ಆಗ ಮುಕುಂದನೆಂಬ ಬ್ರಾಹ್ಮಣೋತ್ತಮನಾಗಿದ್ದ ಇವನು ಅದೃಷ್ಟ ವಶದಿಂದ ನಿನಗೆ ಮಗನಾಗಿ ನಿನ್ನ ಮನೆಯಲ್ಲಿ ಜನಿಸಿರುವನು " ಎಂದು ಆಕಾಶವಾಣಿಯಾಯಿತು.

ದದೌ ದಾನಂ ಕ್ಷುಧಾರ್ತೇಭ್ಯಃ ಪ್ರೇಮ್ಣಾ ಪುತ್ರಮಪಾಲಯತ್ ।
ದಶಾಬ್ದೇ ತನಯೇ ಜಾತೇ ದೇಹಲೀದೇಶಮಾಗತಃ ॥ ೧೮ ॥

ಶೇಷಶಾಕಂ ಪರಾಜಿತ್ಯ ಸ ಚ ರಾಜಾ ಬಭೂವ ಹ ।
ಅಬ್ದಂ ತೇನ ಕೃತಂ ರಾಜ್ಯಂ ತತ್ಪುತ್ರಶ್ಚ ನೃಪೋಽಭವತ್ ॥ ೧೯ ॥

ಸಂಪ್ರಾಪ್ತೇಽಕಬರೇ ರಾಜ್ಯಂ ಸಪ್ತಶಿಷ್ಯಾಶ್ಚ ತತ್ಪ್ರಿಯಾಃ ।
ಪೂರ್ವಜನ್ಮನಿ ಯೇ ಮುಖ್ಯಾಸ್ತೇ ಪ್ರಾಪ್ತಾ ಭೂಪತಿಂ ಪ್ರತಿ ॥ ೨೦ ॥

ಕೇಶವೋ ಗಾನಸೇನಶ್ಚ ವೈಜವಾಕ್ಸ ತು ಮಾಧವಃ ।
ಮ್ಲೇಚ್ಛಾಸ್ತೇ ಚ ಸ್ಮೃತಾಸ್ತತ್ರ ಹರಿದಾಸೋ ಮಧುಸ್ತಥಾ ॥ ೨೧ ॥

---

೧೮. ಇದನ್ನು ಕೇಳಿ ಹುಮಾಯೂನನು ತುಂಬ ಸಂತೋಷಹೊಂದಿ ಹಸಿವಿನಿಂದ ಪೀಡಿತರಾಗಿರುವವರಿಗೆ ಅನೇಕ ದಾನಗಳನ್ನು ಮಾಡಿ ಪ್ರೀತಿಯಿಂದ ಮಗನನ್ನು ಸಾಕಿದನು. ಈ ಅಕಬರನಿಗೆ ಹತ್ತುವರ್ಷ ವಯಸ್ಸಿನ ವೇಳೆಗೆ ಹುಮಾಯೂನನು ದೆಹಲಿಗೆ ಹಿಂತಿರುಗಿ ಬಂದು,

೧೯. ಶೇಷಶಾಕನನ್ನು ಯುದ್ಧದಲ್ಲಿ ಸೋಲಿಸಿ ಪುನಃ ತಾನು ರಾಜನಾದನು. ಅನಂತರ ಈ ಹುಮಾಯೂನನು ಒಂದುವರ್ಷಕಾಲ ಮಾತ್ರ ರಾಜ್ಯವಾಳಿದನು. ಆಮೇಲೆ ಇವನ ಮಗನಾದ ಅಕಬರನು ರಾಜನಾದನು.

೨೦. ಅಕಬರನು ರಾಜ್ಯಕ್ಕೆ (ಪಟ್ಟಕ್ಕೆ) ಬಂದಮೇಲೆ ಹಿಂದೆ ಅವನು ಹೊಂದಿದ್ದ ಮುಕುಂದನ ಜನ್ಮದಲ್ಲಿ ಅವನಿಗೆ ಮುಖ್ಯಶಿಷ್ಯರಾಗಿದ್ದ ಏಳು ಜನಗಳೂ, ರಾಜನಾಗಿದ್ದ ಅಕಬರನ ಸಮೀಪಕ್ಕೆ ಬಂದರು.

೨೧ ಆ ಏಳು ಜನಗಳೂ ತಾವೂ ಮ್ಲೇಚ್ಛರಾಗಿ ಜನಿಸಿದ್ದರು. ಅವರಲ್ಲಿ ಕೇಶವನು ಗಾನಸೇನನೆಂದೂ, ಮಾಧವನು ವೈಜವಾಕ್ ಎಂದೂ, ಮಧುವೆಂಬುವನು ಹರಿದಾಸನೆಂದೂ ಪ್ರಸಿದ್ಧರಾದರು.

ಮಧ್ವಾಚಾರ್ಯಕುಲೇ ಜಾತೋ ವೈಷ್ಣವಃ ಸರ್ವರಾಗವಿತ್ ।
ಪೂರ್ವಜನ್ಮನಿ ದೇವಾಪಿಃ ಸ ಚ ವೀರಬಲೋಽಭವತ್ ॥ ೨೨ ॥

ಬ್ರಾಹ್ಮಣಃ ಪಾಶ್ಚಿಮಾತ್ಯೋ ವೈ ವಾಗ್ದೇವೀವರದರ್ಪಿತಃ ।
ಸೋಮಪಾ ಮಾನಸಿಂಹಶ್ಚ ಗೌತಮಾನ್ವಯಸಂಭವಃ ॥ ೨೩ ॥

ಸೇನಾಪತಿಶ್ಚ ನೃಪತೇರಾರ್ಯಭೂಪಶಿರೋಮಣೇಃ ।
ಸೂರಶ್ಚೈವ ದ್ವಿಜೋ ಜಾತೋ ದಕ್ಷಿಣಶ್ಚೈವ ಪಂಡಿತಃ ॥ ೨೪ ॥

ಬಿಲ್ವಮಂಗಲ ಏವಾಪಿ ನಾಮ್ನಾ ತನ್ನೃಪತೇಃ ಸಖಾ ।
ನಾಯಿಕಾಭೇದನಿಪುಣೋ ವೈಶ್ಯಾನಾಂ ಸ ಚ ಪಾರಗಃ ॥ ೨೫ ॥

ಮದನೋ ಬ್ರಾಹ್ಮಣೋ ಜಾತಃ ಪೌರ್ವಾತ್ಯಃ ಸ ಚ ನರ್ತಕಃ ।
ಚಂದಲೋ ನಾಮ ವಿಖ್ಯಾತೋ ರಹಃಕ್ರೀಡಾವಿಶಾರದಃ ॥ ೨೬ ॥

---

೨೨. ಮಧ್ವಾಚಾರ್ಯರ ಕುಲದಲ್ಲಿ ಜನಿಸಿ ವೈಷ್ಣವನಾಗಿ ಸಕಲ ರಾಗಗಳನ್ನೂ ತಿಳಿದಿದ್ದ ದೇವಾಪಿಯೆಂಬುವನು ವೀರಬಲನೆಂಬ ಹೆಸರಿನಿಂದ ಪ್ರಸಿದ್ಧನಾಗಿದ್ದನು.

೨೩. ಪಶ್ಚಿಮದೇಶದಲ್ಲಿ ಜನಿಸಿ ವಾಗ್ದೇವಿಯಾದ ಸರಸ್ವತಿಯನ್ನು ಸೇವಿಸಿ ವರವನ್ನು ಪಡೆದು ಗೌತಮವಂಶದಲ್ಲಿ ಜನಿಸಿದ್ದ ಸೋಮಪಾ ಎಂಬುವನು ಮಾನಸಿಂಹನೆಂಬ ಹೆಸರಿನಿಂದ ಕೂಡಿ ರಾಜಶ್ರೇಷ್ಠನಾದ ಈ ಅಕಬರನಿಗೆ ಸೇನಾಪತಿಯಾಗಿ ಪ್ರಸಿದ್ಧನಾಗಿದ್ದನು.

೨೪-೨೫. ದಕ್ಷಿಣದೇಶದಲ್ಲಿ ಜನಿಸಿದ್ದು ಪಂಡಿತನಾಗಿದ್ದ ಶೂರನೆಂಬ ಬ್ರಾಹ್ಮಣನು ಬಿಲ್ವಮಂಗಲನೆಂಬ ಹೆಸರಿನಿಂದ ಅಕಬರನ ಸ್ನೇಹಿತನಾಗಿಯೂ, ನಾಯಿಕಾ ಭೇದವನ್ನು ತಿಳಿಯುವುದರಲ್ಲಿ ನಿಪುಣನಾಗಿಯೂ, ವೈಶ್ಯರಂತೆ ರತ್ನಪಡಿ ವ್ಯಾಪಾರಗಳಲ್ಲಿ ನಿಪುಣನಾಗಿಯೂ ಇದ್ದನು.

೨೬ ಹಿಂದಿನ ಜನ್ಮದಲ್ಲಿ ಮುಕುಂದ ಶಿಷ್ಯನಾಗಿದ್ದು ಪೂರ್ವದೇಶದಲ್ಲಿ ಜನಿಸಿದ್ದ ಮದನನೆಂಬ ಬ್ರಾಹ್ಮಣೋತ್ತಮನು ಈಗ ಚಂದಲನೆಂಬ ಹೆಸರಿನಿಂದ ಜನಿಸಿ ನರ್ತಕನಾಗಿ ರಹಃಕ್ರೀಡೆಯನ್ನು ತಿಳಿದು ವಿಹರಿಸುವುದರಲ್ಲಿ ನಿಪುಣನಾಗಿದ್ದನು.

ಅನ್ಯದೇಶೇ ಗತಾಃ ಶಿಷ್ಯಾಸ್ತೇಷಾಂ ಪೂರ್ವಾಸ್ತ್ರಯೋದಶ ।
ಅನಪಸ್ಯ ಸುತೋ ಜಾತಃ ಶ್ರೀಧರಃ ಪಂಡಿತೋತ್ತಮಃ ॥ ೨೭ ॥

ವಿಖ್ಯಾತಸ್ತುಲಸೀಶರ್ಮಾ ಪುರಾಣನಿಪುಣಃ ಕವಿಃ ।
ನಾರೀಶಿಕ್ಷಾಂ ಸಮಾದಾಯ ರಾಘವಾನಂದಮಾಗತಃ ॥ ೨೮ ॥

ಶಿಷ್ಯೋ ಭೂತ್ವಾ ಸ್ಥಿತಃ ಕಾಶ್ಯಾಂ ರಾಮಾನಂದಮತೇ ಸ್ಥಿತಃ ।
ಶ್ರೀಪತಿಃ ಸ ಬಭೂವಾಂಧೋ ಮಧ್ವಾಚಾರ್ಯಮತೇ ಸ್ಥಿತಃ ॥ ೨೯ ॥

ಸೂರದಾಸ ಇತಿ ಜ್ಞೇಯಃ ಕೃಷ್ಣಲೀಲಾಕರಃ ಕವಿಃ ।
ಶಂಭುರ್ವೈ ಚಂದ್ರಭಟ್ಟಸ್ಯ ಕುಲೇ ಜಾತೋ ಹರಿಪ್ರಿಯಃ ॥ ೩೦ ॥

---

೨೭. ಇವರಲ್ಲದೆ, ಮುಕುಂದನ ಶಿಷ್ಯರಲ್ಲಿ ಉಳಿದ ಹದಿಮೂರುಜನರು ಬೇರೆ ಬೇರೆ ದೇಶದಲ್ಲಿ ಜನಿಸಿದ್ದರು. ಅವರಲ್ಲಿ ಪಂಡಿತೋತ್ತಮನಾದ ಶ್ರೀಧರನೆಂಬ ಬ್ರಾಹ್ಮಣನು ಅನಪನೆಂಬುವನಿಗೆ ಮಗನಾಗಿ ಜನಿಸಿದನು.

೨೮. ಅವನೇ ತುಲಸೀಶರ್ಮನೆಂಬ ಹೆಸರುಳ್ಳವನಾಗಿ ಪುರಾಣನಿಪುಣನೂ, ಕವಿಯೂ ಎನಿಸಿ, ಸ್ತ್ರೀಶಿಕ್ಷಣವೆಂಬ ವಿಷಯದಲ್ಲಿ ರಾಮಾನಂದನೊಡನೆ ವಾಕ್ಯಾರ್ಥ ಮಾಡಿ ಕೊನೆಗೆ ಅವನ ಶಿಷ್ಯನಾಗಿ ಆ ರಾಮಾನಂದನ ಮತವನ್ನೇ ಅಂಗೀಕರಿಸಿದನು.

೨೯. ಮಧ್ವಾಚಾರ್ಯರ ಮತವನ್ನು ಅಂಗೀಕರಿಸಿದ್ದ ಶ್ರೀಪತಿಯೆಂಬ ಬ್ರಾಹ್ಮಣನು ಕುರುಡನಾಗಿ ಜನಿಸಿ, ಸೂರದಾಸನೆಂಬ ಹೆಸರು ಪಡೆದು ಕೃಷ್ಣಭಗವಂತನ ಲೀಲೆಯನ್ನು ಹಾಡುತ್ತಾ ಕವಿಯಾಗಿದ್ದನು.

೩೦. ಚಂದ್ರಭಟ್ಟನ ವಂಶದಲ್ಲಿ ಜನಿಸಿದ್ದು ವಿಷ್ಣುಭಕ್ತನಾಗಿದ್ದ ಶಂಭುವೆಂಬ ಬ್ರಾಹ್ಮಣನು ರಾಮಾನಂದನ ಮತವನ್ನು ಅಂಗೀಕರಿಸಿ ಯಾವಾಗಲೂ ಭಕ್ತರ ಯಶಸ್ಸನ್ನು ಕೊಂಡಾಡುವ ಭಾಗವತನಾಗಿದ್ದನು.

ರಾಮಾನಂದಮತೇ ಸಂಸ್ಥೋ ಭಕ್ತಕೀರ್ತಿಪರಾಯಣಃ ।
ವರೇಣ್ಯಃ ಸೋಽಗ್ರಭುಙ್ನಾಮಾ ರಾಮಾನಂದಮತೇ ಸ್ಥಿತಃ ॥ ೩೧ ॥

ಜ್ಞಾನಧ್ಯಾನಪರೋ ನಿತ್ಯಂ ಭಾಷಾಛಂದಕರಃ ಕವಿಃ ।
ಮಧುವ್ರತೀ ಸ ವೈ ಜಾತೋ ಕೀಲಕೋ ನಾಮ ವಿಶ್ರುತಃ ॥ ೩೨ ॥

ರಾಮಲೀಲಾಕರೋ ಧೀಮಾನ್ರಾಮಾನಂದಮತೇ ಸ್ಥಿತಃ ।
ವಿಮಲಶ್ಚ ಸ ವೈ ಜಾತಃ ಸ ನಾಮ್ನೈವ ದಿವಾಕರಃ ॥ ೩೩ ॥

ಸೀತಾಲೀಲಾಕರೋ ಧೀಮಾನ್ರಾಮಾನಂದಮತೇ ಸ್ಥಿತಃ ।
ದೇವವಾನ್‌ಕೇಶವೋ ಜಾತೋ ವಿಷ್ಣುಸ್ವಾಮಿಮತೇ ಸ್ಥಿತಃ ॥ ೩೪ ॥

ಕವಿಪ್ರಿಯಾದಿರಚನಾಂ ಕೃತ್ವಾ ಪ್ರೇತತ್ವಮಾಗತಃ ।
ರಾಮಜ್ಯೋತ್ಸ್ನಾಮಯಂ ಗ್ರಂಥಂ ಕೃತ್ವಾ ಸ್ವರ್ಗಮುಪಾಯಯೌ ॥ ೩೫ ॥

---

೩೧. ಹಿಂದಿನ ಜನ್ಮದಲ್ಲಿ ವರೇಣ್ಯನೆಂದು ಪ್ರಸಿದ್ಧನಾಗಿದ್ದ ಮುಕುಂದನ ಶಿಷ್ಯನು, ಈಗ ಅಗ್ರಭುಕ್ ಎಂಬ ಹೆಸರಿನಿಂದ ಅವತರಿಸಿ, ರಾಮಾನಂದನ ಮತವನ್ನು ಅವಲಂಬಿಸಿ ಜ್ಞಾನಿಯಾಗಿ, ಯಾವಾಗಲೂ ಧ್ಯಾನಪರನಾಗಿ ಇದ್ದನು. ಅಲ್ಲದೆ ಭಾಷಾಛಂದಸ್ಸೆಂಬ ಗ್ರಂಥವನ್ನು ರಚಿಸಿ ಕವಿ ಎನಿಸಿದ್ದನು.

೩೨. ಹಿಂದಿನ ಜನ್ಮದಲ್ಲಿ ಮಧುವ್ರತೀ ಎನಿಸಿದ್ದ ಬ್ರಾಹ್ಮಣನು ಈ ಜನ್ಮದಲ್ಲಿ ಕೀಲಕನಾಗಿ ಅವತರಿಸಿ, ರಾಮಧ್ಯಾನಾಸಕ್ತನಾಗಿ ಪ್ರಸಿದ್ಧನಾಗಿದ್ದನು. ಮೇಧಾವಿಯಾದ ಈ ಕೀಲಕನು ರಾಮಾನಂದಮತವನ್ನು ಆಶ್ರಯಿಸಿದ್ದನು.

೩೩. ಪದ್ಮಾಕರನ ಶಿಷ್ಯನಾಗಿದ್ದ ವಿಮಲನೆಂಬುವನು ದಿವಾಕರನೆಂಬ ಹೆಸರಿನಿಂದ ಅವತರಿಸಿ, ಸೀತಾದೇವಿಯ ಮಹಿಮೆಯನ್ನು ಯಾವಾಗಲೂ ಧ್ಯಾನಿಸುತ್ತಿದ್ದನು. ಬುದ್ಧಿಶಾಲಿಯಾದ ಇವನೂ ಸಹ ರಾಮಾನಂದ ಪಂಥವನ್ನೇ ಅವಲಂಬಿಸಿದ್ದನು

೩೪-೩೫. ಪೂರ್ವಜನ್ಮದಲ್ಲಿ ದೇವವಾನ್ ಎಂದು ಪ್ರಸಿದ್ಧನಾಗಿದ್ದ ಬ್ರಾಹ್ಮಣನು ಕೇಶವನೆಂಬ ಹೆಸರಿನಿಂದ ಅವತರಿಸಿ, ವಿಷ್ಣುಸ್ವಾಮಿ ಎಂಬವನ ಪಂಥವನ್ನು ಅವಲಂಬಿಸಿ, ಕವಿಗಳಿಗೆ ಪ್ರೀತಿಪಾತ್ರವಾದ ಕಾವ್ಯರಚನೆ ಮಾಡಿ, ಅನಂತರ ರಾಮಜ್ಯೋತ್ಸ್ನಾಮಯವೆಂಬ ಗ್ರಂಥವನ್ನು ರಚಿಸಿ, ಮೃತನಾಗಿ ಸ್ವರ್ಗವನ್ನು ಪಡೆದನು.

ಸೋಽನೋ ಜಾತಃ ಸ ವೈ ವ್ಯಾಸೋ ನಿಂಬಾದಿತ್ಯಮತೇ ಸ್ಥಿತಃ ।
ರಹಃ ಕ್ರೀಡಾಮಯಂ ಗ್ರಂಥಂ ಕೃತ್ವಾ ಸ್ವರ್ಗಮುಪಾಯಯೌ ॥ ೩೬ ॥

ವರ್ಧನಶ್ಚ ಸ ವೈ ಜಾತೋ ನಾಮ್ನಾ ಚರಣದಾಸಕಃ ।
ಜ್ಞಾನಮಾಲಾಮಯಂ ಕೃತ್ವಾ ಗ್ರಂಥಂ ರೈದಾಸಮಾರ್ಗಗಃ ॥ ೩೭ ॥

ವರ್ತಕಃ ಸ ಚ ವೈ ಜಾತೋ ರೋಪಣಸ್ಯ ಮತೇ ಸ್ಥಿತಃ ।
ರತ್ನಭಾನುರಿತಿ ಜ್ಞೇಯೋ ಭಾಷಾಕರ್ತಾ ಚ ಜೈಮಿನೇಃ ॥ ೩೮ ॥

ರುಚಿಶ್ಚ ರೋಚನೋ ಜಾತೋ ಮಧ್ವಾಚಾರ್ಯಮತೇ ಸ್ಥಿತಃ ।
ನಾನಾಗಾನಮಯೀಂ ಲೀಲಾಂ ಕೃತ್ವಾ ಸ್ವರ್ಗಮುಪಾಯಯೌ ॥ ೩೯ ॥

ಮಾಂಧಾತಾ ಭೂಪತಿರ್ನಾಮ ಕಾಯಸ್ಥಃ ಸ ಬಭೂವ ಹ ।
ಮಧ್ವಾಚಾರ್ಯೋ ಭಾಗವತಂ ಚಕ್ರೇ ಭಾಷಾಮಯಂ ಶುಭಂ ॥ ೪೦ ॥

---

೩೬ ವ್ಯಾಸನೆಂಬುವನು ಸೋಮನೆಂಬ ಹೆಸರಿನಿಂದ ಅವತರಿಸಿ, ನಿಂಬಾದಿತ್ಯನ ಪಂಥವನ್ನು ಅವಲಂಬಿಸಿ, ರಹಃಕ್ರೀಡಾ ಎಂಬ ಗ್ರಂಥವನ್ನು ರಚಿಸಿ ಸ್ವರ್ಗಕ್ಕೆ ತೆರಳಿದನು.

೩೭. ಪೂರ್ವಜನ್ಮದಲ್ಲಿ ವರ್ಧನನೆಂಬ ಹೆಸರಿನಿಂದ ಕೂಡಿದ್ದ ಒಬ್ಬ ಬ್ರಾಹ್ಮಣನು ಚರಣದಾಸಕನೆಂಬ ಹೆಸರಿನಿಂದ ಹುಟ್ಟಿ, ಜ್ಞಾನಮಾಲಾಮಯ ಎಂಬ ಗ್ರಂಥವನ್ನು ರಚಿಸಿ, ರೈದಾಸನೆಂಬುವನ ಪಂಥವನ್ನು ಅವಲಂಬಿಸಿದನು.

೩೮. ಪೂರ್ವಜನ್ಮದಲ್ಲಿ ಮುಕುಂದನ ಶಿಷ್ಯನೆನಿಸಿದ್ದ ವರ್ತಕನು ರತ್ನಭಾನು ಎಂಬ ಹೆಸರಿನಿಂದ ಜನಿಸಿ ರೋಪಣನ ಮತವನ್ನು ಅಂಗೀಕರಿಸಿ ಜೈಮಿನಿಸೂತ್ರಗಳಿಗೆ ಹಿಂದೀಭಾಷೆಯಲ್ಲಿ ವ್ಯಾಖ್ಯಾನವನ್ನು ರಚಿಸಿದನು.

೩೯. ಹಿಂದೆ ರುಚಿ ಎಂಬ ಹೆಸರಾಗಿದ್ದವನು ರೋಚನನೆಂಬ ಹೆಸರಿನಿಂದ ಅವತರಿಸಿ ಮಧ್ವಾಚಾರ್ಯರ ಮತವನ್ನು ಅಂಗೀಕರಿಸಿ ಪರಮಾತ್ಮನ ಲೀಲೆಯನ್ನು ನಾನಾ ಗಾನಯುಕ್ತವಾದ ಗೀತೆಗಳಾಗಿ ನಿರ್ಮಿಸಿ ಸ್ವರ್ಗಕ್ಕೆ ಹೋದನು.

೪೦. ಮಾಂಧಾತನೆಂಬ ರಾಜನೂ ಸಹ ಕಾಯಸ್ಥನಾಗಿ ಭೂಪತಿ ಎಂಬ ಹೆಸರಿನಿಂದ ಚಾರ್ಯಮತಾನುಯಾಯಿಯಾಗಿ ಭಾಗವತವನ್ನು ಹಿಂದೀಭಾಷೆಗೆ ಪರಿವರ್ತಿಸಿದನು.

ಮಾನಕಾರೋ ನಾರಿಭಾವಾನ್ನಾರೀದೇಹಮುಪಾಗತಃ ।
ಮೀರಾನಾಮೇತಿ ವಿಖ್ಯಾತಾ ಭೂಪತೇಸ್ತನಯಾ ಶುಭಾ ॥ ೪೧ ॥

ಮಾ ಶೋಭಾ ಚ ತನೌ ಯಸ್ಯಾ ಗತಿರ್ಗಜಸಮಾ ಕಿಲ ।
ಸಾ ಮೀರಾ ಚ ಬುಧೈಃ ಪ್ರೋಕ್ತಾ ಮಧ್ವಾಚಾರ್ಯಮತೇ ಸ್ಥಿತಾ ॥ ೪೨ ॥

ಏವಂ ತೇ ಕಥಿತಂ ವಿಪ್ರ ಭಾಷಾಗ್ರಂಥಪ್ರಕಾರಣಂ ।
ಪ್ರಬಂಧಂ ಮಂಗಲಕರಂ ಕಲಿಕಾಲೇ ಭಯಂಕರೇ ॥ ೪೩ ॥

ಸ ಭೂಪೋऽಕಬರೋ ನಾಮ ಕೃತ್ವಾ ರಾಜ್ಯಮಕಂಟಕಂ ।
ಶತಾರ್ಧೇನ ಚ ಶಿಷ್ಯೈಶ್ಚ ವೈಕುಂಠಭವನಂ ಯಯೌ ॥ ೪೪ ॥

---

೪೧. ಮಾನಕಾರನೆಂಬುವನು ಸಹಜವಾಗಿ ಸ್ತ್ರೀಯಂತೆ ಮಧುರಭಾವ ಉಳ್ಳವನಾಗಿದ್ದುದರಿಂದ ಸ್ತ್ರೀತ್ವವನ್ನು ಹೊಂದಿ ರಾಜನ ಮಗಳಾಗಿ ಜನಿಸಿ ಮೀರಾ ಎಂಬ ಹೆಸರಿನಿಂದ ಪ್ರಸಿದ್ಧಳಾದಳು.

೪೨. ಮಾ ಎಂದರೆ ಕಾಂತಿಯು. ಇದು ಇವಳ ಶರೀರದಲ್ಲಿ ಇದ್ದುದರಿಂದಲೂ, ನಡಗೆಯು ಆನೆಯ ನಡಗೆಯಂತೆ ಮಂದವಾದುದರಿಂದಲೂ ಇವಳಿಗೆ ಮೀರಾ ಎಂದು ಹೆಸರು ಬಂದಿತೆಂದು ಪಂಡಿತರು ಹೇಳುವರು. ಇವಳೂ ಮಧ್ವಾಚಾರ್ಯಮತದಲ್ಲಿ ಆಸಕ್ತಳಾಗಿದ್ದಳು

೪೩. ಎಲೈ ಶೌನಕನೇ! ಈರೀತಿ ಭಯಂಕರವಾದ ಕಲಿಯುಗದಲ್ಲಿಯೂ ಸಹ ಶುಭಕರವಾದ ಭಾಷಾಗ್ರಂಥಗಳು ಪ್ರಬಂಧಗಳು ರಚಿತವಾಗಲು ಕಾರಣವನ್ನು ನಿನಗೆ ತಿಳಿಸಿದೆನು.

೪೪. ಅಯ್ಯಾ ಬ್ರಾಹ್ಮಣೋತ್ತಮನೇ! ರಾಜನಾದ ಅಕಬರನು ಪ್ರಜೆಗಳಿಗೆ ಯಾವ ತೊಂದರೆಯೂ ಇಲ್ಲದಂತೆ ಐವತ್ತು ವರ್ಷಗಳ ಕಾಲ ತನ್ನ ಅನುಯಾಯಿಗಳ ಸಹಾಯದಿಂದ ರಾಜ್ಯವನ್ನು ಆಳಿ ಅನಂತರ ಮೃತನಾಗಿ ವೈಕುಂಠಲೋಕವನ್ನು ಸೇರಿದನು.

ಸಲೋಮಾ ತನಯಸ್ತಸ್ಯ ಕೃತಂ ರಾಜ್ಯಂ ಪಿತುಃ ಸಮಂ ।
ಖುರ್ದಕಸ್ತನಯಸ್ತಸ್ಯ ದಶಾಬ್ದಂ ಚ ಕೃತಂ ಪದಂ ॥ ೪೫ ॥

ಚತ್ವಾರಸ್ತನಯಾಸ್ತಸ್ಯ ನವರಂಗೋ ಹಿ ಮಧ್ಯಮಃ ।
ಪಿತರಂ ಚ ತಥಾ ಭ್ರಾತೄನ್ ಜಿತ್ವಾ ರಾಜ್ಯಮಚೀಕರತ್ ॥ ೪೬ ॥

ಪೂರ್ವಜನ್ಮನಿ ದೈತ್ಯೋಽಯಮಂಧಕೋ ನಾಮ ವಿಶ್ರುತಃ ।
ಕರ್ಮಭೂಮ್ಯಾಂ ತದಂಶೇನ ದೈತ್ಯರಾಜಾಜ್ಞಯಾ ಯಯೌ ॥ ೪೭ ॥

ತೇನೈವ ಬಹುಧಾ ಮೂರ್ತಿರ್ಭ್ರಂಶಿತಾಶ್ಚ ಸಮಂತತಃ ।
ದೃಷ್ಟ್ವಾ ದೇವಾಸ್ತದಾಗತ್ಯ ಕೃಷ್ಣಚೈತನ್ಯಮಬ್ರುವನ್ ॥ ೪೮ ॥

---

೪೫. ಇವನ ಅನಂತರ ಇವನ ಮಗನಾದ ಸಲೋಮನು (ಸಲೀಮ್) ತಂದೆಯಂತೆಯೇ ರಾಜ್ಯಭಾರಮಾಡಿದನು. ಇವನ ಅನಂತರ ಇವನ ಮಗನಾದ ಖುರ್ದಕ (ಖುರ್ರಂ) ನೆಂಬುವನು ಪಟ್ಟಕ್ಕೆ ಬಂದು ಹತ್ತು ವರ್ಷಗಳಕಾಲ ರಾಜ್ಯವಾಳಿದನು.

೪೬. ಇವನಿಗೆ ನಾಲ್ಕುಜನ ಮಕ್ಕಳಿದ್ದರು. ಅವರಲ್ಲಿ ಮಧ್ಯದವನಾದ ನವರಂಗ (ಔರಂಗಜೇಬ್) ನೆಂಬುವನು ತಂದೆಯನ್ನೂ ಮತ್ತು ತನ್ನ ಸಹೋದರರನ್ನೂ ಸಹ ಜಯಿಸಿ ತಾನೇ ರಾಜ್ಯಭಾರಮಾಡಿದನು.

೪೭. ಈ ನವರಂಗನು ಹಿಂದಿನ ಜನ್ಮದಲ್ಲಿ ಅಂಧಕಾಸುರನಾಗಿದ್ದನು. ಇವನು ದೈತ್ಯರಾಜನಾದ ಬಲಿಯ ಅಪ್ಪಣೆಯಂತೆ ಕರ್ಮಭೂಮಿಯಾದ ಭಾರತದೇಶದಲ್ಲಿ ಆ ಅಂಧಕನ ಅಂಶದಿಂದಲೇ ಜನಿಸಿದನು.

೪೮. ಇವನು ಎಲ್ಲ ಕಡೆಯಲ್ಲಿಯೂ ಇದ್ದ ದೇವತಾವಿಗ್ರಹಗಳನ್ನೂ ಅನೇಕ ಪ್ರಕಾರವಾಗಿ ನಾಶಪಡಿಸಿದನು. ದೇವತೆಗಳು ಇದನ್ನು ನೋಡಿ ಖಿನ್ನರಾಗಿ ಕೃಷ್ಣ ಚೈತನ್ಯನ ಬಳಿಗೆ ಬಂದು ಮೊರೆಯಿಡುವರಾಗಿ

ಭಗವನ್‌ದೈತ್ಯರಾಜಾಂಶಃ ಸ ಜಾತಶ್ಚ ಮಹೀಪತಿಃ ।
ಭ್ರಂಶಯಿತ್ವಾ ಸುರಾನ್ವೇದಾನ್‌ದೈತ್ಯಪಕ್ಷಂ ವಿವರ್ಧತೇ ॥ ೪೯ ॥

ಇತಿ ಶ್ರುತ್ವಾ ಸ ಯಜ್ಞಾಂಶೋ ನದೀಹೋಪವನೇ ಸ್ಥಿತಃ ।
ಶಶಾಪ ತಂ ದುರಾಚಾರಂ ಯಥಾ ವಂಶಕ್ಷಯೋ ಭವೇತ್ ॥ ೫೦ ॥

ರಾಜ್ಯಮೇಕೋನಪಂಚಾಶತ್ಕೃತಂ ತೇನ ದುರಾತ್ಮನಾ ।
ಸೇವಾಜಯೋ ನಾಮ ನೃಪೋ ದೇವಪಕ್ಷವಿವರ್ಧನಃ ॥ ೫೧ ॥

ಮಹಾರಾಷ್ಟ್ರದ್ವಿಜಸ್ತಸ್ಯ ಯುದ್ಧವಿದಾ ವಿಶಾರದಃ ।
ಹತ್ವಾ ತಂ ಚ ದುರಾಚಾರಂ ತತ್ಪುತ್ರಾಯ ಚ ತತ್ಪದಂ ॥ ೫೨ ॥

ದತ್ವಾ ಯಯೌ ದಾಕ್ಷಿಣಾತ್ಯೇ ದೇಶೇ ದೇವವಿವರ್ಧನಃ ।
ಆಲೋಮಾ ನಾಮ ತನಯಃ ಪಂಚಾಬ್ದಂ ತತ್ಪದಂ ಕೃತಂ ॥ ೫೩ ॥

---

೪೯. "ಎಲೈ ಭಗವಂತನೇ! ದೈತ್ಯರಾಜನ ಅಂಶದಿಂದ ಜನಿಸಿರುವ ಈ ರಾಜನು ದೇವತೆಗಳನ್ನೂ ಮತ್ತು ವೇದಗಳನ್ನೂ ಸಹ ನಾಶಪಡಿಸಿ ರಾಕ್ಷಸರ ಪಕ್ಷವನ್ನೇ ಅಭಿವೃದ್ಧಿಗೊಳಿಸುತ್ತಿರುವನು" ಎಂದರು.

೫೦. ದೇವತೆಗಳು ಹೀಗೆ ಹೇಳಿದುದನ್ನು ಕೇಳಿ ನದೀಹಾಪಟ್ಟಣದ ಉಪವನದಲ್ಲಿದ್ದ ಆ ಯಜ್ಞಾಂಶನು, ದುರಾಚಾರಿಯಾದ ಆ ನವರಂಗರಾಜ (ಅವರಂಗಜೇಬ)ನನ್ನು, ವಂಶಕ್ಷಯವಾಗುವಂತೆ ಶಪಿಸಿದನು.

೫೧-೫೨. ಈ ದುರಾತ್ಮನು ನಲವತ್ತೊಂಭತ್ತು ವರ್ಷಗಳಕಾಲ ರಾಜ್ಯವಾಳಿದನು. ಅನಂತರ ದೇವತೆಗಳ ಪಕ್ಷವನ್ನು ಅಭಿವೃದ್ಧಿಗೊಳಿಸುವನೂ ಮಹಾರಾಷ್ಟ್ರ ಬ್ರಾಹ್ಮಣನೂ ಯುದ್ಧವಿದ್ಯಾನಿಪುಣನೂ ಆದ ಸೇವಾಜಯ (ಶಿವಾಜಿ) ನೆಂಬ ಧೀರನು ದುರಾಚಾರಿಯಾದ ಅವನನ್ನು ನಿಗ್ರಹಿಸಿ ಅವನ ಮಗನಿಗೆ ಆ ರಾಜ್ಯವನ್ನು ಕೊಟ್ಟು ತಾನು ದಕ್ಷಿಣದೇಶಕ್ಕೆ ಹಿಂದಿರುಗಿದನು.

೫೩. ಅವರಂಗಜೇಬಿನ ಮಗನಾದ ಆಲೋಮ ಎಂಬುವನು ಐದುವರ್ಷ ರಾಜ್ಯವಾಳಿ ಅನಂತರ ಭಯಂಕರವಾದ ರೋಗದಿಂದ ಮರಣಹೊಂದಿದನು.

ತತ್ಪಶ್ಚಾನ್ಮರಣಂ ಪ್ರಾಪ್ತೋ ವಿದ್ರುಥೇನ ರುಜಾ ಮುನೇ ।
ವಿಕ್ರಮಸ್ಯ ಗತೇ ರಾಜ್ಯೇ ಸಪ್ತತ್ಯುತ್ತರಕಂ ಶತಂ ॥ ೫೪ ॥

ಜ್ಞೇಯಂ ಸಪ್ತದಶಂ ವಿಪ್ರ ಯದಾಲೋಮಾ ಮೃತಿಂ ಗತಃ ।
ತಾಲನಸ್ಯ ಕುಲೇ ಜಾತೋ ಮ್ಲೇಚ್ಛಃ ಫಲರುಷೋ ಬಲೀ ॥ ೫೫ ॥

ಮುಕಲಸ್ಯ ಕುಲಂ ಹತ್ವಾ ಸ್ವಯಂ ರಾಜ್ಯಂ ಚಕಾರ ಹ ।
ದಶಾಬ್ದಂ ಚ ಕೃತಂ ರಾಜ್ಯಂ ತೇನ ಭೂಪೇನ ಭೂತಲೇ ॥ ೫೬ ॥

ಶತ್ರುಭಿರ್ಮರಣಂ ಪ್ರಾಪ್ತೋ ದೈತ್ಯಲೋಕಮುಪಾಗಮತ್ ।
ಮಹಾಮುದಸ್ತತ್ತನಯೋ ವಿಂಶತ್ಯಬ್ದಂ ಕೃತಂ ಪದಂ ॥ ೫೭ ॥

ತದ್ರಾಷ್ಟ್ರೇ ನಾದರೋ ನಾಮ ದೈತ್ಯೋ ದೇಶ ಉಪಾಗಮತ್ ।
ಹತ್ವಾರ್ಯಾಂಶ್ಚ ಸುರಾಞ್ಜಿತ್ವಾ ದೇಶಂ ಖುರಜಮಾಯಯೌ ॥ ೫೮ ॥

---

೫೪. ಈ ಅಲೋಮನು ಮೃತನಾಗುವಹೊತ್ತಿಗೆ ವಿಮಕ್ರರಾಜನು ರಾಜ್ಯವಾಳಿ ಎರಡುಸಾವಿರದ ಏಳುನೂರ ಎಪ್ಪತ್ತು ವರ್ಷಗಳಾಗಿದ್ದುವು.

೫೫-೫೬. ತಾಲನನ ವಂಶದಲ್ಲಿ ಜನಿಸಿದ ಮ್ಲೇಚ್ಛನೂ ಬಲಶಾಲಿಯೂ ಆದ ಫಲರುಷನೆಂಬವನು ಅಲೋಮನು ಜನಿಸಿದ್ದ ಮೊಗಲ ವಂಶವನ್ನೇ ನಾಶಮಾಡಿ ತಾನು ಅಲ್ಲಿ ಹತ್ತುವರ್ಷ ರಾಜ್ಯವಾಳಿದನು

೫೭. ಅನಂತರ ಇವನು ತನ್ನ ಶತ್ರುಗಳಿಂದ ಮರಣಹೊಂದಿ ದೈತ್ಯಲೋಕವನ್ನು ಸೇರಿದನು. ಇವನ ಮಗನಾದ ಮಹಾಮುದ (ಮಹಮ್ಮದ್‌ಷಹ) ಎಂಬುವನು ಪಟ್ಟಕ್ಕೆ ಬಂದು ಇಪ್ಪತ್ತುವರ್ಷ ರಾಜ್ಯವಾಳಿದನು.

೫೮. ಇವನು ರಾಜ್ಯವಾಳುತ್ತಿದ್ದಾಗ ನಾದರನೆಂಬ ರಾಕ್ಷಸನು ಇವನ ದೇಶಕ್ಕೆ ಬಂದು ಇಲ್ಲಿದ್ದ ಆರ್ಯರನ್ನೆಲ್ಲಾ ಕೊಂದು ದೇವರುಗಳನ್ನೆಲ್ಲಾ ನಾಶಪಡಿಸಿ ಖುರಜ ದೇಶಕ್ಕೆ ಹಿಂದಿರುಗಿದನು.

ಮದಸ್ಯ ಹಿ ಮಹಾಮತ್ಸ್ಯೋ ತನಯಸ್ತ್ರಿಪಿತುಃ ಪದಂ ।
ಗೃಹೀತ್ವಾ ಪಂಚವರ್ಷಾಂತೇ ಸ ಚ ರಾಜ್ಯಂ ಚಕಾರ ಹ　　॥ ೫೯ ॥

ಮಹಾರಾಷ್ಟ್ರೈರ್ಹತೋ ದುಷ್ಟಸ್ತಾಲನಾನ್ವಯಸಂಭವಃ ।
ದೇಹಲೀನಗರೇ ರಾಜ್ಯಂ ದಶಾಬ್ದಂ ಮಾಧವೇನ ವೈ　　॥ ೬೦ ॥

ಕೃತಂ ತತ್ರ ತದಾ ಮ್ಲೇಚ್ಛ ಆಲೋಮಾ ರಾಜ್ಯಮಾಪ್ತವಾನ್ ।
ತದ್ರಾಷ್ಟ್ರೇ ಬಹವೋ ಜಾತಾ ರಾಜಾನೋ ನಿಜದೇಶಜಾಃ　　॥ ೬೧ ॥

ಗ್ರಾಮಪಾ ಬಹವೋ ಭೂಪಾ ದೇಶೇದೇಶೇ ಬಭೂವಿರೇ ।
ಮಂಡಲೀಕಪದಂ ತತ್ರ ಕ್ಷಯಂ ಜಾತಂ ಮಹೀತಲೇ　　॥ ೬೨ ॥

ತ್ರಿಂಶದಬ್ದಮತೋ ಜಾತಂ ಗ್ರಾಮೇಗ್ರಾಮೇ ನೃಪೇನೃಪೇ ।
ತದಾ ತು ಸಕಲಾ ದೇವಾಃ ಕೃಷ್ಣಚೈತನ್ಯಮಾಯಯುಃ　　॥ ೬೩ ॥

---

೫೯. ಈ ಮಹಾಮದನ ಅನಂತರ ಇವನ ಮಗನಾದ ಮಹಾಮತ್ಸ್ಯನೆಂಬುವನು ತನ್ನ ತಂದೆಗೆ ಸಮಾನವಾಗಿ ಐದು ವರ್ಷಗಳಕಾಲ ರಾಜ್ಯವಾಳಿದನು.

೬೦. ತಾಲನನ ವಂಶದಲ್ಲಿ ಹುಟ್ಟಿದ ದುಷ್ಟನಾದ ಈ ಮಹಾಮತ್ಸ್ಯನು ಮರಾಠೆಯವರಿಂದ ಕೊಲ್ಲಲ್ಪಟ್ಟನು. ಆಗ ದೆಹಲೀ ಪಟ್ಟಣವು ಹತ್ತು ವರ್ಷಗಳ ಕಾಲ ಮಾಧವರಾಯನೆಂಬುವನ ಆಳ್ವಿಕೆಯಲ್ಲಿದ್ದಿತು

೬೧. ಬಳಿಕ ಮ್ಲೇಚ್ಛನಾದ ಆಲೋಮ (ಷಅಲಮ) ನು ರಾಜನೆನಿಸಿದನು. ಆಗ ದೇಶದಲ್ಲಿದ್ದ ಪ್ರಮುಖರನೇಕರು ಸ್ವತಂತ್ರವಾಗಿ ಬೇರೆ ಬೇರೆ ರಾಜ್ಯಗಳನ್ನು ಕಟ್ಟಿದರು.

೬೨ ಅಲ್ಲಿ ಅನೇಕ ದೇಶದೇಶಗಳೂ ಅನೇಕ ಚಿಕ್ಕರಾಜರುಗಳೂ ಮತ್ತು ಪಾಳೆಯಗಾರರೂ ಏರ್ಪಟ್ಟರು. ಹೀಗಾಗಿ ಚಕ್ರವರ್ತಿ ಎಂಬ ಹೆಸರೇ ಇಲ್ಲದಂತಾಯಿತು.

೬೩. ಹೀಗೆ ಮೂವತ್ತುವರ್ಷ ಕಳೆಯಲು ಅಷ್ಟರೊಳಗೆ ಪ್ರತಿಯೊಂದು ಗ್ರಾಮದಲ್ಲಿಯೂ ಮತ್ತು ರಾಜ್ಯದಲ್ಲಿಯೂ ಇದ್ದ ದೇವತೆಗಳೆಲ್ಲಾ ಕೃಷ್ಣಚೈತನ್ಯನ ಹತ್ತಿರಕ್ಕೆ ಹೋಗಿ ದೂರಿದರು.

ಯಜ್ಞಾಂಶಶ್ಚ ಹರಿಃ ಸಾಕ್ಷಾಜ್ಜ್ಞಾತ್ವಾ ದುಃಖಂ ಮಹೀತಲೇ ।
ಮುಹೂರ್ತಂ ಧ್ಯಾನಮಾಗಮ್ಯ ದೇವಾನ್‌ವಚನಮಬ್ರವೀತ್ ॥ ೬೪ ॥

ಪುರಾ ತು ರಾಘವೋ ಧೀಮಾಞ್ಜಿತ್ವಾ ರಾವಣರಾಕ್ಷಸಂ ।
ಕಪೀನುಜ್ಜೀವಯಾಮಾಸ ಸುಧಾವರ್ಷೈಸ್ಸಮಂತತಃ ॥ ೬೫ ॥

ವಿಕಟೋ ವೃಜಿಲೋ ಜಾಲೋ ವರಲೀನೋ ಹಿ ಸಿಂಹಲಃ ।
ಜವಃಸುಮಾತ್ರಶ್ಚ ತಥಾ ನಾಮ್ನಾ ತೇ ಕ್ಷುದ್ರವಾನರಾಃ ॥ ೬೬ ॥

ರಾಮಚಂದ್ರಂ ವಚಃ ಪ್ರಾಹುರ್ದೇಹಿ ನೋ ವಾಂಛಿತಂ ಪ್ರಭೋ ।
ರಾಮೋ ದಾಶರಥಿಃ ಶ್ರೀಮಾನ್‌ಜ್ಞಾತ್ವಾ ತೇಷಾಂ ಮನೋರಥಂ ॥ ೬೭ ॥

ದೇವಾಂಗನೋದ್ಭವಾಃ ಕನ್ಯಾ ರಾವಣಾಲ್ಲೋಕರಾವಣಾತ್ ।
ದತ್ವಾ ತೇಭ್ಯೋ ಹರಿಸ್ಸಾಕ್ಷಾದ್ವಚನಂ ಪ್ರಾಹ ಹರ್ಷಿತಃ ॥ ೬೮ ॥

---

೬೪ ಸಾಕ್ಷಾತ್ ವಿಷ್ಣುಸ್ವರೂಪನಾದ ಯಜ್ಞಾಂಶನು ಆಗ ಭೂಮಂಡಲದಲ್ಲಿ ದೇವತೆಗಳಿಗೆ ಉಂಟಾಗಿರುವ ದುಃಖವನ್ನು ತಿಳಿದು ಕ್ಷಣಕಾಲ ಯೋಚಿಸಿ ದೇವತೆಗಳನ್ನು ಕುರಿತು ಹೀಗೆಂದನು.

೬೫. "ಎಲೈ ದೇವತೆಗಳಿರಾ! ಹಿಂದೆ ಬುದ್ಧಿಶಾಲಿಯಾದ ರಾಘವನು ರಾಕ್ಷಸನಾದ ರಾವಣನನ್ನು ಕಪಿಗಳ ಸಹಾಯದಿಂದ ಜಯಿಸಿದ ಮೇಲೆ ಮೃತರಾಗಿದ್ದ ಕಪಿಗಳನ್ನೆಲ್ಲಾ ಅಮೃತವೃಷ್ಟಿಯಿಂದ ಬದುಕಿಸಿದನು.

೬೬ ಆಗ ವಿಕಟ, ವೃಜಿಲ, ಜಾಲ, ವರಲೀನ, ಸಿಂಹಲ, ಜಾವ, ಸುಮಾತ್ರ ಎಂದು ಹೆಸರುಳ್ಳ ಸಣ್ಣ ಕಪಿಗಳು ರಾಮಚಂದ್ರನನ್ನು ಕುರಿತು "ಎಲೈ ಸ್ವಾಮಿಯೇ! ನಮ್ಮ ಮನೋಭೀಷ್ಟವನ್ನು ಕರುಣಿಸು" ಎಂದು ಬೇಡಿದುವು

೬೭-೬೮. ಆಗ ದಶರಥನ ಮಗನಾದ ಶ್ರೀರಾಮಚಂದ್ರನು ಆ ಕಪಿಗಳ ಮನೋರಥವನ್ನು ತಿಳಿದುಕೊಂಡು ಲೋಕಭಯಂಕರನಾದ ರಾವಣಾಸುರನಿಂದ ದೇವತಾಸ್ತ್ರೀಯರಲ್ಲಿ ಜನಿಸಿದ್ದ ಕನ್ನೆಯರನ್ನು ಆ ಕಪಿಗಳಿಗೆ ಕೊಟ್ಟು ಅವರನ್ನು ಕುರಿತು ಸಂತೋಷದಿಂದ ಇಂತೆಂದನು.

ಭವನ್ನಾವನ್ನಾ ಚ ಯೇ ದ್ವೀಪಾ ಜಾಲಂಧರವಿನಿರ್ಮಿತಾಃ ।
ತೇಷು ರಾಜ್ಞೋ ಭವಿಷ್ಯಂತಿ ಭವಂತೋ ಹಿತಕಾರಿಣಃ ॥ ೬೯ ॥

ನಂದಿನ್ಯಾ ಗೋಶ್ಚ ರುಂಡಾದ್ವೈ ಜಾತಾ ಮ್ಲೇಚ್ಛಾ ಭಯಾನಕಾಃ ।
ಗುರುಂಡಾ ಜಾತಯಸ್ತೇಷಾಂ ತಾಸ್ತು ತೇಷು ಸದಾ ಸ್ಥಿತಾಃ ॥ ೭೦ ॥

ಜಿತ್ವಾ ತಾಂಶ್ಚ ಗುರುಂಡಾನ್ವೈ ಕುರುಧ್ವಂ ರಾಜ್ಯಮುತ್ತಮಂ ।
ಇತಿ ಶ್ರುತ್ವಾ ಹರಿಂ ನತ್ವಾ ದ್ವೀಪೇಷು ಪ್ರಯಯುರ್ಮುದಾ ॥ ೭೧ ॥

ವಿಕಟಾನ್ವಯಸಂಭೂತಾ ಗುರುಂಡಾ ವಾನರಾನನಾಃ ।
ವಾಣಿಜ್ಯಾರ್ಥಮಿಹಾಯಾತಾ ಗೌರುಂಡಾ ಬೌದ್ಧಮಾರ್ಗಿಣಃ ॥ ೭೨ ॥

ಈಶಪುತ್ರಮತೇ ಸಂಸ್ಥಾಸ್ತೇಷಾಂ ಹೃದಯಮುತ್ತಮಂ ।
ಸತ್ಯವ್ರತಂ ಕಾಮಜಿತಮಕ್ರೋಧಂ ಸೂರ್ಯತತ್ಪರಂ ॥ ೭೩ ॥

---

೬೯. “ಎಲೈ ಕಪಿಗಳಿರಾ! ಜಾಲಂಧರನು ನಿಮ್ಮ ಹೆಸರಿನಿಂದ ನಿರ್ಮಿಸಿರುವ ದ್ವೀಪಗಳಲ್ಲಿ ನೀವು ಮುಂದೆ ರಾಜರಾಗಿ ಜನಿಸಿ ಪ್ರಜೆಗಳಿಗೆ ಹಿತವನ್ನು ಉಂಟು ಮಾಡುವಿರಿ.”

೭೦ “ನಂದಿನೀಧೇನುವಿನ ತಲೆಯಿಂದ ಜನಿಸಿದ ಭಯಂಕರರಾದ ಗುರುಂಡ ಎಂಬ ಜಾತಿಯ ಮ್ಲೇಚ್ಛರು ಯಾವಾಗಲೂ ಆ ದ್ವೀಪಗಳಲ್ಲಿ ವಾಸಮಾಡುವರು.”

೭೧. “ನೀವು ಆ ಗುರುಂಡಮ್ಲೇಚ್ಛರನ್ನು ಜಯಿಸಿ ಆ ದ್ವೀಪಗಳಲ್ಲಿ ಉತ್ತಮ ರೀತಿಯಿಂದ ರಾಜ್ಯಭಾರಮಾಡಿರಿ” ಎಂದು ಹೇಳಲು ಆ ಕಪಿಗಳು ಆಗ ಮಹಾವಿಷ್ಣು ಸ್ವರೂಪನಾದ ಆ ರಾಮಚಂದ್ರನಿಗೆ ನಮಸ್ಕಾರಮಾಡಿ ಸಂತೋಷದಿಂದ ಕೂಡಿ ಆ ಏಳು ದ್ವೀಪಗಳಿಗೂ ಹೋದರು.

೭೨. ಅದೇರೀತಿ ಆ ಕಪಿಗಳು ವಿಕಟವಂಶದಲ್ಲಿ ಹುಟ್ಟಿ ಕಪಿಯಂತೆ ಮುಖ ವುಳ್ಳವರಾಗಿ ಬೌದ್ಧಮಾರ್ಗವನ್ನವಲಂಬಿಸಿ ಗುರುಂಡರು ಎಂಬ ಹೆಸರಿನಿಂದ ವ್ಯಾಪಾರ ಕ್ಕೋಸ್ಕರ ಇಲ್ಲಿಗೆ ಬಂದಿರುವರು.

೭೩-೭೪. ಎಲೈ ದೇವತೆಗಳೇ! ಈಶ್ವಪುತ್ರ ಮತಾನುಯಾಯಿಗಳೂ, ಸತ್ಯ ವ್ರತರೂ, ಮನ್ಮಥನನ್ನು ಜಯಿಸಿರುವವರೂ, ಕ್ರೋಧರಹಿತರೂ, ಸೂರ್ಯಾಸಕ್ತರೂ

ಯೂಯಂ ತತ್ರೋಪ್ಯ ಕಾರ್ಯಂ ಚ ನೃಣಾಂ ಕುರುತ ಮಾಚಿರಂ ।
ಇತಿ ಶ್ರುತ್ವಾ ತು ತೇ ದೇವಾಃ ಕುರ್ಯುರಾರ್ಚಿಕಮಾದರಾತ್ ॥ ೭೪ ॥

ನಗರ್ಯಾಂ ಕಲಿಕಾತಾಯಾಂ ಸ್ಥಾಪಯಾಮಾಸುರುದ್ಯತಾಃ ।
ವಿಕಟೇ ಪಶ್ಚಿಮೇ ದ್ವೀಪೇ ತತ್ಪತ್ನೀ ವಿಕಟಾವತೀ ॥ ೭೫ ॥

ಅಷ್ಟಕೌಶಲಮಾರ್ಗೇಣ ರಾಜಮಂತ್ರಂ ಚಕಾರ ಹ ।
ತತ್ಪತಿಸ್ತು ಪುಲೋಮಾರ್ಚಿಃ ಕಲಿಕಾತಾಂ ಪುರೀಂ ಸ್ಥಿತಃ ॥ ೭೬ ॥

ವಿಕ್ರಮಸ್ಯ ಗತೇ ರಾಜ್ಯೇ ಶತಮಷ್ಟಾದಶಂ ಕಲೌ ।
ಚತ್ವಾರಿಂಶಂ ತಥಾಬ್ದಂ ಚ ತದಾ ರಾಜಾ ಬಭೂವಹ ॥ ೭೭ ॥

---

ಆದವರು ಆ ಗುರುಂಡರ ಎಂಬುದನ್ನು ತಿಳಿದು ಅಲ್ಲಿಯೇ ವಾಸಮಾಡುತ್ತಾ ಮನುಷ್ಯರ ಕಾರ್ಯವನ್ನು ಜಾಗರೂಕತೆಯಾಗಿ ನಡೆಸುವರಾಗಿರಿ" ಎಂದು ದೇವತೆಗಳಿಗೆ ಹೇಳಿದನು. ಇದನ್ನು ಕೇಳಿ ಆ ದೇವತೆಗಳೆಲ್ಲರೂ ಆದರದಿಂದ ಈಶಪುತ್ರನನ್ನು ಪೂಜಿಸಿದರು.

೭೫. ಅನಂತರ ಕಲಕತ್ತಾ ಪಟ್ಟಣದಲ್ಲಿ ಈಶಪುತ್ರನನ್ನು ಪ್ರತಿಷ್ಠೆಮಾಡಿಸಿದರು. ಪಶ್ಚಿಮ ದಿಕ್ಕಿನಲ್ಲಿರುವ ವಿಕಟದ್ವೀಪದಲ್ಲಿ ವಿಕಟನೆಂಬ ವಾನರಾಂಶ ಸಂಭೂತನಾದ ರಾಜನು ಆಳುತ್ತಿದ್ದನು. ಇವನಿಗೆ ವಿಕಟಾವತಿಯೆಂಬ ಪತ್ನಿ ಇದ್ದಳು.

೭೬. ಇವಳು ಎಂಟುವಿಧವಾದ ಕುಶಲಮಾರ್ಗಗಳಿಂದಲೂ ರಾಜ್ಯತಂತ್ರವನ್ನು ನಡೆಸುತ್ತಿದ್ದಳು. ಇವಳ ಪತಿಯಾದ ಪುಲೋಮಾರ್ಚಿ ಎಂಬವನು ಕಲಕತ್ತಾ ನಗರದಲ್ಲಿ ಇದ್ದನು.

೭೭. ಕಲಿಯುಗದಲ್ಲಿ ವಿಕ್ರಮಾರ್ಕರಾಜನು ರಾಜ್ಯವಾಳಿದ ಸಾವಿರದ ಎಂಟುನೂರನಲವತ್ತು ವರ್ಷಗಳು ಕಳೆದ ಮೇಲೆ ಈ ಪುಲೋಮಾರ್ಚಿಯು ರಾಜ್ಯವಾಳಿದನು.

ತದನ್ವಯೇ ಸಪ್ತನೃಪಾ ಗುರುಂಡಾಶ್ಚ ಬಭೂವಿರೇ ।
ಚತುಃಷಷ್ಟಿಮಿತಂ ವರ್ಷಂ ರಾಜ್ಯಂ ಕೃತ್ವಾ ಲಯಂ ಗತಾಃ ॥ ೭೮ ॥

ಗುರುಂಡೇ ಚಾಷ್ಟಮೇ ಭೂಪೇ ಪ್ರಾಪ್ತೇ ನ್ಯಾಯೇನ ಶಾಸತಿ ।
ಕಲಿಪಕ್ಷೋ ಬಲಿರ್ದೈತ್ಯೋ ಮುರಂ ನಾಮ ಮಹಾಸುರಂ ॥ ೭೯ ॥

ಆಹೂಯ ಪ್ರೇಷಯಾಮಾಸ ದೇವದೇಶೇ ಮಹೋತ್ತಮೇ ।
ಸ ಮುರೋ ವಾರ್ಡಿಲಂ ಭೂಪಂ ವಶೀಕೃತ್ಯ ಹೃದಿ ಸ್ಥಿತಃ ॥ ೮೦ ॥

ಆರ್ಯಧರ್ಮವಿನಾಶಾಯ ತಸ್ಯ ಬುದ್ಧಿಂ ಚಕಾರ ಹ ।
ಮೂರ್ತಿಸಂಸ್ಥಾಸ್ತದಾ ದೇವಾ ಗತ್ವಾ ಯಜ್ಞಾಂಶಯೋಗಿನಂ ॥ ೮೧ ॥

---

೭೮. ಗುರುಂಡವಂಶಸಂಭೂತನಾದ ಈ ಪುಲೋಮಾರ್ಚಿಯ ವಂಶದಲ್ಲಿ ಏಳುಜನ ರಾಜರುಗಳು ಹುಟ್ಟಿ ಆರವತ್ತುನಾಲ್ಕು ವರ್ಷಗಳಕಾಲ ರಾಜ್ಯವಾಳಿ ಕೊನೆಗೆ ಎಲ್ಲರೂ ನಾಶವಾದರು

೭೯. ಎಂಟನೆಯ ರಾಜನಾದ ಗುರುಂಡನೆಂಬುವನು ಪಟ್ಟಕ್ಕೆ ಬಂದು ನ್ಯಾಯ ದಿಂದ ರಾಜ್ಯವನ್ನು ಆಳುತ್ತಿರಲು ಆಗ ಕಲಿಪಕ್ಷದವನಾದ ಬಲಿದೈತ್ಯನು ಒಂದು ಉಪಾಯ ಮಾಡಿದನು.

೮೦. ಮುರನೆಂಬ ರಾಕ್ಷಸಶ್ರೇಷ್ಠನನ್ನು ಕರೆಯಿಸಿ ಅವನನ್ನು ಶ್ರೇಷ್ಠವಾದ ದೇವತೆಗಳಿದ್ದ ಈ ದೇಶಕ್ಕೆ ಕಳುಹಿಸಿದನು ಈ ಮುರರಾಕ್ಷಸನು ಹೊರಟು ಅಲ್ಲಿದ್ದ ವಾರ್ಡಿಲನೆಂಬ ರಾಜನನ್ನು ವಶಪಡಿಸಿಕೊಂಡು ಅವನ ಮನಸ್ಸನ್ನು ಕೆಡಿಸಿ ಆರ್ಯ ಧರ್ಮವನ್ನು ನಾಶಮಾಡುವಂತೆ ಅವನ ಬುದ್ಧಿಯನ್ನು ಬದಲಾಯಿಸಿದನು.

೮೧. ಆಗ ವಿಗ್ರಹಗಳಲ್ಲಿ ನೆಲಸಿದ್ದ ದೇವತೆಗಳೆಲ್ಲರೂ ಯೋಗನಿರತನಾಗಿದ್ದ ಯಜ್ಞಾಂಶನ ಬಳಿಗೆ ಹೋಗಿ ಅವನಿಗೆ ನಮಸ್ಕರಿಸಿ ಮುರನೆಂಬ ರಾಕ್ಷಸನು ಮಾಡು ತ್ತಿರುವ ಹಾವಳಿಯನ್ನು ತಿಳಿಸಿದರು.

ನಮಸ್ಕೃತ್ವಾಬ್ರುವನ್ಸರ್ವೇ ಯಥಾ ಪ್ರಾಪ್ತೋ ಮುರೋऽಸುರಃ ।
ಜ್ಞಾತ್ವಾ ಶಶಾಪ ಕೃಷ್ಣಾಂಶೋ ಗುರುಂಡಾನ್‌ಬೌದ್ಧಮಾರ್ಗಿಣಃ ॥ ೮೨ ॥

ಕ್ಷಯಂ ಯಾಸ್ಯಂತಿ ತೇ ಸರ್ವೇ ಯೇ ಮುರಸ್ಯ ವಶಂ ಗತಾಃ ।
ಇತ್ಯುಕ್ತೇ ವಚನೇ ತಸ್ಮಿನ್ಗುರುಂಡಾಃ ಕಾಲನೋದಿತಾಃ ॥ ೮೩ ॥

ಸ್ವಸೈನ್ಯೈಶ್ಚ ಕ್ಷಯಂ ಜಗ್ಮುರ್ವರ್ಷಮಾತ್ರಾಂರೇ ಖಲಾಃ ।
ಸರ್ವೇ ತ್ರಿಂಶತ್ಸಹಸ್ರಾಶ್ಚ ಪ್ರಯುಯುರ್ಯಮಮಂದಿರೇ ॥ ೮೪ ॥

ವಾಗ್ದಂಡೈಸ್ಸ ಚ ಭೂಪಾಲೋ ವಾರ್ಡಿಲೋ ನಾಶಮಾಪ್ತವಾನ್ ।
ಗುರುಂಡೋ ನವಮಃ ಪ್ರಾಪ್ತೋ ಭೇಕಲೋ ನಾಮ ವೀರ್ಯವಾನ್॥೮೫॥

ನ್ಯಾಯೇನ ಕೃತವಾನ್ರಾಜ್ಯಂ ದ್ವಾದಶಾಬ್ದಂ ಪ್ರಯತ್ನತಃ ।
ಆರ್ಯದೇಶೇ ಚ ತದ್ರಾಜ್ಯಂ ಬಭೂವ ನ್ಯಾಯಶಾಸಿತಂ ॥ ೮೬ ॥

---

೮೨. ಆಗ ಯಜ್ಞಾಂಶನು ಈ ವಿಷಯವನ್ನು ತಿಳಿದು ಈ ಮುರರಾಕ್ಷಸನ ಪಕ್ಷವಹಿಸುವ ಬೌದ್ಧಮಾರ್ಗಾವಲಂಬಿಗಳಾದ ಗುರುಂಡರಾಜರೆಲ್ಲರೂ ನಾಶಹೊಂದಲಿ ಎಂದು ಶಾಪಕೊಟ್ಟನು.

೮೩-೮೪. ಯಜ್ಞಾಂಶನು ಹೀಗೆ ಶಪಿಸಲು ಗುರುಂಡವಂಶಸಂಭೂತರಾದ ರಾಜರೆಲ್ಲರೂ ಕಾಲಪ್ರೇರಿತರಾಗಿ ತಮ್ಮ ತಮ್ಮ ಸೈನಿಕರೊಡನೆಯೇ ಜಗಳವಾಡಿ ಕೊಂಡು ಒಂದುವರ್ಷದೊಳಗಾಗಿ ಮೂವತ್ತುಸಾವಿರ ಜನಗಳೂ ಸಹ ಯಮ ಲೋಕಕ್ಕೆ ತೆರಳಿದರು.

೮೫. ವಾರ್ಡಿಲರಾಜನೂ ಸಹ ಈ ಶಾಪದಿಂದಲೇ ನಾಶಹೊಂದಿದನು. ಅನಂತರ ಗುರುಂಡವಂಶೋತ್ಪನ್ನನೂ ಪರಾಕ್ರಮಶಾಲಿಯೂ ಆದ ಭೇಕಲನೆಂಬ ಹೆಸರುಳ್ಳ ಒಂಭತ್ತನೆಯ ರಾಜನು ಪಟ್ಟಕ್ಕೆ ಬಂದನು.

೮೬. ಇವನು ಆರ್ಯದೇಶದಲ್ಲಿ ಹನ್ನೆರಡು ವರ್ಷಗಳ ಕಾಲ ಪ್ರಯತ್ನ ಪೂರ್ವಕವಾಗಿ ರಾಜ್ಯಭಾರಮಾಡಿದನು. ಇವನ ಕಾಲದಲ್ಲಿ ರಾಜ್ಯವೆಲ್ಲವೂ ನ್ಯಾಯಾ ನುವರ್ತನದಿಂದ ಕೂಡಿದ್ದಿತು.

ಲಾರ್ಡಲೋ ನಾಮ ವಿಖ್ಯಾತೋ ಗುರುಂಡೋ ದಶಮೋಹಿತಃ ।
ದ್ವಾತ್ರಿಂಶಾಬ್ದಂ ಚ ತದ್ರಾಜ್ಯಂ ಕೃತಂ ತೇನೈವ ಧರ್ಮಿಣಾ ॥ ೮೭ ॥

ಲಾರ್ಡಲೇ ಸ್ವರ್ಗತೇ ಪ್ರಾಪ್ತೇ ಮಕರಂದಕುಲೋದ್ಭವಾಃ ।
ಆರ್ಯಾಃ ಪ್ರಾಪ್ತಾಸ್ತದಾ ಮೌನಾ ಹಿಮತುಂಗನಿವಾಸಿನಃ ॥ ೮೮ ॥

ಭಭ್ರುವರ್ಣಾಃ ಸೂಕ್ಷ್ಮನಸೋ ವರ್ತುಲಾ ದೀರ್ಘಮಸ್ತಕಾಃ ।
ಏವಂ ಲಕ್ಷಾಶ್ಚ ಸಂಪ್ರಾಪ್ತಾ ದೇಹಲ್ಯಾಂ ಬೌದ್ಧಮಾರ್ಗಿಣಃ ॥ ೮೯ ॥

ಆರ್ಜಿಕೋ ನಾಮ ವೈ ರಾಜಾ ತೇಷಾಂ ತತ್ರ ಬಭೂವ ಹ ।
ತಸ್ಯ ಪುತ್ರೋ ದೇವಕರ್ಣೋ ಗಂಗೋತ್ರಗಿರಿಮೂರ್ಧನಿ ॥ ೯೦ ॥

---

೮೭. ಇವನನಂತರ ಹತ್ತನೇ ಗುರುಂಡ ರಾಜನಾದ (ಎರಡನೇ) ಲಾರ್ಡಿಲ ನೆಂಬುವನು ಪ್ರಸಿದ್ಧನಾಗಿ ಮೂವತ್ತೆರಡು ವರ್ಷಗಳಕಾಲ ಧರ್ಮದಿಂದ ರಾಜ್ಯ ವಾಳಿದನು.

೮೮. ಈತನು ಸ್ವರ್ಗಸ್ಥನಾದ ಮೇಲೆ ಹಿಮತುಂಗಪರ್ವತದಲ್ಲಿ ವಾಸಿಸು ತ್ತಿದ್ದ ಮಕರಂದನ ಕುಲದಲ್ಲಿ ಜನಿಸಿದ ಮೌನರೆಂಬ ಆರ್ಯರು ಈ ದೇಶಕ್ಕೆ ಬಂದರು

೮೯. ಇವರು ಕಂದುಬಣ್ಣದಿಂದ ಕೂಡಿ, ಸೂಕ್ಷ್ಮವಾದ ಮೂಗು, ದುಂಡಗೂ ಉದ್ದವಾಗಿಯೂ ಇರುವ ಕತ್ತು, ಇವು ಉಳ್ಳವರಾಗಿ ಇದ್ದರು. ಈ ರೀತಿಯಾದ ಲಕ್ಷಣಗಳಿಂದ ಕೂಡಿ ಬೌದ್ಧಮಾರ್ಗಾವಲಂಬಿಗಳಾದ ಒಂದುಲಕ್ಷ ಜನಗಳು ದೆಹಲಿಗೆ ಬಂದರು.

೯೦. ಆ ದೆಹಲಿಯಲ್ಲಿ ಆರ್ಜಿಕನೆಂಬುವನು ಇವರಿಗೆ ರಾಜನಾಗಿದ್ದನು ಇವನ ಮಗನಾದ ದೇವಕರ್ಣನೆಂಬುವನು ರಾಜ್ಯಾಭಿವೃದ್ಧಿಗೋಸ್ಕರ ಗಂಗೋತ್ರವೆಂಬ ಬೆಟ್ಟದ ಶಿಖರದಲ್ಲಿ ಗಂಗಾದೇವಿಯನ್ನು ಕುರಿತು ಹನ್ನೆರಡು ವರ್ಷಕಾಲ ಘೋರವಾಗಿ ತಪಸ್ಸುಮಾಡಿದನು.

ದ್ವಾದಶಾಬ್ದಂ ತಪೋ ಘೋರಂ ತೇಪೇ ರಾಜ್ಯವಿವೃದ್ಧಯೇ ।
ತದಾ ಭಗವತೀ ಗಂಗಾ ತಪಸಾ ತಸ್ಯ ಧೀಮತಃ ॥ ೯೧ ॥

ಸ್ವರೂಪಂ ಸ್ವೇಚ್ಛಯಾ ಪ್ರಾಪ್ಯ ಬ್ರಹ್ಮಲೋಕಂ ಜಗಾಮ ಹ ।
ಕುಬೇರಶ್ಚ ತದಾಗತ್ಯ ದತ್ವಾ ತಸ್ಮೈ ಮಹತ್ಪದಂ ॥ ೯೨ ॥

ಆರ್ಯಾಣಾಂ ಮಂಡಲೀಕಂ ಚ ತತ್ರೈವಾಂತರಧೀಯತ ।
ಮಂಡಲೀಕೋ ದೇವಕರ್ಣೋ ಬಭೂವ ಜನಪಾಲಕಃ ॥ ೯೩ ॥

ಷಷ್ಟ್ಯಬ್ದಂ ಚ ಕೃತಂ ರಾಜ್ಯಂ ತೇನ ರಾಜ್ಞಾ ಮಹೀತಲೇ ।
ತದನ್ವಯೇsಷ್ಟ ಭೂಪಾಶ್ಚ ಬಭೂವುರ್ದೇವಪೂಜಕಾಃ ॥ ೯೪ ॥

ದ್ವಿಶತಾಬ್ದಂ ಪದಂ ಕೃತ್ವಾ ಸ್ವರ್ಗಲೋಕಮುಪಾಯಯುಃ ।
ಏಕಾದಶಶ್ಚ ಯೋ ಮೌನಃ ಪನ್ನಗಾರಿರಿತಿ ಶ್ರುತಃ ॥ ೯೫ ॥

---

೯೧. ಆಗ ಪೂಜ್ಯಳಾದ ಗಂಗಾದೇವಿಯು ಬುದ್ಧಿಶಾಲಿಯಾದ ಅವನ ತಪಸ್ಸಿಗೆ ಮೆಚ್ಚಿ ಅವನಿಗೆ ಪ್ರತ್ಯಕ್ಷಳಾಗಿ ಬೇಕಾದ ವರವನ್ನು ಕೊಟ್ಟು ಬ್ರಹ್ಮಲೋಕಕ್ಕೆ ಹೋದಳು.

೯೨. ಆಗ ಕುಬೇರನು ಅಲ್ಲಿಗೆ ಬಂದು ಅವನಿಗೆ ದೊಡ್ಡ ಪದವಿಯನ್ನು ಕೊಟ್ಟನು.

೯೩. ಮತ್ತು ಇವನನ್ನು ಆರ್ಯರಿಗೆ ಮಂಡಲೀಕನನ್ನಾಗಿ ಮಾಡಿ ಅದೃಶ್ಯನಾದನು. ಅದುವರೆಗೆ ರಾಜನಾಗಿದ್ದ ದೇವಕರ್ಣನು ಅನಂತರ ಮಂಡಲೀಕನಾದನು.

೯೪. ಇವನು ಭೂಮಂಡಲದಲ್ಲಿ ಅರವತ್ತು ವರ್ಷಗಳಕಾಲ ರಾಜ್ಯವಾಳಿದನು. ಇವನ ಅನಂತರ ಅದೇ ವಂಶದಲ್ಲಿ ಎಂಟುಜನ ದೇವಪೂಜಾನಿರತರಾದ ರಾಜರು ಜನಿಸಿದರು.

೯೫-೯೬. ಇವರೆಲ್ಲರೂ ಒಟ್ಟು ಇನ್ನೂರು ವರ್ಷಗಳಕಾಲ ರಾಜ್ಯವಾಳಿ ಸ್ವರ್ಗಲೋಕವನ್ನು ಸೇರಿದರು. ಅನಂತರ ಹನ್ನೊಂದನೆಯವನಾದ ಪನ್ನಗಾರಿ ಎಂಬ

ಚತ್ವಾರಿಂಶಚ್ಚ ವರ್ಷಾಣಿ ರಾಜ್ಯಂ ಕೃತ್ವಾ ಪ್ರಯತ್ನತಃ ।
ಸ್ವರ್ಗಲೋಕಂ ಗತೋ ರಾಜಾ ಪನ್ನಗೈರ್ಮರಣಂ ಗತಃ ॥ ೯೬ ॥

ಏವಂ ಚ ಮೌನಜಾತೀಯೈಃ ಕೃತಂ ರಾಜ್ಯಂ ಮಹೀತಲೇ ॥ ೯೭ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಪ್ರತಿಸರ್ಗಪರ್ವಣಿ ಚತುರ್ಥಖಂಡೇ
ಕಲಿಯುಗೀಯೇತಿಹಾಸಸಮುಚ್ಚಯೇ ಗುರುಂಡ ಮೌನರಾಜ್ಯ
ವರ್ಣನಂ ನಾಮ ದ್ವಾವಿಂಶೋಽಧ್ಯಾಯಃ.



---

ಪ್ರಸಿದ್ಧನಾದ ರಾಜನು ನಲವತ್ತು ವರ್ಷಗಳಕಾಲ ಬಹು ಪ್ರಯತ್ನದಿಂದ ಆಳಿ ಅನಂತರ ನಾಗವಂಶೀಯರಿಂದ ಮರಣಹೊಂದಿ ಸ್ವರ್ಗಲೋಕವನ್ನು ಪಡೆದನು.

೯೭. ಮೌನವಂಶದಲ್ಲಿ ಹುಟ್ಟಿದ ರಾಜರುಗಳು ಭೂಮಂಡಲದಲ್ಲಿ ಈರೀತಿ ರಾಜ್ಯವಾಳಿದರು ಎಂದು ಸೂತರು ಶೌನಕನಿಗೆ ಹೇಳಿದರು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಪ್ರತಿಸರ್ಗಪರ್ವದ ನಾಲ್ಕನೆಯ ಖಂಡದಲ್ಲಿ
ಗುರುಂಡ ಮೌನ ರಾಜ್ಯವರ್ಣನೆಯೆಂಬ ಇಪ್ಪತ್ತೆರಡನೆಯ
ಅಧ್ಯಾಯ ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಪ್ರತಿಸರ್ಗಪರ್ವಣಿ ಚತುರ್ಥಖಂಡೇ
## ತ್ರಯೋವಿಂಶೋಽಧ್ಯಾಯಃ

---

॥ ಸೂತ ಉವಾಚ ॥

ವೈಕ್ರಮೇ ರಾಜ್ಯವಿಗತೇ ಚತುಃಷಷ್ಟ್ಯುತ್ತರಂ ಮುನೇ ।
ದ್ವಾವಿಂಶದಬ್ದಶತಕಂ ಭೂತನಂದಿಸ್ತದಾ ನೃಪಃ ॥ ೧ ॥

ಕುಬೇರಯಕ್ಷಕಾನ್ಮೌನಾನ್ ಧನಧಾನ್ಯಸಮನ್ವಿತಾನ್ ।
ಸಾರ್ಧಲಕ್ಷಾನ್ನಲೈರ್ಘೋರೈರ್ಜಿತ್ವಾ ತಾನ್ಯುದ್ಧಕಾರಿಣಃ ॥ ೨ ॥

ಕಿಲ್ಕಿಲಾಯಾಂ ಸ್ವಯಂ ರಾಜ್ಯಂ ನಾಗವಂಶೈಶ್ಚಕಾರ ಹ ।
ಆಗ್ನೇಯ್ಯಾಂ ದಿಶಿ ವಿಖ್ಯಾತಾ ಪುಂಡರೀಕೇಣ ನಿರ್ಮಿತಾ ॥ ೩ ॥

---

### ಇಪ್ಪತ್ತಮೂರನೆಯ ಅಧ್ಯಾಯ

೧. ಸೂತಮುನಿವರ್ಯನು ಹೇಳುತ್ತಾನೆ—ವಿಕ್ರಮಾರ್ಕಮಹಾರಾಜನು ರಾಜ್ಯವಾಳಿ ಎರಡುಸಾವಿರದ ಇನ್ನೂರರವತ್ತನಾಲ್ಕು ವರ್ಷಗಳು ಕಳೆದ ಮೇಲೆ ಭಾರತ ಭೂಮಿಯಲ್ಲಿ ಭೂತನಂದಿಯೆಂಬ ರಾಜನಿದ್ದನು.

೨. ಇವನು ತನ್ನ ಘೋರವಾದ ಯುದ್ಧಕಲೆಗಳಿಂದ ಕುಬೇರನ ಕಡೆಯ ಯಕ್ಷರನ್ನೂ ಮೌನವಂಶದ ಅರಸರನ್ನೂ ಒಟ್ಟು ಒಂದೂವರೆಲಕ್ಷ ಜನಗಳನ್ನು ಜಯಿಸಿ ಅವರ ಧನಧಾನ್ಯಸಂಪತ್ತನ್ನೆಲ್ಲಾ ಆಕ್ರಮಿಸಿದನು.

೩. ಅನಂತರ ಆಗ್ನೇಯದಿಕ್ಕಿನಲ್ಲಿ ನಾಗಶ್ರೇಷ್ಠನಾದ ಪುಂಡರೀಕನಿಂದ ನಿರ್ಮಿಸಲ್ಪಟ್ಟಿದ್ದ ಕಿಲಕಿಲಾ ಎಂಬ ಪಟ್ಟಣವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ನಾಗವಂಶದ ಅರಸರೊಡನೆಯೂ ಪ್ರಜೆಗಳೊಡನೆಯೂ ಸುಖವಾಗಿ ರಾಜ್ಯವಾಳುತ್ತಿದ್ದನು.

ಪುರೀ ಕಿಲಕಿಲಾ ನಾಮ ತತ್ರ ರಾಜಾ ಬಭೂವ ಹ ।
ಪುಂಡರೀಕಾದಯೋ ನಾಗಾಸ್ತಸ್ಮಿನ್ರಾಜ್ಯಂ ಪ್ರಶಾಸತಿ ॥ ೪ ॥

ಗೇಹೇಗೇಹೇ ಜನೈಸ್ಸರ್ವೈಃ ಪೂಜನೀಯಾ ಬಭೂವಿರೇ ।
ಸ್ವಾಹಾ ಸ್ವಧಾ ವಷಟ್ಕಾರೋ ದೇವಪೂಜಾ ಮಹೀತಲೇ ॥ ೫ ॥

ತ್ಯಕ್ತ್ವಾ ದೇವಾನುಪಾಗಮ್ಯ ಸಂಸ್ಥಿತಾ ಮೇರುಮೂರ್ಧನಿ ।
ಶಕ್ರಾಜ್ಞಯಾ ಕುಬೇರಸ್ತು ಶೂಕಧಾನ್ಯಂ ಸಮಂತತಃ ॥ ೬ ॥

ಯಕ್ಷೈಃ ಷಡಂಶಾನಾದಾಯ ದೇವೇಭ್ಯಃ ಪ್ರದದೌ ಪ್ರಭುಃ ।
ಮಣಿಸ್ವರ್ಣಾದಿವಸ್ತೂನಿ ಮೌನರಾಜ್ಯೇಷು ಯಾನಿ ವೈ ॥ ೭ ॥

ದತ್ತಾನಿ ತಾನಿ ಕೋಶೇಷು ಪುನರ್ದೇವಶ್ಚಕಾರ ಹ ।
ಮಂಡಲೀಕಂ ಪದಂ ತೇನ ಸತ್ಕೃತಂ ಭೂತನಂದಿನಾ ॥ ೮ ॥

---

೪-೫. ಈ ಭೂತನಂದಿಯು ರಾಜ್ಯವಾಳುತ್ತಿದ್ದಾಗ ಅವನ ಪ್ರಜೆಗಳು ಮನೆ ಮನೆಯಲ್ಲಿಯೂ ಪುಂಡರೀಕನೇ ಮೊದಲಾದ ನಾಗರುಗಳನ್ನು ಪೂಜಿಸುತ್ತಿದ್ದರು. ಈ ರಾಜನ ಕಾಲದಲ್ಲಿ ಕೇವಲ ನಾಗಪೂಜೆಯೇ ಮುಖ್ಯವಾಗಿದ್ದುದರಿಂದ ಸ್ವಾಹಾಕಾರ, ಸ್ವಧಾಕಾರ, ವಷಟ್ಕಾರಪೂರ್ವಕವಾಗಿ ದೇವತೆಗಳ ತೃಪ್ತ್ಯರ್ಥವಾಗಿ ಮಾಡುವ ಯಾಗ ಮೊದಲಾದುವುಗಳೆಲ್ಲ ಕಡಿಮೆಯಾದುವು.

೬. ಇದರಿಂದ ಅವುಗಳೆಲ್ಲವೂ ಭೂಮಂಡಲವನ್ನು ಬಿಟ್ಟು ಮೇರುಪರ್ವತ ದಲ್ಲಿ ದೇವತೆಗಳ ಸಮೀಪಕ್ಕೆ ಬಂದು ಸೇರಿದುವು. ಆಗ ಇಂದ್ರನ ಅಪ್ಪಣೆಯಂತೆ ಕುಬೇರನು ಎಲ್ಲ ಕಡೆಯಲ್ಲಿಯೂ ಯಕ್ಷರುಗಳಿಂದ ಅವರು ಬೆಳೆದುದರ ಆರನೆಯ ಒಂದುಭಾಗ ಶೂಕಧಾನ್ಯವನ್ನು (ಹಾರಕ) ತೆಗೆದುಕೊಂಡು ದೇವತೆಗಳಿಗೆ ಕೊಟ್ಟನು.

೭. ಅಲ್ಲದೆ ಮೌನರಾಜ್ಯದಲ್ಲಿ ಇದ್ದ ರತ್ನ, ಮುತ್ತು, ಚಿನ್ನ ಮೊದಲಾದ ಪದಾರ್ಥಗಳೆಲ್ಲವನ್ನೂ ದೇವಪ್ರೀತ್ಯರ್ಥವಾಗಿ ಕೊಟ್ಟುದರಿಂದ ದೇವನ ಅನುಗ್ರಹ ವುಂಟಾಗಿ ಅವು ಇವನ ಭಂಡಾರದಲ್ಲಿ ಮತ್ತೆ ತುಂಬುವಂತಾಯಿತು.

೮. ಇದರಿಂದ ಆ ಭೂತನಂದಿಯು ಮಂಡಲೀಕ (ಚಕ್ರವರ್ತಿ) ಪದವಿಯನ್ನು ಹೊಂದಿ ಪ್ರಸಿದ್ಧನಾಗಿ ರಾಜ್ಯವಾಳಿದನು.

ಶತಾರ್ಧಂ ತು ತತೋ ರಾಜಾ ಶಿಶುನಂದಿರ್ಬಭೂವ ಹ ।
ನಾಗಪೂಜಾಂ ಪುರಸ್ಕೃತ್ಯ ತಿರಸ್ಕೃತ್ಯ ಸುರಾನ್ಭುವಿ ॥ ೯ ॥

ಚಕಾರ ರಾಜ್ಯಂ ವಿಂಶಾಬ್ದಂ ಯಶೋನಂದಿಸ್ತತೋಽನುಜಃ ।
ಭ್ರಾತ್ರಾಸನಂ ಸ್ವಯಂ ಪ್ರಾಪ್ತೋ ನಾಗಪೂಜಾಪರಾಯಣಃ ॥ ೧೦ ॥

ಪಂಚವಿಂಶತಿವರ್ಷಾಣಿ ಸ ಚ ರಾಜ್ಯಮಚೀಕರತ್ ।
ತತಸ್ತತ್ತನಯೋ ರಾಜಾ ಸ ಬಭೂವ ಪ್ರವೀರಕಃ ॥ ೧೧ ॥

ಏಕಾದಶಾಬ್ದಂ ತದ್ರಾಜ್ಯಂ ಕರ್ಮಭೂಮ್ಯಾಂ ಪ್ರಕೀರ್ತಿತಂ ।
ಕದಾಚಿತ್ಸ ಚ ಬಾಹ್ಲೀಕೇ ಸೇನಯಾ ಸಾರ್ಧಮಾಗತಃ ॥ ೧೨ ॥

ತತ್ರ ತೈರಭವದ್ಯುದ್ಧಂ ಪೈಶಾಚೈರ್ಮ್ಲೇಚ್ಛದಾರುಣೈ ।
ಮಾಸಮಾತ್ರಾಂತರೇ ಮ್ಲೇಚ್ಛಾ ಲಕ್ಷಸಂಖ್ಯಾ ಮೃತಿಂ ಗತಾಃ ॥ ೧೩ ॥

---

೯. ಇವನು ಐವತ್ತು ವರ್ಷಗಳಕಾಲ ರಾಜ್ಯವಾಳಿ ಮೃತನಾದನು. ಇವನ ಅನಂತರ ಇವನ ಮಗನಾದ ಶಿಶುನಂದಿಯು ರಾಜನಾದನು. ಇವನೂ ನಾಗಪೂಜೆಯನ್ನೇ ಮುಖ್ಯವಾಗಿ ಆಚರಿಸುತ್ತಾ ಭೂಲೋಕದಲ್ಲಿ ಇತರ ದೇವತಾಪೂಜೆಯ ವಿಚಾರದಲ್ಲಿ ತಿರಸ್ಕಾರಭಾವದಿಂದಿದ್ದನು.

೧೦. ಆತನು ಹೀಗೆ ಇಪ್ಪತ್ತು ವರ್ಷಗಳವರೆಗೆ ರಾಜ್ಯವಾಳಿದನು. ಅನಂತರ ಇವನ ತಮ್ಮನಾದ ಯಶೋನಂದಿಯೆಂಬವನು ನಾಗಪೂಜಾಪರಾಯಣನಾಗಿ ತನ್ನ ಅಣ್ಣನ ಸ್ಥಾನವನ್ನು ಆಕ್ರಮಿಸಿ ರಾಜನಾದನು

೧೧. ಇವನೂ ಇಪ್ಪತ್ತೈದು ವರ್ಷಗಳಕಾಲ ರಾಜ್ಯವಾಳಿದನು. ಅನಂತರ ಇವನ ಮಗನಾದ ಪ್ರವೀರಕನೆಂಬುವನು ರಾಜನಾದನು.

೧೨. ಕರ್ಮಭೂಮಿಯಾದ ಈ ಭಾರತದೇಶದಲ್ಲಿ ಇವನೂ ಹನ್ನೊಂದು ವರ್ಷಗಳಕಾಲ ರಾಜ್ಯವಾಳಿದನು. ಒಂದುಸಲ ಪ್ರವೀರಕನು ತನ್ನ ಸೇನೆಯೊಡನೆ ಬಾಹ್ಲೀಕ ದೇಶಕ್ಕೆ ಹೋದನು.

೧೩. ಅಲ್ಲಿ ಪಿಶಾಚಸ್ವರೂಪರೂ ಭಯಂಕರರೂ ಆದ ಮ್ಲೇಚ್ಛರೊಡನೆ ಒಂದು ತಿಂಗಳಕಾಲ ಘೋರವಾದ ಯುದ್ಧ ಮಾಡಿದನು. ಆ ಪ್ರಕಾರ ನಡೆದ ಯುದ್ಧದಲ್ಲಿ ಮ್ಲೇಚ್ಛರಕಡೆ ಒಂದುಲಕ್ಷ ಜನ ಮೃತರಾದರು.

ತಥಾ ಷಷ್ಟಿಸಹಸ್ರಾಶ್ಚ ನಾಗಭಕ್ತಾ ಲಯಂ ಗತಾಃ ।
ಬಾದಲೋ ನಾಮ ತದ್ರಾಜಾ ರೋಮಜಸ್ಥೋ ಮಹಾಬಲಃ ॥ ೧೪ ॥

ಯಶೋನಂದಿನಮಾಹೂಯ ದದೌ ಜಾಲವತೀಂ ಸುತಾಂ ।
ಗೃಹೀತ್ವಾ ಮ್ಲೇಚ್ಛರಾಜಸ್ಯ ಸುತಾಂ ಗೇಹಮುಪಾಗತಃ ॥ ೧೫ ॥

ಗರ್ಭೋ ಜಾತಸ್ತತಸ್ತಸ್ಯಾಂ ಬಭೂವ ತನಯೋ ಬಲಿ ।
ಬಾಹ್ಲೀಕೋ ನಾಮ ವಿಖ್ಯಾತೋ ನಾಗಪೂಜನತತ್ಪರಃ ॥ ೧೬ ॥

ತದನ್ವಯೇ ನೃಪಾ ಜಾತಾ ಬಾಹ್ಲೀಕಾಶ್ಚ ತ್ರಯೋದಶ ।
ಚತುಶ್ಶತಾನಿ ವರ್ಷಾಣಿ ಕೃತ್ವಾ ರಾಜ್ಯಂ ಮೃತಿಂ ಗತಾಃ ॥ ೧೭ ॥

ಅಯೋಮುಖೇ ಚ ಬಾಹ್ಲೀಕೇ ರಾಜ್ಯಮತ್ರ ಪ್ರಶಾಸತಿ ।
ತದಾ ಪಿತೃಗಣಾಸ್ಸರ್ವೇ ಕೃಷ್ಣಚೈತನ್ಯಮಾಯಯುಃ ॥ ೧೮ ॥

---

೧೪. ನಾಗಭಕ್ತರಕಡೆ ಅರವತ್ತುಸಾವಿರ ಜನ ನಾಶವಾದರು. ಆಗ ಮಹಾಬಲಶಾಲಿಯೂ, ರೋಮಜದೇಶದ ರಾಜನೂ, ಮ್ಲೇಚ್ಛಾಧಿಪತಿಯೂ ಆದ ಬಾದಲನು ಸಂತೋಷದಿಂದ ಒಂದು ಯುಕ್ತಿ ಮಾಡಿದನು.

೧೫. ಯಶೋನಂದಿಯನ್ನು ಕರೆಯಿಸಿ ಅವನ ಪುತ್ರನಾದ ಪ್ರವೀರಕನಿಗೆ ತನ್ನ ಮಗಳಾದ ಜಾಲವತಿ ಎಂಬ ಸುಂದರಾಂಗಿಯನ್ನು ಕೊಟ್ಟು ವಿವಾಹ ಮಾಡಿದನು. ಅನಂತರ ಈ ಪ್ರವೀರಕನು ತನ್ನ ಪತ್ನಿಯಾದ ಮ್ಲೇಚ್ಛರಾಜಪುತ್ರಿಯನ್ನು ಕರೆದುಕೊಂಡು ತನ್ನ ಮನೆಗೆ ಹಿಂದಿರುಗಿದನು.

೧೬. ಸ್ವಲ್ಪ ದಿನಗಳಾದಮೇಲೆ ಈ ಜಾಲವತಿಯು ಗರ್ಭಿಣಿಯಾಗಿ ಗಂಡು ಮಗುವನ್ನು ಪ್ರಸುವಿಸಿದಳು. ಈ ಬಾಲಕನು ಕಾಲಕ್ರಮದಲ್ಲಿ ಬಲಶಾಲಿಯಾಗಿ ಬಾಹ್ಲೀಕನೆಂಬ ಹೆಸರಿನಿಂದ ಪ್ರಸಿದ್ಧನಾಗಿ ತನ್ನ ಹಿರಿಯರಂತೆಯೇ ತಾನೂ ನಾಗಪೂಜಾತತ್ಪರನಾಗಿದ್ದನು.

೧೭. ಈ ಬಾಹ್ಲೀಕನ ವಂಶದಲ್ಲಿ ಜನಿಸಿದ ಹದಿಮೂರು ಜನ ಪ್ರಸಿದ್ಧರಾದ ರಾಜರು ನಾನೂರುವರ್ಷಕಾಲ ರಾಜ್ಯವಾಳಿ ಕಾಲಧರ್ಮವನ್ನೈದಿದರು.

೧೮. ಇವರಲ್ಲಿ ಅಯೋಮುಖನೆಂಬ ಬಾಹ್ಲೀಕವಂಶಜನು ರಾಜ್ಯವಾಳುತ್ತಿದ್ದಾಗ ಪಿತೃದೇವತೆಗಳ ಗಣಗಳೆಲ್ಲವೂ ಕೃಷ್ಣಚೈತನ್ಯನ ಸಮೀಪಕ್ಕೆ ಹೋದರು.

ನತ್ವೋಚುರ್ವಚನಂ ತತ್ರ ಭಗವಞ್ಛೃಣು ನೋ ವಚಃ ।
ವಯಂ ಪಿತೃಗಣಾ ಭೂಪೈರ್ನಾಗವಂಶ್ಯೈರ್ನಿರಾಕೃತಾಃ ॥ ೧೯ ॥

ಶ್ರಾದ್ಧತರ್ಪಣಕರ್ಮಾಣಿ ತೈರ್ವಯಂ ವರ್ಧಿತಾಸ್ಸದಾ ।
ಪಿತೃವೃದ್ಧ್ಯಾತ್ಸೋಮವೃದ್ಧಿಸ್ತತೋ ದೇವಾಶ್ಚ ವರ್ಧನಾಃ ॥ ೨೦ ॥

ದೇವವೃದ್ಧ್ಯಾಲ್ಲೋಕವೃದ್ಧಿಸ್ತಸ್ಮಾದ್ಬ್ರಹ್ಮಾ ಪ್ರಜಾಪತಿಃ ।
ಬ್ರಹ್ಮವೃದ್ಧ್ಯಾತ್ಪರಂ ಹರ್ಷಂ ಗೇಹೇಗೇಹೇ ಜನೇಜನೇ ॥ ೨೧ ॥

ಅತೋಽಸ್ಮಾನ್ರಕ್ಷ ಭಗವನ್ಪ್ರಜಾಃ ಪಾಹಿ ಸನಾತನೀಃ ।
ಇತಿ ಶ್ರುತ್ವಾ ವಚಸ್ತೇಷಾಂ ಯಜ್ಞಾಂಶೋ ಭಗವಾನ್‌ಹರಿಃ ॥ ೨೨ ॥

---

೧೯. ಅವರು ಆತನಿಗೆ ನಮಸ್ಕರಿಸಿ ವಿನಯದಿಂದ ಎಲೈ ಭಗವಂತನೇ! ನಾವು ಪಿತೃಗಣಗಳು. ನಾಗವಂಶದ ರಾಜರೆಲ್ಲರೂ ನಮ್ಮೆಲ್ಲರನ್ನೂ ನಿರಾಕರಿಸಿರುವರು."

೨೦. "ಅವರುಗಳು ಶ್ರಾದ್ಧ ತರ್ಪಣಾದಿ ಪಿತೃಕರ್ಮಗಳನ್ನು ಆಚರಿಸುತ್ತಿದ್ದುದರಿಂದ ನಾವು ತೃಪ್ತರಾಗಿ ಅಭಿವೃದ್ಧಿ ಹೊಂದುತ್ತಿದ್ದೆವು. ಪಿತೃಗಣಗಳು ವೃದ್ಧಿಯಾದರೆ ಸೋಮ (ಚಂದ್ರ) ವೃದ್ಧಿಯುಂಟಾಗುವುದು. ಚಂದ್ರನು ಅಮೃತಮಯನಾದುದರಿಂದ ಅವನು ಅಭಿವೃದ್ಧಿ ಹೊಂದಿದರೆ ದೇವತೆಗಳು ಅವನಿಂದ ಅಮೃತಪಾನ ಮಾಡಿ ಅಭಿವೃದ್ಧಿಯನ್ನು ಪಡೆಯುವರು."

೨೧. "ದೇವತೆಗಳು ಅಭಿವೃದ್ಧಿಯಾದರೆ ಅದರಿಂದ ಲೋಕಾಭಿವೃದ್ಧಿಯುಂಟಾಗುವುದು. ಲೋಕವೃದ್ಧಿಯಿಂದ ಪ್ರಜಾಪತಿಯಾದ ಬ್ರಹ್ಮನು ಅಭಿವೃದ್ಧಿ ಹೊಂದುವನು. ಹೀಗೆ ಬ್ರಹ್ಮನು ಅಭಿವೃದ್ಧಿಯಾದರೆ ಪ್ರತಿಮನೆಗಳಲ್ಲಿಯೂ ಜನ ಜನಗಳಲ್ಲಿಯೂ ಸಂತೋಷವೇರ್ಪಡುವುದು."

೨೨. ಆದುದರಿಂದ ಎಲೈ ಸ್ವಾಮಿಯೇ! ನಮ್ಮನ್ನು ರಕ್ಷಿಸು ಮತ್ತು ಪ್ರಜಾವೃಂದವನ್ನು ಸದಾಚಾರವಂತರಾಗುವಂತೆ ಪಾಲಿಸಿ ಅನಾದಿಯಿಂದ ಬಂದಿರುವ ಧರ್ಮವನ್ನು ಉದ್ಧಾರಮಾಡು ಎಂದು ಹೇಳಿದರು. ಪಿತೃಗಣಗಳ ಈ ಮಾತನ್ನು ಕೇಳಿ ಸಾಕ್ಷಾದ್ವಿಷ್ಣುಸ್ವರೂಪನೂ, ಭಗವಂತನೂ ಆದ ಯಜ್ಞಾಂಶನು ಹೀಗೆ ಹೇಳಿದನು.

ಪುಷ್ಯಮಿತ್ರೋ ಧರ್ಮಪರಮಾರ್ಯವಂಶವಿವರ್ಧನಂ ॥ ೨೩ ॥

ಜಾತಮಾತ್ರಃ ಸ ವೈ ಬಾಲಃ ಷೋಡಶಾಬ್ದವಯೋಽಭವತ್ ।
ಅಯೋನಿರ್ಯೋನಿಭೂತಾಂಸ್ತಾನಯೋಮುಖಪುರಸ್ಸರಾನ್ ॥ ೨೪ ॥

ಜಿತ್ವಾ ದೇಶಾನ್ನಿರಾಕೃತ್ಯ ಸ್ವಯಂ ರಾಜ್ಯಂ ಗೃಹೀತವಾನ್ ।
ಯಥಾ ಶಿವಾಂಶತೋ ಜಾತೋ ವಿಕ್ರಮೋ ನಾಮ ಭೂಪತಿಃ ॥ ೨೫ ॥

ಶಕಾನ್ಗಂಧರ್ವಪಕ್ಷೀಯಾಞ್ಜಿತ್ವಾ ಪೂಜ್ಯೋ ಬಭೂವ ಹ ।
ನಾಗಪಕ್ಷಾಂಸ್ತಥಾ ಭೂಪಾನ್ಲೋಲಕಾಸ್ಯಾನ್ಭಯಂಕರಾನ್ ॥ ೨೬ ॥

ಪುಷ್ಯಮಿತ್ರಸ್ತದಾ ಜಿತ್ವಾ ಸರ್ವಪೂಜ್ಯೋಽಭವದ್ಭುವಿ ।
ಸಪ್ತವಿಂಶಚ್ಛತಂ ವರ್ಷಂ ದ್ವಿಸಪ್ತತ್ಯುತ್ತರಂ ತಥಾ ॥ ೨೭ ॥

ರಾಜ್ಯಂ ವಿಕ್ರಮತೋ ಜಾತಂ ಸಮಾಪ್ತಿಮಗಮತ್ತದಾ ।
ಪುಷ್ಯಮಿತ್ರೇ ರಾಜ್ಯಪದಂ ಪ್ರಾಪ್ತೇ ಸಮಭವತ್ತದಾ ॥ ೨೮ ॥

---

೨೩. ಎಲೈ ಪಿತೃಗಳಿರಾ! ಪುಷ್ಯಮಿತ್ರನೆಂಬ ರಾಜನು ಧರ್ಮಾಸಕ್ತನೂ ಆರ್ಯವಂಶವನ್ನು ಅಭಿವೃದ್ಧಿಗೊಳಿಸುವುದರಲ್ಲಿ ತತ್ಪರನೂ ಆಗುವನು.

೨೪. ಆ ರಾಜನು ಹುಟ್ಟಿದ ಕೂಡಲೇ ಹದಿನಾರು ವರ್ಷದವನಂತೆ ಇರುವನು. ಮತ್ತು ಉತ್ಪತ್ತಿರಹಿತನು. ತಾನಾಗಿಯೇ ಜನಿಸಿದ ಅಯೋನಿಜನು. ಈ ಪುಷ್ಯಮಿತ್ರನು ಅಯೋಮುಖನೇ ಮೊದಲಾದ ರಾಜರನ್ನೆಲ್ಲಾ ಗೆಲ್ಲುವನು.

೨೫-೨೭. ಅಲ್ಲದೆ ಅವರನ್ನು ದೇಶದಿಂದ ಓಡಿಸಿ ತಾನೇ ರಾಜನಾಗುವನು. ಪರಮೇಶ್ವರನ ಅಂಶದಿಂದ ಜನಿಸಿದ ವಿಕ್ರಮಾರ್ಕಮಹಾರಾಜನು, ಗಂಧರ್ವಪಕ್ಷದವರಾದ ಶಕರನ್ನೆಲ್ಲಾ ಗೆದ್ದು ಲೋಕಪೂಜ್ಯನಾದಂತೆಯೇ, ಪುಷ್ಯಮಿತ್ರನೂ ಸಹ ಭಯಂಕರ ಸ್ವಭಾವದವರೂ, ಗುಂಡಾದ ಮುಖವುಳ್ಳವರೂ ಆದ ನಾಗಪಕ್ಷದ ರಾಜರುಗಳನ್ನು ಜಯಿಸಿ ಸರ್ವಪೂಜ್ಯನಾಗುವನು.

೨೮. ಇವನ ಆಳ್ವಿಕೆಯ ಕಾಲಕ್ಕೆ ವಿಕ್ರಮನ ರಾಜ್ಯಭಾರವು ಕಳೆದು ಎರಡುಸಾವಿರದ ಏಳುನೂರ ಎಪ್ಪತ್ತೆರಡುವರ್ಷಗಳು.

ಶತವರ್ಷಂ ರಾಜ್ಯಪದಂ ತೇನ ಧರ್ಮಾತ್ಮನಾ ಧೃತಂ ।
ಅಯೋಧ್ಯಾ ಮಥುರಾ ಮಾಯಾ ಕಾಶೀ ಕಾಂಚೀ ಹ್ಯವಂತಿಕಾ ॥ ೨೯ ॥

ಪುರೀ ದ್ವಾರಾವತೀ ತೇನ ರಾಜ್ಞಾ ಚ ಪುನರುದ್ಧೃತಾಃ ।
ಕುರುಸೂಕರಪದ್ಮಾನಿ ಕ್ಷೇತ್ರಾಣಿ ವಿವಿಧಾನಿ ಚ ॥ ೩೦ ॥

ನೈಮಿಷೋತ್ಪಲವೃಂದಾನಾಂ ವನಕ್ಷೇತ್ರಾಣಿ ಭೂತಲೇ ।
ನಾನಾತೀರ್ಥಾನಿ ತೇನೈವ ಸ್ಥಾಪಿತಾನಿ ಸಮಂತತಃ ॥ ೩೧ ॥

ತದಾ ಕಲಿಃ ಸ ಗಂಧರ್ವೋ ದೇವತಾಪಿತೃದೂಷಕಃ ।
ಬ್ರಾಹ್ಮಣಂ ವಪುರಾಸ್ಥಾಯ ಪುಷ್ಯಮಿತ್ರಮುಪಾಗಮತ್ ॥ ೩೨ ॥

ನತ್ವೋವಾಚ ಪ್ರಿಯಂ ವಾಕ್ಯಂ ಶೃಣು ಭೂಪ ದಯಾಪರ ।
ಆರ್ಯದೇಶೇ ಪಿತೃಗಣಾಃ ಪೂಜಾರ್ಹಾಃ ಶ್ರಾದ್ಧತರ್ಪಣೈಃ ॥ ೩೩ ॥

---

೨೯-೩೦. ಧರ್ಮಾತ್ಮನಾದ ಈ ಪುಷ್ಯಮಿತ್ರ ಮಹಾರಾಜನು ನೂರು ವರ್ಷಗಳಕಾಲ ರಾಜ್ಯವಾಳಿದನು. ಇವನ ಕಾಲದಲ್ಲಿ ಹಿಂದೆ ನಷ್ಟವಾಗಿದ್ದ ಅಯೋಧ್ಯಾ, ಮಥುರಾ, ಮಾಯಾ, ಕಾಶೀ, ಕಾಂಚೀ, ಅವಂತಿಕಾ, ದ್ವಾರಾವತೀ ಎಂಬ ಏಳು ಪಟ್ಟಣಗಳೂ ಕುರುಕ್ಷೇತ್ರ, ಸೂಕರಕ್ಷೇತ್ರ, ಪದ್ಮಕ್ಷೇತ್ರ ಮೊದಲಾದ ಅನೇಕ ಪುಣ್ಯಕ್ಷೇತ್ರಗಳೂ ಸಹ ಉದ್ಧಾರವಾದುವು.

೩೧. ಈ ಮಹಾಪುರುಷನು ನೈಮಿಷಾರಣ್ಯ, ಉತ್ಪಲಾರಣ್ಯ, ಬೃಂದಾವನ ಇವುಗಳಲ್ಲದೆ ಅನೇಕ ತೀರ್ಥಗಳನ್ನೂ ಸಹ ಎಲ್ಲ ಕಡೆಗಳಲ್ಲಿಯೂ ಸ್ಥಾಪಿಸಿದನು.

೩೨. ಆಗ ದೇವತಾ ಪಿತೃ ದೂಷಕನೆನಿಸಿ ಗಂಧರ್ವಸ್ವರೂಪನಾದ ಕಲಿಯು ಬ್ರಾಹ್ಮಣ ವೇಷವನ್ನು ಧರಿಸಿಕೊಂಡು ಆ ಪುಷ್ಯಮಿತ್ರನ ಸಮೀಪಕ್ಕೆ ಬಂದನು.

೩೩. ಬ್ರಾಹ್ಮಣರೂಪಿನ ಕಲಿಯು ಅನಂತರ ಆ ಪುಷ್ಯಮಿತ್ರನಿಗೆ ನಮಸ್ಕರಿಸಿ ಅವನನ್ನು ಕುರಿತು "ಅಯ್ಯಾ ದಯಾಪರನಾದ ರಾಜನೇ! ನಾನು ಹೇಳುವ ಮಾತನ್ನು ಲಾಲಿಸು. ಈ ಆರ್ಯದೇಶದಲ್ಲಿ ಪಿತೃಗಣಗಳು ಶ್ರಾದ್ಧ ಮತ್ತು ತರ್ಪಣ ಗಳಿಂದ ಪೂಜಿಸಲ್ಪಡುತ್ತಿದ್ದಾರೆ."

ಅಜ್ಞಾನಮಿತಿ ತಜ್ಞೇಯಂ ಭುವಿ ಯತ್ಪಿತೃಪೂಜನಂ ।
ಮೃತಾ ಯೇ ತು ನರಾ ಭೂಮೌ ಪೂರ್ವಕರ್ಮವಶಾನುಗಾಃ ॥ ೩೪ ॥

ಭವಂತಿ ದೇವವಂತಸ್ತೇ ಚತುರಾಶೀತಿಲಕ್ಷಧಾ ।
ಛದ್ಮನಾ ಮಯದೇವೇನ ಪಿತೃಪೂಜಾ ವಿನಿರ್ಮಿತಾ ॥ ೩೫ ॥

ವೃಥಾ ಶ್ರಮಂ ವೃಥಾ ಕರ್ಮ ನೃಣಾಂ ಚ ಪಿತೃಪೂಜನಂ ।
ಇತಿ ಶ್ರುತ್ವಾ ವಚೋ ಘೋರಂ ವಿಹಸ್ಯಾಹ ಮಹೀಪತಿಃ ॥ ೩೬ ॥

ಭವಾನ್ಮೂರ್ಖೋ ಮಹಾಮೂಢೋ ನ ಜಾನೀಷೇ ಪರಂ ಫಲಂ ।
ಭುವರ್ಲೋಕೇ ನ ಯೇ ದೃಷ್ಟಾಃ ಶೂನ್ಯಭೂತಾಶ್ಚ ಭಾಸ್ವರಾಃ ॥ ೩೭ ॥

ಯೇ ತು ತೇ ವೈ ಪಿತೃಗಣಾಃ ಪಿಂಡರೂಪವಿಮಾನಗಾಃ ।
ಸತ್ಪುತ್ರೈಶ್ಚ ವಿಧಾನೇನ ಪಿಂಡದಾನಂ ಚ ಯತ್ಕೃತಂ । ॥ ೩೮ ॥

---

೩೪-೩೫. "ಈ ಭೂಲೋಕದಲ್ಲಿ ಪಿತೃಗಳನ್ನು ಪೂಜಿಸುವುದು ಕೇವಲ ದಡ್ಡತನವಲ್ಲವೇ? ಈ ಭೂಮಿಯಲ್ಲಿ ಮೃತರಾದ ಮಾನವರು ತಮ್ಮ ತಮ್ಮ ಪೂರ್ವಾರ್ಜಿತ ಕರ್ಮಫಲಗಳಿಗನುಸಾರ ಎಂಭತ್ತನಾಲ್ಕು ಲಕ್ಷ ಪ್ರಕಾರದಲ್ಲಿ ಯಾವುದಾದರೂ ಒಂದೊಂದುಬಗೆಯ ಶರೀರಿಗಳಾಗುವರು. ಮಯನು ಜನಗಳನ್ನು ಮೋಸಪಡಿಸುವುದಕ್ಕೋಸ್ಕರ ಈ ಭೂಲೋಕದಲ್ಲಿ ಪಿತೃಪೂಜೆಯನ್ನು ಏರ್ಪಡಿಸಿದನು."

೩೬. "ಆದುದರಿಂದ ಮಾನವರು ಈ ಲೋಕದಲ್ಲಿ ಪಿತೃಪೂಜೆಮಾಡುವುದು ವೃಥಾಶ್ರಮ; ಮತ್ತು ಕಾಲಹರಣವೇ ಹೊರತು ಮತ್ತೇನೂ ಫಲವಿಲ್ಲ" ಎಂದು ಹೇಳಲು ಕಲಿಯ ಈ ಘೋರವಾದ ಮಾತನ್ನು ಕೇಳಿ ಆ ಪುಷ್ಯಮಿತ್ರರಾಜನು ಸ್ವಲ್ಪ ನಕ್ಕು ಅವನನ್ನು ಕುರಿತು ಇಂತೆಂದನು.

೩೭. "ಅಯ್ಯಾ ಬ್ರಾಹ್ಮಣನೇ! ನೀನು ಮೂರ್ಖ. ತುಂಬ ದಡ್ಡ. ನಿನಗೆ ಏನೂ ಗೊತ್ತಿಲ್ಲ. ನೀನು ಪರಮಫಲವನ್ನರಿಯೆ. ಪಿತೃಗಣಗಳು ಭುವರ್ಲೋಕದಲ್ಲಿ ಶೂನ್ಯಸ್ವರೂಪರು ಮತ್ತು ಕೇವಲ ತೇಜೋರೂಪದಿಂದ ಪ್ರಕಾಶಿಸುವವರು ಎಂಬುದನ್ನು ನೀನು ತಿಳಿದಿಲ್ಲ."

೩೮-೩೯. "ಈ ಪಿತೃಗಣಗಳು ತಮ್ಮ ಪುತ್ರರು ಶಾಸ್ತ್ರೋಕ್ತವಾಗಿ ಮಾಡಿದ ಪಿಂಡಪ್ರದಾನದಿಂದ ಅದೇ ಪಿಂಡರೂಪವಾದ ವಿಮಾನವನ್ನೇರಿ ಸಂಚರಿಸುವರು.

ತದ್ವಿಮಾನಂ ನಭೋಜಾತಂ ಸರ್ವಾನಂದಪ್ರದಾಯಕಂ ।
ಅಬ್ದಮಾತ್ರಂ ಸ್ಥಿತಿಸ್ತೇಷಾಂ ಪಿಂಡಪಾಯಸರೂಪಿಣಾಂ ॥ ೩೯ ॥

ಗೀತಾಷ್ಟಾದಶಕಾಧ್ಯಾಯೈಃ ಸಪ್ತಶತ್ಯಾಶ್ಚರಿತ್ರಕೈಃ ।
ಪಾವಿತಂ ಯತ್ತು ವೈ ಪಿಂಡಂ ತ್ರಿಂಶದಬ್ದಂ ತು ತತ್ಸ್ಥಿತಿಃ ॥ ೪೦ ॥

ಶ್ರಾದ್ಧತರ್ಪಣಹೀನಾ ಯೇ ದೃಶ್ಯಂತೇ ಮಾನವಾ ಭುವಿ ।
ತೇ ಸರ್ವೇ ನಾರಕಾಃ ಜ್ಞೇಯಾಃ ಕುಲಮೇಕೋತ್ತರಂ ಶತಂ ॥ ೪೧ ॥

ಶ್ರಾದ್ಧಕರ್ಮ ಮಹಾನ್ಧರ್ಮಃ ಶ್ರಾದ್ಧೋಽಯಂ ಸರ್ವಕಾರಣಂ ।
ಇತಿ ಶ್ರುತ್ವಾ ಸ ಗಂಧರ್ವಃ ಕಲಿರಾಜೋಽತ್ರ ದೇಹಿನಾಂ ॥ ೪೨ ॥

---

ಮಕ್ಕಳು ಸಮರ್ಪಿಸಿದ ಪಿಂಡವು ವಿಮಾನಸ್ವರೂಪವನ್ನು ತಾಳಿ ಪಿತೃಗಳಿಗೆ ತುಂಬಾ ಆನಂದವನ್ನುಂಟುಮಾಡುತ್ತದೆ. ಆ ಪಿಂಡಪ್ರದಾನದಿಂದ ಪಿತೃದೇವತೆಗಳಿಗೆ ಒಂದು ವರ್ಷಕಾಲ ಪಿಂಡಪಾಯಸದ ರೂಪಿನಿಂದ ಸ್ಥಿತಿಯು ಏರ್ಪಡುವುದು. ಅನಂತರ ಅವರು ತೇಜೋರೂಪರಾಗುವರು."

೪೦. "ಗೀತೆಯ ಹದಿನೆಂಟು ಅಧ್ಯಾಯಗಳ ಶ್ರವಣದಿಂದಲೂ ಸಪ್ತಶತೀ ಚರಿತ್ರಪಠನದಿಂದಲೂ ಪರಿಶುದ್ಧವಾದ ಈ ಪಿಂಡವು ಮೂವತ್ತು ವರ್ಷಗಳ ಕಾಲ ಇರುವುದೆಂದು ತಿಳಿಯುವುದು."

೪೧. "ಭೂಲೋಕದಲ್ಲಿ ಶ್ರಾದ್ಧ ಮತ್ತು ತರ್ಪಣ ಇವುಗಳನ್ನು ವರ್ಜ್ಯ ಮಾಡಿದ ಮಾನವರು ನೂರೊಂದು ತಲಾಂತರಗಳ ವರೆಗೂ ನರಕದಲ್ಲೇ ಬಿದ್ದು ನರಳುತ್ತಾರೆ."

೪೨. "ಆದುದರಿಂದ ಎಲೈ ವಿಪ್ರನೇ! ಈ ಶ್ರಾದ್ಧವು ಪರಮಧರ್ಮಸ್ವರೂಪ. ಈ ಶ್ರಾದ್ಧವೇ ಸಕಲ ಧರ್ಮಗಳಿಗೂ ಮೂಲಕಾರಣ" ಎಂದು ಪುಷ್ಯಮಿತ್ರನು ಹೇಳಿದನು. ಗಂಧರ್ವಸ್ವರೂಪನೂ ಬ್ರಾಹ್ಮಣವೇಷಧಾರಿಯೂ ಆಗಿದ್ದ ಆ ಕಲಿಯು ಇದನ್ನು ಕೇಳಿದನು.

ನತ್ವೋವಾಚ ನೃಪಶ್ರೇಷ್ಠಂ ಪ್ರಸನ್ನವದನೋ ಹಿ ಸಃ ।
ಸಖಾ ಭವ ಮಮಾಶು ತ್ವಂ ತವಾಹಂ ನೃಪ ಕಿಂಕರಃ ॥ ೪೩ ॥

ಕಲಿಮಿತ್ರಃ ಪುಷ್ಯಮಿತ್ರೋ ಭವಾನ್ಭುವಿ ಭವೇತ್ಸದಾ ।
ಯಥಾ ವಿಕ್ರಮರಾಜಸ್ಯ ವೈತಾಲಸ್ಯ ಚ ವೈ ಸಖಾ ॥ ೪೪ ॥

ಸರ್ವಕಾರ್ಯಕರೋಽಹಂ ವೈ ತಥಾ ತವ ನ ಸಂಶಯಃ ।
ಇತ್ಯುಕ್ತ್ವಾ ಚ ನೃಪಂ ಧೀರಂ ಸಮಾದಾಯ ಸ ವೈ ಕಲಿಃ ॥ ೪೫ ॥

ಸಪ್ತದ್ವೀಪಾಂಸ್ತಥಾ ಖಂಡಾನ್ನಭೋಮಾರ್ಗಾನನೇಕಶಃ ।
ಸ್ವಪೃಷ್ಠಸ್ಥಾಯ ರಾಜ್ಞೇ ಚ ದರ್ಶಯಾಮಾಸ ವೀರ್ಯವಾನ್ ॥ ೪೬ ॥

---

೪೩. ಆ ಪುಷ್ಯಮಿತ್ರನಿಗೆ ನಮಸ್ಕರಿಸಿ ಪ್ರಸನ್ನಮುಖದಿಂದ "ಎಲೈ ರಾಜಮೌಳಿಯೇ! ನೀನು ನನ್ನ ಮಿತ್ರನಾಗು. ನಾನು ಯಾವಾಗಲೂ ನಿನ್ನ ಕಿಂಕರನು."

೪೪-೪೫. "ಇಂದಿನಿಂದ ಪುಷ್ಯಮಿತ್ರನಾದ ನೀನು ಕಲಿಮಿತ್ರನೆಂದು ಪ್ರಸಿದ್ಧನಾಗುವೆ. ವಿಕ್ರಮರಾಜನಿಗೂ ಭೇತಾಳನಿಗೂ ಸ್ನೇಹವಿದ್ದಂತೆ ನಿನಗೂ ನನಗೂ ಸ್ನೇಹವು ಬೆಳೆಯಲಿ. ಅಲ್ಲದೆ ಬೇತಾಳವು ವಿಕ್ರಮರಾಜನ ಸಕಲ ಕಾರ್ಯಗಳನ್ನೂ ತಪ್ಪದೆ ನಡೆಸಿಕೊಡುತ್ತಿದ್ದಂತೆ ನಾನೂ ನಿನ್ನ ಕಾರ್ಯದಲ್ಲಿ ತತ್ಪರನಾಗಿರುವೆನು" ಎಂದು ಹೇಳಿ ಧೀರನಾದ ಆ ಪುಷ್ಯಮಿತ್ರನನ್ನು ಜೊತೆಯಲ್ಲಿ ಕರೆದುಕೊಂಡು ಆ ಕಲಿಪುರುಷನು ಸಂಚಾರಾರ್ಥವಾಗಿ ಹೊರಟನು.

೪೬. ಬಲಶಾಲಿಯಾದ ಆ ಕಲಿಯು ಪುಷ್ಯಮಿತ್ರರಾಜನನ್ನು ಹೆಗಲ ಮೇಲೆ ಕೂರಿಸಿಕೊಂಡು ಅಂತರಿಕ್ಷಮಾರ್ಗದಲ್ಲಿ ಸಂಚರಿಸುತ್ತಾ ಜಂಬು, ಪ್ಲಕ್ಷ, ಕುಶ, ಕ್ರೌಂಚ, ಶಾಕ, ಶಾಲ್ಮಲಿ, ಪುಷ್ಕರ ಎಂಬ ಸಪ್ತದ್ವೀಪಗಳನ್ನೂ ಅನೇಕ ಖಂಡಗಳನ್ನೂ ತೋರಿಸಿದುದಲ್ಲದೆ ಅಂತರಿಕ್ಷದಲ್ಲಿ ಸಂಚರಿಸುವ ಅನೇಕ ಮಾರ್ಗಗಳನ್ನೂ ಅವನಿಗೆ ತೋರಿಸಿದನು.

ಆರ್ಯಧರ್ಮಂ ಕಲೌ ಸ್ಥಾಪ್ಯ ನಷ್ಟಭೂತಂ ಸ ವೈ ನೃಪಃ ।
ತ್ಯಕ್ತ್ವಾ ಪ್ರಾಣಾಂಶ್ಚ ಯಜ್ಞಾಂಶೇ ತೇಜಸ್ತಸ್ಯ ಸಮಾಗಮತ್ ॥ ೪೭ ॥

ಆಂಧ್ರದೇಶೋದ್ಭವೋ ರಾಜಾ ಸುಗದೋ ನಾಮ ವೀರ್ಯವಾನ್ ।
ವಿನಾ ಭೂಪಂ ಚ ತಂ ದೇಶಂ ದೃಷ್ಟ್ವಾ ರಾಜ್ಯಮಚೀಕರತ್ ॥ ೪೮ ॥

ವಿಂಶದಬ್ದಂ ಪದಂ ತೇನ ಕರ್ಮಭೂಮ್ಯಾಂ ಚ ಸತ್ಕೃತಂ ।
ತದನ್ವಯೇ ಷಷ್ಟಿನೃಪಾ ಬಭೂವುರ್ಬಹುಮಾರ್ಗಿಣಃ ॥ ೪೯ ॥

ಪುಷ್ಯಮಿತ್ರಗತೇ ರಾಜ್ಯೇ ದಶೋತ್ತರಶತತ್ರಯಂ ।
ತಸ್ಮಿನ್ಕಾಲೇ ಲಯಂ ಜಗ್ಮುಶ್ಚಾಂಧ್ರದೇಶನಿವಾಸಿನಃ ॥ ೫೦ ॥

ಶತಾರ್ಧಾಬ್ದಂ ತತೋ ಭೂಮಿರ್ವಿನಾ ರಾಜ್ಞಾ ಬಭೂವ ಹ ।
ತದಾ ಕ್ಷುದ್ರಾ ನರಾ ಲುಬ್ಧಾ ಲುಂಠಿತಾಶ್ಚೌರದಾರುಣೈಃ ॥ ೫೧ ॥

---

೪೭. ಅನಂತರ ಆ ಪುಷ್ಯಮಿತ್ರರಾಜನು ತನ್ನ ಊರಿಗೆ ಬಂದು, ನಷ್ಟವಾಗಿದ್ದ ಆರ್ಯಧರ್ಮವನ್ನೆಲ್ಲಾ ಆ ಕಲಿಯುಗದಲ್ಲಿ ಸ್ಥಾಪಿಸಿ ಕೆಲಕಾಲಾನಂತರ ಮೃತನಾದನು. ಅವನ ತೇಜಸ್ಸು ಆ ಶರೀರದಿಂದ ಹೊರಟು ಯಜ್ಞಾಂಶನಲ್ಲಿ ಬಂದು ಐಕ್ಯವಾಯಿತು.

೪೮. ಇವನ ಅನಂತರ ಆಂಧ್ರದೇಶದಲ್ಲಿ ಜನಿಸಿದ ಸುಗದನೆಂಬ ಬಲಶಾಲಿಯಾದ ರಾಜನು ಈ ರಾಜ್ಯಕ್ಕೆ ಬಂದು ರಾಜನಾದನು.

೪೯. ಈ ಸುಗದರಾಜನೂ ಈ ಕರ್ಮಭೂಮಿಪ್ರದೇಶವನ್ನು ಇಪ್ಪತ್ತುವರ್ಷ ಆಳಿದನು. ಅನಂತರ ಇವನ ವಂಶದಲ್ಲಿ ನಾನಾ ಮಾರ್ಗಗಾಮಿಗಳಾದ ಅರವತ್ತು ಮಂದಿ ರಾಜರು ರಾಜ್ಯವಾಳಿದರು.

೫೦. ಪುಷ್ಯಮಿತ್ರನು ಮೃತನಾದ ಮೇಲೆ ಆಂಧ್ರದೇಶದ ರಾಜರುಗಳು ಮೂನ್ನೂರು ಹತ್ತುವರ್ಷಗಳಕಾಲ ಆಳಿ ಎಲ್ಲರೂ ಮೃತರಾದರು.

೫೧. ಇವರ ಅನಂತರ ಐವತ್ತು ವರ್ಷಗಳಕಾಲ ರಾಜ್ಯಕ್ಕೆ ಯಾವ ರಾಜನೂ ಇರಲಿಲ್ಲ. ಆಗ ಕ್ಷುದ್ರರಾದ ಸಾಮಾನ್ಯಜನಗಳೂ, ಹಣವನ್ನು ಕೂಡಿಟ್ಟಿದ್ದ ಜಿಪುಣ ಧನಿಕರೂ ಸಹ ಕ್ರೂರಿಗಳಾದ ಕಳ್ಳರ ಲೂಟಿಗೊಳಗಾದರು.

ದಾರಿದ್ರ್ಯಮಗಮನ್ಘೋರಂ ವಿನಾ ಸ್ವರ್ಣಂ ಚ ಭೂರಭೂತ್ ।
ಪುನರ್ದೇವೈಶ್ಚ ಭಗವಾನ್ಪ್ರಾರ್ಥಿತಸ್ತಾನುವಾಚ ಹ ॥ ೫೨ ॥

ದೇಶೇ ಕೌಶಲಕೇ ಜಾತಃ ಸೂರ್ಯಾಂಶಾಚ್ಚ ಮಹೀಪತಿಃ ।
ರಾಕ್ಷಸಾರಿರಿತಿ ಖ್ಯಾತೋ ದೇವಮಾರ್ಗಪರಾಯಣಃ ॥ ೫೩ ॥

ಮಮಾಜ್ಞಯಾ ಸ ವೈ ರಾಜಾ ಭವಿಷ್ಯತಿ ಮಹೀತಲೇ ।
ಇತ್ಯುಕ್ತ್ವಾಂತರ್ದಧೇ ವಿಷ್ಣುರ್ದೇವಲೋಕಾನುಪಾಗಮತ್ ॥ ೫೪ ॥

ರಾಕ್ಷಸಾರಿಮಯೋಧ್ಯಾಯಾಂ ಸ್ಥಾಪಯಾಮಾಸುರೇವ ತಂ ।
ಆಂಧ್ರರಾಷ್ಟ್ರೇ ಚ ಯದ್ದ್ರವ್ಯಂ ರಾಕ್ಷಸೈಶ್ಚ ಸಮಾಹೃತಂ ॥ ೫೫ ॥

ತದ್ದ್ರವ್ಯಂ ರಾಕ್ಷಸಾಞ್ಜಿತ್ವಾ ಗ್ರಾಮೇಗ್ರಾಮೇ ಚಕಾರ ಸಃ ।
ತಾರಧಾತೋರಷ್ಟಮೂಲ್ಯಂ ಸುವರ್ಣಂ ಭುವಿ ತತ್ಕೃತಂ ॥ ೫೬ ॥

---

೫೨. ರಾಜ್ಯದಲ್ಲೆಲ್ಲೂ ದ್ರವ್ಯಸಂಪತ್ತು ಇಲ್ಲದಂತಾಗಿ ಘೋರವಾದ ದಾರಿದ್ರ್ಯವುಂಟಾಯಿತು. ಆಗ ಭಗವಂತನಾದ ಯಜ್ಞೇಶನು ದೇವತೆಗಳಿಂದ ಪ್ರಾರ್ಥಿಸಲ್ಪಟ್ಟವನಾಗಿ ಅವರನ್ನು ಕುರಿತು ದಿವ್ಯವಾಣಿಯಿಂದ ಮಾತನಾಡತೊಡಗಿ,

೫೩. " ಕೋಶಲದೇಶದಲ್ಲಿ ಸೂರ್ಯದೇವನ ಅಂಶದಿಂದ ರಾಕ್ಷಸಾರಿಯೆಂಬ ರಾಜನು ಜನಿಸಿರುವನು. ಅವನು ದೇವತೆಗಳಿಗೆ ಪ್ರಿಯವಾದ ಮಾರ್ಗವನ್ನೇ ಆಶ್ರಯಿಸಿರುವನು.

೫೪. ನನ್ನ ಅಪ್ಪಣೆಯಂತೆ ಅವನು ಭೂಮಂಡಲದಲ್ಲಿ ರಾಜನಾಗುವನು " ಎಂದು ಹೇಳಿ ಪರಮಾತ್ಮನು ಅಂತರ್ಧಾನನಾಗಿ ದೇವಲೋಕಕ್ಕೆ ತೆರಳಿದನು.

೫೫. ದೇವತೆಗಳು ಅದರಂತೆಯೇ ಈ ರಾಕ್ಷಸಾರಿಯೆಂಬ ರಾಜನನ್ನು ಅಯೋಧ್ಯೆಯಲ್ಲಿ ಸ್ಥಾಪಿಸಿದರು. ಇವನು ಆ ದಸ್ಯುಗಳೊಡನೆ ಯುದ್ಧಮಾಡಿ ರಾಕ್ಷಸರು ಅಪಹರಿಸಿಕೊಂಡು ಹೋಗಿ ಆಂಧ್ರದೇಶದಲ್ಲಿ ಸೇರಿಸಿದ್ದ ದ್ರವ್ಯವನ್ನು ತನ್ನ ಗ್ರಾಮಗಳಿಗೆಲ್ಲಾ ಹರಡುವಂತೆ ಮಾಡಿದನು.

೫೬-೫೭. ಇವನು ಬೆಳ್ಳಿಗಿಂತಲೂ ಚಿನ್ನಕ್ಕೆ ಎಂಟರಷ್ಟು ಬೆಲೆಯೆಂದೂ ಆಗಧಾತುವಿಗಿಂತಲೂ ಬೆಳ್ಳಿಗೆ ನೂರರಷ್ಟು ಬೆಲೆಯೆಂದೂ ಆರಧಾತುವಿಗಿಂತಲೂ

ಆರಧಾತೋಃ ಶತಂ ಮೂಲ್ಯಂ ರಾಜತಂ ತೇನ ವೈ ಕೃತಂ ।
ತಾಮ್ರಧಾತೋಃ ಪಂಚಮೂಲ್ಯಮಾರಧಾತೋಶ್ಚ ತತ್ಕೃತಂ ॥ ೫೭ ॥

ನಾಗಧಾತೋಃ ಪಂಚಮೂಲ್ಯಂ ಭುವಿ ತೇನೈವ ನಿರ್ಮಿತಂ ।
ತಾಮ್ರಂ ಪವಿತ್ರಮಧಿಕಂ ನಾಗೋ ವಂಗಸ್ತಥೋತ್ತಮಃ ॥ ೫೮ ॥

ಲೌಹಧಾತೋಃ ಶತಂ ಮೂಲ್ಯಂ ವಂಗೋऽಸೌ ತೇನ ಸತ್ಕೃತಃ ।
ಶತಾರ್ಧಾಬ್ದಂ ಮಹೀಂ ಭುಕ್ತ್ವಾ ಸೂರ್ಯಲೋಕಮುಪಾಯಯೌ॥೫೯॥

ತದನ್ವಯೇ ಷಷ್ಟಿನೃಪಾ ಜಾತಾ ವೇದಪರಾಯಣಾಃ ।
ಪುಷ್ಯಮಿತ್ರಗತೇ ರಾಜ್ಞೇ ಚಾಬ್ದೇ ಸಪ್ತಶತೇ ಗತೇ ॥ ೬೦ ॥

ಕೌಶಲಾನ್ವಯಸಂಭೂತಾ ಭೂಪಾಃ ಸ್ವರ್ಗಮುಪಾಯಯುಃ ।
ಶತಾರ್ಧಾಬ್ದಂ ತತೋ ಭೂಮಿರ್ಮಂಡಲೀಕಂ ನೃಪಂ ವಿನಾ ॥ ೬೧ ॥

---

ತಾಮ್ರಕ್ಕೆ ಐದರಷ್ಟು ಬೆಲೆಯೆಂದೂ ನಿಗದಿಮಾಡಿದನು.

೫೮. ಅಲ್ಲದೆ ನಾಗಧಾತುವಿಗೆ ಐದುಭಾಗ ಬೆಲೆಯೆಂದು ನಿಷ್ಕರ್ಷೆಮಾಡಿದನು. ತಾಮ್ರವು ತುಂಬಾ ಪವಿತ್ರವಾದುದೆಂದೂ ನಾಗ ಮತ್ತು ವಂಗಧಾತುಗಳು ಉತ್ತಮ ವಾದುದೆಂದೂ ಇವನೇ ಶೀರ್ಮಾನಿಸಿದನು.

೫೯. ಲೋಹಸಂಬಂಧದ ಧಾತುವಿಗೆ ನೂರುಪಾಲು ಬೆಲೆಯೆಂದೂ ವಂಗ ವೆಂಬುದು ಈ ಲೋಹಧಾತುವಿನಿಂದ ಸತ್ಕರಿಸಲ್ಪಟ್ಟಿದೆಯೆಂದೂ ನಿಷ್ಕರ್ಷಿಸಿದನು. ಈ ರಾಕ್ಷಸಾರಿರಾಜನು ಐವತ್ತುವರ್ಷಗಳಕಾಲ ರಾಜ್ಯವಾಳಿ ಕೊನೆಗೆ ಸೂರ್ಯಲೋಕ ವನ್ನು ಸೇರಿದನು.

೬೦. ಪುಷ್ಯಮಿತ್ರರಾಜನ ಕಾಲದಿಂದ ಏಳುನೂರುವರ್ಷಗಳು ಕಳೆಯು ವುದರಲ್ಲಿ ಆವನ ರಾಜ್ಯದಲ್ಲಿ ಈ ರಾಕ್ಷಸಾರಿವಂಶದ ಅರವತ್ತುಮಂದಿ ರಾಜರು ಸನಾತನ ಧರ್ಮಾವಲಂಬಿಗಳಾಗಿ ರಾಜ್ಯವಾಳಿ ಮೃತರಾದರು.

೬೧. ಈರೀತಿ ಕೋಸಲವಂಶದ ರಾಜರು ರಾಜ್ಯವಾಳಿ ಎಲ್ಲರೂ ಸ್ವರ್ಗಸ್ಥ ರಾದರು. ಇವರಾದಮೇಲೆ ಪುನಃ ಐವತ್ತುವರ್ಷಗಳಕಾಲ ಈ ರಾಷ್ಟ್ರದಲ್ಲಿ ಸರಿಯಾದ ಯಾವ ಮಂಡಲಿಕ ರಾಜರೂ ಇರಲಿಲ್ಲ.

ಕ್ಷುದ್ರಭೂಪಾಂಶ್ಚ ಬುಭುಜೇ ದೇಶೇದೇಶೇ ಚ ಭಾರ್ಗವ ।
ತತೋ ಬೈದರದೇಶೀಯೋ ನಾಮ್ನಾ ಭೂಪೋ ವಿಶಾರದಃ ॥ ೬೨ ॥

ಆರ್ಯದೇಶಮುಪಾಗಮ್ಯ ಲಕ್ಷಸೈನ್ಯಸಮನ್ವಿತಃ ।
ಕ್ಷುದ್ರಭೂಪಾನ್ವಶೀಕೃತ್ಯ ಮಂಡಲೀಕೋ ಬಭೂವ ಹ ॥ ೬೩ ॥

ನಾನಾಕಲ್ಪೈಶ್ಚ ಕರ್ಮಾಣಿ ವಿಚಿತ್ರಾಣಿ ಮಹೀತಲೇ ।
ಗ್ರಾಮೇಗ್ರಾಮೇ ನರಾಶ್ಚಕ್ರುರ್ವರ್ಣಸಂಕರಕಾರಕಾಃ ॥ ೬೪ ॥

ಬ್ರಹ್ಮಕ್ಷತ್ರಮಯೋ ವರ್ಣೋ ನಾಮಮಾತ್ರೇಣ ದೃಶ್ಯತೇ ।
ವೈಶ್ಯಪ್ರಾಯಾ ನರಾ ಆರ್ಯಾಃ ಶೂದ್ರಪ್ರಾಯಾಶ್ಚ ಕಾರಿಣಃ ॥ ೬೫ ॥

ತದ್ರಾಷ್ಟ್ರೇ ಮನುಜಾಶ್ಚಾಸನ್ನಾಮಮಾತ್ರಂ ಸುರಾರ್ಚಕಾಃ ।
ಷಷ್ಟಿವರ್ಷಂಪದಂ ತೇನ ಕರ್ಮಭೂಮ್ಯಾಂ ಚ ಸತ್ಕೃತಂ ॥ ೬೬ ॥

---

೬೨-೬೩. ಎಲೈ! ಭೃಗುವಂಶ ಶ್ರೇಷ್ಠನಾದ ಶೌನಕನೇ! ಅನಂತರ ಆ ದೇಶ ವೆಲ್ಲವೂ ಒಡೆದು ಸಣ್ಣಸಣ್ಣ ರಾಜರುಗಳೇರ್ಪಟ್ಟು ಸಣ್ಣಸಣ್ಣ ರಾಷ್ಟ್ರಗಳಾದುವು. ಆ ಸಮಯದಲ್ಲಿ ಬೈದರದೇಶದ ವಿಶಾರದನೆಂಬರಾಜನು ಒಂದುಲಕ್ಷ ಸೈನ್ಯದೊಡನೆ ಆರ್ಯದೇಶಕ್ಕೆ ಬಂದು ಎಲ್ಲಾ ಕ್ಷುದ್ರರಾಜರುಗಳನ್ನೂ ಸೋಲಿಸಿ ತನ್ನ ಅಧೀನ ಪಡಿಸಿಕೊಂಡು ತಾನು ಮಂಡಲೇಶ್ವರನಾದನು.

೬೪. ಅವನ ರಾಜ್ಯದಲ್ಲಿ ಮನೆಮನೆಯಲ್ಲಿಯೂ, ಗ್ರಾಮಗ್ರಾಮದಲ್ಲಿಯೂ ಜನಗಳು ಅನೇಕ ಕಲೆಗಳನ್ನೂ ಚಿತ್ರಕೆಲಸಗಳನ್ನೂ ಅಭಿವೃದ್ಧಿಮಾಡತೊಡಗಿದರು. ಜಾತಿಸಾಂಕರ್ಯವು ಏರ್ಪಟ್ಟಿತು.

೬೫. ಬ್ರಾಹ್ಮಣ ಮತ್ತು ಕ್ಷತ್ರಿಯ ವರ್ಣಗಳು ನಾಮಮಾತ್ರವಾಗಿ ಇದ್ದುವು. ಆರ್ಯರೆಲ್ಲರೂ ವೈಶ್ಯರಂತೆ ಆದರು. ಇತರ ಕೆಲಸಗಾರರೆಲ್ಲರೂ ಶೂದ್ರರಂತಾದರು.

೬೬. ಇವನ ರಾಜ್ಯದಲ್ಲಿ ಮಾನವರು ಹೆಸರಿಗೆಮಾತ್ರ ದೇವರಪೂಜೆ ಮಾಡು ವರಂತೆ ತೋರ್ಪಡಿಸುತ್ತಿದ್ದರು. ಭಕ್ತಿ ಶ್ರದ್ಧೆಗಳು ಕೊಂಚವೂ ಇರಲಿಲ್ಲ. ಈ ಬೈದರವಂಶದ ವಿಶಾರದನು ಅರವತ್ತುವರ್ಷಗಳಕಾಲ ಕರ್ಮಭೂಮಿಯಾದ ಈ ಭರತಖಂಡದಲ್ಲಿ ಆಳಿದನು.

ತತೋ ನೃಪಾ ಮಹೀಂ ಪ್ರಾಪ್ತಾಃ ಷಟ್‌ಸಂಖ್ಯಾಸ್ತು ತದನ್ವಯಾಃ ।
ಪುಷ್ಯಮಿತ್ರಗತೇ ರಾಷ್ಟ್ರೇ ಶತಷೋಡಶಹಾಯನೀ ॥ ೬೭ ॥

ವೈದೂರಾ ನಿಧನಂ ಜಗ್ಮುಃ ಕಲಿಕಾಲೇ ಭಯಾನಕೇ ।
ಚತುಶ್ಶತಾನಿ ವರ್ಷಾಣಿ ಕ್ಷುದ್ರರೂಪಾ ಚ ಭೂರಭೂತ್ ॥ ೬೮ ॥

ತತ್ಪಶ್ಚಾನ್ನೈಷಧೇ ರಾಷ್ಟ್ರೇ ಕಾಲಾಮಾಲೀ ನೃಪೋಽಭವತ್ ।
ಕ್ಷುದ್ರಭೂಪಾನ್ವಶೀಕೃತ್ಯ ಸ್ವಯಂ ರಾಜಾ ಬಭೂವ ವೈ ॥ ೬೯ ॥

ಯಮಾಭೂಯಾ ಭುವಿ ತ್ವಷ್ಟ್ರಾ ನಗರೀ ಯಮುನಾತಟೇ ।
ನಿರ್ಮಿತಾ ಯೋಜನಾಯಾಮಾ ಕಾಲಕಾಲೇತಿ ವಿಶ್ರುತಾ ॥ ೭೦ ॥

---

೬೭. ಇವನನಂತರ ಇವನವಂಶದ ಆರುಜನರಾಜರು ಆಳಿದರು. ಆ ವೇಳೆಗೆ ಪುಷ್ಯಮಿತ್ರನ ಕಾಲದಿಂದ ಈಚೆಗೆ ಒಂದುಸಾವಿರದ ಆರನೂರವರ್ಷಗಳು ಕಳೆದಿದ್ದಿತು.

೬೮. ಭಯಂಕರವಾದ ಈ ಕಲಿಯುಗದಲ್ಲಿ ಈರೀತಿ ಬೈದರವಂಶದ ರಾಜರು ಆಳಿ ಮೃತರಾಗಲು, ಅನಂತರ ನಾನೂರುವರ್ಷಗಳವರೆಗೆ ಪುನಃ ಈ ಕರ್ಮಭೂಮಿಯಲ್ಲಿ ಸರಿಯಾದ ರಾಜರು ಯಾರೂ ಇಲ್ಲದೆ ರಾಷ್ಟ್ರವು ಕ್ಷುದ್ರರಾಜರ ಅಧೀನವಾಯಿತು.

೬೯. ಅನಂತರ ನೈಷಧದೇಶದಲ್ಲಿ ಕಾಲಾಮಾಲೀ ಎಂಬ ರಾಜನು ಹುಟ್ಟಿದನು. ಇವನು ಆ ಕ್ಷುದ್ರರಾಜರುಗಳನ್ನೆಲ್ಲಾ ತನ್ನ ಅಧೀನಮಾಡಿಕೊಂಡು ತಾನೇ ಅಧಿರಾಜನಾದನು.

೭೦. ಭೂಮಿಯಲ್ಲಿ ಬ್ರಹ್ಮನು ಯಮುನಾನದಿಯ ದಡದಲ್ಲಿ ಒಂದುಯೋಜನ ವಿಸ್ತಾರವುಳ್ಳ "ಯಮಾಭೂಯಾ" ಎಂಬ ನಗರಿಯನ್ನು ನಿರ್ಮಿಸಿದ್ದನು ಇದಕ್ಕೆ ಕಾಲಕಾಲಾ ಎಂಬ ಹೆಸರೂ ಪ್ರಸಿದ್ಧವಾಗಿ ರೂಢಿಯಲ್ಲಿ ಬಂದಿತು.

ತತ್ರಾರ್ಯದೇಶಭೂಪಾನಾಂ ಪೂಜ್ಯೋ ರಾಜಾ ಸ ಚಾಭ್ಯಭವತ್ ।
ದೇವಾನ್ ಪಿತೄಂಸ್ತಿರಸ್ಕೃತ್ಯ ಪ್ರೇತಪೂಜಾಂ ಜನೇಜನೇ ॥ ೭೦ ॥

ಕಾಲಮಾಲೀ ಚ ಕೃತವಾನ್ ದೇಶನೈಷಧಸಂಸ್ಥಿತಃ ।
ದ್ವಾತ್ರಿಂಶದ್ವರ್ಷರಾಜ್ಯಂ ತದ್ಬಭೂವ ಜನಪೀಡನಂ ॥ ೭೧ ॥

ತದನ್ವಯೇ ಷಷ್ಟಿನೃಪಾ ಬಭೂವುಃ ಪ್ರೇತಪೂಜಕಾಃ ।
ಶತಾಬ್ದಾಂತಮಭೂದ್ರಾಜ್ಯಂ ತೇಷಾಂ ನೈಷಧದೇಶಿನಾಂ ॥ ೭೩ ॥

ಸಹಸ್ರಾಬ್ದಂ ತು ತತ್ಪಶ್ಚಾತ್ ಕ್ಷುದ್ರಭೂಪಾ ಮಹೀ ಹ್ಯಭೂತ್ ।
ಸುರಾರ್ಚನಂ ವೇದಮಾರ್ಗಃ ಶ್ರುತಮಾತ್ರಶ್ಚ ದೃಶ್ಯತೇ ॥ ೭೪ ॥

ಪುಷ್ಯಮಿತ್ರಗತೇ ರಾಜ್ಯೇ ಚೈಕತ್ರಿಂಶಚ್ಛತೇ ಕಲೌ ।
ದ್ವಾತ್ರಿಂಶದುತ್ತರೇ ಚೈವ ತದಾ ದೇವಾಶ್ಚ ದುಃಖಿತಾಃ ॥ ೭೫ ॥

---

೭೧. ಆ ಕಾಲಕಾಲಾಪುರಿಯಲ್ಲಿ ಆರ್ಯದೇಶದ ರಾಜನಾದ ಈ ಕಾಲಾಮಾಲಿಯು ವಾಸಮಾಡುತ್ತಾ ತನ್ನ ದೇಶದಲ್ಲಿ ದೇವತೆಗಳು ಮತ್ತು ಪಿತೃಗಳು ಇವರ ಪೂಜೆಯನ್ನು ನಿರೋಧಿಸಿ ಎಲ್ಲಾ ಜನಗಳೂ ಪ್ರೇತಪೂಜೆ ಮಾಡುವಂತೆ ನಿಯಮಿಸಿದನು.

೭೨. ಈರೀತಿ ನೈಷಧದೇಶದಲ್ಲಿ ಜನಿಸಿದ ಈ ಕಾಲಾಮಾಲಿಯು ಪ್ರೇತಪೂಜಾ ಸಂಪ್ರದಾಯವನ್ನು ದೇಶದಲ್ಲೆಲ್ಲಾ ಹರಡಿ ಮೂವತ್ತೆರಡು ವರ್ಷಕಾಲ ರಾಜ್ಯವಾಳಿದನು ಇವನ ಆಳ್ವಿಕೆಯ ಕಾಲದಲ್ಲಿ ಪ್ರಜೆಗಳಿಗೆ ತುಂಬಾ ಪೀಡೆಯುಂಟಾಯಿತು.

೭೩. ಇವನ ವಂಶದಲ್ಲಿ ಜನಿಸಿದ ಅರವತ್ತುಜನ ರಾಜರು ಪ್ರೇತಪೂಜನ ವಿಧಿಯನ್ನೇ ಆಚರಿಸಿ ರಾಜ್ಯವಾಳಿ ನೂರುವರ್ಷಗಳಕಾಲ ಜೀವಿಸಿ ಮೃತರಾದರು.

೭೪. ಇವರನಂತರ ಸಾವಿರವರ್ಷಗಳವರೆಗೆ ಈ ರಾಷ್ಟ್ರದಲ್ಲಿ ಸರಿಯಾದ ರಾಜರು ಯಾರೂ ಇಲ್ಲದೆ, ಕ್ಷುದ್ರರಾಜರುಗಳೇ ಬಹಳವಾದರು. ಇವರ ಕಾಲದಲ್ಲಿ ದೇವರಪೂಜೆ ವೇದಮಾರ್ಗ ಇದೆಲ್ಲವೂ ಹೆಸರಿಗೆಮಾತ್ರ ಇದ್ದಿತು.

೭೫. ಈವೇಳೆಗೆ ಪುಷ್ಯಮಿತ್ರನು ರಾಜ್ಯವಾಳಿ ಕಲಿಯುಗದಲ್ಲಿ ಮೂರುಸಾವಿರದ ನೂರಮೂವತ್ತೆರಡು ವರ್ಷಗಳಾದುವು. ಆಗ ದೇವತೆಗಳೆಲ್ಲರೂ ಆ ಕಾಲದ ರಾಜರುಗಳ ಅಧರ್ಮಮಯವಾದ ಆಳ್ವಿಕೆಯಿಂದ ತುಂಬಾ ದುಃಖಿತರಾದರು.

ಕೃಷ್ಣಚೈತನ್ಯಮಾಗಮ್ಯ ನತ್ವೋಚುರ್ವಚನಂ ಪ್ರಿಯಂ ।
ಭಗವನ್ ಕಲಿಕಾಲೇಽದ್ಯ ವರ್ಣಾಶ್ಚತ್ವಾರಿ ಭೂತಲೇ ॥ ೭೬ ॥

ಭ್ರಷ್ಟಾಚಾರಾಃ ಪ್ರೇತಮಯಾಃ ಶತಾರ್ಧಾಬ್ದಪ್ರಜೀವಿನಃ ।
ದೇವಾನ್ ಪಿತೄಂಸ್ತಿರಸ್ಕೃತ್ಯ ಪಿಶಾಚಾನ್ ಪೂಜಯಂತಿ ವೈ ॥ ೭೭ ॥

ಗ್ರಾಮೇಗ್ರಾಮೇ ಚ ಕುಷ್ಠಾನಿ ಪೂಜಿತಾನಿ ನರೈರ್ಭುವಿ ।
ದೃಶ್ಯಂತೇಽಸ್ಮಾಭಿರದ್ಯೈವ ದುಃಖಿತಾಶ್ಚ ನರಾ ಭೃಶಂ ॥ ೭೮ ॥

ಭೂತಪ್ರೇತಪಿಶಾಚಾಶ್ಚ ಡಾಕಿನೀಶಾಕಿನೀಗಣಾಃ ।
ಸ್ವಪೂಜಾಭಿರ್ಮದಾಂಧಾಶ್ಚ ನಿಂದಯಂತಿ ಸುರಾನ್ ಪಿತೄನ್ ॥ ೭೯ ॥

ಅತೋಽಸ್ಮಾನ್ದುರ್ಬಲಾನ್ವಿದ್ಧಿ ಸಬಲಾನ್ಭೂತನಾಯಕಾನ್ ।
ಕೃಪಯಾ ಪಾಹಿ ನಃ ಸ್ವಾಮಿಞ್ಛರಣಾಗತವತ್ಸಲ ॥ ೮೦ ॥

---

೭೬-೭೭. ಅನಂತರ ದೇವತೆಗಳೆಲ್ಲರೂ ಕೃಷ್ಣಚೈತನ್ಯನ ಸಮೀಪಕ್ಕೆ ಬಂದು ಅವನಿಗೆ ನಮಸ್ಕರಿಸಿ "ಎಲೈ ಸ್ವಾಮಿಯೇ ! ಕಲಿಯುಗದಲ್ಲಿ ಈ ಭೂಮಂಡಲದಲ್ಲಿ ವಾಸಿಸುತ್ತಿರುವ ಬ್ರಹ್ಮ, ಕ್ಷತ್ರ, ವೈಶ್ಯ, ಶೂದ್ರರೆಂಬ ನಾಲ್ಕುವರ್ಣಗಳೂ ಸಹ ಆಚಾರ ಹೀನರಾಗಿ ಪ್ರೇತಸ್ವರೂಪವನ್ನು ತಾಳಿ ಕೇವಲ ಐವತ್ತುವರ್ಷಗಳಕಾಲಮಾತ್ರ ಜೀವಿಸುತ್ತಾ ದೇವ ಪಿತೃ ಪೂಜೆ ಇವನ್ನು ಬಿಟ್ಟು ಪಿಶಾಚಿಗಳನ್ನು ಪೂಜೆಮಾಡುತ್ತಿರುವರು."

೭೮. "ಪ್ರತಿಯೊಂದು ಗ್ರಾಮದಲ್ಲಿಯೂ ಜನಗಳು ಪ್ರೇತಗಳನ್ನೇ ಪೂಜಿಸುತ್ತಿರುವರು. ಈ ಆಚರಣೆಯಿಂದ ದುಃಖಿತರಾದ ಮನುಷ್ಯರನ್ನು ನಾವೆಲ್ಲರೂ ಈಗತಾನೆ ನೋಡಿಬಂದಿರುವೆವು."

೭೯. "ಭೂತ, ಪ್ರೇತ, ಪಿಶಾಚಾದಿಗಳೂ, ಡಾಕಿನೀ ಮತ್ತು ಶಾಕಿನೀ ಗಣಗಳೂ ಸಹ, ತಮ್ಮನ್ನು ಮನುಜರು ಪೂಜಿಸುವುದರಿಂದ ಕೊಬ್ಬಿ ಮದಾಂಧರಾಗಿ ದೇವತೆಗಳನ್ನೂ, ಪಿತೃಗಳನ್ನೂ ಸಹ ನಿಂದೆಮಾಡುತ್ತಿರುವರು."

೮೦. "ಆದುದರಿಂದ ಸ್ವಾಮೀ ! ನಾವೆಲ್ಲರೂ ಈಗ ದುರ್ಬಲರಾಗಿರುವೆವು. ಭೂತಗಣಗಳೆಲ್ಲವೂ ಬಲಶಾಲಿಗಳಾಗಿರುವುವು. ಹೇ ಶರಣಾಗತವತ್ಸಲಾ ! ದಯವಿಟ್ಟು ನಮ್ಮನ್ನು ಕಾಪಾಡು" ಎಂದು ದೇವತೆಗಳು ಕೃಷ್ಣಚೈತನ್ಯನನ್ನು ಪ್ರಾರ್ಥಿಸಿದರು.

ಇತಿ ಶ್ರುತ್ವಾ ಸ ಯಜ್ಞಾಂಶೋ ನದೀಹೋಪವನೇ ಸ್ಥಿತಃ ।
ನಮ್ರಭೂತಾನ್ ಸುರಾನ್ಪ್ರಾಹ ಮಾಗಧೇ ತು ಮಹೀಪತಿಃ ॥ ೮೧॥

ಪುರಂಜಯೋ ಬ್ರಹ್ಮಪರಸ್ತಸ್ಯ ಪತ್ನೀ ಪುರಂಜನೀ ।
ಮದಾಜ್ಞಯಾ ತಯೋಃ ಪುತ್ರೋ ಭವಿಷ್ಯತಿ ಮಹಾಬಲಃ ॥ ೮೨ ॥

ವಿಶ್ವಸ್ಫೂರ್ಜಿರಿತಿ ಖ್ಯಾತೋ ಬ್ರಹ್ಮಮಾರ್ಗಪರೋ ಗುಣೀ ।
ಇತ್ಯುಕ್ತವಚನೇ ತಸ್ಮಿನ್ಗರ್ಭಂ ಧತ್ತೇ ಪುರಂಜನೀ ॥ ೮೩ ॥

ದಶಮಾಸಾಂತರೇ ಜಾತೋ ವಿಶ್ವಸ್ಫೂರ್ಜಿರ್ಮಹಾಬಲಃ ।
ಜಾತಮಾತ್ರೇ ಸುತೇ ತಸ್ಮಿನ್ವಾಗುವಾಚಾಶರೀರಿಣೀ ॥ ೮೪ ॥

ಪುಷ್ಯಮಿತ್ರೋ ಯಥಾ ಚಾಸೀದ್ವರ್ಣಧರ್ಮಪ್ರವರ್ತಕಃ ।
ತಥಾಯಂ ಬಾಲಕೋ ಜಾತೋ ಬ್ರಹ್ಮಮಾರ್ಗಪರೋ ಬಲೀ ॥ ೮೫ ॥

---

೮೧-೮೨. ದೇವತೆಗಳು ಹೀಗೆ ಹೇಳಿದುದನ್ನು ಕೇಳಿ ನದೀಹೋಪವನದಲ್ಲಿದ್ದ ಯಜ್ಞಾಂಶನು ವಿನೀತರಾಗಿ ಬಂದಿರುವ ದೇವತೆಗಳನ್ನು ಕುರಿತು "ಎಲೈ ದೇವತೆಗಳಿರಾ! ಮಗಧದೇಶದಲ್ಲಿ ಬ್ರಹ್ಮಧ್ಯಾನಪರನಾದ ಪುರಂಜಯನೆಂಬ ರಾಜನಿರುವನು. ಅವನಿಗೆ ಪತಿವ್ರತಾಶಿರೋಮಣಿಯಾದ ಪುರಂಜನೀ ಎಂಬ ಧರ್ಮಪತ್ನಿಯಿರುವಳು. ಈ ದಂಪತಿಗಳಿಗೆ ನನ್ನ ಅಪ್ಪಣೆಯಂತೆ ಮಹಾಬಲಶಾಲಿಯಾದ ಪುತ್ರನು ಜನಿಸುವನು.

೮೩. ಇವನು ವಿಶ್ವಸ್ಫೂರ್ಜಿ ಎಂಬ ಹೆಸರಿನಿಂದ ಪ್ರಸಿದ್ಧನೂ, ಗುಣಶಾಲಿಯೂ, ಬ್ರಹ್ಮಮಾರ್ಗತತ್ಪರನೂ ಆಗುವನು" ಎಂದು ಹೇಳಿದನು. ಅದರಂತೆಯೇ ಆ ಪುರಂಜನಿಯು ಗರ್ಭಿಣಿಯಾದಳು.

೮೪-೮೫. ಹತ್ತುತಿಂಗಳು ತುಂಬುವುದರಲ್ಲಿ ಮಹಾಬಲಶಾಲಿಯಾದ ವಿಶ್ವಸ್ಫೂರ್ಜಿಯು ಜನಿಸಿದನು. ಇವನ ಜನನಕಾಲದಲ್ಲಿ "ಪುಷ್ಯಮಿತ್ರ ರಾಜನು ವರ್ಣಧರ್ಮಗಳನ್ನು ಪ್ರೋತ್ಸಾಹಿಸುತ್ತಾ ಧರ್ಮಮಾರ್ಗದಲ್ಲಿ ರಾಜ್ಯವಾಳಿದಂತೆಯೇ ಈ ಬಾಲಕನೂ ಪ್ರಾರಂಭದಿಂದಲೇ ಬ್ರಹ್ಮಮಾರ್ಗತತ್ಪರನಾಗಿ ಬಲಶಾಲಿಯೆನಿಸಿ ರಾಜ್ಯವಾಳುವನು."

ಕರಿಷ್ಯತಿ ಪರೋ ವರ್ಣಾನ್ಕಲಿಂದ ಯದು ಮದ್ರಕಾನ್ ।
ಪ್ರಜಾಶ್ಚ ಬ್ರಹ್ಮಭೂಯಿಷ್ಠಾಃ ಸ್ಥಾಪಯಿಷ್ಯತಿ ದುರ್ಮತೀಃ ॥ ೮೬ ॥

ವೀರ್ಯವಾನ್‌ಕ್ಷತ್ರಮುತ್ಸಾದ್ಯ ಪದ್ಮವತ್ಯಾಃ ಸ ವೈ ಪುರಂ ।
ಇತ್ಯಾಕಾಶವಚಃ ಶ್ರುತ್ವಾ ಸ ನೃಪಸ್ತು ಪುರಂಜಯಃ ॥ ೮೭ ॥

ದದೌ ದಾನಂ ಕ್ಷುಧಾರ್ತೇಭ್ಯೋಽತಿಥಿಭ್ಯಸ್ಸಪರಿಚ್ಛದಃ ।
ಅಷ್ಟೌ ವರ್ಷಸಹಸ್ರಾಣಿ ಚಾಷ್ಟವರ್ಷಶತಾನಿ ಚ ॥ ೮೮ ॥

ಕರ್ಮಭೂಮ್ಯಾಂ ಕಲೌ ಪ್ರಾಪ್ತೇ ವ್ಯತೀತಾನಿ ತದಾ ಮುನೇ ।
ವಿಶ್ವಸ್ಫೂರ್ಜಿರ್ನೃಪಶ್ಚಾಸೀನ್ಮಹಾಬುದ್ಧೋ ಮಹಾಬಲಃ ॥ ೮೯ ॥

ಕ್ಷುದ್ರಭೂಪಾನ್ವಶೀಕೃತ್ಯ ಸರ್ವವರ್ಣಾನ್ನರಾಂಸ್ತದಾ ।
ಸ್ಥಾಪಯಾಮಾಸ ವೈ ಬ್ರಹ್ಮೇ ವರ್ಣೇ ಬ್ರಹ್ಮಪರಾಯಣೇ ॥ ೯೦ ॥

---

೮೬. "ಇವನು ಕಳಿಂದ, ಯದು ಮತ್ತು ಮದ್ರದೇಶದ ಜನಗಳನ್ನೆಲ್ಲಾ ಶ್ರೇಷ್ಠಮಾರ್ಗಾವಲಂಬಿಗಳನ್ನಾಗಿ ಮಾಡಿ, ದುರ್ಬುದ್ಧಿಯುಳ್ಳ ಪ್ರಜೆಗಳನ್ನೆಲ್ಲಾ ಬ್ರಹ್ಮಜ್ಞಾನಾಸಕ್ತರಾಗುವಂತೆ ಮಾಡುವನು."

೮೭. "ಬಲಶಾಲಿಯಾದ ಈ ಬಾಲಕನು ಕ್ಷತ್ರಿಯರನ್ನೆಲ್ಲಾ ಯುದ್ಧದಲ್ಲಿ ಸೋಲಿಸಿ, ಪದ್ಮಾವತೀಪುರವೆಂಬ ಪಟ್ಟಣವನ್ನು ನಿರ್ಮಿಸುವನು" ಎಂದು ಆಕಾಶ ವಾಣಿಯಾಯಿತು.

೮೮. ಆ ಪುರಂಜಯನೆಂಬ ರಾಜನು ಹಸಿವಿನಿಂದ ಕೂಡಿದ ಅತಿಥಿಗಳಿಗೆ ವಸ್ತ್ರಗಳನ್ನೂ ಅನ್ನವನ್ನೂ ದಾನಮಾಡುತ್ತಿದ್ದನು. ಕರ್ಮಭೂಮಿಯಾದ ಈ ಭೂಮಂಡಲದಲ್ಲಿ ಆ ವೇಳೆಗೆ ಕಲಿಯುಗವು ಆರಂಭವಾಗಿ ಎಂಟುಸಾವಿರದ ಎಂಟು ನೂರು ವರ್ಷಗಳು ಕಳೆದುವು.

೮೯. ಎಲೈ ಶೌನಕನೇ! ಆಗ ಮಹಾಜ್ಞಾನಿಯೂ, ಮಹಾಬಲಶಾಲಿಯೂ ಆದ ವಿಶ್ವಸ್ಫೂರ್ಜಿಯು ಪಟ್ಟಕ್ಕೆ ಬಂದನು.

೯೦. ಈ ವಿಶ್ವಸ್ಫೂರ್ಜಿಯು ಕ್ಷುದ್ರರಾಜರನ್ನೆಲ್ಲಾ ಸೋಲಿಸಿ ತನ್ನ ಅಧೀನ ಪಡಿಸಿಕೊಂಡು ಬ್ರಹ್ಮ, ಕ್ಷತ್ರ, ವೈಶ್ಯ, ಶೂದ್ರರೆಂಬ ನಾಲ್ಕು ವರ್ಣದವರಲ್ಲಿ ಬ್ರಹ್ಮಪರ ರಾಗಿರುವವರೆಲ್ಲ ಬ್ರಾಹ್ಮಣ ವರ್ಣದಲ್ಲಿ ಸೇರಿ ಇರುವಂತೆ ವಿಧಿಸಿದನು.

ಕ್ಷತ್ರವಿಟ್‌ಚ್ಛೂದ್ರಕಾ ವರ್ಣಾಃ ಪಿಶಾಚಾ ವರ್ಣಸಂಕರಾ ।
ಗುರುಂಡಾದ್ಯಾಸ್ತಥಾ ಮ್ಲೇಚ್ಛಾ ಬ್ರಾಹ್ಮಣಾಸ್ತೇ ಬಭೂವಿರೇ ॥ ೯೧ ॥

ಸಂಧ್ಯಾತರ್ಪಣದೇವಾನಾಂ ಪೂಜಾದಿವಿವಿಧಾಃ ಕ್ರಿಯಾಃ ।
ಚಕ್ರುಸ್ತೇ ವೇದವಿಧಿನಾ ತುಲ್ಯಭೋಜನಶೀಲಿನಃ ॥ ೯೨ ॥

ಷಷ್ಟಿವರ್ಷಂ ಕೃತಂ ರಾಜ್ಯಂ ತೇನ ಸಮ್ಯಕ್ಕೃತಾ ಮುನೇ ।
ತದನ್ವಯೇ ನೃಪಾಶ್ಚಾಸನ್ಸಹಸ್ರಾ ಭುವಿ ವಿಶ್ರುತಾಃ ॥ ೯೩ ॥

ಅಯುತಾಬ್ದಾಂತರೇ ಜಾತಾ ಬ್ರಹ್ಮಮಾರ್ಗಪರಾಯಣಾಃ ।
ತೈಶ್ಚ ದತ್ತಾನಿ ಭಾಗಾನಿ ಯಜ್ಞಮಧ್ಯೇ ವಿಧಾನತಃ ॥ ೯೪ ॥

---

೯೧. ಕ್ಷತ್ರ, ವೈಶ್ಯ ಮತ್ತು ಶೂದ್ರರೆಂಬ ಮೂರುವರ್ಣಗಳವರೂ ಪಿಶಾಚರೂ, ವರ್ಣಸಂಕರಹೊಂದಿದವರೂ, ಗುರುಂಡ ಮೊದಲಾದ ಎಲ್ಲಾ ಮ್ಲೇಚ್ಛರೂ ಸಹ ಈ ವಿಶ್ವಸ್ಫೂರ್ಜಿಯ ಕಾಲದಲ್ಲಿ ಬ್ರಾಹ್ಮಣರಾದರು.

೯೨ ಈರೀತಿ ಬ್ರಾಹ್ಮಣರಾಗಿ ಪರಿವರ್ತಿತವಾದ ಜನಗಳೆಲ್ಲರೂ, ಸಂಧ್ಯಾವಂದನೆ, ತರ್ಪಣ, ದೇವತಾಪೂಜೆ ಮೊದಲಾದ ಸಕಲಕರ್ಮಗಳನ್ನೂ, ವೇದೋಕ್ತ ವಿಧಿಯಂತೆಯೇ ನಡೆಯಿಸಿ, ಬ್ರಾಹ್ಮಣರೊಡನೆಯೇ ಸಮಾನರಾಗಿ ಕೂಡಿ ಭೋಜನ ಮಾಡುತ್ತಿದ್ದರು.

೯೩. ಅಯ್ಯಾ ಶೌನಕನೇ! ಈರೀತಿ ಆ ವಿಶ್ವಸ್ಫೂರ್ಜಿಯು ಅರವತ್ತು ವರ್ಷಗಳ ಕಾಲ ನಿಯಮದಿಂದ ಚೆನ್ನಾಗಿ ರಾಜ್ಯವಾಳಿದನು. ಇವನ ವಂಶದಲ್ಲಿ ಸಾವಿರಾರುಮಂದಿ ಪ್ರಸಿದ್ಧರಾದ ರಾಜರು ರಾಜ್ಯವಾಳಿ ಕಾಲಧರ್ಮವನ್ನೈದಿದರು.

೯೪-೯೫. ಇವನನಂತರ ಹತ್ತುಸಾವಿರವರ್ಷಗಳವರೆಗೆ ಬ್ರಹ್ಮಮಾರ್ಗಪರಾಯಣರಾದ ರಾಜರುಗಳೇ ಭಾರತಭೂಮಿಯನ್ನು ಆಳುತ್ತಿದ್ದರು. ಇವರುಗಳೆಲ್ಲರೂ ಯಾಗಮಾಡಿ ಆ ಯಜ್ಞದ ಮಧ್ಯದಲ್ಲಿ ಕ್ರಮವಾಗಿ ರಾಕ್ಷಸರಿಗೂ ಮತ್ತು ದೇವತೆ

ದೈತ್ಯೇಭ್ಯಶ್ಚ ಸುರೇಭ್ಯಶ್ಚ ತುಲ್ಯರೂಪಾಣಿ ಚಾಗಮನ್ ।
ವಿಸ್ಮಿತಾಶ್ಚ ಸುರಾಸ್ಸರ್ವೇ ಯಜ್ಞಾಂಶಂ ಶರಣಂ ಯಯುಃ ॥ ೯೫ ॥

ತದುಕ್ತಂ ಕಾರಣಂ ಜ್ಞಾತ್ವಾ ಶಕ್ರಪುತ್ರ ಉವಾಚ ತಾನ್ ।
ವೇದೋ ನಾರಾಯಣಃ ಸಾಕ್ಷಾದ್ವಿವೇಕೀ ಹಂಸರೂಪವಾನ್ ॥ ೯೬ ॥

ನೃಣಾಂ ಚ ಯುಗಭೇದೇನ ವರ್ಣಭೇದಂ ಚಕಾರ ಹ ।
ಸದ್ಗುಣೋ ಬ್ರಾಹ್ಮಣೋ ವರ್ಣಃ ಕ್ಷತ್ರಿಯಸ್ತು ರಜೋಗುಣಃ ॥ ೯೭ ॥

ತಮೋಗುಣಸ್ತಥಾ ವೈಶ್ಯೋ ಗುಣಸಾಮ್ಯಾತ್ತು ಶೂದ್ರಕಃ ।
ತೃಪ್ತಿಂ ಯಾಂತಿ ಪಿತುರ್ವೃಂದಾ ಬ್ರಾಹ್ಮಣೈಃ ಕ್ಷತ್ರಿಯೈಃ ಸುರಾಃ ॥ ೯೮ ॥

---

ಗಳಿಗೂ ಸಹ ಸಮನಾಗಿಯೇ ಹವಿರ್ಭಾಗವನ್ನು ಕೊಡತೊಡಗಿದರು. ಆಗ ದೇವತೆಗಳು ಇದನ್ನು ನೋಡಿ ಆಶ್ಚರ್ಯಚಕಿತರಾಗಿ ಪುನಃ ಯಜ್ಞಾಂಶನ ಸಮೀಪಕ್ಕೆ ಹೋಗಿ ಅವನನ್ನು ಮರೆಹೊಕ್ಕರು.

೯೬. ಆ ದೇವತೆಗಳು ನಡೆದ ವಿಚಾರವನ್ನೆಲ್ಲಾ ಆತನಿಗೆ ತಿಳಿಸಿದರು. ಇದನ್ನು ಕೇಳಿ ಶಕ್ರಪುತ್ರನಾದ ಯಜ್ಞಾಂಶನು ದೇವತೆಗಳನ್ನು ಕುರಿತು ಹೀಗೆಂದನು. "ವೇದವು ಸಾಕ್ಷಾನ್ನಾರಾಯಣಸ್ವರೂಪವು. ಈ ನಾರಾಯಣನೇ ವಿವೇಚನಾಪರನೂ ಹಂಸಸ್ವರೂಪನೂ ಆಗಿರುವನು."

೯೭. "ಈ ನಾರಾಯಣನು ಯುಗಭೇದಾನುಸಾರ ಮನುಜರಲ್ಲಿ ಜಾತಿಭೇದವನ್ನೇರ್ಪಡಿಸಿದನು. ಬ್ರಾಹ್ಮಣಜಾತಿಯು ಒಳ್ಳೆಯ ಸತ್ವಗುಣಭೂಯಿಷ್ಠವಾದುದು. ಕ್ಷತ್ರಿಯನು ರಜೋಗುಣವಿಶಿಷ್ಟನು."

೯೮. "ವೈಶ್ಯನು ತಮೋಗುಣಶಾಲಿಯು. ಶೂದ್ರನಲ್ಲಿ ಸತ್ವರಜಸ್ತಮೋಗುಣಗಳೆಲ್ಲವೂ ಸಮಾನವಾಗಿರುವುವು. ಬ್ರಾಹ್ಮಣರಿಂದ ಪಿತೃಗಣಗಳೂ ಕ್ಷತ್ರಿಯರಿಂದ ದೇವಗಣಗಳೂ ತೃಪ್ತಿಹೊಂದುವರು."

ವೈಶ್ಯೈಶ್ಚ ಯಕ್ಷರಕ್ಷಾಂಸಿ ಶೂದ್ರೈರ್ದೈತ್ಯಾಶ್ಚ ದಾನವಾಃ ।
ಏಕವರ್ಣೇ ಚ ಚತ್ವಾರೋ ವರ್ಣಾಃ ಕಾಯಸ್ಥ ಏವ ಸಃ ॥ ೯೯ ॥

ಭೂತಪ್ರೇತಪಿಶಾಚಾದ್ಯಾಃ ಕಾಯಸ್ಥೈಸ್ತರ್ಪಿತಾಸ್ತದಾ ।
ಬ್ರಹ್ಮವರ್ಣೇ ತು ವರ್ಣಾಶ್ಚ ಸ್ಥಿತಾಶ್ಚತ್ವಾರಿ ಸಾಂಪ್ರತಂ ॥ ೧೦೦ ॥

ಬ್ರಹ್ಮಶಂಕರವರ್ಣೋಽಯಂ ತೇಭ್ಯಃ ಪೂರ್ವಂ ಹಿ ದಾನವಾಃ ।
ಅರ್ಧತೃಪ್ತಾ ಭವಿಷ್ಯಂತಿ ತತ್ಪಶ್ಚಾತ್ಸ್ವರ್ಗವಾಸಿನಃ ॥ ೧೦೧ ॥

ಅತೋಽಹಂ ಚ ಕಲೌ ಘೋರೇ ಯುಷ್ಮದರ್ಥೇ ಮಹೀತಲೇ ।
ಸೌರಾಷ್ಟ್ರನೃಪತೇರ್ಗೇಹಂ ಸ್ವಾಂಶಾದ್ಯಾಸ್ಯಾಮಿ ಭೋಃ ಸುರಾಃ ॥ ೧೦೨ ॥

ಇತ್ಯುಕ್ತ್ವಾ ಸ ಚ ಯಜ್ಞಾಂಶಃ ಸೋಮನಾಥಃ ಕಲೈಕಯಾ ।
ನಾಮ್ನಾ ಬಭೂವ ತದ್ಗೇಹೇ ಸೌರಾಷ್ಟ್ರನಗರೀಸ್ಥಿತಃ ॥ ೧೦೩ ॥

---

೯೯. ವೈಶ್ಯರಿಂದ ಯಕ್ಷ ರಾಕ್ಷಸರೂ, ಶೂದ್ರರಿಂದ ದೈತ್ಯ ದಾನವರೂ, ಸಹ, ತೃಪ್ತರಾಗುವರು. ಹಿಂದೆ ಕಾಯಸ್ಥ ಎಂಬ ಒಂದು ಜಾತಿಯಿದ್ದಿತು. ಈ ವರ್ಣದವರು ತಮ್ಮ ಪೂಜೆಗಳಿಂದ ನಾಲ್ಕು ವರ್ಣದವರನ್ನೂ ತೃಪ್ತಿಪಡಿಸುತ್ತಿದ್ದರು.

೧೦೦. ಅಲ್ಲದೆ ಈ ಕಾಯಸ್ಥರು ಭೂತಪ್ರೇತಪಿಶಾಚಗಳನ್ನೂ ಪೂಜೆಮಾಡಿ ತೃಪ್ತಿಪಡಿಸುತ್ತಿದ್ದರು. ಈಗ ಈ ಬ್ರಾಹ್ಮಣರೇ ಈ ನಾಲ್ಕು ವರ್ಣಗಳಿಗೂ ಆಶ್ರಯರಾಗಿ ಈ ಕೆಲಸವನ್ನು ಮಾಡುತ್ತಿರುವರು.

೧೦೧. ಬ್ರಾಹ್ಮಣಜಾತಿಯಲ್ಲಿ ಶಿವನ ಆರಾಧಕರಾದವರು ಹಿಂದೆ ದಾನವರನ್ನು ಪೂಜೆಮಾಡುತ್ತಿದ್ದರು. ಇದರಿಂದ ಈ ದಾನವರು ಅರ್ಧತೃಪ್ತರಾಗಿ ಅನಂತರ ಸ್ವರ್ಗವನ್ನು ಪಡೆಯುತ್ತಿದ್ದರು.

೧೦೨. ಎಲೈ ದೇವತೆಗಳಿರಾ ! ಆದುದರಿಂದ ಘೋರವಾದ ಈ ಕಲಿಯುಗದಲ್ಲಿ ನಾನು ಈ ಭೂಮಂಡಲದಲ್ಲಿ ಸೌರಾಷ್ಟ್ರದೇಶದ ರಾಜನ ಮನೆಯಲ್ಲಿ ನನ್ನ ಅಂಶದಿಂದ ಅವತರಿಸಿ ದೇವಕಾರ್ಯವನ್ನೆಸಗುವೆನು.

೧೦೩. ಈರೀತಿ ಹೇಳಿ ಯಜ್ಞಾಂಶನು ತನ್ನ ಕಲಾಂಶದಿಂದ ಕೂಡಿ ಸೋಮನಾಥನಾಮದಿಂದ ಪ್ರಸಿದ್ಧನಾಗಿ ಸೌರಾಷ್ಟ್ರರಾಜನ ಮನೆಯಲ್ಲಿ ಜನಿಸಿದನು.

ಜಿತ್ವಾ ಭೂಪಾನ್ಸ್ವಯಂ ರಾಜ್ಯಂ ಚಕಾರಾಬ್ಧಿತಟೇ ಮುದಾ ।
ಕ್ಷತ್ರವರ್ಣಮಯೀ ಭೂಮಿಸ್ತದಾ ಜಾತಾ ಕಲೌ ಯುಗೇ ॥ ೧೦೪ ॥

ಸೋಮನಾಥಃ ಸ ವೈ ಯಜ್ಞೈಃ ಸುರಾನ್ಸರ್ವಾನತರ್ಪಯತ್ ।
ಶತಾಬ್ದಂ ಚ ಕೃತಂ ರಾಜ್ಯಂ ತೇನ ದೇವಪ್ರಸಾದತಃ ॥ ೧೦೫ ॥

ತಸ್ಯ ರಾಜ್ಯಮಯೀ ಸಂಪದಭವಲ್ಲೋಕವಿಶ್ರುತಾ ।
ತದನ್ವಯೇ ಸಾರ್ಧಶತಂ ಭೂಪಾಶ್ಚಾಸನ್ಸುರಪ್ರಿಯಾಃ ॥ ೧೦೬ ॥

ಅಯುತಾಬ್ದಾಂತರೇ ಕಿಂಚಿದಧಿಕೇ ಚ ಸುಖಪ್ರದಾಃ ।
ಕರ್ಮಭೂಮ್ಯಾಂ ಕಲೌ ಪ್ರಾಪ್ತೇ ಹಾಯನಾ ಅಯುತತ್ರಯಂ ॥ ೧೦೭ ॥

ವ್ಯತೀತಂ ಚ ತತೋ ದೈತ್ಯಾ ದುಃಖಿತಾಃ ಕಲಿಮಬ್ರುವನ್ ।
ಪುರಾಸ್ಮಾಭಿಃ ಶತಾಬ್ದಂ ಚ ತಪಸಾ ವೈ ಮಹೇಶ್ವರಃ ॥ ೧೦೮ ॥

---

೧೦೪. ಈ ಸೋಮನಾಥನು ಎಲ್ಲಾ ರಾಜರುಗಳನ್ನೂ ಜಯಿಸಿ ತಾನು ಸಮುದ್ರತೀರರಾಜ್ಯದಲ್ಲಿ ಸಂತೋಷದಿಂದ ರಾಜ್ಯವಾಳಿದನು. ಕಲಿಯುಗದಲ್ಲಿ ಇವನ ಕಾಲದಲ್ಲಿ ಭೂಮಿಯೆಲ್ಲಾ ಕ್ಷತ್ರಿಯಜಾತಿಯ ಜನಗಳಿಂದ ತುಂಬಿದ್ದಿತು.

೧೦೫. ಈ ಸೋಮನಾಥನು ಅನೇಕ ಯಾಗಗಳನ್ನು ಮಾಡಿ ದೇವತೆಗಳನ್ನೆಲ್ಲಾ ಹವಿರ್ಭಾಗಗಳಿಂದ ತೃಪ್ತಿಪಡಿಸಿದನು. ಇವನು ದೇವತೆಗಳ ಅನುಗ್ರಹದಿಂದ ನೂರುವರ್ಷಗಳಕಾಲ ರಾಜ್ಯವಾಳಿದನು.

೧೦೬-೧೦೭ ಇವನ ರಾಜ್ಯಭಾರಕಾಲದಲ್ಲಿ ಈ ದೇಶದ ಸಂಪತ್ತು ಲೋಕಪ್ರಸಿದ್ಧವಾಗಿದ್ದಿತು ಇವನ ವಂಶದಲ್ಲಿ ಜನಿಸಿದ ನೂರೈವತ್ತುಮಂದಿ ರಾಜರೂ ಸಹ ದೇವತಾಪ್ರಿಯರಾಗಿಯೇ ರಾಜ್ಯವಾಳಿದರು. ಇವರೆಲ್ಲರೂ ಸ್ವಲ್ಪ ಹೆಚ್ಚುಕಡಿಮೆ ಹತ್ತುಸಾವಿರವರ್ಷಗಳವರೆಗೆ ರಾಜ್ಯವಾಳಿ ಪ್ರಜೆಗಳಿಗೆಲ್ಲಾ ಸುಖವನ್ನುಂಟುಮಾಡಿದರು. ಇಷ್ಟುಹೊತ್ತಿಗೆ ಕರ್ಮಭೂಮಿಯಾದ ಈ ಭಾರತದೇಶದಲ್ಲಿ ಕಲಿಯುಗ ಪ್ರಾಪ್ತವಾಗಿ ಮೂವತ್ತುಸಾವಿರ ವರ್ಷಗಳಾಗಿದ್ದುವು.

೧೦೮-೧೧೯ ಆಗ ದೈತ್ಯರೆಲ್ಲರೂ ತಮ್ಮ ಅಧರ್ಮಮಯಕರ್ಮಾಚರಣೆಗೆ ಅವಕಾಶವಿಲ್ಲದುದರಿಂದ ಬಹಳ ದುಃಖಿತರಾಗಿ ಕಲಿಪುರುಷನನ್ನು ಕುರಿತು " ಎಲೈ

ತುಷ್ಟೀಕೃತಸ್ತದಾಸ್ಮಭ್ಯಂ ಭವಾನ್ದತ್ತೋ ಹಿತೇನ ವೈ ।
ಅರ್ಧಭಾಗಂ ವಜ್ರಮಯಮರ್ಧಭಾಗಂ ಚ ಕೋಮಲಂ　　॥ ೧೦೯ ॥

ತವಾಂಗಂ ಸುಂದರಂ ದೇವ ಕಲೇಽಸ್ಮಾನ್ರಕ್ಷ ದುಃಖಿತಾನ್ ।
ಇತಿ ಶ್ರುತ್ವಾ ಚ ಸ ಕಲಿಃ ದೈತ್ಯಪಕ್ಷವಿವರ್ಧನಃ　　॥ ೧೧೦ ॥

ಸ್ವಾಂಶಾಜ್ಜನ್ಮ ಕಲೌ ಪ್ರಾಪ್ಯ ಗುರ್ಜರೇ ದೇಶದಾರುಣೇ ।
ಆಭೀರೀ ಸಿಂಹಿಕಾ ನಾಮ ಸಿಂಹಮಾಂಸಾಶನಾ ಖಲಾ　　॥ ೧೧೧ ॥

ತಸ್ಯಾ ಯೋನೌ ಸಮಾಗಮ್ಯ ರಾಹುರ್ನಾಮ ಸ ಚಾಭವತ್ ।
ಯಥಾ ರಾಹುರ್ನಭೋಮಾರ್ಗೇ ದಾರುಣೋ ಹಿ ವಿಧುಂತುದಃ ॥ ೧೧೨ ॥

ತಥಾ ರಾಹುಃ ಕಲೇರಂಶೋ ಭುವಿ ಜಾತಃ ಸುರಂತುದಃ ।
ಜಾತಮಾತ್ರೇ ಸುತೇ ತಸ್ಮಿನ್ ಭೂಮಿಕಂಪೋ ಮಹಾನಭೂತ್　　॥ ೧೧೩ ॥

---

ಮಹಾಪುರುಷನೇ! ಹಿಂದೆ ನಾವು ನೂರುವರ್ಷಗಳಕಾಲ ಪರಮೇಶ್ವರನನ್ನು ಕುರಿತು ತಪಸ್ಸುಮಾಡಿ ಸಂತೋಷಪಡಿಸಿದೆವು. ಆಗ ಪರಮೇಶ್ವರನು ಸುಪ್ರಸನ್ನನಾಗಿ ಅರ್ಧಭಾಗವು ವಜ್ರದಂತೆ ಕಠಿನವಾಗಿಯೂ ಉಳಿದರ್ಧಭಾಗ ಮೃದುವಾಗಿಯೂ ಇರುವ ಶರೀರವುಳ್ಳ ಪೂಜ್ಯನಾದ ನಿನ್ನನ್ನೇ ನಮಗೆ ಅನುಗ್ರಹಿಸಿದನು.

೧೧೦-೧೧೩ "ಎಲೈ ಕಲಿದೇವನೇ! ಸುಂದರಾಂಗನಾದ ನೀನು ದುಃಖಿತನಾಗಿರುವ ನಮ್ಮನ್ನು ರಕ್ಷಿಸು" ಎಂದು ಪ್ರಾರ್ಥಿಸಲು ಅದನ್ನು ಕೇಳಿ ದೈತ್ಯರ ಪಕ್ಷವನ್ನು ಅಭಿವೃದ್ಧಿಗೊಳಿಸುವ ಆ ಕಲಿಯು, ತನ್ನ ಅಂಶದಿಂದ ಕಲಿಯುಗದಲ್ಲಿ ಭಯಂಕರವಾದ ಗುರ್ಜರದೇಶದ ನಿವಾಸಿನಿಯೂ, ಸಿಂಹಮಾಂಸವನ್ನು ಭಕ್ಷಿಸುವವಳೂ, ತುಂಬಾ ದುಷ್ಟಳೂ ಆದ ಸಿಂಹಿಕಾ ಎಂಬ ಶೂದ್ರಸ್ತ್ರೀಯಲ್ಲಿ ರಾಹುವೆಂಬ ಹೆಸರಿನಿಂದ ಜನಿಸಿದನು. ಭಯಂಕರನಾದ ರಾಹುಗ್ರಹವು ಅಂತರಿಕ್ಷದಲ್ಲಿ ಹೇಗೆ ಚಂದ್ರನನ್ನು ಪೀಡಿಸುವನೋ ಅದರಂತೆಯೇ ಈ ರಾಹುವೂ ಸಹ ಕಲಿಯ ಅಂಶದಿಂದ ಭೂಮಿಯಲ್ಲಿ ಜನಿಸಿ ದೇವತೆಗಳನ್ನು ಹಿಂಸೆಪಡಿಸುತ್ತಿದ್ದನು. ಈ ಮಹಾಪುರುಷನು ಹುಟ್ಟಿದಕೂಡಲೆ ದೊಡ್ಡ ಭೂಕಂಪವಾಯಿತು.

ವಿಪರೀತಾ ಗ್ರಹಾಃ ಸರ್ವೇ ಜನಯಂತಿ ಮಹದ್ಭಯಂ ।
ತದ್ಭಯಾತ್ಸಕಲಾ ದೇವಾಸ್ತ್ಯಕ್ತ್ವಾ ಮೂರ್ತೀಃ ಸಮಂತತಃ ॥ ೧೧೪ ॥

ಮಹೇಂದ್ರಂ ಶರಣಂ ಜಗ್ಮುಃ ಸುಮೇರುಗಿರಿಮೂರ್ಧನಿ ।
ತದರ್ಥೇ ಭಗವಾಞ್ಛಕ್ರಸ್ತುಷ್ಟಾವ ಜಗದಂಬಿಕಾಂ ॥ ೧೧೫ ॥

ಕನ್ಯಾ ಮೂರ್ತಿಮಯೀ ದೇವೀ ಸುರಾನ್‌ಪ್ರಾಹ ಶಿವಂಕರೀ ।
ಮಮಾಂಗದರ್ಶನಾದ್ದೇವಾಃ ಕ್ಷುತ್‌ತೃಡ್ಭ್ಯಾಂ ಚ ವಿನಾ ಸದಾ ॥ ೧೧೬ ॥

ಭವಧ್ವಂ ಚ ತತೋ ಯೂಯಂ ಮದ್ವಿಲೋಕನತತ್ಪರಾಃ ।
ಇತಿ ಶ್ರುತ್ವಾ ತು ತೇ ದೇವಾ ಹರ್ಷಿತಾಃ ಸಂಬಭೂವಿರೇ ॥ ೧೧೭ ॥

ಆಭೀರೀತನಯೋ ರಾಹುಃ ಕೃತ್ವಾ ರಾಜ್ಯಂ ಶತಂ ಸಮಾಃ ।
ತ್ಯಕ್ತ್ವಾ ಪ್ರಾಣಾನ್ಕಲೌ ಘೋರೇ ಬಭೂವ ಮುನಿಸತ್ತಮ ॥ ೧೧೮ ॥

---

೧೧೪. ಗ್ರಹಗಳೆಲ್ಲವೂ ಕ್ರೂರದೃಷ್ಟಿಯುಳ್ಳವುಗಳಾಗಿ ತುಂಬಾ ಭಯವನ್ನುಂಟುಮಾಡುತ್ತಿದ್ದುವು. ಈ ಹೆದರಿಕೆಯಿಂದ ದೇವತೆಗಳೆಲ್ಲರೂ ಮೂರ್ತಿಗಳಲ್ಲಿ ನೆಲೆಸುವುದನ್ನು ಬಿಟ್ಟರು.

೧೧೫. ಅವರು ಎತ್ತೆತ್ತಲೋ ಓಡುತ್ತಾ ಮಹೇಂದ್ರನ ಸಮೀಪಕ್ಕೆ ಬಂದು ಅವನನ್ನು ಮರೆಹೊಕ್ಕರು. ಆಗ ಇಂದ್ರನು ಸುಮೇರುಪರ್ವತದ ಶಿಖರದಲ್ಲಿ ಇದ್ದ ಕ್ಷೇಮಂಕರ ಜಗದಂಬಿಕೆಯನ್ನು ಸ್ತೋತ್ರಮಾಡಿದನು.

೧೧೬. ಆಗ ಜಗದಂಬಿಕೆಯು ಪ್ರಸನ್ನೆಯಾಗಿ, ಕನ್ಯಾರೂಪವನ್ನು ತಾಳಿ ದೇವತೆಗಳನ್ನು ಕುರಿತು ಶುಭಾಶಂಸನಮಾಡುತ್ತಾ,

೧೧೭. "ಎಲೈ ದೇವತೆಗಳಿರಾ! ನೀವು ನನ್ನ ಅವಯವದರ್ಶನಮಾತ್ರದಿಂದಲೇ ಹಸಿವು ಬಾಯಾರಿಕೆಗಳಿಲ್ಲದವರಾಗುವಿರಿ. ನನ್ನನ್ನು ಸದಾ ದರ್ಶನ ಮಾಡುವುದರಿಂದ ನಿಮಗೆ ಯಾವ ಭಯವೂ ಉಂಟಾಗಲಾರದು" ಎಂದು ಹೇಳಿದಳು. ಇದನ್ನು ಕೇಳಿ ದೇವತೆಗಳೆಲ್ಲರೂ ಸಂತೋಷ ಹೊಂದಿದರು.

೧೧೮. "ಎಲೈ ಮುನಿಶ್ರೇಷ್ಠನೇ! ಈ ಶೂದ್ರಸ್ತ್ರೀಪುತ್ರನಾದ ರಾಹುವು ಭಯಂಕರವಾದ ಈ ಕಲಿಯುಗದಲ್ಲಿ ನೂರುವರ್ಷ ರಾಜ್ಯವಾಳಿ ಮೃತನಾದನು.

ತದನ್ವಯೇ ಸಾರ್ಧಶತಮಯುತಾಬ್ದಾಂತರೇಽಭವತ್ ।
ಮಹಾಮದಮತಂ ಘೋರಂ ಚಿರಕಾಲಾದ್ವಿನಾಶಿತಂ ॥ ೧೧೯ ॥

ತೈಃ ಪುನಶ್ಚೋದ್ಧೃತಂ ಭೂಮೌ ಸರ್ವೇ ಮ್ಲೇಚ್ಛಾ ಬಭೂವಿರೇ ।
ನ ವೇದಾಶ್ಚ ನ ದೇವಾಶ್ಚ ನ ವರ್ಣಾಶ್ಚ ಕಲೌ ಯುಗೇ ॥ ೧೨೦ ॥

ದೃಶ್ಯಂತೇ ನ ಚ ಮರ್ಯಾದಾ ಕಲಿಕಾಲೇ ತದನ್ವಯೇ ।
ದ್ವಿಜಶೇಷಾಃ ಸಹಸ್ರಾಶ್ಚ ಪುನರರ್ಬುದಮೂರ್ಧನಿ ॥ ೧೨೧ ॥

ದ್ವಾದಶಾಬ್ದಂ ಪ್ರಯತ್ನೇನ ದೇವಾನಾರಾಧಿತುಂ ಕ್ಷಮಾಃ ।
ಅರ್ಬುದಾಚ್ಚ ಸಮುದ್ಭೂತೋ ರಾಜನ್ಯಃ ಖಡ್ಗಚರ್ಮಧೃಕ್ ॥ ೧೨೨ ॥

ಜಿತ್ವಾ ಮ್ಲೇಚ್ಛಾನ್ದುರಾಧರ್ಷಾನ್ನಾಮ್ನಾ ಚಾರ್ವಬಲೀ ಹ್ಯಭೂತ್ ।
ಪಂಚಯೋಜನಮಾನಾ ಸ ಭೂಮಿರಾತ್ಮವಿವೃದ್ಧಯೇ ॥ ೧೨೩ ॥

---

೧೧೯-೧೨೦. ಈ ರಾಹುವಿನ ವಂಶದಲ್ಲಿ ನೂರೈವತ್ತು ಜನ ರಾಜರು ಜನಿಸಿ ರಾಜ್ಯವನ್ನು ಹತ್ತುಸಾವಿರ ವರ್ಷಗಳಾಳಿದರು. ಇವರ ಕಾಲದಲ್ಲಿ ಹಿಂದೆ ಬಹಳ ಅಭಿವೃದ್ಧಿಯಲ್ಲಿದ್ದು ಖಿಲವಾಗಿದ್ದ ಘೋರವಾದ ಮಹಮ್ಮದಮತವು ಪುನಃ ಉದ್ಧಾರವಾಗಿ ಎಲ್ಲರೂ ಮ್ಲೇಚ್ಛರಾದರು. ಆಗ ಕಲಿಯುಗದಲ್ಲಿ ವೇದವಾಗಲಿ, ದೇವತೆಗಳಾಗಲಿ ಜಾತಿಭೇದಗಳಾಗಲಿ ಯಾವುದೂ ಇಲ್ಲದಂತೆ ನಾಶವಾಯಿತು.

೧೨೧-೧೨೨. ಅವರ ಕಾಲದಲ್ಲಿ ಒಂದುರೀತಿಯ ಬಿಗಿಯಾದ ಆಡಳಿತವೇ ಇಲ್ಲದೆ ನಡವಳಿಕೆಯೆಲ್ಲವೂ ಎಲ್ಲೆ ಮೀರಿದ್ದಿತು ಕಳೆದುಳಿದ ಸಾವಿರ ಬ್ರಾಹ್ಮಣರು, ಅರ್ಬುದನೆಂಬವನು ಮುಂದಾಳುತನದಲ್ಲಿ ಹನ್ನೆರಡು ವರ್ಷಗಳು ಪ್ರಯತ್ನಪೂರ್ವಕವಾಗಿ ದೇವತೆಗಳನ್ನು ಸಾಂಗವಾಗಿ ಪೂಜಿಸಿದರು. ಅನಂತರ ಈ ಅರ್ಬುದನಿಗೆ ಖಡ್ಗಚರ್ಮಧೃಕ್ ಎಂಬ ಕ್ಷತ್ರಿಯಕುಮಾರನೊಬ್ಬನು ಉದಯಿಸಿದನು.

೧೨೩. ಇವನು ದುಷ್ಟರಾದ ಮ್ಲೇಚ್ಛರನ್ನು ಜಯಿಸಿ ಚಾರ್ವಬಲೀ ಎಂಬ ಹೆಸರಿನಿಂದ ಪ್ರಸಿದ್ಧನಾದನು. ಈ ಚಾರ್ವಬಲಿಯು ಐದು ಯೋಜನ ವಿಸ್ತಾರವುಳ್ಳ ಭೂಮಿಯನ್ನು ತನ್ನ ನೂತನ ರಾಜಧಾನಿಗೋಸ್ಕರ ನಿರ್ದೇಶಿಸಿದನು.

ನಿರ್ಮಿತಾ ತೇನ ಶುದ್ಧೇನ ನಾಮ್ನಾ ಚಾರ್ವಪುರೀ ಸ್ಮೃತಾ ।
ಶನೈಃ ಶನೈರಾರ್ಯಕುಲಂ ಪುನಸ್ಸಚ ವವರ್ಧ ಹ ॥ ೧೨೪ ॥

ಶತಾರ್ಧಾಬ್ದಂ ಪ್ರಯತ್ನೇನ ತೇನ ರಾಜ್ಯಂ ಮಹತ್ಕೃತಂ ।
ತದನ್ವಯೇ ಸಾರ್ಧಶತಂ ನೃಪಾಶ್ಚಾಸಂಸ್ತದಾ ಮುನೇ ॥ ೧೨೫ ॥

ಅಯುತಾಬ್ದಾಂತರೇ ವೀರಾ ಮ್ಲೇಚ್ಛಮಿತ್ರಾಶ್ಚ ಸಂಕರಾಃ ।
ಮ್ಲೇಚ್ಛಕನ್ಯೋದ್ವಹಾ ಘೋರಾ ನಾಮಮಾತ್ರಾರ್ಯಮಾರ್ಗಗಾಃ
॥ ೧೨೬ ॥

ತದಾ ಮಾಲವದೇಶಸ್ಥೈರ್ಮ್ಲೇಚ್ಛೈರ್ಲಕ್ಷಪ್ರಮಾಣಕೈಃ ।
ಅರ್ಬುದಾದ್ಯೈಃ ಸಮಂ ಯುದ್ಧಮಭವಲ್ಲೋಮಹರ್ಷಣಂ ॥ ೧೨೭ ॥

ವರ್ಷಮಾತ್ರಾಂತರೇ ಜಿತ್ವಾ ಮಾಲವಸ್ಥಾ ಮಹಾಬಲಾಃ ।
ಮಂಡಲೀಕಪದಾತ್ಯೈಶ್ಚ ಮುಕ್ತಮಾರ್ಯೈಃ ಸಮಂತತಃ ॥ ೧೨೮ ॥

---

೧೨೪. ಈ ಶುದ್ಧಾತ್ಮನು ಅಲ್ಲಿ ಚಾರ್ವಪುರೀ ಎಂಬ ಪ್ರಸಿದ್ಧವಾದ ಪಟ್ಟಣವನ್ನು ಕಟ್ಟಿದನು. ಇವನು ಆರ್ಯಕುಲವನ್ನು ಕ್ರಮೇಣ ಪುನಃ ಅಭಿವೃದ್ಧಿಗೊಳಿಸಿದನು.

೧೨೫-೧೨೬. ಈ ಚಾರ್ವಬಲಿಯು ಐವತ್ತುವರ್ಷಗಳಕಾಲ ರಾಜ್ಯವಾಳಿ ದೇಶವನ್ನು ವಿಸ್ತರಿಸಿದನು. ಎಲೈ ಶೌನಕನೇ! ಇವನ ವಂಶದವರು ನೂರೈವತ್ತು ಮಂದಿ ರಾಜರು ಹತ್ತುಸಾವಿರವರ್ಷಕಾಲ ರಾಜ್ಯವಾಳಿದರು. ವೀರರಾದ ಇವರೆಲ್ಲರೂ ಕಾಲಕ್ರಮದಲ್ಲಿ ಮ್ಲೇಚ್ಛರೊಡನೆ ಬೆರತುಹೋಗಿ ಮ್ಲೇಚ್ಛ ಕನ್ಯೆಯರನ್ನು ವಿವಾಹ ಮಾಡಿಕೊಂಡು ಹೆಸರಿಗೆ ಮಾತ್ರ ಆರ್ಯಧರ್ಮದವರೆನಿಸಿದ್ದರು.

೧೨೭. ಆ ಸಂದರ್ಭದಲ್ಲಿ ಮಾಲವದೇಶದ ಲಕ್ಷಜನ ಮ್ಲೇಚ್ಛರು ಅರ್ಬುದ ವಂಶೀಕರಾದ ಆರ್ಯರನ್ನು ಎದುರಿಸಿ ರೋಮಾಂಚವಾಗುವಂತೆ ಭಯಂಕರವಾಗಿ ಯುದ್ಧಮಾಡಿದರು.

೧೨೮. ಈ ಯುದ್ಧವು ಒಂದುವರ್ಷಕಾಲ ನಡೆಯಿತು. ಅಷ್ಟರಲ್ಲಿ ಆರ್ಯರೆಲ್ಲರೂ ಮಹಾಬಲಶಾಲಿಗಳಾದ ಆ ಮ್ಲೇಚ್ಛರಿಗೆ ಸೋತು ತಮ್ಮ ಸೈನ್ಯಗಳೊಡನೆ ಹಿಂಮೆಟ್ಟಿದರು.

ಚತ್ವಾರಿಂಶತ್ಸಹಸ್ರಾಣಿ ವರ್ಷಾಣಿ ಜಗತೀತಲೇ ।
ಮ್ಲೇಚ್ಛಭೂಪಾಶ್ಚ ಶತಶೋ ಬಭೂವುಃ ಸ್ವಲ್ಪಜೀವಿನಃ ॥ ೧೨೯ ॥

ಪಂಚವಿಂಶತ್ಸಹಸ್ರಾಣಿ ತೇಷಾಂ ಸಂಖ್ಯಾ ಚ ಭೂಭುಜಾಂ ।
ಯೇ ತು ಪುಣ್ಯಾ ಮಹೀಪಾಲಾಃ ಪೂರ್ವಜನ್ಮತಪೋದ್ಭವಾಃ ॥ ೧೩೦ ॥

ತೇಷಾಂ ಲೀಲಾ ಚ ಮುನಿಭಿಃ ಪುರಾಣೇಷು ಪ್ರಕೀರ್ತಿತಾ ।
ನಾನಾಸಂವತ್ಸರಾಃ ಸರ್ವೇ ಪೈಶಾಚಾ ಧರ್ಮದೂಷಕಾಃ ॥ ೧೩೧ ॥

ನವತ್ಯಬ್ದಸಹಸ್ರಾಣಿ ವಿನೀತಾನಿ ಕಲೌ ಯುಗೇ ।
ಜಾತಾ ಮ್ಲೇಚ್ಛಮಯೀ ಭೂಮಿರಲಕ್ಷ್ಮೀಸ್ತು ಜನೇಜನೇ ॥ ೧೩೨ ॥

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಪ್ರತಿಸರ್ಗಪರ್ವಣಿ ಚತುರ್ಥಖಂಡೇ ಕಲಿಯುಗೀಯೇತಿಹಾಸಸಮುಚ್ಚಯೇ ತ್ರಯೋವಿಂಶೋಽಧ್ಯಾಯಃ.**

---

೧೨೯. ಅನಂತರ ನಾಲ್ವತ್ತುಸಾವಿರವರ್ಷಗಳವರೆಗೆ ಈ ಮಾಲವದೇಶೀಯರಾದ ನೂರಾರುಜನ ಮ್ಲೇಚ್ಛರಾಜರು ರಾಜ್ಯವಾಳಿದರು. ಆದರೆ ಇವರೆಲ್ಲರೂ ಒಹಳ ಸ್ವಲ್ಪಸ್ವಲ್ಪಕಾಲಮಾತ್ರ ಜೀವಿಸುತ್ತಿದ್ದರು.

೧೩೦-೧೩೧. ಒಟ್ಟು ಮ್ಲೇಚ್ಛರಾಜರ ಸಂಖ್ಯೆಯು ಇಪ್ಪತ್ತೈದುಸಾವಿರವಾಗಿದ್ದಿತು. ಪೂರ್ವಜನ್ಮದಲ್ಲಿ ತಪಸ್ಸುಮಾಡಿ ಆ ಪುಣ್ಯದಿಂದ ಈ ಜನ್ಮದಲ್ಲಿ ರಾಜರಾದ ಪ್ರಭುಗಳ ಲೀಲೆಯು ಮಹರ್ಷಿಗಳಿಂದ ಪುರಾಣಗಳಲ್ಲಿ ಹೇಳಲ್ಪಟ್ಟಿದೆ. ಈ ಪಿಶಾಚಸ್ವರೂಪರೂ ಧರ್ಮದೂಷಕರೂ ಆದ ರಾಜರುಗಳು ವ್ಯವಹಾರಕ್ಕೆ ನಾನಾ ಸಂವತ್ಸರಗಳನ್ನೇರ್ಪಡಿಸಿಕೊಂಡರು.

೧೩೨. ಈ ಮ್ಲೇಚ್ಛರೆಲ್ಲರೂ ಕಲಿಯುಗದಲ್ಲಿ ಒಟ್ಟು ತೊಂಭತ್ತುಸಾವಿರವರ್ಷಗಳಕಾಲ ರಾಜ್ಯವಾಳಿದರು. ಇವರ ಕಾಲದಲ್ಲಿ ಭೂಮಿಯೆಲ್ಲವೂ ಮ್ಲೇಚ್ಛಮಯವಾಗಿ ಪ್ರತಿಯೊಂದು ಜನಾಂಗದಲ್ಲಿಯೂ ದಾರಿದ್ರ್ಯವೇ ಕಾಣುತ್ತಿದ್ದಿತು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಪ್ರತಿಸರ್ಗಪರ್ವದ ನಾಲ್ಕನೆಯ ಖಂಡದಲ್ಲಿ ಇಪ್ಪತ್ತಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಪ್ರತಿಸರ್ಗಪರ್ವಣಿ ಚತುರ್ಥಖಂಡೇ

## ಚತುರ್ವಿಂಶೋಽಧ್ಯಾಯಃ

॥ ಸೂತ ಉವಾಚ ॥

ತತಸ್ತೇ ಸಕಲಾ ದೈತ್ಯಾಃ ಕಲಿನಾ ಚ ಪುರಸ್ಕೃತಾಃ ।
ಕೃತ್ವಾ ಚ ಜಲಯಾನಾನಿ ಹರಿಖಂಡಮುಪಾಯಯುಃ ॥ ೧ ॥

ಮನುಜಾ ಹರಿಖಂಡೇ ಚ ದೇವತುಲ್ಯಾ ಮಹಾಬಲಾಃ ।
ಅಯುಧ್ಯಂಸ್ತಾನ್ಮಹಾಶಸ್ತ್ರೈರಯುತಾಬ್ದಪ್ರಜೀವಿನಃ ॥ ೨ ॥

ದಶವರ್ಷಾಂತರೇ ಸರ್ವೇ ಮಾಯಾಯುದ್ಧೈಃ ಪರಾಜಿತಾಃ ।
ಮಹೇಂದ್ರಂ ಶರಣಂ ಜಗ್ಮುರ್ಹರಿಖಂಡನಿವಾಸಿನಃ ॥ ೩ ॥

---

## ಇಪ್ಪತ್ತನಾಲ್ಕನೆಯ ಅಧ್ಯಾಯ

೧. ಅನಂತರ ಪ್ರಬಲವಾಗಿರುವ ಎಲ್ಲಾ ದೈತ್ಯರೂ ಕಲಿಯನ್ನು ಮುಂದೆ ಮಾಡಿಕೊಂಡು ದೋಣಿ ಮೊದಲಾದ ಜಲಯಾನಗಳನ್ನು ನಿರ್ಮಿಸಿ ಅದರ ಸಹಾಯದಿಂದ ಹರಿಖಂಡಕ್ಕೆ ಹೋದರು.

೨. ಆಗ ಆ ಹರಿ (ವರ್ಷ) ಖಂಡದಲ್ಲಿದ್ದ ಮಾನವರು ದೇವತೆಗಳಿಗೆ ಸಮಾನರಾಗಿ ಮಹಾ ಬಲಶಾಲಿಗಳಾಗಿದ್ದರು. ಇವರೆಲ್ಲರೂ ಹತ್ತು ಸಾವಿರವರ್ಷ ಬದುಕುವ ಆಯುಷ್ಯವುಳ್ಳವರಾಗಿದ್ದರು. ಮಹಾಬಲಶಾಲಿಗಳಾದ ಇವರು ತಮ್ಮ ದೊಡ್ಡ ಆಯುಧಗಳನ್ನು ಹಿಡಿದು ಈ ದೈತ್ಯರೊಡನೆ ಘೋರವಾಗಿ ಯುದ್ಧಮಾಡಿದರು.

೩. ಈ ಯುದ್ಧವು ಹತ್ತುವರ್ಷಗಳಕಾಲ ನಡೆಯಿತು. ಮಹಾಬಲಶಾಲಿಗಳಾದ ಈ ಹರಿವರ್ಷಖಂಡದ ಜನಗಳು ಮಾಯಾಯುದ್ಧಪರರಾದ ಆ ದೈತ್ಯರಿಂದ ಪರಾಜಿತರಾದರು. ಅನಂತರ ಇವರೆಲ್ಲರೂ ಖಿನ್ನರಾಗಿ ಇಂದ್ರನನ್ನು ಮರೆಹೊಕ್ಕರು.

ತದಾ ತು ಭಗವಾನ್ ಶಕ್ರೋ ವಿಶ್ವಕರ್ಮಾಣಮಬ್ರವೀತ್ ।
ಭ್ರಮಿಶ್ಚ ನಾಮಯಂತ್ರೋಽಯಂ ಸಂಸ್ಥಿತಃ ಸಪ್ತಸಿಂಧುಷು ॥ ೪ ॥

ತ್ವಯಾ ವಿರಚಿತಸ್ತಾತ ತತ್ಪ್ರಭಾವಾನ್ನರಾ ಭುವಿ ।
ಅನ್ಯಖಂಡೇ ನ ಗಚ್ಛಂತಿ ಸ ಚ ಯಂತ್ರಸ್ತು ಮಾಯಿನಾ ॥ ೫ ॥

ಮಯೇನ ಭ್ರಂಶಿತೋ ಭ್ರಾತ್ರಾ ಮ್ಲೇಚ್ಛೈಃ ಸಾರ್ಧಂ ಸಮಂತತಃ ।
ಸಪ್ತದ್ವೀಪೇಷು ಯಾಸ್ಯಂತಿ ಮನುಜಾ ಮಮ ವೈರಿಣಃ ॥ ೬ ॥

ಅತೋ ನಃ ಪಾಹಿ ಮರ್ಯಾದಾಂ ಭೂಮಧ್ಯೇ ಭವತಾ ಕೃತಾಂ ।
ಇತಿ ಶ್ರುತ್ವಾ ವಿಶ್ವಕರ್ಮಾ ದಿವ್ಯಯಂತ್ರಮಚೀಕರತ್ ॥ ೭ ॥

ತೇನ ಯಂತ್ರಪ್ರಭಾವೇನ ಭ್ರಮಿತಾಸ್ತೇ ಬಭೂವಿರೇ ।
ಭ್ರಮಿಯಂತ್ರಾನ್ಮಹಾವಾಯುರ್ಜಾತೋ ಮ್ಲೇಚ್ಛವಿನಾಶಕಃ ॥ ೮ ॥

---

೪. ಆಗ ಭಗವಂತನಾದ ಇಂದ್ರನು ವಿಶ್ವಕರ್ಮನನ್ನು ಕುರಿತು " ಎಲೈ ಸಹೋದರನೇ ! ನೀನು ಭ್ರಮಿ ಎಂಬ ಮಹಾಯಂತ್ರವನ್ನು ಸಪ್ತಸಮುದ್ರಗಳಲ್ಲಿಯೂ ಸ್ಥಾಪಿಸಿದ್ದೆ "

೫. " ಅದರ ಪ್ರಭಾವದಿಂದ ಒಂದುಖಂಡದಲ್ಲಿರುವ ಜನಗಳು ಇನ್ನೊಂದು ಖಂಡಕ್ಕೆ ಸಮುದ್ರವನ್ನು ದಾಟಿಬರಲು ಅವಕಾಶವಿರಲಿಲ್ಲ."

೬. " ಆದರೆ ಮಾಯಾವಿಯೂ ನಿನ್ನ ಸಹೋದರನೂ ಆದ ಮಯನು ಆ ಯಂತ್ರವನ್ನು ಈಗ ನಾಶಮಾಡಿರುವನು. ಇದರಿಂದ ನನ್ನ ಶತ್ರುಗಳಾದ ದೈತ್ಯರೆಲ್ಲರೂ ಮ್ಲೇಚ್ಛರೊಡನೆ ಸಪ್ತದ್ವೀಪಗಳಲ್ಲಿಯೂ ನಿರಾತಂಕವಾಗಿ ಸಂಚರಿಸುತ್ತಿರುವರು "

೭. " ಆದುದರಿಂದ ಅಯ್ಯಾ ವಿಶ್ವಕರ್ಮ ! ನೀನು ಹಿಂದೆ ಭೂಮಿಯ ಮಧ್ಯದಲ್ಲಿ ಏರ್ಪಡಿಸಿದ್ದ ಹಾಗೆ ಒಂದು ಎಲ್ಲೆಯನ್ನು ರಚಿಸಿ ನಮ್ಮನ್ನು ಕಾಪಾಡು" ಎಂದು ಹೇಳಲು ಅದನ್ನು ಕೇಳಿ ವಿಶ್ವಕರ್ಮನು ಒಂದು ದಿವ್ಯಯಂತ್ರವನ್ನು ರಚಿಸಿದನು.

೮. ಈ ಯಂತ್ರಪ್ರಭಾವದಿಂದ ಒಂದು ದೊಡ್ಡಬಿರುಗಾಳಿಯುಂಟಾಗಿ ಇದರಿಂದ ಅಲ್ಲೋಲಕಲ್ಲೋಲವಾಗಿ ಮ್ಲೇಚ್ಛರೆಲ್ಲರೂ ನಾಶಹೊಂದಿದರು

ತದ್ವಾಯೋರಭವತ್ಪುತ್ರೋ ವಾತ್ಯೋ ವಾತ್ಯಾಸಮುದ್ಭವಃ ।
ದೈತ್ಯಯಕ್ಷಾಂಶ್ಚ ಪೈಶಾಚಾಞ್ಜಿತ್ವಾ ಜ್ಞಾನಮಯೋ ಬಲೀ ॥ ೯ ॥

ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಸ್ತ್ರಿವರ್ಣಾಸ್ತೇನ ಸತ್ಕೃತಾಃ ।
ಬಲಾನ್ಮ್ಲೇಚ್ಛಾಂಸ್ತ್ರಿವರ್ಣಮಯಾನ್ಕೃತ್ವಾ ವಾತ್ಯೋ ಮಹಾಬಲಃ ॥ ೧೦ ॥

ಶತಾರ್ಧಾಬ್ದಂ ಮಂಡಲೀಕಂ ಪದಂ ಭುವಿ ಗೃಹೀತವಾನ್ ।
ತದನ್ವಯೇ ಸಹಸ್ರಾಶ್ಚ ನೃಪಾಶ್ಚಾಸನ್ಕಲೌ ಯುಗೇ ॥ ೧೧ ॥

ವಾಯುಪಕ್ಷಾಸ್ತ್ರಿವರ್ಣಾಢ್ಯಾಃ ಷೋಡಶಾಬ್ದಸಹಸ್ರಕೇ ।
ವಾಯೋರ್ಜಾತಃ ಸ್ವಯಂ ಬ್ರಹ್ಮಾ ವಾಯೋರ್ಜಾತಃ ಸ ವೈ ಹರಿಃ॥ ೧೨ ॥

---

೯. ಅಲ್ಲದೆ ಈ ವಾಯುವಿನಿಂದ ವಾತ್ಯನೆಂಬ ಪುತ್ರನು ಹುಟ್ಟಿದನು. ಇವನು ದೈತ್ಯರನ್ನೂ, ಯಕ್ಷರನ್ನೂ, ಪಿಶಾಚಸ್ವರೂಪರಾದ ಮ್ಲೇಚ್ಛರನ್ನೂ ಜಯಿಸಿ, ಮಹಾ ಬಲಶಾಲಿಯೂ, ಜ್ಞಾನಿಯೂ ಎನಿಸಿದನು.

೧೦. ಈ ವಾತ್ಯನಿಂದ ಬ್ರಾಹ್ಮಣ, ಕ್ಷತ್ರಿಯ ಮತ್ತು ವೈಶ್ಯ ಈ ಮೂರುವರ್ಣ ಗಳೂ ಸಂಸ್ಕಾರಹೊಂದಿದವು. ಈ ಮಹಾಬಲಶಾಲಿಯಾದ ವಾತ್ಯನು ಬಲಾತ್ಕಾರ ದಿಂದ ಮ್ಲೇಚ್ಛರನ್ನೆಲ್ಲಾ ಈ ಮೂರುವರ್ಣಗಳಲ್ಲಿಯೇ ಸೇರುವಂತೆ ನೇಮಿ ಸಿದನು.

೧೧. ಇವನು ಭೂಮಂಡಲದಲ್ಲಿ ಐವತ್ತುವರ್ಷಗಳಕಾಲ ಆಳಿ ಮಂಡಲೇಶ ನೆಂಬ ಬಿರುದನ್ನು ಹೊಂದಿದನು. ಕಲಿಯುಗದಲ್ಲಿ ಈ ವಾತ್ಯನ ವಂಶದಲ್ಲಿ ಸಾವಿರಾರು ಜನ ರಾಜರು ಜನಿಸಿದರು.

೧೨. ಇವರೆಲ್ಲರೂ ವಾಯುಪಕ್ಷದವರಾಗಿ ಬ್ರಹ್ಮ, ಕ್ಷತ್ರಿಯ, ವೈಶ್ಯರೆಂಬ ಮೂರುವರ್ಣಗಳವರನ್ನೂ ಪಾಲಿಸುತ್ತಾ ಹದಿನಾರುಸಾವಿರ ವರ್ಷಗಳಕಾಲ ರಾಜ್ಯ ವಾಳಿದರು. ಬ್ರಹ್ಮನು ಸಾಕ್ಷಾದ್ವಾಯುವಿನಿಂದ ಜನಿಸಿದನು. ಹಾಗೆಯೇ ವಿಷ್ಣುವೂ ವಾಯುವಿನಿಂದಲೇ ಉಂಟಾದನು.

ವಾಯೋರ್ಜಾತೋ ಮಹಾದೇವಃ ಸರ್ವಂ ವಾಯುಮಯಂ ಜಗತ್ ।
ವಿನಾ ವಾಯುಂ ಮೃತಾಃ ಸರ್ವೇ ವಾಯುನಾ ಭುವಿ ಜೀವಿನಃ ॥ ೧೩ ॥

ಇತಿ ಮತ್ವಾ ತು ತೇ ಲೋಕಾ ವಾಯುಂ ಚ ಸಮತರ್ಪಯನ್ ।
ಪುನಸ್ತದಾ ಕಲಿರ್ಘೋರೋ ದೈತ್ಯರಾಜ್ಯಂ ಬಲಿಂ ಪ್ರಭುಃ ॥ ೧೪ ॥

ನತ್ವಾ ನಿವೇದಯಾಮಾಸ ದುಃಖಿತೋಽಭೂತ್ತದಾ ಬಲಿಃ ।
ವಾಮನಾಂತಿಕಮಾಗಮ್ಯ ಕಲಿಮಿತ್ರೇಣ ಸಂಯುತಃ ॥ ೧೫ ॥

ನತ್ವೋವಾಚ ಸ ವೈ ರಾಜಾ ದೇವದೇವಂ ಜನಾರ್ದನಂ ।
ತ್ವಯಾ ಕಲಿಃ ಕೃತೋ ಮಹ್ಯಂ ಪ್ರಸನ್ನೇನ ಸುರೋತ್ತಮ ॥ ೧೬ ॥

ವಾತ್ಯೈರ್ದ್ವಿಜೈಃ ಕರ್ಮಭೂಮೇಃ ಕಲಿಸ್ತು ಸ ನಿರಾಕೃತಃ ।
ಏಕಪಾದೋ ವ್ಯತೀತೋಽಯಂ ಕಿಂಚಿದೂನಂ ಕಲೇಃ ಪ್ರಭೋಃ ॥ ೧೭ ॥

---

೧೩. ಮಹಾದೇವನೂ ಸಹ ವಾಯುವಿನಿಂದಲೇ ಉಂಟಾದನು. ಈ ಸಕಲ ಪ್ರಪಂಚವೂ ವಾಯುಮಯವೇ ಆಗಿರುವುದು. ವಾಯುವಿಲ್ಲದೆ ಯಾರೂ ಬದುಕಲಾರರು. ಸರ್ವರೂ ವಾಯುವಿನಿಂದಲೇ ಜೀವಿಸಿರುವರು.

೧೪ ಎಂದು ತಿಳಿದು ಆ ರಾಜರೆಲ್ಲರೂ ತಮ್ಮ ಪ್ರಜೆಗಳೊಡನೆ ವಾಯುದೇವನನ್ನು ಸಂತೋಷಪಡಿಸುತ್ತಿದ್ದರು. ಆಗ ಘೋರನಾದ ಕಲಿಯು, ದೈತ್ಯರಾಜನೂ ಸರ್ವಸಮರ್ಥನೂ ಆದ ಬಲಿಯನ್ನು ಪುನಃ ಸಂದರ್ಶಿಸಿದನು.

೧೫. ಕಲಿಯು ಆವನಿಗೆ ನಮಸ್ಕರಿಸಿ ದುಃಖಿತನಾಗಿ ನಡೆದ ವೃತ್ತಾಂತವನ್ನೆಲ್ಲಾ ತಿಳಿಸಿದನು. ಇದನ್ನು ಕೇಳಿ ಆ ಬಲಿದೈತ್ಯನು ಬಹಳ ದುಃಖಹೊಂದಿ ಸ್ನೇಹಿತನಾದ ಕಲಿಯೊಡನೆ ಅಲ್ಲಿಂದ ಹೊರಟು ವಾಮನನ ಸಮೀಪಕ್ಕೆ ಬಂದನು.

೧೬. ಅನಂತರ ಆ ಬಲಿದೈತ್ಯನು ವಾಮನನಿಗೆ ನಮಸ್ಕರಿಸಿ "ಎಲೈ ದೇವಾದಿದೇವನಾದ ಜನಾರ್ದನನೇ! ದೇವಶ್ರೇಷ್ಠನಾದ ನೀನು ಹಿಂದೆ ಪ್ರಸನ್ನನಾಗಿ ನನಗೆ ಕಲಿಪುರುಷನನ್ನು ಸಹಾಯಕ್ಕಾಗಿ ಕೊಟ್ಟಿದ್ದೆ"

೧೭. "ಆದರೆ ವಾತ್ಯವಂಶದವರಾದ ಕರ್ಮಭೂಮಿಯ ಬ್ರಾಹ್ಮಣರು ಈ ಕಲಿಯನ್ನು ನಿರಾಕರಿಸಿರುವರು. ಎಲೈ ಪ್ರಭುವೇ! ನೀನು ಅಧಿಕಾರಕೊಟ್ಟಿರುವ ಕಲಿಯು ಕಾಲದಲ್ಲಿ ಎಂದರೆ ಕಲಿಯುಗದಲ್ಲಿ ಸ್ವಲ್ಪಕಡಿಮೆ ಒಂದುಪಾದವೇ ಕಳೆಯುತ್ತಾ ಬಂದಿತು."

ಮಯಾ ಸಮ್ಯಕ್ತ್ಯ ನೈ ಮುಕ್ತಾ ಭೂಮಿರ್ದೇವೇಂದ್ರಮಾಯಯಾ ।
ಸಹಸ್ರಾಬ್ದಂ ಕಲೌ ಪ್ರಾಪ್ತೇ ಮಯಾ ಭುಕ್ತಂ ಮಹೀತಲಂ ॥ ೧೮ ॥

ತತಃ ಸಾರ್ಧಂ ಸಹಸ್ರಾಬ್ದಂ ದೇವೈರ್ಭುಕ್ತಂ ಸುರಸ್ಥಲಂ ।
ತತಃ ಪಂಚಶತಂ ವರ್ಷಂ ಕಿಂಚಿಚ್ಚಾಧಿಕಮೇವ ಹಿ ॥ ೧೯ ॥

ಮಯಾ ಭುಕ್ತಾ ಕರ್ಮಭೂಮಿಃ ಸರ್ವಲೋಕಸ್ಯ ಕಾರಣಾತ್ ।
ತತಃ ಸಾರ್ಧಂ ಸಹಸ್ರಾಬ್ದಂ ದೇವೈರ್ಭುಕ್ತೇಯಮುತ್ತಮಾ ॥ ೨೦ ॥

ತತಃ ಸಾರ್ಧಸಹಸ್ರಾಬ್ದಂ ಕಿಂಚಿದೂನಂ ಮಯಾ ಧೃತಾ ।
ಸಾರ್ಧತ್ರಿಂಶತ್ಸಹಸ್ರಾಬ್ದಂ ದೇವೈರ್ದೈತ್ಯೈಸ್ತಥಾ ಮಹೀ ॥ ೨೧ ॥

ಭುಕ್ತಾ ದೈತ್ಯೈಃ ಪುನರ್ದೇವೈಸ್ತಥಾ ದೇವೈಶ್ಚ ದಾನವೈಃ ॥ ೨೨ ॥

---

೧೮. ಈಗ ನಾನು ದೇವೇಂದ್ರನ ಮಾಯೆಯಿಂದ ಈ ಭೂಮಂಡಲದ ರಾಜ್ಯ ಭಾರವನ್ನು ಸಂಪೂರ್ಣವಾಗಿ ಬಿಟ್ಟಿರುವೆನು. ಹಿಂದೆ ಕಲಿಯುಗವು ಆರಂಭವಾದ ಸಾವಿರವರ್ಷಗಳು ಈ ಭೂಮಿಯನ್ನು ನಾನು ಅನುಭವಿಸಿದೆನು.

೧೯-೨೦. ಅನಂತರ ಒಂದೂವರೆಸಾವಿರ ವರ್ಷಗಳಕಾಲ ಈ ಲೋಕವನ್ನು ದೇವತೆಗಳು ಅನುಭವಿಸಿದರು. ಆಮೇಲೆ ಐನೂರುವರ್ಷಗಳಿಗೆ ಸ್ವಲ್ಪ ಹೆಚ್ಚುಕಾಲ ಈ ಕರ್ಮಭೂಮಿಯು, ಸಕಲ ಜನಗಳ ಪಾಲನೆಗೋಸ್ಕರ ನನ್ನಿಂದ (ದೈತ್ಯನಿಂದ) ಅನುಭವಿಸಲ್ಪಟ್ಟಿತು. ಅನಂತರ ಒಂದೂವರೆಸಾವಿರ ವರ್ಷಗಳಕಾಲ ಪುನಃ ಈ ಶ್ರೇಷ್ಠವಾದ ಕರ್ಮಭೂಮಿಯು ದೇವತೆಗಳಿಂದ ಅನುಭವಿಸಲ್ಪಟ್ಟಿತು.

೨೧. ಇದಾದನಂತರ ಪುನಃ ಸ್ವಲ್ಪಕಡಿಮೆ ಒಂದೂವರೆಸಾವಿರ ವರ್ಷಗಳು ನಾನು ಈ ಭೂಮಿಯನ್ನು ಪಾಲಿಸಿದೆನು. ಅನಂತರ ದೇವತೆಗಳೂ, ದೈತ್ಯರೂ, ಇಬ್ಬರೂ ಸೇರಿ ಪುನಃ ಮೂವತ್ತುಸಾವಿರದ ಐನೂರುವರ್ಷಗಳಕಾಲ ಈ ಭೂಮಿಯನ್ನು ಆಳಿದೆವು.

೨೨. ಈರೀತಿ ದೈತ್ಯರೂ, ಅನಂತರ ದೇವತೆಗಳೂ, ಆಮೇಲೆ ದೈತ್ಯರೂ, ಅನಂತರ ದೇವತೆಗಳೂ, ಈರೀತಿ ರಾಜ್ಯವಾಳಿಕೊಂಡುಬಂದರು.

ತ್ವಯಾ ದತ್ತೋ ಹಿ ಮೇ ದೇವ ಕಲಿಃ ಕಲಿವಿನಾಶನ ।
ನಾಧಿಕಾರಂ ಕೃತಂ ನಾಥ ಸತ್ಯಂ ಸತ್ಯಪ್ರಿಯಕ್ಷಮ ॥ ೨೩ ॥

ಇತಿ ಶ್ರುತ್ವಾ ಬಲೇರ್ವಾಕ್ಯಂ ಭಗವಾನ್ವಾಮನೋ ಹರಿಃ ।
ಸ್ವಾಂಶಾನ್ಮಹೀತಲೇ ಪ್ರಾಪ್ತೋ ದೈತ್ಯಪಕ್ಷವಿವರ್ಧನಃ ॥ ೨೪ ॥

ಕಾಮಶರ್ಮಾ ತದಾ ವಿಪ್ರೋ ಯಮುನಾತಟಸಂಸ್ಥಿತಃ ।
ಹರಿಂ ತುಷ್ಟಾವ ಮನಸಾ ದ್ವಾದಶಾಬ್ದಂ ಪ್ರಯತ್ನತಃ ॥ ೨೫ ॥

ತದಾ ತು ವಾಮನಃ ಶ್ರೀಮಾನ್ವಚಃ ಪ್ರಾಹ ದ್ವಿಜೋತ್ತಮಂ ।
ವರಂ ಬ್ರೂಹಿ ದ್ವಿಜಶ್ರೇಷ್ಠ ಯತ್ತೇ ಮನಸಿ ಸಂಸ್ಥಿತಂ ॥ ೨೬ ॥

---

೨೩. "ಪಾಪವಿನಾಶನನಾದ ಎಲೈ ಸ್ವಾಮಿಯೇ! ನೀನು ನನ್ನ ವಶಕ್ಕೆ ಕೊಟ್ಟಿದ್ದ ಕಲಿಯುಮಾತ್ರ ಸತ್ಯವಾಗಿಯೂ, ಇಲ್ಲಿಯವರೆವಿಗೂ, ಅಧಿಕಾರವನ್ನು ತಾನು ಮಾಡಿಯೇ ಇಲ್ಲ. ಇದು ಸತ್ಯವಾದಮಾತು" ಎಂದು ಬಲಿಯು ಹೇಳಿದನು.

೨೪. ಅನಂತರ ಮಹಾವಿಷ್ಣುಸ್ವರೂಪನಾದ ವಾಮನಮೂರ್ತಿಯು, ಬಲಿಯು ಹೇಳಿದುದನ್ನು ಕೇಳಿ, ಕಲಿಯುಗದಲ್ಲಿ ದೈತ್ಯಪಕ್ಷವನ್ನು ಅಭಿವೃದ್ಧಿಪಡಿಸುವುದ ಕ್ಕೋಸ್ಕರ ತನ್ನ ಅಂಶದಿಂದ ಭೂಲೋಕದಲ್ಲಿ ಜನಿಸಲು ನಿಶ್ಚಯಿಸಿದನು.

೨೫. ಇದೇ ಸಮಯದಲ್ಲಿ ಕಾಮಶರ್ಮನೆಂಬ ಬ್ರಾಹ್ಮಣನು ಯಮುನಾನದಿಯ ದಡದಲ್ಲಿ ನಿಯಮದಿಂದ ತಪಸ್ಸುಮಾಡುತ್ತಾ ಹನ್ನೆರಡುವರ್ಷಗಳಕಾಲ ಮಹಾವಿಷ್ಣು ವನ್ನು ಸ್ತೋತ್ರಮಾಡಿದನು.

೨೬. ಮಹಾವಿಷ್ಣುಸ್ವರೂಪನಾದ ವಾಮನನು ಅವನಿಗೆ ಪ್ರಸನ್ನನಾಗಿ ಬ್ರಾಹ್ಮ ಣೋತ್ತಮನಾದ ಆ ಕಾಮಶರ್ಮನನ್ನು ಕುರಿತು "ಎಲೈ ಬ್ರಾಹ್ಮಣೋತ್ತಮನೇ! ನಿನ್ನ ಮನಸ್ಸಿನಲ್ಲಿರುವ ಆಶಯವೇನೆಂಬುದನ್ನು ಹೇಳು" ಎಂದು ಹೇಳಲು ಅದನ್ನು ಕೇಳಿ ಕಾಮಶರ್ಮನು ಆ ವಾಮನಮೂರ್ತಿಯನ್ನು ಮೃದುನುಡಿಗಳಿಂದ ಸ್ತೋತ್ರ ಮಾಡಿದನು.

ಇತಿ ಶ್ರುತ್ವಾ ಕಾಮಶರ್ಮಾ ತುಷ್ಟಾವ ಶ್ಲಕ್ಷ್ಣಯಾ ಗಿರಾ ।
॥ ಕಾಮಶರ್ಮೋವಾಚ ॥
ನಮೋ ದೇವಾಯ ಮಹತೇ ಸರ್ವಪೂಜ್ಯಾಯ ತೇ ನಮಃ ॥ ೨೭ ॥

ಧರ್ಮಪ್ರಿಯಾಯ ಧರ್ಮಾಯ ದೇವದೈತ್ಯಕರಾಯ ಚ ।
ದೈವಾಧೀನನೃಣಾಂ ಭರ್ತ್ರೇ ಕಾಮತರ್ತ್ರೇ ನಮೋನಮಃ ॥ ೨೮ ॥

ದೈವಾಧೀನಾಶ್ಚ ತೇ ದೇವಾ ದೈವೋಲ್ಲಂಘಾಶ್ಚ ದಾನವಾಃ ।
ತೇಷಾಂ ಭರ್ತಾ ಕ್ರಮಾದ್ಧರ್ತಾ ತಸ್ಮೈ ದೇವಾಯ ತೇ ನಮಃ ॥ ೨೯ ॥

ಪುತ್ರೋ ಭವ ಹರೇ ಸ್ವಾಮಿನ್ ಸಫಲಂ ವಾಂಛಿತಂ ಕುರು ।
ಇತಿ ಶ್ರುತ್ವಾ ಹರಿಃ ಸಾಕ್ಷಾದ್ವಾಮನೋ ಬಲಿರಕ್ಷಕಃ ॥ ೩೦ ॥

---

೨೭. ಕಾಮಶರ್ಮನು ಸ್ತೋತ್ರಮಾಡಿದ ರೀತಿ—“ಸರ್ವರಿಂದಲೂ ಪೂಜಾರ್ಹನೂ, ಶ್ರೇಷ್ಠನೂ ಆದ ದೇವನೇ! ನಿನಗೆ ನಮಸ್ಕಾರ.”

೨೮. “ಎಲೈ ದೇವನೇ! ನೀನು ಧರ್ಮಪ್ರಿಯನು. ಸಾಕ್ಷಾದ್ಧರ್ಮಸ್ವರೂಪನು. ದೇವತೆಗಳನ್ನೂ, ದೈತ್ಯರನ್ನೂ ಸಹ ನಿಯಮನಮಾಡತಕ್ಕವನು. ಮತ್ತು ಮನ್ಮಥನ ಉತ್ಪತ್ತಿಗೆ ಕಾರಣನಾದವನು. ಎಲೈ ದೇವನೇ! ಮಹಾಮಹಿಮನಾದ ನಿನ್ನನ್ನು ನಮಸ್ಕರಿಸುವೆನು.”

೨೯. “ಸಾಮಾನ್ಯ ದೇವತೆಗಳೆಲ್ಲರೂ, ತಮಗಿಂತಲೂ ಶ್ರೇಷ್ಠರೂ ಪೂಜ್ಯರೂ ಆದ, ದೇವಾಧೀಶರ ಅಧೀನರಾಗಿ ಧರ್ಮಮಾರ್ಗದಲ್ಲೇ ನಡೆಯುತ್ತಿರುವರು. ದಾನವರಾದರೋ ದೇವತೆಗಳ ಧರ್ಮಮಾರ್ಗವನ್ನು ಮೀರಿ ಕೇವಲ ಅಧರ್ಮಾಸಕ್ತರಾಗಿರುವರು. ಅಂತಹ ದೇವತೆಗಳನ್ನು ರಕ್ಷಿಸುವವನೂ, ರಾಕ್ಷಸರನ್ನು ಸಂಹರಿಸುವವನೂ, ಸಹ ನೀನೇ ಆಗಿರುವೆ. ಇಂತಹ ಪ್ರಭಾವವುಳ್ಳ ಸ್ವಾಮಿಯೇ! ನಿನಗೆ ನಮಸ್ಕಾರ.”

೩೦-೩೧. “ಎಲೈ ಸ್ವಾಮಿಯೇ! ನೀನು ನನಗೆ ಪುತ್ರನಾಗಿ ಜನಿಸಿ ನನ್ನಿಷ್ಟಾರ್ಥವನ್ನು ಸಲ್ಲಿಸು” ಎಂದು ಪ್ರಾರ್ಥಿಸಲು ಆಗ ಬಲಿಯರಕ್ಷಕನೂ ಮಹಾವಿಷ್ಣುಸ್ವರೂಪನೂ ಆದ ಸಾಕ್ಷಾದ್ವಾಮನನು ಹಾಗೆಯೇ ಆಗಲೆಂದು ವರವನ್ನು ಕೊಟ್ಟು ಆ

ಸ್ವಪೂರ್ವಾರ್ದ್ಧಾರ್ದ್ದೇವಹೂತ್ಯಾಂ ತತ್ಪತ್ನ್ಯಾಂ ಚ ಸಮುದ್ಭವಃ ।
ದ್ವಿಧಾ ಭೂತ್ವಾ ಮಹೀ ಜಾತೌ ದಿವ್ಯಾಂಗೌ ದಿವ್ಯವಿಗ್ರಹೌ ॥ ೩೧ ॥

ಭೋಗಸಿಂಹಃ ಕೇಲಿಸಿಂಹೋ ದೇವಪ್ರೋ ದೈತ್ಯಪ್ರೋ ಹರಿಃ ।
ಜಿತ್ವಾ ವಾತ್ಯೋದ್ಭವಾನ್ನೃಪಾನ್ ಕಲ್ಪಕ್ಷೇತ್ರಮುಪಸ್ಥಿತಃ ॥ ೩೨ ॥

ರಹಃ ಕ್ರೀಡಾವತೀ ನಾಮ ನಗರೀ ಮಯನಿರ್ಮಿತಾ ।
ತತ್ರೋಷ್ಯ ಬಲವಂತೌ ತೌ ದಧತುಶ್ಚ ಕಲೇರ್ಧುರಂ ॥ ೩೩ ॥

ಪತ್ನೀಯಂ ಸರ್ವಧರ್ಮಾಣಾಂ ಸಾರಭೂತಾ ಸನಾತನೀ ।
ಪತಿವ್ರತಾಯಾಂ ಯೇ ಜಾತಾ ನರಾ ಆರ್ಯಾಃ ಸುರಪ್ರಿಯಾಃ ॥ ೩೪ ॥

---

ಕಾಮಶರ್ಮನ ಪತ್ನಿಯಾದ ದೇವಹೂತಿಎಂಬವಳಲ್ಲಿ ತನ್ನ ದೇಹದ ಪೂರ್ವಾರ್ಧ ದಿಂದ ದಿವ್ಯಲಕ್ಷಣವುಳ್ಳ ಎರಡು ರೂಪವನ್ನು ತಾಳಿ ಭೂಮಿಯಲ್ಲಿ ಹುಟ್ಟಿದನು.

೩೨. ಈ ಎರಡು ವ್ಯಕ್ತಿಗಳೂ ಕ್ರಮವಾಗಿ ಭೋಗಸಿಂಹ, ಕೇಲಿಸಿಂಹ ಎಂಬ ಹೆಸರನ್ನು ಪಡೆದರು. ಅನಂತರ ಮಹಾವಿಷ್ಣುವಿನ ಈ ಎರಡು ಸ್ವರೂಪಗಳೂ ಕ್ರಮವಾಗಿ 'ದೇವಪ' ಮತ್ತು 'ದೈತ್ಯಪ' ಎಂಬ ನಾಮಾಂತರವನ್ನು ಪಡೆದುವು. ಎಂದರೆ ಭೋಗಸಿಂಹನು ದೇವಪನೆಂದೂ, ಕೇಲಿಸಿಂಹನು ದೈತ್ಯಪನೆಂದೂ ಪ್ರಸಿದ್ಧರಾದರು.

೩೩. ಬಲಶಾಲಿಗಳಾದ ಈ ಭೋಗಸಿಂಹ ಕೇಲಿಸಿಂಹರಿಬ್ಬರೂ ವಾತ್ಯವಂಶದ ರಾಜರನ್ನು ಜಯಿಸಿ ಕಲ್ಪಕ್ಷೇತ್ರಕ್ಕೆ ಬಂದರು. ಆನಂತರ ಶೂರರಾದ ಇವರಿಬ್ಬರೂ ಮಯನಿಂದ ನಿರ್ಮಿತವಾದ ರಹಃಕ್ರೀಡಾವತೀ ಪಟ್ಟಣದಲ್ಲಿ ವಾಸಿಸುತ್ತಾ ಕಲಿಪಕ್ಷ ವನ್ನೇ ಅಭಿವೃದ್ಧಿಪಡಿಸುತ್ತಾ ರಾಜ್ಯಭಾರವನ್ನು ವಹಿಸಿದ್ದರು.

೩೪-೩೫. ಭಗವಂತನ ಅವತಾರಪುರುಷರಾದ ಭೋಗಸಿಂಹ ಮತ್ತು ಕೇಲಿ ಸಿಂಹ ಇವರಿಬ್ಬರೂ ಆಗ ಕಲಿಯಪಕ್ಷವನ್ನು ಅಭಿವೃದ್ಧಿಪಡಿಸುವುದಕ್ಕೋಸ್ಕರ 'ಮಾನ ವರಲ್ಲಿ ಪತ್ನಿಯೇ ಸಕಲಧರ್ಮಗಳಿಗೂ ಸಾರಭೂತಳೂ, ಸನಾತನಿಯೂ, ಆಗಿರು ವಳು. ಈ ಧರ್ಮಪತ್ನಿಯು ಪತಿವ್ರತೆಯಾಗಿದ್ದಾಗ ಇವಳಲ್ಲಿ ಜನಿಸುವ ಮಾನವರು ಆರ್ಯರೆನಿಸಿ ದೇವತೆಗಳಿಗೆ ಪ್ರೀತಿಪಾತ್ರರಾಗಿ ದೇವತಾಕಾರ್ಯಗಳನ್ನು ನೆರವೇರಿಸುವರು. ಈ ಧರ್ಮಪತ್ನಿಯು ದೂಷಿತೆಯಾದಾಗ ಇವಳಲ್ಲಿ ಜನಿಸುವ ಮಾನವರು ಸಂಕರ

ದೂಷಿತಾಯಾಂ ನರಾ ಜಾತಾಸ್ತೇ ಸರ್ವೇ ವರ್ಣಸಂಕರಾಃ ।
ಇತಿ ಸಂಚಿಂತ್ಯ ಭಗವಾನ್ ಕೃತ್ವಾ ಕಾಮಮಯಂ ವಪುಃ ॥ ೩೫ ॥

ದಿನೇದಿನೇ ಸಹಸ್ರಾಣಿ ಯೋಷಿತೋ ಬುಭುಜೇ ಹರಿಃ ।
ತಾಃ ಸರ್ವಾ ಗರ್ಭಮಾಧಾಯ ಯುಮೌ ಸುಷುವಿರೇ ಮುದಾ ॥ ೩೬ ॥

ನಾರ್ಯಾ ತಯಾ ಸಹೋದರ್ಯಾ ರೇಮಿರೇ ತೇ ಸಹೋದರಾಃ ।
ಏವಂ ಚ ಬಹುಧಾ ಸೃಷ್ಟಿಸ್ತೇಷಾಂ ಜಾತಾ ಕಲೌ ಯುಗೇ ॥ ೩೭ ॥

ಪೂರ್ವಜಾತಾಂಸ್ತ್ರಿವರ್ಣಾಂಶ್ಚ ಭಕ್ಷಯಿತ್ವಾ ದಿನೇದಿನೇ ।
ಕರ್ಮಭೂಮ್ಯಾಂ ವವೃಧಿರೇ ಪಕ್ಷಿಣಶ್ಚ ಯಥಾ ದ್ರುಮೇ ॥ ೩೮ ॥

---

ವರ್ಣದವರೆನಿಸಿ ದೇವತೆಗಳಿಗೆ ವಿರುದ್ಧರಾಗಿ ಕಲಿಪುರುಷನ ಪಕ್ಷವನ್ನೇ ಆಶ್ರಯಿಸುವರು.' ಎಂದು ಯೋಚಿಸಿ ಪರಮಾತ್ಮನು ಮನ್ಮಥನಂತೆ ಸುಂದರವಾದ ರೂಪವನ್ನು ಧರಿಸಿದನು.

೩೬. ಅವನು ಪ್ರತಿದಿನವೂ ಸಾವಿರಾರುಜನ ಆರ್ಯಸ್ತ್ರೀಯರೊಡನೆ ಉಪಭೋಗಮಾಡಿದನು. ಅನಂತರ ಈ ಸ್ತ್ರೀಯರೆಲ್ಲರೂ ಗರ್ಭವನ್ನು ಧರಿಸಿ ಸಂತೋಷದಿಂದ (ಒಂದು ಗಂಡು ಒಂದು ಹೆಣ್ಣು ಈರೀತಿ) ಅವಳಿ ಮಕ್ಕಳನ್ನು ಪಡೆದರು.

೩೭. ಜೊತೆಯಲ್ಲಿಯೇ ಹುಟ್ಟಿದ ಆ ಸಹೋದರರು ತಮ್ಮ ಸಹೋದರಿಯರೊಡನೆಯೇ ವಿಹರಿಸಿದರು. ಇದೇರೀತಿ ಕಲಿಯುಗದಲ್ಲಿ ಆರ್ಯಧರ್ಮಕ್ಕೆ ವಿರುದ್ಧವಾಗಿ ಅಪರಿಮಿತ ಪ್ರಜಾಸೃಷ್ಟಿಯಾಯಿತು.

೩೮. ಹಿಂದೆ ವಾತ್ಯವಂಶದವರು ಸ್ಥಾಪಿಸಿದ್ದ ಬ್ರಹ್ಮ, ಕ್ಷತ್ರ, ವೈಶ್ಯರೆಂಬ ಮೂರು ವರ್ಣಗಳವರನ್ನೂ, ಈ ಸಂಕರಜಾತಿಯಲ್ಲಿ ಜನಿಸಿದವರು ಉಪಭೋಗಿಸಿ; ಮರದಲ್ಲಿ ಹಣ್ಣುತಿನ್ನಲು ಬಂದು ಗುಂಪುಗುಂಪಾಗಿ ಸೇರಿ ಅಭಿವೃದ್ಧಿಹೊಂದುವ ಪಕ್ಷಿಗಳಂತೆ ಅಭಿವೃದ್ಧಿಹೊಂದಿದರು. ಆರ್ಯರು ಸಾಂಕರ್ಯಹೊಂದಿ ಇದು ಉತ್ತಮ ಜಾತಿ, ಇದು ಮಧ್ಯಮ, ಇದು ಅಧಮವೆಂಬ ಪರಿಗಣನೆಯಿಲ್ಲದೆ ಉಪಭೋಗಮಾಡಿ ವಿಹರಿಸಿದರು. ಇದರಿಂದ ಕರ್ಮಭೂಮಿಯಲ್ಲಿ ಜನಿಸಿದವರೆಲ್ಲರೂ ಒಂದೇ ಜಾತಿಯುವರಾಗಿ ಪ್ರಜಾಸಂಖ್ಯೆಯು ತುಂಬಾ ಅಭಿವೃದ್ಧಿಹೊಂದಿತು.

ಉಭಯಾಬ್ದಸಹಸ್ರಾಂತೇ ತೈರನ್ನಾಃ ಪೂರ್ವಮಾನವಾಃ ।
ತದಾ ಕಲೇಶ್ಚ ಚರಣೋ ದ್ವಿತೀಯೋ ಭುವಿ ಚಾಗಮತ್ ॥ ೩೯ ॥

ಸಾಂಪ್ರತಂ ವರ್ತತೇ ವಾರ್ತಾ ಕಿನ್ನರಾಣಾಂ ಚ ಭೂತಲೇ ।
ದ್ವಿಕಿಷ್ಕುಮಾತ್ರಾಶ್ಚ ನರಾಃ ಸಾರ್ಧಾ ದೈತ್ಯಮಯಾಃ ಸ್ಮೃತಾಃ ॥ ೪೦ ॥

ಯಥಾ ಖಗಾಃ ಕರ್ಮಹೀನಾಶ್ಚತ್ವಾರಿಂಶಾಬ್ದಜೀವಿನಃ ।
ಭೂಮಿಗಾಶ್ಚ ತಥಾ ತೇ ವೈ ಭೇದಂ ತೇಷ್ವೇಷು ನೈವ ಭೋಃ ॥ ೪೧ ॥

ದೃಶ್ಯಂತೇ ಚಾದ್ಯ ಯುಷ್ಮಾಭಿರ್ಭೂತಲೇ ಕಿನ್ನರಾ ನರಾಃ ।
ದ್ವಿತೀಯಚರಣಾಂತೇ ಚ ಭವಿಷ್ಯಂತ್ಯೇವಮೇವ ಹಿ ॥ ೪೨ ॥

ನ ವಿವಾಹೋ ನ ಭೂಪಶ್ಚ ನೋದ್ಯಮೋ ನ ಹಿ ಕರ್ಮಕೃತ್ ।
ಭವಿತಾ ಚ ತದಾ ತೇಷಾಂ ದ್ವಿತೀಯಚರಣಾಂತಿಕೇ ॥ ೪೩ ॥

---

೩೯. ಇದಾದ ಎರಡುಸಾವಿರ ವರ್ಷಗಳು ಕಳೆಯುವಹೊತ್ತಿಗೆ ಹಿಂದಿನ ಶುದ್ಧ ಆರ್ಯರೆಲ್ಲರೂ ಸಂಪೂರ್ಣವಾಗಿ ಇವರೊಡನೆ ಕಲೆತುಹೋಗುವರು. ಆವೇಳೆಗೆ ಕಲಿಯುಗದ ಮೊದಲನೆಯ ಪಾದವು ಕಳೆದು ಎರಡನೆಯ ಪಾದದ ಆರಂಭ

೪೦. ಆಗ ಭೂಮಿಯಲ್ಲಿ ಕಿನ್ನರೆಂಬವರು ಜನಿಸಿ ಎರಡುಮೊಳ (ಅಥವಾ ಎರಡು ಗೇಣು) ಉದ್ದವುಳ್ಳವರಾಗಿ ರಾಕ್ಷಸರಂತೆ ಸ್ವಭಾವವುಳ್ಳವರಾಗಿರುವವರೆಂದು ಪ್ರತೀತಿಯಿದೆ.

೪೧. ಕರ್ಮಾಧಿಕಾರವಿಲ್ಲದ ಪಕ್ಷಿಗಳು ಹೇಗೆ ನಲವತ್ತುವರ್ಷಗಳಕಾಲ ಬದುಕುವುವೋ, ಅದರಂತೆ ಈ ಕಿನ್ನರರೂ ಭೂಮಿಯಲ್ಲಿ ಕರ್ಮಹೀನರಾಗಿ ಕೇವಲ ನಲವತ್ತುವರ್ಷಕಾಲಮಾತ್ರ ಬಾಳುವರು. ಇವರಿಗೂ ಪಕ್ಷಿಗಳಿಗೂ, ಯಾವವಿಧವಾದ ಭೇದವೂ ಕಂಡುಬರುವುದಿಲ್ಲ.

೪೨. ಈಗಲೂ ಭೂಮಂಡಲದಲ್ಲಿ ಕಿನ್ನರರು ಗೋಚರರಾಗುವರು. ಕಲಿಯುಗದ ಎರಡನೆಯ ಪಾದವು ಕಳೆಯುವಪರ್ಯಂತ ಇದೇರೀತಿಯ ಜನಗಳು ಹುಟ್ಟುವರು.

೪೩. ಎರಡನೆಯ ಪಾದದಲ್ಲಿ ಜನಿಸುವ ಈ ಮಾನವರಿಗೆ ವಿವಾಹವಿಲ್ಲ. ರಾಜನಿಲ್ಲ. ಯಾರೂ ಉದ್ಯೋಗವನ್ನೂ ಅವಲಂಬಿಸುವುದಿಲ್ಲ. ವೇದೋಕ್ತಕರ್ಮಗಳನ್ನೂ ಸಹ ಮಾಡುವುದಿಲ್ಲ.

ಸಪಾದಲಕ್ಷಾಬ್ದಮಿತಮದ್ಯಪ್ರಭೃತಿ ಭೋ ದ್ವಿಜಾಃ ।
ಭೋಗಕೇಲ್ಯನ್ವಯೋದ್ಭೂತಾ ಭವಿಷ್ಯಂತಿ ಮಹೀತಲೇ ॥ ೪೪ ॥

ಅತೋ ಮಯಾ ಚ ಸಹಿತಾ ಭವಂತೋ ಮುನಿಸತ್ತಮಾಃ ।
ಕೃಷ್ಣಚೈತನ್ಯಮಾಗಮ್ಯ ಗಮಿಷ್ಯಾಮಸ್ತದಾಜ್ಞಯಾ ॥ ೪೫ ॥

॥ ವ್ಯಾಸ ಉವಾಚ ॥

ಇತಿ ಶ್ರುತ್ವಾ ತು ಮುನಯೋ ವಿಶಾಲಾಪೂರ್ನಿವಾಸಿನಃ ।
ಭೋ ನಮಸ್ತೇ ಗಮಿಷ್ಯಂತಿ ಯಜ್ಞಾಂಶಂ ಪ್ರತಿ ಹರ್ಷಿತಾಃ ॥ ೪೬ ॥

ನತ್ವಾ ಸರ್ವೇ ಮುನಿಶ್ರೇಷ್ಠಾ ಯಜ್ಞಾಂಶಂ ಯಜ್ಞರೂಪಿಣಂ ।
ವಚನಂ ಚ ವದಿಷ್ಯಂತಿ ದೇಹ್ಯಾಜ್ಞಾಂ ಭಗವನ್‌ಪ್ರಭೋ ॥ ೪೭ ॥

---

೪೪. ಎಲೈ ಬ್ರಾಹ್ಮಣೋತ್ತಮರೇ ! ಅಲ್ಲಿಂದ ಒಂದೂಕಾಲು ಲಕ್ಷ ವರ್ಷಗಳ ವರೆವಿಗೆ ಭೋಗಸಿಂಹ ಕೇಲಿಸಿಂಹ ವಂಶಸಂಭೂತರಾದ ಮಾನವರು ಭೂಮಂಡಲದಲ್ಲಿ ಇರುವರು.

೪೫. ಆದುದರಿಂದ ಎಲೈ ಮುನಿಪುಂಗವರೇ ! ನೀವೆಲ್ಲರೂ ಈಗಲೇ ನನ್ನೊಡನೆ ಹೊರಡಿರಿ. ನಾವೆಲ್ಲರೂ ಕೃಷ್ಣಚೈತನ್ಯನ ಸಮೀಪಕ್ಕೆ ಹೋಗಿ ಮುಂದೆ ಅವನು ಹೇಳಿದಂತೆ ನಡೆಯೋಣವೆಂದು ಸೂತಮುನಿವರ್ಯನು ಶೌನಕನಿಗೆ ಹೇಳಿದನು.

೪೬. ವ್ಯಾಸರು ಹೇಳುತ್ತಾರೆ—ಎಲೈ ಮನುವೇ ! ಹೀಗೆ ಸೂತರು ಹೇಳಿದುದನ್ನು ಕೇಳಿ ವಿಶಾಲಾಪಟ್ಟಣದಲ್ಲಿ ವಾಸಿಸುತ್ತಿದ್ದ ಮುನಿಗಳೆಲ್ಲರೂ, ಆ ಸೂತರಿಗೆ ನಮಸ್ಕಾರಮಾಡಿ ಆದರಂತೆಯೇ ಯಜ್ಞಾಂಶನ ಸಮೀಪಕ್ಕೆ ಸಂತೋಷದಿಂದ ಹೋಗುವರು.

೪೭. ಅನಂತರ ಅಲ್ಲಿ ಮುನಿಶ್ರೇಷ್ಠರಾದ ಅವರೆಲ್ಲರೂ ಆ ಯಜ್ಞಾಂಶನಿಗೆ ನಮಸ್ಕಾರಮಾಡಿ, ಯಜ್ಞಪುರುಷಸ್ವರೂಪನಾದ ಆ ಪರಮಾತ್ಮನನ್ನು ಕುರಿತು " ಎಲೈ ಪ್ರಭುವೇ ! ನಮಗೆ ಅಪ್ಪಣೆಕೊಡು."

ಇಂದ್ರಲೋಕಂ ಗಮಿಷ್ಯಾಮೋ ನಾಕಮಧ್ಯಂ ಮನೋಹರಂ ।
ಇತಿ ಶ್ರುತ್ವಾ ತು ಯಜ್ಞಾಂಶಃ ಸರ್ವಶಿಷ್ಯಸಮನ್ವಿತಃ ॥ ೪೮ ॥

ತೈಃ ಸರ್ವೈಃ ಸಹ ಸ್ವರ್ಲೋಕಂ ಗಮಿಷ್ಯತಿ ಸುರಪ್ರಿಯಃ ।
ತದಾ ಕಲಿಃ ಸಮಂ ದೈತ್ಯೈರ್ಭಜಿಷ್ಯಂತಿ ಮಹೀತಲಂ ॥ ೪೯ ॥

ಕಿಮನ್ಯಚ್ಛ್ರೋತುಮಿಚ್ಛಾ ತೇ ಹೃಷೀಕೋತ್ತಮ ತದ್ವದ ॥

॥ ಮನುರುವಾಚ ॥

ಭಗವನ್ವಿಸ್ತರಾದ್ಬ್ರೂಹಿ ಭೋಗಕೇಲಿಚರಿತ್ರಕಂ ।
ಕಲೌ ಯಥಾ ಭವಿಷ್ಯಂತಿ ಮನುಜಾಸ್ತತ್ತಥಾ ಪ್ರಭೋ ॥ ೫೦ ॥

॥ ವ್ಯಾಸ ಉವಾಚ ॥

ಭೋಗಸಿಂಹೇ ಕೇಲಿಸಿಂಹೇ ವಾಮನಾಂಶಸಮುದ್ಭವೇ ॥ ೫೧ ॥

---

೪೮-೪೯. "ನಾವೆಲ್ಲರೂ ಸ್ವರ್ಗಲೋಕಾಂತರ್ಗವಾದ ಮನೋಹರವಾದ ಇಂದ್ರ ಲೋಕಕ್ಕೆ ತೆರಳುವೆವು" ಎಂದು ಹೇಳಲು ಆ ಯಜ್ಞಾಂಶನು ತನ್ನ ಸಕಲ ಶಿಷ್ಯರೊಡನೆಯೂ, ಸೂತರೇ ಮೊದಲಾದ ಆ ಎಲ್ಲಾ ಮುನಿಶ್ರೇಷ್ಠರೊಡನೆಯೂ, ಹೊರಟು ಸ್ವರ್ಗಲೋಕಕ್ಕೆ ಹೋಗುವನು. ದೇವತೆಗಳಿಗೆ ಪ್ರೀತಿಪಾತ್ರನಾದ ಆ ಯಜ್ಞಾಂಶನು ಹೀಗೆ ಸ್ವರ್ಗಕ್ಕೆ ತೆರಳಿದಮೇಲೆ ಕಲಿಪುರುಷನು ಯಾರತೊಂದರೆಯೂ ಇಲ್ಲದೆ ದೈತ್ಯರೊಡನೆ ಸುಖವಾಗಿ ಈ ಭೂಮಂಡಲವನ್ನು ಅನುಭವಿಸುವನು. ಎಲೈ ಜಿತೇಂದ್ರಿಯನೇ! ಈ ವಿಚಾರವೆಲ್ಲವನ್ನೂ ನಿನಗೆ ತಿಳಿಸಿದೆನು. ಇದಲ್ಲದೆ ನೀನು ಇನ್ನೇನನ್ನು ತಿಳಿಯಬೇಕೆಂದಿರುವೆ, ಅದನ್ನು ತಿಳಿಸು" ಎಂದು ವ್ಯಾಸರು ಮನುವನ್ನು ಕುರಿತು ಹೇಳಿದರು

೫೦. ಮನುವು ಪ್ರಶ್ನೆಮಾಡುತ್ತಾನೆ—"ಭಗವಂತನಾದ ಎಲೈ ವ್ಯಾಸಮಹರ್ಷಿಯೇ! ಭೋಗಸಿಂಹ, ಕೇಲಿಸಿಂಹವಂಶದ ಚರಿತ್ರೆಯನ್ನು ನನಗೆ ವಿಸ್ತಾರವಾಗಿ ಹೇಳು. ಅಲ್ಲದೆ ಕಲಿಯುಗದಲ್ಲಿ ಮಾನವರು ಜನಿಸುವ ರೀತಿಯನ್ನು ವಿಶದವಾಗಿ ನನಗೆ ತಿಳಿಸಬೇಕು" ಎಂದು ಮನುವು ವ್ಯಾಸರನ್ನು ಪ್ರಾರ್ಥಿಸಿದನು.

೫೧-೫೨ ಇದನ್ನು ಕೇಳಿ ವ್ಯಾಸರು ಹೇಳುತ್ತಾರೆ—ವಾಮನನ ಅಂಶದಿಂದ ಜನಿಸಿದ ಭೋಗಸಿಂಹ ಮತ್ತು ಕೇಲಿಸಿಂಹ ಇವರಿಬ್ಬರೂ ಮನುಷ್ಯಸ್ವರೂಪರಾದ

ಜಿತ್ವಾ ದೈತ್ಯಾನ್ನರಮಯಾನ್ನರಾನ್ವಾತ್ಯೋದ್ಭವಾನ್ಭುವಿ ।
ವಾಮನಾಂಶಮುಪಾಗಮ್ಯ ಹರ್ಷಿತಾಃ ಸಂಬಭೂವಿರೇ ॥ ೫೨ ॥

ತದಾ ತು ದುಃಖಿತಾ ದೇವಾಸ್ತ್ಯಕ್ತ್ವಾ ಮೂರ್ತೀಃ ಸಮಂತತಃ ।
ಕೃಷ್ಣಚೈತನ್ಯಮಾಗಮ್ಯ ನತ್ವೋಚುರ್ನತಕಂಧರಾಃ ॥ ೫೩ ॥

ಭಗವಂಸ್ತ್ವತ್ಪ್ರಸಾದೇನ ಚರಣಂ ಪ್ರಥಮಂ ಕಲೇಃ ।
ಭುಕ್ತ್ವಾ ತಥಾ ಮಹೀ ಸ್ವಾಮಿಞ್ಜಿತ್ವಾ ದೈತ್ಯಪ್ರಪೂಜಕಾನ್ ॥ ೫೪ ॥

ಕಿಂ ಕರ್ತವ್ಯಂ ಚ ಯಜ್ಞಾಂಶ ನಮಸ್ತೇ ಕರುಣಾಕರ ।
ಇತಿ ಶ್ರುತ್ವಾ ಹರಿಃ ಪ್ರಾಹ ಶೃಣುಧ್ವಂ ಸುರಸತ್ತಮಾಃ ॥ ೫೫ ॥

ಅಹಂ ಸ್ವರ್ಗಂ ಗಮಿಷ್ಯಾಮಿ ಭವದ್ಭಿಃ ಸಹ ಹರ್ಷಿತಃ ।
ಅತೋ ಯೂಯಂ ಸುರಾಃ ಸರ್ವೇ ದೇವವಂಶಾನ್ನರಾನ್ಸದಾ ॥ ೫೬ ॥

---

ದೈತ್ಯರನ್ನೂ, ಮತ್ತು ವಾತ್ಯವಂಶೋತ್ಪನ್ನರಾದ ಮಾನವರನ್ನೂ ಸಹ ಜಯಿಸಿ ರಾಜ್ಯ ವಾಳುತ್ತಾ ಸಂತೋಷದಿಂದಿದ್ದರು.

೫೩. ಆಗ ದೇವತೆಗಳೆಲ್ಲರೂ ಖಿನ್ನರಾಗಿ ಎಲ್ಲಾ ಕಡೆಯಲ್ಲಿಯೂ ತಾವು ನೆಲಸಿರುತ್ತಿದ್ದ ವಿಗ್ರಹಗಳನ್ನೆಲ್ಲಾ ಬಿಟ್ಟು ಕೃಷ್ಣಚೈತನ್ಯನ ಸಮೀಪಕ್ಕೆ ಬಂದು ವಿನಯದಿಂದ ತಲೆಬಾಗಿ ನಮಸ್ಕಾರಮಾಡಿ ಮುಂದೆ ಹೇಳುವಂತೆ ವಿಜ್ಞಾಪಿಸಿದರು.

೫೪. "ಎಲೈ ಭಗವಂತನೇ! ನಿನ್ನ ಅನುಗ್ರಹದಿಂದ ನಾವು ಈ ಭೂಮಿಯಲ್ಲಿ ದೈತ್ಯಪೂಜಕರನ್ನು ಜಯಿಸಿ ಕಲಿಯುಗದ ಮೊದಲನೆಯ ಪಾದದಲ್ಲೆಲ್ಲಾ ನಿರಾತಂಕ ವಾಗಿ ಸುಖವನ್ನು ಅನುಭವಿಸಿದೆವು."

೫೫ " ಈಗ ಕಲಿಯುಗದಲ್ಲಿ ಎರಡನೆಯ ಪಾದವು ಪ್ರಾರಂಭವಾಗಿದೆ. ಎಲೈ ದಯಾಸಮುದ್ರನಾದ ಯಜ್ಞಾಂಶನೇ ! ನಿನ್ನನ್ನು ನಮಸ್ಕರಿಸುವೆವು. ಈಗ ನಮ್ಮ ಕರ್ತವ್ಯವೇನೆಂಬುದನ್ನು ಆಜ್ಞಾಪಿಸಬೇಕು " ಎಂದು ಪ್ರಾರ್ಥಿಸಿದರು.

೫೬-೫೭ ಇದನ್ನು ಕೇಳಿ ಮಹಾವಿಷ್ಣುಸ್ವರೂಪನಾದ ಆ ಯಜ್ಞಾಂಶನು " ಎಲೈ ದೇವತೆಗಳಿರಾ ! ಕೇಳಿರಿ. ನಾನೂ ನಿಮ್ಮೊಡನೆಯೇ ಸಂತೋಷದಿಂದ ಸ್ವರ್ಗಕ್ಕೆ ತೆರಳುವೆನು. ದೇವತೆಗಳಾದ ನೀವೆಲ್ಲರೂ, ದೇವವಂಶೋತ್ಪನ್ನರಾದ

ಉತ್ಥಾಪ್ಯ ಶೀಘ್ರಮಾಗಮ್ಯ ಗಚ್ಛಧ್ವಂ ಚ ತ್ರಿವಿಷ್ಟಪಂ ।
ಇತಿ ಸೂತೇನ ಕಥಿತೇ ಮುನೀನ್ ಪ್ರತಿ ಸುಮಂಡಲಂ ॥ ೫೭ ॥

ದೇವಾ ವಿಮಾನಮಾದಾಯ ತತ್ರ ಯಾಸ್ಯಂತಿ ಭೋ ಮನೋ ।
ಸೂತಾದೀಂಶ್ಚ ಮುನೀನ್ಸರ್ವಾನ್ಸಮಾರುಹ್ಯ ಸುರಾಸ್ತದಾ ॥ ೫೮ ॥

ಯಜ್ಞಾಂಶಂ ಚ ಗಮಿಷ್ಯಂತಿ ನದೀಹೋಪವನೇ ತದಾ ।
ಆಹ್ಲಾದಶ್ಚ ತದಾ ಯೋಗೀ ಗೋರಖಾದ್ಯಾಸ್ತಥೈವ ಚ ॥ ೫೯ ॥

ಶಂಕರಾದ್ಯಾಶ್ಚ ರುದ್ರಾಂಶಾಃ ನೃಪೋ ಭರ್ತೃಹರಿಸ್ತದಾ ।
ಅನ್ಯೇ ತು ಯೋಗನಿಷ್ಠಾಶ್ಚ ಗಮಿಷ್ಯಂತಿ ಹಿತಪ್ರದಾಃ ॥ ೬೦ ॥

ತೈಃಸಾರ್ಧಂ ಕೃಷ್ಣಚೈತನ್ಯೋ ದೇವಲೋಕಂ ಗಮಿಷ್ಯತಿ ।
ತದಾ ತೌ ವಾಮನಾಂಶೌ ಚ ದ್ವಿತೀಯಚರಣೇ ಕಲೌ ॥ ೬೧ ॥

---

ಮನುಜರನ್ನೆಲ್ಲಾ ಎಚ್ಚರಗೊಳಿಸಿ ಜಾಗ್ರತೆಯಾಗಿ ಸ್ವರ್ಗಕ್ಕೆ ಬಂದು ಸೇರುವಂತೆ ಮಾಡಿ" ಎಂದು ಸೂತನು ಮಹರ್ಷಿಗಳನ್ನು ಕುರಿತು ಹೇಳಿದನು.

೫೮-೬೦ ಆಗ ದೇವತೆಗಳೆಲ್ಲರೂ, ಮಂಡಲಾಕಾರವಾಗಿರುವ ವಿಮಾನವನ್ನು ಆಶ್ರಯಿಸಿ ಅದರಲ್ಲಿ ಸೂತರೇ ಮೊದಲಾದ ಮುನಿವರ್ಯರನ್ನೆಲ್ಲಾ ಕುಳ್ಳಿರಿಸಿಕೊಂಡು ಯಜ್ಞಾಂಶನು ವಾಸಿಸುತ್ತಿದ್ದ ನದೀಹೋಪವನಕ್ಕೆ ಹೋಗುವರು. ಎಲೈ ಮನುವೇ ! ಆಗ ಆಹ್ಲಾದ, ಗೋರಖ ಮೊದಲಾದ ಯೋಗಿಗಳೂ, ಶಂಕರಾಚಾರ್ಯರೇ ಮೊದಲಾದ ರುದ್ರಾಂಶಸಂಭೂತರೂ, ಭರ್ತೃಹರಿರಾಜನೂ ಮತ್ತು ಇನ್ನೂ ಅನೇಕ ಯೋಗನಿಷ್ಠರಾದ ಕೃಷ್ಣಾಂಶನ ಶಿಷ್ಯರೂ ಸಹ ಹಿತಕಾರಿಗಳಾಗಿ ಹೊರಡುವರು.

೬೧-೬೨ ಆಗ ಕೃಷ್ಣಚೈತನ್ಯನು ಇವರೊಡನೆ ಹೊರಟು ದೇವಲೋಕಕ್ಕೆ ಹೋಗುವನು. ಆ ವೇಳೆಗೆ ಕಲಿಯುಗದ ಎರಡನೆಯ ಪಾದದಲ್ಲಿದ್ದ ವಾಮನಾಂಶ ಸಂಭೂತರಾದ ಆ ಭೋಗಸಿಂಹ ಮತ್ತು ಕೇಲಿಸಿಂಹರೆಂಬುವರು ಕಲ್ಪಕ್ಷೇತ್ರದಲ್ಲಿ

ಯೋಗನಿಷ್ಠಾಂ ಸಮಾಧಾಯ ಕಲ್ಪಕ್ಷೇತ್ರೇ ವಸಿಷ್ಯತಃ ।
ತದೈವ ಸಕಲಾ ದೈತ್ಯಾ ಹರ್ಷಿತಾಸ್ತೈರ್ನೃಭಿರ್ಮುಹುಃ ॥ ೬೨ ॥

ವಿವರಾನ್ವರ್ಧಯಿಷ್ಯಂತಿ ಪಾತಾಲಾದ್ಯಾನ್ಸಮಂತತಃ ।
ಕಲೇಸ್ತೃತೀಯಚರಣೇ ಸಂಪ್ರಾಪ್ತೇ ಕಿಂನರಾಶ್ಚ ತೇ ॥ ೬೩ ॥

ಶನೈಃಶನೈಃ ಕ್ಷಯಂ ಭೂಮೌ ಗಮಿಷ್ಯಂತಿ ಸಮಂತತಃ ।
ಷಡ್ವಿಂಶಾಬ್ದಸಹಸ್ರೇ ಚ ತೃತೀಯಚರಣೇ ಗತೇ ॥ ೬೪ ॥

ರುದ್ರಾಜ್ಞಯಾ ಭೃಂಗಋಷಿರ್ಭೂತಪಕ್ಷೋ ಗಮಿಷ್ಯತಿ ।
ಸೌರಭೀ ನಾಮ ತತ್ಪತ್ನೀ ಜನಿಷ್ಯತಿ ಮಹಾಬಲಾನ್ ॥ ೬೫ ॥

ಕಾಲಕಲ್ಪಾನ್ನರಾನ್ಘೋರಾನ್ಸರ್ವಕಿಂನರಭಕ್ಷಕಾನ್ ।
ಷಡ್ವಿಂಶಾಬ್ದವಯಸ್ತೇಷಾಂ ಭವಿಷ್ಯತಿ ತದಾ ಕಲೌ ॥ ೬೬ ॥

---

ಸಮಾಧಿಯೋಗನಿರತರಾಗಿರುವರು. ಆಗ ಸಕಲ ದೈತ್ಯರೂ ಸಂತೋಷದಿಂದ ಆ ಮಾನವರೊಡನೆ ಮತ್ತೆ ವಿಶ್ವಾಸಹೊಂದುವರು.

೬೩. ಅನಂತರ ಈ ದೈತ್ಯರು ಪಾತಾಳವೇ ಮೊದಲಾದ ಗುಹೆಗಳನ್ನು, ಅಭಿವೃದ್ಧಿಪಡಿಸುವರು. ಹೀಗೆ ಕಲಿಯುಗದ ಎರಡನೆಯ ಪಾದವು ಕಳೆದು ಮೂರನೆಯ ಪಾದವು ಪ್ರಾರಂಭವಾಗಲು ಆ ಕಿನ್ನರರೆಲ್ಲರೂ ಸಹ ಕ್ರಮಕ್ರಮವಾಗಿ ನಾಶಹೊಂದುವರು.

೬೪-೬೫. ಮೂರನೆಯ ಪಾದದಲ್ಲಿ ಇಪ್ಪತ್ತಾರುಸಾವಿರ ವರ್ಷಗಳು ಕಳೆದ ಮೇಲೆ ಪರಮೇಶ್ವರನ ಅಪ್ಪಣೆಯಂತೆ ಭೂತಪಕ್ಷದವನಾದ ಭೃಂಗಋಷಿಯು ಈ ಭೂಲೋಕಕ್ಕೆ ಬರುವನು. ಇವನು ತನ್ನ ಪತ್ನಿಯಾದ ಸೌರಭೀ ಎಂಬವಳಲ್ಲಿ ಮಹಾಬಲಶಾಲಿಗಳಾದ ಮಾನವರನ್ನು ಪಡೆಯುವನು.

೬೬. ಇವರು ಯಮನಿಗೆ ಸಮಾನರಾಗಿ ಭಯಂಕರರಾಗಿರುವರು. ಈ ಜನ್ನಗಳು ಸಕಲ ಕಿನ್ನರರನ್ನೂ ಭಕ್ಷಿಸುವರು. ಕಲಿಯುಗದಲ್ಲಿ ಇವರಿಗೆ ಕೇವಲ ಇಪ್ಪತ್ತಾರುವರ್ಷ ಆಯುಸ್ಸು ನಿಯಮಿತವಾಗುವುದು.

ಶರಣಂ ವಾಮನಾಂಶೇ ಚ ಗಮಿಷ್ಯಂತಿ ಸಕಿನ್ನರಾಃ ।
ಭೋಗಸಿಂಹಃ ಕೇಲಿಸಿಂಹಸ್ತೈಶ್ಚ ಸಾರ್ಧಂ ಮಹದ್ರಣಂ ॥ ೧೭ ॥

ಕರಿಷ್ಯತಿ ದಶಾಬ್ದಂ ಚ ಪುನಸ್ತೈಶ್ಚ ಪರಾಜಿತೌ ।
ದೈತ್ಯೈಃ ಸಾರ್ಧಂ ಚ ಪಾತಾಲಂ ವಾಮನಾಂಶೌ ಗಮಿಷ್ಯತಃ ॥ ೧೮ ॥

ಭೃಂಗಸೃಷ್ಟಿರ್ಮಹಾಘೋರಾ ಭವಿಷ್ಯತಿ ತದಾ ಕಲೌ ।
ಮಾತೃಃಸ್ವಸ್ರಾಃ ಸುತಾಸ್ತೇ ವೈ ನರಾಶ್ಚ ಪಶುರೂಪಿಣಃ ॥ ೧೯ ॥

ಭುಕ್ತ್ವಾ ಪ್ರೀತ್ಯಾ ಚ ಕಾಮಾಂಧಾ ಜನಿಷ್ಯಂತಿ ಸುತಾನ್ಬಹೂನ್ ।
ಕಲೇಸ್ತೃತೀಯಚರಣೇ ಸಮಾಪ್ತೇ ತಾಸ್ತು ಸೃಷ್ಟಯಃ ॥ ೨೦ ॥

---

೧೭. ಆಗ ಆ ಕಿನ್ನರರೆಲ್ಲರೂ ಈ ಜನಗಳಿಗೆ ಭಯಪಟ್ಟು, ವಾಮನಾಂಶ ಸಂಭೂತರಾದ ಭೋಗಸಿಂಹ, ಕೇಲಿಸಿಂಹರ ಸಮೀಪಕ್ಕೆ ಹೋಗುವರು. ಆಗ ಅವರು ಈ ಭೃಂಗಮಹರ್ಷಿಪುತ್ರರೊಡನೆ ಘೋರಯುದ್ಧಮಾಡುವರು.

೧೮. ಈ ಯುದ್ಧವು ಹತ್ತುವರ್ಷಗಳಕಾಲ ನಡೆಯುವುದು. ವಾಮನಾಂಶ ಸಂಭೂತರಾದ ಭೋಗಸಿಂಹ ಮತ್ತು ಕೇಲಿಸಿಂಹ ಈ ಯುದ್ಧದಲ್ಲಿ ಸೋತು ತಮ್ಮ ಕಡೆಯ ದೈತ್ಯರೊಡನೆ ಪಾತಾಳಲೋಕಕ್ಕೆ ಹೋಗುವರು.

೧೯. ಬಳಿಕ ಕಲಿಯುಗದಲ್ಲಿ ಭೃಂಗಮಹರ್ಷಿಯು ಮಾಡಿದ ಪ್ರಜಾಸೃಷ್ಟಿಯು ತುಂಬಾ ಭಯಂಕರವಾಗಿ ಪರಿಣಮಿಸುತ್ತಾ ತಾಯಿ, ತಂಗಿ, ಮಗಳು ಎಂಬ ಭೇದವನ್ನೇ ಅರಿಯದೆ ವರ್ತಿಸುವುದು. ಈ ಜನರು ಪಶು ಮತ್ತು ಮನುಷ್ಯ ಈ ಎರಡು ರೂಪವನ್ನೂ ಧರಿಸಿರುವರು.

೨೦-೨೧. ಕಾಮಾಂಧರಾದ ಇವರು ತಾಯಿ, ತಂಗಿ ಎಲ್ಲರನ್ನೂ ಉಪಭೋಗಿಸುವರು. ಅನಂತರ ಇವರಿಂದ ಅನೇಕ ಪುತ್ರರು ಜನಿಸುವರು. ಕಲಿಯುಗದ ಮೂರನೆಯ ಪಾದವು ಮುಗಿಯಲು ತಿರ್ಯಗ್ಯೋನಿಸದೃಶವಾದ ಈ ಭೃಂಗಮಹರ್ಷಿಯ

ತಿರ್ಯಗ್ಯೋನಿಧರಾ ಘೋರಾಃ ಕ್ಷಯಿಷ್ಯಂತಿ ಕಲೌ ಯುಗೇ ।
ಕಲೇಶ್ಚತುರ್ಥಚರಣೇ ಸಂಪ್ರಾಪ್ತೇ ತು ತದಾ ನರಾಃ ॥ ೭೦ ॥

ವಿಂಶದಬ್ದವಯುಸ್ಕಾಶ್ಚ ಮರಿಷ್ಯಂತಿ ಚ ನಾರಕಾಃ ।
ಯಥಾಜಲಮನುಷ್ಯಾಶ್ಚ ಯಥೈವ ವನಜಾ ನರಾಃ ॥ ೭೧ ॥

ಕಂದಮೂಲಫಲಾಹಾರಾ ಭವಿಷ್ಯಂತಿ ಕಲೌ ತದಾ ।
ಅಲೋಕಾ ಯೇ ತು ವಿಖ್ಯಾತಾಸ್ತಾಮಿಸ್ರಾದ್ಯಾ ಭಯಾನಕಾಃ ॥ ೭೩ ॥

ತೇ ಸರ್ವೇ ಪೂರ್ಣಮೇಷ್ಯಂತಿ ಕರ್ಮಭೂಮಿಭವೈರ್ನರೈಃ ।
ಯಥಾ ಸತ್ಯಸ್ಯ ಪ್ರಥಮೇ ಚರಣೇ ಸತ್ಯಲೋಕಕಃ ॥ ೭೪ ॥

ದ್ವಿತೀಯೇ ಚ ತಪೋಲೋಕೋ ಜನಲೋಕಸ್ತೃತೀಯಕಃ ।
ಚತುರ್ಥೇ ಸ್ವರ್ಗಲೋಕಶ್ಚ ಪೂರಿತಃ ಕರ್ಮಭೂಮಿಜೈಃ ॥ ೭೫ ॥

---

ಸೃಷ್ಟಿಎಲ್ಲವೂ ನಾಶವಾಗುವುದು. ಆಮೇಲೆ ಕಲಿಯುಗದ ನಾಲ್ಕನೆಯ ಪಾದವು ಪ್ರಾರಂಭವಾಗುವುದು.

೭೧. ಆಗಿನ ಮನುಷ್ಯರು ಕೇವಲ ಇಪ್ಪತ್ತುವರ್ಷ ಆಯುಸ್ಸುಳ್ಳವರಾಗಿದ್ದು ಮೃತರಾಗುವರು. ಇವರು ಜಲನಿವಾಸಿ ಮನುಷ್ಯರಂತೆಯೂ, ಕಾಡುಮನುಷ್ಯರಂತೆಯೂ, ಗೆಡ್ಡೆಗೆಣಸುಗಳನ್ನು ತಿಂದುಕೊಂಡಿರುತ್ತಾ ಜೀವಿಸುವರು.

೭೩-೭೫. ಕೃತಯುಗದ ಮೊದಲನೆಯ ಪಾದದಲ್ಲಿ ಸತ್ಯಲೋಕವೂ, ಎರಡನೆಯ ಪಾದದಲ್ಲಿ ತಪೋಲೋಕವೂ, ಮೂರನೆಯ ಪಾದದಲ್ಲಿ ಜನೋಲೋಕವೂ, ನಾಲ್ಕನೆಯ ಪಾದದಲ್ಲಿ ಸ್ವರ್ಗಲೋಕವೂ ಸಹ:ಕರ್ಮಭೂಮಿಯಲ್ಲಿ ಜನಿಸುವ ಸತ್ಯವಂತ ಮಾನವರಿಂದ ತುಂಬಿಹೋಗುವಂತೆ; ಜನರಹಿತವೆಂದು ಪ್ರಸಿದ್ಧವಾಗಿರುವ ತಾಮಿಸ್ರವೇ ಮೊದಲಾದ ಭಯಂಕರವಾದ ನರಕಗಳೆಲ್ಲಾ, ಕರ್ಮಭೂಮಿಸಂಜಾತರಾದ ಈ ವರ್ತನೆಯ ಮಾನವರಿಂದ ತುಂಬಿಹೋಗುವುವು.

ತ್ರೇತಾಯುಗಾದ್ಯಚರಣೇ ಸುವರ್ಲೋಕಂ ಭುವಾಸ್ಪದಂ ।
ಸ್ವರ್ಗಲೋಕಂ ಯಥಾ ತೈಶ್ಚ ಮನುಜೈಃ ಪೂರಿತಂ ಸ್ಮೃತಂ ॥ ೭೬ ॥

ದ್ವಿತೀಯೇ ಋಷಿಲೋಕಂ ಚ ತೃತೀಯೇ ಗ್ರಹವಿಷ್ಟಪಂ ।
ಚತುರ್ಥೇ ಚ ಭುವರ್ಲೋಕಂ ಪೂರಿತಂ ಕರ್ಮಜೈರ್ನರೈಃ ॥ ೭೭ ॥

ದ್ವಾಪರಾದ್ಯಪದೇ ಪೂರ್ಣೋ ಭವೇದ್ದ್ವೀಪಃ ಸ ಪುಷ್ಕರಃ ।
ದ್ವಿತೀಯೇ ಶಾಲ್ಮಲಃ ಕ್ರೌಂಚಸ್ತೃತೀಯೇ ದ್ವೀಪಶೇಷಕಃ ॥ ೭೮ ॥

ಜಂಬೂದ್ವೀಪಶ್ಚತುರ್ಥೇ ಚ ಚರಣೇ ಮುನಿಭಿಃ ಸ್ಮೃತಃ ।
ಕಲೇಶ್ಚ ಚರಣೇ ಚಾದ್ಯೇಧಶ್ಚೋರ್ಧ್ವಂ ಪೂರಿತಂ ಜಗತ್ ॥ ೭೯ ॥

ದ್ವಿತೀಯೇ ಸಪ್ತಪಾತಾಲಸ್ತೃತೀಯೇ ಭೂತವಿಷ್ಟಪಂ ।
ಪೂರಿತಂ ಮನುಜೈಸ್ತತ್ರ ಕರ್ಮಭೂಮಿಸಮುದ್ಭವೈಃ ॥ ೮೦ ॥

---

೭೬. ತ್ರೇತಾಯುಗದ ಮೊದಲನೆಯ ಪಾದದಲ್ಲಿ ಸುವರ್ಲೋಕವು ಎಂದರೆ ಭೂಮಿಗೆ ಆಶ್ರಯವಾಗಿರುವ ಸ್ವರ್ಗಲೋಕವೂ ಮಾನವರಿಂದ ಪರಿಪೂರ್ಣವಾಗುವುದು

೭೭. ತ್ರೇತಾಯುಗದ ಎರಡನೆಯ ಪಾದದಲ್ಲಿ ಋಷಿಲೋಕವೂ, ಮೂರನೆಯ ಪಾದದಲ್ಲಿ ಗ್ರಹಗಳ ಲೋಕವೂ, ನಾಲ್ಕನೆಯ ಪಾದದಲ್ಲಿ ಭುವರ್ಲೋಕವೂ ಸಹ ಕರ್ಮಭೂಮಿಯಲ್ಲಿ ಜನಿಸುವ ಮಾನವರಿಂದ ಪೂರ್ಣವಾಗುವುದು.

೭೮-೭೯. ದ್ವಾಪರಯುಗದ ಮೊದಲನೆಯ ಪಾದದಲ್ಲಿ ಪುಷ್ಕರದ್ವೀಪ, ಎರಡನೆಯ ಪಾದದಲ್ಲಿ ಶಾಲ್ಮಲ ಮತ್ತು ಕ್ರೌಂಚ ದ್ವೀಪಗಳೂ, ಮೂರನೆಯ ಪಾದ ದಲ್ಲಿ ಪ್ಲಕ್ಷ, ಕುಶ ಮತ್ತು ಶಾಕದ್ವೀಪಗಳೂ, ನಾಲ್ಕನೆಯ ಪಾದದಲ್ಲಿ ಜಂಬೂ ದ್ವೀಪವೂ ಸಹ ಕರ್ಮಭೂಮಿಯಲ್ಲಿ ಜನಿಸುವ ಮಾನವರಿಂದ ತುಂಬುವುವು. ಕಲಿಯುಗದ ಮೊದಲನೆಯ ಪಾದದಲ್ಲಿ ಊರ್ಧ್ವ ಮತ್ತು ಅಧೋಲೋಕಗಳು ಕರ್ಮಭೂಮಿಯ ಮಾನವರಿಂದ ಪೂರ್ಣವಾಗುವುವು.

೮೦ ಕಲಿಯುಗದ ಎರಡನೆಯ ಪಾದದಲ್ಲಿ ಏಳು ಪಾತಾಳಲೋಕಗಳೂ, ಮೂರನೆಯ ಪಾದದಲ್ಲಿ ಭೂತಲೋಕವೂ ಸಹ ಕರ್ಮಭೂಮಿಯ ಮಾನವರಿಂದ ಪೂರ್ಣವಾಗುವುವು.

**ತದಾದ್ಯನಾರಕಾಸ್ಸರ್ವೇ ಪೂರ್ಣಮೇಷ್ಯಂತಿ ತೈರ್ನರೈಃ ।**
**ಇತಿ ತೇ ಕಥಿತಂ ಸರ್ವಂ ಯತ್ಪೃಷ್ಟೋಽಹಂ ಮನೋ ತ್ವಯಾ ॥ ೮೧ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಪ್ರತಿಸರ್ಗಪರ್ವಣಿ ಚತುರ್ಥಖಂಡೇ ಕಲಿಯುಗೀಯೇತಿಹಾಸಸಮುಚ್ಚಯೇ ಚತುರ್ವಿಂಶೋಽಧ್ಯಾಯಃ.**



---

೮೧ ಅದರಂತೆ ಈ ಸಮಯದಲ್ಲಿ ಈ ದುರ್ವೃತ್ತ ಜನಗಳಿಂದ ಎಲ್ಲಾ ನರಕಗಳೂ ಪರಿಪೂರ್ಣವಾಗುವುವು. ಎಲೈ ಮನುವೇ! ನೀನು ಕೇಳಿದ ಪ್ರಶ್ನೆಗಳಿಗೆಲ್ಲಾ ಉತ್ತರವನ್ನು ಹೇಳಿರುವೆನು" ಎಂದು ವ್ಯಾಸರು ಮನುವಿಗೆ ಹೇಳಿದರು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಪ್ರತಿಸರ್ಗಪರ್ವದ ನಾಲ್ಕನೆಯ ಖಂಡದಲ್ಲಿ ಇಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಪ್ರತಿಸರ್ಗಪರ್ವಣಿ ಚತುರ್ಥಖಂಡೇ

## ಪಂಚವಿಂಶೋಽಧ್ಯಾಯಃ

॥ ವ್ಯಾಸ ಉವಾಚ ॥

ಚತುರ್ಥಚರಣೇ ಜಾತೈರ್ಮನುಜೈರೇಕವಿಂಶತಿಃ ।
ಅಜೀರ್ಣಭೂತಾ ನರಕಾ ಯಾಸ್ಯಂತಿ ಚ ಯಮಾಲಯಂ ॥ ೧ ॥

ನಮಸ್ತೇ ಧರ್ಮರಾಜಾಯ ನಮಸ್ತೃಪ್ತಿಕರಾಯ ಚ ।
ವಚನಂ ಶೃಣು ಸರ್ವಜ್ಞ ನಶ್ಚ ಜಾತಮಜೀರ್ಣಕಂ ॥ ೨ ॥

ಯಥಾ ಭಜಾಮ ಪ್ರಕೃತಿಂ ತಥಾ ಕುರು ಸುರೋತ್ತಮ ।
ಇತಿ ಶ್ರುತ್ವಾ ಧರ್ಮರಾಜಶ್ಚಿತ್ರಗುಪ್ತೇನ ಸಂಯುತಃ ॥ ೩ ॥

---

### ಇಪ್ಪತ್ತೈದನೆಯ ಅಧ್ಯಾಯ

೧-೪. ಪುನಃ ವ್ಯಾಸರು ಮನುವನ್ನು ಕುರಿತು ಹೇಳುತ್ತಾರೆ—ಎಲೈ ಮನುವೇ! ಕಲಿಯುಗದ ನಾಲ್ಕನೆಯ ಪಾದದಲ್ಲಿ ಹುಟ್ಟುವ ಮಾನವರಿಂದ ಇಪ್ಪತ್ತೊಂದು ನರಕಗಳೂ, ಕಿಕ್ಕಿರಿದು ತುಂಬಿಹೋಗಲು ಅದರ ಅಭಿಮಾನಿದೇವತೆಗಳು ಯಮಧರ್ಮರಾಜನು ಇದ್ದೆಡೆಗೆ "ಹೋಗಿ ಪ್ರಜೆಗಳಿಗೆ ತೃಪ್ತಿಯನ್ನುಂಟುಮಾಡುವ ಧರ್ಮರಾಜನೇ! ನಿನಗೆ ನಮಸ್ಕಾರ. ಎಲೈ ಸರ್ವಜ್ಞನೇ! ನಾವು ಹೇಳುವ ಮಾತನ್ನು ಲಾಲಿಸು. ಎಲೈ ಸ್ವಾಮಿಯೇ! ನಮಗೆ ಅಜೀರ್ಣವುಂಟಾಗಿದೆ. ದೇವೋತ್ತಮನೇ! ನಾವು ಪ್ರಕೃತಿದೇವಿಯನ್ನು ಭಜಿಸುವಂತೆ ಮಾಡು" ಎಂದು ಹೇಳಲು ಅದನ್ನು ಕೇಳಿ ಧರ್ಮರಾಜನು ಚಿತ್ರಗುಪ್ತನೊಡನೆ ಹೊರಟು ಕಲಿಯುಗದ

ಬ್ರಹ್ಮಾಣಂ ಚ ಗಮಿಷ್ಯಂತಿ ಸಂಧ್ಯಾಯಾಂ ಚ ಕಲೌ ಯುಗೇ ।
ಚತುರಶ್ಚ ಯಮಾನ್ದೃಷ್ಟ್ವಾ ಪರಮೇಷ್ಠೀ ಪಿತಾಮಹಃ ॥ ೪ ॥

ತದೀರಿತಂ ಸ್ವಯಂ ಜ್ಞಾತ್ವಾ ಕ್ಷೀರಾಬ್ಧಿಂ ಪ್ರತಿ ಯಾಸ್ಯತಿ ।
ಪೂಜಯಿತ್ವಾ ಜಗನ್ನಾಥಂ ದೇವದೇವಂ ವೃಷಾಕಪಿಂ ॥ ೫ ॥

ಸಾಂಖ್ಯಶಾಸ್ತ್ರಮಯೈಃ ಸ್ತೋತ್ರೈಃ ಸಂಸ್ತೋಷ್ಯತಿ ಪರಂ ಪ್ರಭುಂ ॥ ೬ ॥

ಜಯಜಯಜಯ ನಿರ್ಗುಣ ಗುಣಧಾರಿನ್ನಗಜಗಜೀವತತ್ವಶುಭಕಾರಿನ್ ।
ಸಾರಭೂತ ಸದ್ಗುಣಮಯ ತತ್ತ್ವೈರ್ದೇವಾನ್ರಚಯತಿ ಪಾತಿ ಗುಣಸತ್ತ್ವೈಃ
ತಸ್ಮೈ ನಮೋನಮೋ ಗುಣರಾಶೇ ದೇವವೃಂದಹೃದಿ ಕೃಷ್ಣವಿಕಾಶೇ॥ ೭ ॥

---

ಸಂಧ್ಯಾಂಶದಲ್ಲಿ ಬ್ರಹ್ಮನ ಸಮೀಪಕ್ಕೆ ಹೋಗುವರು. ಆಗ ಆ ಬ್ರಹ್ಮನು ಚಿತ್ರ, ಚಿತ್ರಗುಪ್ತ, ಯಮ, ಧರ್ಮರಾಜ ಎಂಬ ನಾಲ್ಕುಜನರನ್ನೂ ನೋಡುವನು.

೫. ಮತ್ತು ಅವರು ಹೇಳಿದುದನ್ನೆಲ್ಲಾ ಕೇಳಿ ಮುಂದೆ ಏನುಮಾಡಬೇಕೆಂಬುದನ್ನು ತೀರ್ಮಾನಿಸುವುದಕ್ಕೋಸ್ಕರ ದೇವದೇವನೂ, ವೃಷಾಕಪಿಯೂ, ಜಗದೊಡೆಯನೂ ಆದ ಮಹಾವಿಷ್ಣುವು ಶೇಷಶಾಯಿಯಾಗಿ ಪವಡಿಸಿರುವ ಕ್ಷೀರ ಸಮುದ್ರಕ್ಕೆ ಹೋಗುವರು.

೬. ಅನಂತರ ಬ್ರಹ್ಮನು ಈ ದೇವತೆಗಳೊಡನೆ ಮಹಾವಿಷ್ಣುವನ್ನು ಪೂಜಿಸಿ ಸಾಂಖ್ಯಶಾಸ್ತ್ರದಲ್ಲಿ ಹೇಳಿರುವ ಕ್ರಮವನ್ನನುಸರಿಸಿ ಅನೇಕ ಸ್ತೋತ್ರಗಳಿಂದ ಆ ಮಹಾಮಹಿಮನನ್ನು ಸ್ತೋತ್ರಮಾಡುವನು.

೭. ಗುಣರಹಿತನಾದರೂ ಉಪಾಧಿವಶದಿಂದ ಗುಣವಿಶಿಷ್ಟನೆಂದು ತೋರುವ ಸ್ವಾಮಿಯೇ ! ನಿನಗೆ ಜಯವಾಗಲಿ. ದೇವಾ ! ನೀನು ಸ್ಥಾವರಜಂಗಮಾತ್ಮಕವಾದ ಸಕಲ ಪ್ರಪಂಚಕ್ಕೂ ಶುಭವನ್ನುಂಟುಮಾಡುತ್ತೀಯೆ. ಸಕಲ ದೇವತೆಗಳಲ್ಲಿಯೂ ಅತ್ಯಂತ ಶ್ರೇಷ್ಠನೂ, ಸದ್ಗುಣಸ್ವರೂಪನೂ ಆದ ನೀನು ಸತ್ವಗುಣಸ್ವರೂಪವಾದ ತತ್ತ್ವಗಳಿಂದ ದೇವತೆಗಳನ್ನು ಸೃಷ್ಟಿಸಿ ಕಾಪಾಡುವೆ. ದೇವತೆಗಳ ಸಮೂಹವೆಲ್ಲವೂ ನಿನ್ನ ನಾಮಸ್ಮರಣೆಯಿಂದ ಹೃದಯದಲ್ಲಿ ವಿಕಾಸಹೊಂದುವುವು. ಗುಣಗಳ ಸಮೂಹವೇ ನೀನಾಗಿರುವೆ. ಎಲೈ ಸ್ವಾಮಿಯೇ ! ಇಂತಹ ಸರ್ವಸಮರ್ಥನಾದ ನಿನಗೆ ನಮಸ್ಕಾರ.

ರಜೋಭೂತತತ್ತ್ವೇಭ್ಯ ಉತಾಶು ವಿರಚತಿ ಭುವಿ ಚ ನರಾನ್ಸ್ವಯಮಾಶು ।
ಪಾತಿ ಹಂತಿ ಯೋ ದೇವ ಉದಾರಸ್ತಸ್ಯ ಶಿರಸಿ ಸಂಸ್ಥಿತಜಗಭಾರಃ ॥
ಪಾಹಿ ನಾಥ ನೋ ದೈತ್ಯವಿನಾಶಿನ್ ಕಾಲಜನಿತಲೀಲಾಗುಣಭಾಸಿನ್ ॥ ೮ ॥

ಶ್ರೇಷಾಮಿತಿ ವಚನಂ ಪ್ರಭುಃ ಶ್ರುತ್ವಾ ಹ್ಯವನ್ಯಾಮಾಶು ।
ಯಥಾ ಜನಿಷ್ಯತಿ ಸ ಪ್ರಭುಸ್ತಚ್ಛೃಣು ವೈ ಮನೋ ಆಶು ॥ ೯ ॥

ನಮ್ರೀಭೂತಾನ್ಸುರಾನ್ವಿಷ್ಣುರ್ನಮೋವಾಕ್ಯೇನ ತಾನ್ಪ್ರತಿ ।
ವದಿಷ್ಯತಿ ವಚೋ ರಮ್ಯಂ ಲೋಕಮಂಗಲಹೇತವೇ ॥ ೧೦ ॥

ಭೋಃ ಸುರಾಃ ಸಂಭಲಗ್ರಾಮೇ ಕಶ್ಯಪೋಽಯಂ ಜನಿಷ್ಯತಿ ।
ನಾಮ್ನಾ ವಿಷ್ಣುಯಶಾಃ ಖ್ಯಾತೋ ವಿಷ್ಣುಕೀರ್ತಿಸ್ತು ತತ್ಪ್ರಿಯಾ ॥ ೧೧ ॥

---

೮. ರಜೋಗುಣಸ್ವರೂಪದ ತತ್ತ್ವಗಳಿಂದ, ಭೂಲೋಕದಲ್ಲಿ ಮನುಷ್ಯರನ್ನು ಸೃಷ್ಟಿಸುವೆ. ಅನಂತರ ಅವರ ರಕ್ಷಣೆಯನ್ನೂ ಮಾಡಿ ಕೊನೆಗೆ ನೀನು ಎಲ್ಲರನ್ನೂ ನಾಶಪಡಿಸುವೆ. ಈ ಪ್ರಪಂಚದ ಸೃಷ್ಟಿ, ಸ್ಥಿತಿ, ಸಂಹಾರಭಾರವು ಉದಾರಸ್ವರೂಪನಾದ ನಿನ್ನಲ್ಲಿಯೇ ಅಡಕವಾಗುವುದು. ಆಯಾಯಾ ಕಾಲದಲ್ಲಿ ಉಚಿತವಾದ ಅವತಾರಮಾಡಿ ನಿನ್ನ ಲೀಲೆಗಳನ್ನು ಪ್ರಪಂಚಕ್ಕೆ ತೋರಿಸುವವನೂ, ದೈತ್ಯರನ್ನು ನಾಶಪಡಿಸುವವನೂ ಆದ ಸ್ವಾಮಿಯೇ! ನಮ್ಮನ್ನು ರಕ್ಷಿಸು" ಎಂದು ಸ್ತೋತ್ರ ಮಾಡಿದರು.

೯. ಎಲೈ ಮನುವೇ! ಈರೀತಿ ದೇವತೆಗಳು ಸ್ತೋತ್ರಮಾಡಿದುದರಿಂದ ಸಂತುಷ್ಟನಾದ ಆ ಪರಮಾತ್ಮನು, ಅವರ ಮಾತನ್ನು ಕೇಳಿ, ಭೂಮಿಯಲ್ಲಿ ತಾನು ಅವತಾರಮಾಡುವ ರೀತಿಯನ್ನು ತಿಳಿಸಿದುದನ್ನು ನಿನಗೆ ತಿಳಿಸುವೆನು ಎಂದು ಹೇಳಿ.

೧೦. ದೇವತೆಗಳೆಲ್ಲರೂ ವಿನೀತರಾಗಿ ನಿಂತಿರಲು ಆಗ ಮಹಾವಿಷ್ಣುವು ಲೋಕಕಲ್ಯಾಣಕ್ಕೋಸ್ಕರ ಮೊದಲು ನಮಸ್ಕಾರಮಾಡಿ, ಅವರನ್ನು ಕುರಿತು ಮನೋಹರವಾಗಿ ಮಾತನಾಡುವನು.

೧೧. "ಎಲೈ ದೇವತೆಗಳಿರಾ! ಸಂಭಲವೆಂಬ ಗ್ರಾಮದಲ್ಲಿ ಕಶ್ಯಪಮಹರ್ಷಿಯು ವಿಷ್ಣುಯಶಸ್ಸೆಂಬ ಹೆಸರಿನಿಂದ ಜನಿಸಿ ಪ್ರಸಿದ್ಧನಾಗುವನು. ಈ ವಿಷ್ಣುಯಶಸ್ಸಿಗೆ ವಿಷ್ಣುಕೀರ್ತಿ ಎಂಬವಳು ಪತ್ನಿಯಾಗುವಳು.

ಕೃಷ್ಣಲೀಲಾಮಯಂ ಗ್ರಂಥಂ ನರಾಂಸ್ತ್ರಾತ್ವಾ ಪ್ರವಯಿಷ್ಯತಿ ।
ತದಾ ತೇ ನಂದಿನೋ ಭೂತ್ವಾ ಚೈಕೀಭೂಯ ಸಮಂತತಃ ॥ ೧೨ ॥

ತಂ ದ್ವಿಜಂ ವಿಷ್ಣುಯಶಸಂ ಗೃಹೀತ್ವಾ ನಿಗಡೈರ್ದೃಢೈಃ ।
ಬದ್ಧ್ವಾ ಸರ್ವೇ ಸಪತ್ನೀಕಂ ಕಾರಾಗಾರೇ ದೃಢಾಯಸೇ ॥ ೧೩ ॥

ಕರಿಷ್ಯಂತಿ ಮಹಾಧೂರ್ತಾ ನಾರಕಾ ಇವ ದಾರುಣಾಃ ।
ವಿಷ್ಣುಕೀರ್ತ್ಯಾಂ ಸ ಭಗವಾನ್ಪೂರ್ಣೋ ನಾರಾಯಣೋ ಹರಿಃ ॥ ೧೪ ॥

ಜನಿಷ್ಯತಿ ಮಹಾವಿಷ್ಣುಃ ಸರ್ವಲೋಕಶಿವಂಕರಃ ।
ನಿಶೀಥೇ ತಮಸೋದ್ಭೂತೇ ಮಾರ್ಗಕೃಷ್ಣಾಷ್ಟಮೀದಿನೇ ॥ ೧೫ ॥

ಬ್ರಹ್ಮಾಂಡಂ ಮಂಗಲಂ ಕುರ್ವನ್ಸುರಾನ್ಪ್ರಾದುರ್ಭವಿಷ್ಯತಿ ।
ಬ್ರಹ್ಮಾ ವಿಷ್ಣುರ್ಹರಶ್ಚೈವ ಗಣೇಶೋ ವಾಸವೋ ಗುರುಃ ॥ ೧೬ ॥

---

೧೨-೧೩. ಈ ವಿಷ್ಣುಯಶಸ್ಸೆಂಬುವನು ಜನಗಳಿಗೆ ಕೃಷ್ಣಲೀಲಾತ್ಮಕವಾದ ಗ್ರಂಥವನ್ನು ಓದಿ ಹೇಳುವನು. ಇದರಿಂದ ಆ ಜನಗಳೆಲ್ಲರೂ, ನಂದಿಗಳ ರೂಪವನ್ನು ತಾಳಿ, ಒಗ್ಗಟ್ಟಾಗಿ ಆ ವಿಷ್ಣುಯಶಸ್ಸೆಂಬ ಬ್ರಾಹ್ಮಣನನ್ನು ಗಟ್ಟಿಯಾಗಿ ಸಂಕೋಲೆಗಳಿಂದ ಬಂಧಿಸಿ, ಪತ್ನೀಸಮೇತನಾದ ಅವನನ್ನು ಲೋಹನಿರ್ಮಿತವಾದ ಕಾರಾಗೃಹದಲ್ಲಿ ಇರಿಸುವರು.

೧೪-೧೫. ನರಕದಂತೆ ಅತ್ಯಂತ ಭಯಂಕರವಾದ ವ್ಯಾಪಾರವುಳ್ಳ ಈ ಧೂರ್ತರು ಹೀಗೆ ವಿಷ್ಣುಯಶಸ್ಸು ಮತ್ತು ವಿಷ್ಣುಕೀರ್ತಿ ಎಂಬ ದಂಪತಿಗಳನ್ನು ಬಂಧನದಲ್ಲಿಟ್ಟಿರಲು, ಅವರು ಬಂಧನದಲ್ಲಿರುವಾಗಲೇ ಮಾರ್ಗಶೀರ್ಷ ಕೃಷ್ಣ ಅಷ್ಟಮಿ ದಿನ, ಅಂಧಕಾರ ಕವಿದಿರುವ ರಾತ್ರಿಯಲ್ಲಿ ಸಕಲಕಲಾಪರಿಪೂರ್ಣನೂ, ನಾರಾಯಣ, ಹರಿ ಎಂಬ ನಾಮಾಂತರಗಳುಳ್ಳವನೂ, ಸಕಲ ಪ್ರಪಂಚಕ್ಕೂ ಕಲ್ಯಾಣವನ್ನುಂಟು ಮಾಡುವವನೂ ಆದ ಮಹಾವಿಷ್ಣುವು ಅವತರಿಸುವನು.

೧೬-೧೮. ಆ ರೀತಿ ಅವತರಿಸಿ ಬ್ರಹ್ಮಾಂಡಕ್ಕೆ ಮಂಗಳವನ್ನುಂಟುಮಾಡುವನು. ಮತ್ತು ದೇವತೆಗಳೆಲ್ಲರನ್ನೂ ಸಂತೋಷಪಡಿಸುವನು. ಈ ಮಹಾಮಹಿಮನಾದ ವಿಷ್ಣುವು ಅವತಾರಮಾಡಿದಾಗ ಬ್ರಹ್ಮ, ವಿಷ್ಣು, ಮಹೇಶ್ವರ, ಗಣಪತಿ, ಇಂದ್ರ, ಗುಹ, ಅಗ್ನಿಪುರುಷ, ಯಮ, ಯಜ್ಞಪುರುಷ, ವರುಣ, ವಿಭೀಷಣ, ಚಿತ್ರಗುಪ್ತ, ವಾಯು, ಧ್ರುವ, ವಿಶ್ವೇದೇವತೆಗಳು, ಸೂರ್ಯ, ಚಂದ್ರ, ಅಂಗಾರಕ,

ವಹ್ನಿಃ ಪಿತೃಪತಿರ್ಯಜ್ಞೋ ವರುಣಃ ಸವಿಭೀಷಣಃ ।
ಚಿತ್ರೋ ವಾಯುರ್ಧ್ರುವೋ ವಿಶ್ವೇ ರವಿಃ ಸೋಮಃ ಕುಜೋ ಬುಧಃ॥೧೭॥

ಗುರುಃ ಶುಕ್ರಃ ಶನೀ ರಾಹುಃ ಕೇತುಸ್ತತ್ರ ಗಮಿಷ್ಯತಿ ।
ಪದ್ಯೈಕೈಕೇನ ತೇ ದೇವಾಃ ಸ್ತೋಷ್ಯಂತಿ ಪರಮೇಶ್ವರಂ　　॥ ೧೮ ॥

ಮಹತ್ತಮಾ ಮೂರ್ತಿಮಯೀ ತವಾಜಾ ।
ತ್ವದಾಸ್ಯಪೂರ್ವಾಜ್ಜನಿತೋಽಹಮಾದೌ ॥
ಮಯಾ ತತಂ ವಿಶ್ವಮಿದಂ ಸದೈವಂ ।
ಯತೋ ನಮಸ್ತತ್ಪುರುಷೋತ್ತಮಾಯ　　॥ ೧೯ ॥

ಅಜಸ್ಯ ಯಾಮ್ಯಾಜ್ಜನಿತೋಽಹಮಾದೌ ।
ವಿಷ್ಣುರ್ಮಹಾಕಲ್ಪಕರೋಽಧಿಕಾರೀ ॥
ಸ್ವಕೀಯನಾಮ್ನಾ ತು ಮಯಾ ತತಂ ತ- ।
ದ್ವಿಶ್ವಂ ಸದೈವಂ ಚ ನಮೋನಮಸ್ತೇ　　॥ ೨೦ ॥

---

ಬುಧ, ಗುರು, ಶುಕ್ರ, ಶನಿ, ರಾಹು ಮತ್ತು ಕೇತು ಇವರೇ ಮುಂತಾದ ದೇವತೆಗಳು ಆ ಪರಮಾತ್ಮನ ಸಮೀಪಕ್ಕೆ ಬಂದು ಎಲ್ಲರೂ ಒಂದೊಂದು ಪದ್ಯರೂಪವಾದ ವಾಣಿಯಿಂದ ಆ ಸ್ವಾಮಿಯನ್ನು ಮುಂದೆ ಹೇಳುವಂತೆ ಸ್ತುತಿಸುವರು

೧೯. "ಎಲೈ ಸ್ವಾಮಿಯೇ! ನಿನ್ನ ಶರೀರವು ದೊಡ್ಡ ಆಕೃತಿಯುಳ್ಳುದು ಮತ್ತು ಶಾಶ್ವತವಾದುದು. ಎಲೈ ವಿರಾಟ್ಪುರುಷನೇ! ನಿನ್ನ ಪೂರ್ವದಕಡೆಯ ಮುಖದಿಂದ ನಾನು ಮೊದಲು ಜನಿಸಿದೆನು. ಹೀಗೆ ನಿನ್ನಿಂದ ಜನಿಸಿದ ನಾನು ದೇವತೆಗಳಿಂದೊಡಗೂಡಿ ಈ ಪ್ರಪಂಚವನ್ನೆಲ್ಲಾ ವ್ಯಾಪಿಸಿ ಯಾವಾಗಲೂ ನಿನ್ನಿಂದಲೇ ಪ್ರಕಾಶಿಸುತ್ತಿರುವೆನು ಪುರುಷಶ್ರೇಷ್ಠನಾದ ಸ್ವಾಮಿಯೇ! ನಿನಗೆ ನಮಸ್ಕಾರ" ಎಂಬದಾಗಿ ಬ್ರಹ್ಮನು ಸ್ತೋತ್ರಮಾಡಿದನು.

೨೦ "ಶಾಶ್ವತನೂ ವಿರಾಟ್ಸ್ವರೂಪನೂ ಆದ ಸ್ವಾಮಿಯೇ! ನಿನ್ನ ದಕ್ಷಿಣ ಮುಖದಿಂದ ಜನಿಸಿದ ನಾನು ವಿಷ್ಣುಮಹಾಕಲ್ಪದ ನಿರ್ಮಾತೃವೆನಿಸಿ ಆ ಕಲ್ಪಕ್ಕೆ ಅಧಿಕಾರಿಯೂ ಆಗಿರುವೆನು. ಓ ವಿರಾಟ್ಪುರುಷಾ! ನಿನ್ನನ್ನು ನಮಸ್ಕರಿಸುವೆನು" ಎಂದು ವಿಷ್ಣುವು ಸ್ತೋತ್ರಮಾಡಿದನು. (ಬ್ರಹ್ಮ, ವಿಷ್ಣು, ಈಶ್ವರ ಎಂಬ ತ್ರಿಮೂರ್ತಿಗಳೂ ವಿರಾಟ್ಪುರುಷನ ಅಂಶಜರು. ಇವನು ಸರ್ವವ್ಯಾಪಕನಾದುದರಿಂದ ವಿಷ್ಣುವೆನಿಸಿದನು.)

ಅವ್ಯಕ್ತಪಾಶ್ಚಾತ್ಯಮುಖಾತ್ಸುಜನ್ಮಾ ।
ಶಿವೋಽಹಮಾದೌ ಸುರತತ್ವಕಾರೀ ॥
ಮಯಾಮಹಾಕಲ್ಪಕರಸ್ತೃತೀಯಾ ।
ತ್ವದಾಜ್ಞಯಾ ದೇವ ನಮೋನಮಸ್ತೇ ॥ ೨೦ ॥

ಪ್ರಧಾನವಕ್ತ್ರೋತ್ತರತೋಽಹಮಾದೌ ।
ಜಾತೋ ಗಣೇಶಃ ಕಿಲ ಕಲ್ಪಕರ್ತಾ ॥
ಮಯಾ ತತಂ ವಿಶ್ವಮಿದಂ ಸದೈವಂ ।
ತಸ್ಮೈ ನಮಃ ಕಾರುಣಿತೋತ್ತಮಾಯ ॥ ೨೧ ॥

ಅಜಾರ್ಧವಕ್ತ್ರಾಜ್ಜನಿಕೋಽಹಮಾದೌ ।
ಮರುನ್ಮಹಾಕಲ್ಪಕರೋ ಮಹೇಂದ್ರಃ ॥
ಮಯಾ ತತಂ ವಿಶ್ವಮಿದಂ ಸ್ವಕಲ್ಪೇ ।
ಯದಾಜ್ಞಯಾ ದೇವ ನಮೋನಮಸ್ತೇ ॥ ೨೨ ॥

---

೨೦. "ಎಲೈ ಪರಮಪುರುಷನೇ! ನಿನ್ನ ಪಶ್ಚಿಮದ ಕಡೆಯ ಅವ್ಯಕ್ತವಾದ ಮುಖದಿಂದ ನಾನು ಮೊದಲು ಜನಿಸಿ, ದೇವತತ್ವಗಳನ್ನು ನಿರ್ಮಿಸಿದೆನು. ಸ್ವಾಮಿಯೇ! ಮೂರನೆಯದಾದ ಶಿವಮಹಾಕಲ್ಪವನ್ನು ನಾನು ನಿನ್ನ ಆಜ್ಞೆಯಿಂದ ರಚಿಸಿ, ನಿನ್ನ ಅಪ್ಪಣೆಯಂತೆಯೇ ನಡೆಯುತ್ತಿರುವೆನು. ಎಲೈ ದೇವದೇವನೇ! ನಿನಗೆ ನಮಸ್ಕಾರ ಮಾಡುವೆನು" ಎಂದು ಮಹೇಶ್ವರನು ಸ್ತೋತ್ರಮಾಡಿದನು.

೨೧. "ಹೇ ಸ್ವಾಮಿಯೇ! ಎಲ್ಲಕ್ಕಿಂತ ಮುಖ್ಯವಾದ ನಿನ್ನ ಉತ್ತರದಿಕ್ಕಿನ ಮುಖದಿಂದ ನಾನು ಜನಿಸಿದೆನು. ಒಳಿಕ ನಿನ್ನ ಅಪ್ಪಣೆಯಂತೆ ಕಲ್ಪನಿರ್ಮಾತೃವಾಗಿ ದೇವಮಾನುಷಾತ್ಮಕವಾದ ಈ ಸಕಲ ಪ್ರಪಂಚವನ್ನೂ ವ್ಯಾಪಿಸಿ ಪ್ರಕಾಶಿಸುತ್ತಿರುವೆನು. ಪರಮ ದಯಾಕರನಾದ ದೇವನೇ! ನಿನಗೆ ನಮಸ್ಕಾರ" ಎಂದು ಗಣೇಶ್ವರನು ಸ್ತೋತ್ರಮಾಡಿದನು.

೨೨. "ಓ ಪ್ರಭುವೇ! ಅಜನೆನಿಸಿದ ನಿನ್ನ ಅರ್ಧಮುಖದಿಂದ ನಾನು ಜನಿಸಿ, ಮರುನ್ಮಹಾಕಲ್ಪವನ್ನು ರಚಿಸಿ ಮಹೇಂದ್ರನೆಂದು ಪ್ರಸಿದ್ಧನಾದೆನು ಎಲೈ ಸ್ವಾಮಿಯೇ! ನನ್ನ ಕಲ್ಪದಲ್ಲಿ ನಿನ್ನ ಅಪ್ಪಣೆಯಂತೆ ದೇವಾತ್ಮಕವಾದ ಪ್ರಪಂಚವನ್ನೆಲ್ಲಾ ವ್ಯಾಪಿಸಿ ನಾನು ಪ್ರಸಿದ್ಧನಾಗಿರುವೆನು. ಎಲೈ ದೇವನೇ! ನಿನಗೆ ನಮಸ್ಕಾರ" ಎಂದು ಮಹೇಂದ್ರನು ಸ್ತೋತ್ರಮಾಡಿದನು.

ಪ್ರಧಾನಭಾಲಾಕ್ಷಿಸಮುದ್ಭವೋऽಹಂ ।
ವಹ್ನೇರ್ಮಹಾಕಲ್ಪಕರೋ ಗುಹಾಖ್ಯಃ ॥
ವಿನಿರ್ಮಿತಂ ವಿಶ್ವಮಿದಂ ಮಯಾ ತದ್ ।
ಯದಾಜ್ಞಯಾ ನಾಥ ನಮೋನಮಸ್ತೇ ॥ ೨೪ ॥

ಅಜಾಭುಜಾತ್ಪೂರ್ವಗತಾಚ್ಚ ಜಾತ- ।
ಶ್ಚಾದೌ ಮಹಾಕಲ್ಪಕರೋऽಹಮಗ್ನಿಃ ॥
ಬ್ರಹ್ಮಾಂಡಮೇತಚ್ಚ ಮಯಾ ತತಂ ವೈ ।
ಬ್ರಹ್ಮಾಂಡಕಲ್ಪಾಯ ನಮೋನಮಸ್ತೇ ॥ ೨೫ ॥

ಅಜಾಭುಜಾದ್ದಕ್ಷಿಣತೋऽಹಮಾದೌ ।
ಜಾತೋ ಮಹಾಕಲ್ಪಕರಃ ಸಧರ್ಮಃ ॥
ಮಯಾ ಸದೇವೈ ರಚಿತಂ ಸಮಗ್ರಂ ।
ಲಿಂಗಾಖ್ಯಕಲ್ಪಾಯ ನಮೋನಮಸ್ತೇ ॥ ೨೬ ॥

---

೨೪. "ಅಜನ ಫಾಲನೇತ್ರದಿಂದ ಜನಿಸಿದ ಗುಹನೆಂಬ ನಾನು ವಹ್ನಿಮಹಾಕಲ್ಪವನ್ನು ರಚಿಸಿ, ನಿನ್ನ ಅಪ್ಪಣೆಯಂತೆ ಈ ಕಲ್ಪದಲ್ಲಿ ಪ್ರಪಂಚವನ್ನೆಲ್ಲಾ ವ್ಯಾಪಿಸಿ ಪ್ರಕಾಶಿಸಿದೆನು. ಎಲೈ ಸ್ವಾಮಿಯೇ! ನಿನ್ನನ್ನು ನಮಿಸುವೆನು" ಎಂದು ಷಣ್ಮುಖನು ಸ್ತೋತ್ರಮಾಡಿದನು.

೨೫. ಶಾಶ್ವತನಾದ ವಿರಾಟ್‌ಪುರುಷನಾದ ನಿನ್ನ ಪೂರ್ವಭುಜದಿಂದ ಜನಿಸಿ ಶಾಶ್ವತನಾದ ವಿರಾಟ್‌ಪುರುಷನಾದ ನಿನ್ನ ಪೂರ್ವಭುಜದಿಂದ ಜನಿಸಿ ಬ್ರಹ್ಮಾಂಡವೆಂಬ ಮಹಾಕಲ್ಪನಿರ್ಮಾತೃವಾಗಿರುವ ಅಗ್ನಿಪುರುಷನಾದ ನಾನು ಈ ಬ್ರಹ್ಮಾಂಡವನ್ನೆಲ್ಲಾ ವ್ಯಾಪಿಸಿರುವೆನು ಬ್ರಹ್ಮಾಂಡಕಲ್ಪಸ್ವರೂಪನಾದ ದೇವನೇ! ನಿನಗೆ ನಮಸ್ಕಾರ" ಎಂದು ಅಗ್ನಿಯು ಸ್ತೋತ್ರಮಾಡಿದನು.

೨೬. ವಿರಾಟ್‌ಪುರುಷನ ದಕ್ಷಿಣಭುಜದಿಂದ ಜನಿಸಿ ಲಿಂಗಕಲ್ಪವೆಂಬ ಮಹಾಕಲ್ಪಕಾರಿ (ನಿರ್ಮಾತೃ) ಎನಿಸಿದ ಧರ್ಮಪುರುಷನಾದ ನಾನು ದೇವನಿರ್ಮಿತವಾದ ಈ ಸಕಲಪ್ರಪಂಚವನ್ನೂ ವ್ಯಾಪಿಸಿರುವೆನು ಲಿಂಗಸ್ವರೂಪನಾದ ಸ್ವಾಮಿಯೇ! ನಿನಗೆ ನಮಸ್ಕಾರ" ಎಂದು ಧರ್ಮರಾಜ (ಯಮ) ನು ಸ್ತೋತ್ರಮಾಡಿದನು.

ಅಜಾಭುಜಾತ್ಪಶ್ಚಿಮತೋಽಹಮಾದೌ ।
ಜಾತೋ ಮಹಾಕಲ್ಪಕರಃ ಸ ಯಜ್ಞಃ ॥
ಮಯಾ ತತಂ ವಿಶ್ವಮಿದಂ ಸಮಗ್ರಂ ।
ಮತ್ಸ್ಯಾಖ್ಯಕಲ್ಪಾಯ ನಮೋನಮಸ್ತೇ ॥ ೨೭ ॥

ಪ್ರಧಾನಬಾಹೂತ್ತರತೋಽಹಮಾದೌ ।
ಜಾತೋ ಮಹಾಕಲ್ಪಕರಃ ಪ್ರಚೇತಾಃ ॥
ಮಯಾ ತತಂ ನಾಥ ತವಾಜ್ಞಯೇದಂ ।
ಕೂರ್ಮಾಖ್ಯಕಲ್ಪಾಯ ನಮೋನಮಸ್ತೇ ॥ ೨೮ ॥

ಬ್ರಹ್ಮಾಂಡತಮಸೋ ಜಾತಸ್ತ್ವದ್ದಾಸೋಽಹಂ ವಿಭೀಷಣಃ ।
ಮಯಾ ತತಂ ತ್ರಿಲೋಕಂ ಚ ನಮಸ್ತೇ ಮನುರೂಪಿಣೇ ॥ ೨೯ ॥

---

೨೭. ಅಜನೆನಿಸಿದ ವಿರಾಟ್‌ಪುರುಷನ ಪಶ್ಚಿಮಭುಜದಿಂದ ನಾನು ಜನಿಸಿ, ಮತ್ಸ್ಯಮಹಾಕಲ್ಪವನ್ನು ನಿರ್ಮಿಸಿ ನಿನ್ನ ಅಪ್ಪಣೆಯಂತೆ ಸಕಲ ಪ್ರಪಂಚವನ್ನೂ ವ್ಯಾಪಿಸಿರುವೆನು. ಮತ್ಸ್ಯಕಲ್ಪಸ್ವರೂಪನಾದ ಸ್ವಾಮಿಯೇ! ನಿನ್ನನ್ನು ನಮಸ್ಕರಿಸುವೆನು" ಎಂಬದಾಗಿ ಯಜ್ಞಪುರುಷನು ಸ್ತೋತ್ರಮಾಡಿದನು.

೨೮. "ವಿರಾಟ್‌ಪುರುಷನಾದ ನಿನ್ನ ಅವಯವಗಳಲ್ಲಿ ಪ್ರಮುಖವಾದ ಉತ್ತರ ಭುಜದಿಂದ ಜನಿಸಿದ ವರುಣನೆಂಬ ನಾನು, ಕೂರ್ಮಮಹಾಕಲ್ಪವನ್ನು ರಚಿಸಿ, ನಿನ್ನ ಅಪ್ಪಣೆಯಂತೆಯೇ ಈ ಪ್ರಪಂಚವನ್ನು ವ್ಯಾಪಿಸಿರುವೆನು. ಎಲೈ ಕೂರ್ಮಕಲ್ಪ ಸ್ವರೂಪನಾದ ಸ್ವಾಮಿಯೇ! ನಿನಗೆ ನಮಸ್ಕಾರ" ಎಂದು ವರುಣನು ಸ್ತೋತ್ರ ಮಾಡಿದನು.

೨೯. "ಬ್ರಹ್ಮಾಂಡದ ತಮಸ್ಸಿನಿಂದ ಜನಿಸಿ ತಾಮಸಮನುವೆನಿಸಿ ನಿನ್ನ ದಾಸನಾದ ವಿಭೀಷಣನೆಂಬ ನಾನು ಈ ಮೂರು ಲೋಕಗಳನ್ನೂ ವ್ಯಾಪಿಸಿರುವೆನು. ಎಲೈ ಮನುರೂಪಿಯಾದ ದೇವನೇ! ನಿನಗೆ ನಮಸ್ಕಾರ" ಎಂದು ವಿಭೀಷಣನು ಸ್ತೋತ್ರಮಾಡಿದನು

ಬ್ರಹ್ಮಾಂಡಸದ್ಗುಣಾಜ್ಜಾತಶ್ಚಿತ್ರೋಽಹಂ ಮನುಕಾರಕಃ ।
ಮಯಾ ತತಂ ಚ ತ್ರೈಲೋಕ್ಯಂ ಸ್ವಾಯಂಭುವ ನಮೋಽಸ್ತು ತೇ ॥ ೩೦ ॥

ಬ್ರಹ್ಮಾಂಡರಜಸೋ ಜಾತೋ ವಾಯುರ್ಮನ್ವಂತರಂ ತತಂ ।
ಮಯಾ ಸ್ವಾರೋಚಿಷಂ ಸ್ವಾಮಿನ್ನಮಸ್ತೇ ಮನುರೂಪಿಣೇ ॥ ೩೧ ॥

ಬ್ರಹ್ಮಾಂಡಮನಸೋ ಜಾತೋ ಧ್ರುವೋಽಹಂ ಮನುಕಾರಕಃ ।
ಮಯೋತ್ತಮಂ ಚ ರಚಿತಂ ನಮಸ್ತೇಽಸ್ತು ತವಾಜ್ಞಯಾ ॥ ೩೨ ॥

ಬ್ರಹ್ಮಾಂಡಶ್ರವಣಾಜ್ಜಾತೋ ವಿಶ್ವಕರ್ಮಾಹಮೀಶ್ವರಃ ।
ಮಯಾ ತತಂ ರೈವತಂ ಚ ನಮೋ ದೇವ ತವಾಜ್ಞಯಾ ॥ ೩೩ ॥

---

೩೦. “ ಬ್ರಹ್ಮಾಂಡದ ಸದ್ಗುಣಗಳಿಂದ ಜನಿಸಿ ಮನುಕಾರಕನಾಗಿರುವ ಚಿತ್ರನೆಂಬ ನಾನು ಈ ಮೂರುಲೋಕಗಳನ್ನೂ ವ್ಯಾಪಿಸಿರುವೆನು. ಸ್ವಾಯಂಭುವಮನು ಸ್ವರೂಪನಾದ ಸ್ವಾಮಿಯೇ ! ನಿನಗೆ ನಮಸ್ಕಾರ” ಎಂದು ಚಿತ್ರಗುಪ್ತನು ಸ್ತೋತ್ರ ಮಾಡಿದನು.

೩೧ “ ಬ್ರಹ್ಮಾಂಡದ ರಜೋಗುಣಗಳಿಂದ ಜನಿಸಿದ-ವಾಯುವೆಂಬ ನಾನು ಸ್ವಾರೋಚಿಷಮನ್ವಂತರದಲ್ಲಿ ಈ ಪ್ರಪಂಚವನ್ನೆಲ್ಲಾ ವ್ಯಾಪಿಸಿರುವೆನು. ಎಲೈ ಮನುಸ್ವರೂಪನಾದ ಸ್ವಾಮಿಯೇ ! ನಿನಗೆ ನಮಸ್ಕಾರ ” ಎಂದು ವಾಯುವು ಸ್ತೋತ್ರಮಾಡಿದನು.

೩೨ “ ಬ್ರಹ್ಮಾಂಡದ ಮನಸ್ಸಿನಿಂದ ಜನಿಸಿ ಧ್ರುವನೆನಿಸಿರುವ ನಾನು ಉತ್ತಮ ಮನ್ವಂತರವನ್ನು ನಿರ್ಮಿಸಿದೆನು ಉತ್ತಮ ಮನುಕಾರಕನಾಗಿ ನಿನ್ನಾಜ್ಞೆಯಿಂದ ಸಕಲ ಪ್ರಪಂಚವನ್ನೂ ವ್ಯಾಪಿಸಿರುವೆನು ಎಲೈ ದೇವನೇ ! ನನಗೆ ನಮಸ್ಕಾರ ” ಎಂದು ಧ್ರುವನು ಸ್ತೋತ್ರಮಾಡಿದನು.

೩೩. “ಬ್ರಹ್ಮಾಂಡದ ಕಿವಿಯಿಂದ ಜನಿಸಿದ ಸರ್ವಸಮರ್ಥನಾದ ವಿಶ್ವಕರ್ಮನೆಂಬ ನಾನು ನಿನ್ನಪ್ಪಣೆ ಪಡೆದು ರೈವತಮನ್ವಂತರವನ್ನೆಲ್ಲಾ ವ್ಯಾಪಿಸಿದೆನು. ಎಲೈ ಪರಮಪುರುಷನೇ ! ನಿನಗೆ ನಮಸ್ಕಾರ ” ಎಂದು ವಿಶ್ವಕರ್ಮನು ಸ್ತೋತ್ರ ಮಾಡಿದನು.

ಬ್ರಹ್ಮಾಂಡದೇಹತೋ ಜಾತಸ್ಸೂರ್ಯೋಽಹಂ ಚಾಕ್ಷುಷಪ್ರದಃ ।
ತವಾಜ್ಞಯಾ ತತಂ ವಿಶ್ವಂ ಮನುರೂಪಾಯ ತೇ ನಮಃ ॥ ೩೪ ॥

ಬ್ರಹ್ಮಾಂಡನೇತ್ರತೋ ಜಾತಃ ಸೋಮೋಽಹಂ ತು ಮಯಾ ತತಂ ।
ವೈವಸ್ವತಾಂತರಂ ರಮ್ಯಂ ನಮಸ್ತೇ ಮನುರೂಪಿಣೇ ॥ ೩೫ ॥

ಬ್ರಹ್ಮಾಂಡರಸನಾಜ್ಜಾತೋ ಭೌಮೋಽಹಂ ಮನುಕಾರಕಃ ।
ನಮಸ್ತೇ ಮನುರೂಪಾಯ ಮಯಾ ಸಾವರ್ಣಿಕಂ ತತಂ ॥ ೩೬ ॥

ಬ್ರಹ್ಮಾಂಡಘ್ರಾಣತೋ ಜಾತೋ ಬುಧೋಽಹಂ ನಾಥ ಕಿಂಕರಃ ।
ನಿರ್ಮಿತಂ ಬ್ರಹ್ಮಸಾವರ್ಣಂ ಮಯಾ ತಾತ ನಮೋನಮಃ ॥ ೩೭ ॥

---

೩೪. "ಬ್ರಹ್ಮಾಂಡದ ಶರೀರದಿಂದ ಜನಿಸಿ ಲೋಕಕ್ಕೆ ಕಣ್ಣಾಗಿರುವ ಸೂರ್ಯನೆನಿಸಿದ ನಾನು ನಿನ್ನ ಅಪ್ಪಣೆಯಂತೆ ಚಾಕ್ಷುಷಮನ್ವಂತರದ ಅಧಿಕಾರಿಯಾಗಿ ಜಗತ್ತೆಲ್ಲವನ್ನೂ ಪ್ರಕಾಶಿಸಿದೆನು ಮನುರೂಪಿಯಾದ ದೇವನೆ! ನಿನಗೆ ನಮಸ್ಕಾರ" ಎಂದು ಸೂರ್ಯನು ಸ್ತೋತ್ರಮಾಡಿದನು.

೩೫. "ಬ್ರಹ್ಮಾಂಡದ ನೇತ್ರದಿಂದ ಜನಿಸಿದವನೂ ಮನುಕಾರಕನೂ ಆದ ಚಂದ್ರನೆಂಬ ನಾನು ನಿನ್ನಪ್ಪಣೆಯಂತೆ ವೈವಸ್ವತಮನ್ವಂತರವನ್ನೆಲ್ಲಾ ವ್ಯಾಪಿಸಿದೆನು. ಎಲೈ ಮನುಸ್ವರೂಪನಾದ ಸ್ವಾಮಿಯೇ! ನಿನಗೆ ನಮಸ್ಕಾರ" ಎಂದು ಚಂದ್ರನು ಸ್ತೋತ್ರಮಾಡಿದನು.

೩೬. "ಬ್ರಹ್ಮಾಂಡದ ನಾಲಗೆಯಿಂದ ಜನಿಸಿ ಮನುಕಾರಕನಾದ ಭೌಮನೆಂಬ ನಾನು ಸಾವರ್ಣೀಯ ಮನ್ವಂತರವನ್ನೆಲ್ಲಾ ವ್ಯಾಪಿಸಿದೆನು. ಎಲೈ ಮನುರೂಪನಾದ ಸ್ವಾಮಿಯೇ! ನಿನಗೆ ನಮಸ್ಕಾರ" ಎಂದು ಕುಜನು ಸ್ತೋತ್ರಮಾಡಿದನು.

೩೭. ಬ್ರಹ್ಮಾಂಡದ ಮೂಗಿನಿಂದ ಜನಿಸಿದವನೂ ನಿನ್ನ ಕಿಂಕರನೂ ಆದ ಬುಧನೆಂಬ ನಾನು ಬ್ರಹ್ಮಸಾವರ್ಣಿಮನ್ವಂತರವನ್ನು ನಿರ್ಮಿಸಿದೆನು. ಎಲೈ ಸ್ವಾಮಿಯೆ! ನಿನಗೆ ನಮಸ್ಕಾರ" ಎಂದು ಬುಧನು ಸ್ತೋತ್ರಮಾಡಿದನು.

ಬ್ರಹ್ಮಾಂಡವಕ್ತ್ರತೋ ಜಾತೋ ಜೀವೋಽಹಂ ಮನುಕಾರಕಃ ।
ಮಯಾ ವೈ ದಕ್ಷಸಾವರ್ಣಂ ತತಂ ತತ್ತೇ ನಮೋನಮಃ ॥ ೩೮ ॥

ಬ್ರಹ್ಮಾಂಡಕರತೋ ಜಾತಃ ಶುಕ್ರೋಽಹಂ ತವ ಕಿಂಕರಃ ।
ನಿರ್ಮಿತಂ ರುದ್ರಸಾವರ್ಣಂ ಮಯಾ ತುಭ್ಯಂ ನಮೋನಮಃ ॥ ೩೯ ॥

ಬ್ರಹ್ಮಾಂಡಪದತೋ ಜಾತೋ ಮಂದೋಽಹಂ ನಾಥ ತೇಽನುಗಃ ।
ತತಂ ವೈ ಧರ್ಮಸಾವರ್ಣಂ ಪ್ರಭಾತೇಽಸ್ತು ನಮೋನಮಃ ॥ ೪೦ ॥

ಬ್ರಂಹ್ಮಾಂಡಲಿಂಗತೋ ಜಾತೋ ರಾಹುಶ್ಚಾಹಂ ತವ ಪ್ರಿಯಃ ।
ಮಯಾ ಭೌಮಂ ಕೃತಂ ನಾಥ ನಮಸ್ತೇ ಮನುರೂಪಿಣೇ ॥ ೪೧ ॥

---

೩೮. "ಬ್ರಹ್ಮಾಂಡದ ಬಾಯಿಯಿಂದ ಜನಿಸಿ ಮನುಕಾರಕನಾದ ಜೀವ (ಬೃಹಸ್ಪತಿ) ಎಂಬ ನಾನು ನಿನ್ನ ಪ್ರೇರಣೆಯಂತೆ ದಕ್ಷಸಾವರ್ಣಿಮನ್ವಂತರವನ್ನು ನಿರ್ಮಿಸಿ, ಪ್ರಪಂಚವನ್ನೆಲ್ಲಾ ವ್ಯಾಪಿಸಿದೆನು. ಎಲೈ ದೇವನೇ! ನಿನಗೆ ನಮಸ್ಕಾರ" ಎಂದು ಗುರುವು ಸ್ತೋತ್ರಮಾಡಿದನು.

೩೯. "ಬ್ರಹ್ಮಾಂಡದ ಹಸ್ತದಿಂದ ಜನಿಸಿದವನೂ ನಿನ್ನ ಸೇವಕನೂ ಆದ ಶುಕ್ರನೆಂಬ ನಾನು ರುದ್ರಸಾವರ್ಣಿಯೆಂಬ ಮನ್ವಂತರವನ್ನು ರಚಿಸಿ ಲೋಕದಲ್ಲಿ ವ್ಯಾಪಿಸಿದೆನು. ಎಲೈ ಸ್ವಾಮಿಯೇ! ನಿನಗೆ ನಮಸ್ಕಾರ" ಎಂದು ಶುಕ್ರನು ಸ್ತೋತ್ರಮಾಡಿದನು.

೪೦. "ಬ್ರಹ್ಮಾಂಡದ ಕಾಲಿನಿಂದ ಜನಿಸಿದವನೂ ನಿನ್ನ ಪದಸೇವಕನೂ ಆದ ಶನಿಯೆಂಬ ನಾನು ನಿನ್ನಾಜ್ಞೆಯಂತೆ ಧರ್ಮಸಾವರ್ಣವೆಂಬ ಮನ್ವಂತರವನ್ನು ರಚಿಸಿ ವ್ಯಾಪಿಸಿ ಪ್ರಕಾಶಿಸಿದೆನು. ಎಲೈ ಸ್ವಾಮಿಯೆ! ನಿನಗೆ ನಮಸ್ಕಾರ" ಎಂದು ಶನಿಯು ಸ್ತೋತ್ರಮಾಡಿದನು.

೪೧. "ಎಲೈ ಸ್ವಾಮಿಯೆ! ನಿನಗೆ ಪ್ರೀತಿಪಾತ್ರನಾದ ರಾಹುವೆಂಬ ನಾನು ಬ್ರಹ್ಮಾಂಡದ ಲಿಂಗದಿಂದ ಜನಿಸಿ ನಿನ್ನ ಕೃಪೆಯಿಂದ ಭೌಮವೆಂಬ ಮನ್ವಂತರವನ್ನು ರಚಿಸಿ ಪ್ರಪಂಚವನ್ನೆಲ್ಲಾ ವ್ಯಾಪಿಸಿದೆನು ಎಲೈ ಮನುರೂಪನಾದ ಸ್ವಾಮಿಯೆ! ನಿನಗೆ ನಮಸ್ಕಾರ" ಎಂದು ರಾಹುವು ಸ್ತೋತ್ರಮಾಡಿದನು.

ಬ್ರಹ್ಮಾಂಡಗುಹ್ಯತೋ ಜಾತಃ ಕೇತುಶ್ಚಾಹಂ ತವಾನುಗಃ ।
ಭೌತಂ ಮನ್ವಂತರಂ ಸೃಷ್ಟಂ ತಸ್ಮೈ ದೇವಾಯ ತೇ ನಮಃ ॥ ೪೨ ॥

॥ ವ್ಯಾಸ ಉವಾಚ ॥

ಇತಿ ತೇಷಾಂ ಸ್ತವಾನ್ಸ್ವಾಮೀ ಶ್ರುತ್ವಾ ದೇವಾನ್ವದಿಷ್ಯತಿ ।
ವರಂ ಬ್ರೂಹೀತಿ ವಚನಂ ತಂತಂ ಪ್ರತಿ ಮನುಃ ಕ್ರಮಾತ್ ॥ ೪೩ ॥

ಇತಿ ಶ್ರುತ್ವಾ ತು ತೇ ದೇವಾ ಬಾಲರೂಪಂ ಹರಿಂ ಸ್ವಯಂ ।
ನಮಸ್ಕೃತ್ಯ ವದಿಷ್ಯಂತಿ ವಾಂಛಿತಂ ಲೋಕಹೇತವೇ ॥ ೪೪ ॥

ಭಗವನ್‌ಬ್ರೂಹಿ ಲೋಕಾನಾಂ ಕಲ್ಪೇಕಲ್ಪೇ ತವುದ್ಭವಂ ।
ತಥಾ ಮನ್ವಂತರೇ ಚೈವ ಶ್ರೋತುಮಿಚ್ಛಾಮಹೇ ವಯಂ ॥ ೪೫ ॥

---

೪೨. “ಪ್ರಭುವೆ! ನಿನ್ನ ಸೇವಕನಾದ ಕೇತುವೆಂಬ ನಾನು ಬ್ರಹ್ಮಾಂಡದ ಗುಹ್ಯಪ್ರದೇಶದಿಂದ ಜನಿಸಿದವನು. ನಿನ್ನ ಪ್ರೇಣೆಯಂತೆಯೇ ಭೌತಮನ್ವಂತರವನ್ನು ನಿರ್ಮಿಸಿ ಪ್ರಪಂಚವನ್ನೆಲ್ಲಾ ವ್ಯಾಪಿಸಿದೆನು. ಎಲೈ, ದೇವೋತ್ತಮನೆ! ನಿನಗೆ ನಮಸ್ಕಾರ ಎಂದು ಕೇತುವು ಸ್ತೋತ್ರಮಾಡಿದನು

೪೩. ವ್ಯಾಸರು ಮನುವನ್ನು ಕುರಿತು ಹೇಳುತ್ತಾರೆ—ಎಲೈ ಮನುವೆ! ಈರೀತಿ ದೇವತೆಗಳೆಲ್ಲಾ ವಿರಾಟ್ಪುರುಷನನ್ನು ಸ್ತೋತ್ರಮಾಡಲು, ಆ ಸ್ತುತಿಯನ್ನು ಕೇಳಿ ಸ್ವಾಮಿಯು, ಆ ದೇವತೆಗಳನ್ನೆಲ್ಲಾ ಕ್ರಮವಾಗಿ ಕರೆದು, “ನಿಮಗೆ ಬೇಕಾದ ವರವನ್ನು ಕೇಳಿಕೊಳ್ಳಿರಿ” ಎಂದು ಹೇಳಿದನು

೪೪-೪೫. ಪರಮಾತ್ಮನು ಹೇಳಿದ ಈ ಮಾತನ್ನು ಆ ದೇವತೆಗಳೆಲ್ಲರೂ ಕೇಳಿ, ಬಾಲಕನ ರೂಪವನ್ನು ಧರಿಸಿರುವ ಆ ಮಹಾವಿಷ್ಣುವಿಗೆ ನಮಸ್ಕರಿಸಿ, “ಎಲೈ ಭಗವಂತನೆ! ಪ್ರತಿಯೊಂದು ಕಲ್ಪದಲ್ಲಿಯೂ ಮತ್ತು ಮನ್ವಂತರಗಳಲ್ಲಿಯೂ ಪ್ರಜಾ ಸೃಷ್ಟಿಯು ಉಂಟಾಗುವ ಕ್ರಮವಾವುದು? ಕುತೂಹಲದಿಂದ ಕೂಡಿರುವ ನಮಗೆ ನೀನು ದಯವಿಟ್ಟು ಅದರ ವಿಚಾರವನ್ನೆಲ್ಲಾ ತಿಳಿಸಬೇಕು” ಎಂದು ಪ್ರಾರ್ಥಿಸಿದರು.

॥ ಕಲ್ಕ್ಯುವಾಚ ॥

ಅಷ್ಟಾದಶ ಮಹಾಕಲ್ಪಾಃ ಪ್ರಕೃತೇಶ್ಚ ತನೌ ಸ್ಥಿತಾಃ ।
ಆದ್ಯೋ ಬ್ರಹ್ಮಮಹಾಕಲ್ಪಸ್ತತ್ರ ಬ್ರಹ್ಮಾ ಪರಃ ಪುಮಾನ್ ॥ ೪೬ ॥

ತತ್ಪೂರ್ವಾರ್ಧಾತ್ಸಮುದ್ಭೂತಾಸ್ತ್ರಯಸ್ತ್ರಿಂಶಚ್ಚ ದೇವತಾಃ ।
ಪರಾರ್ಧಾದ್ಭಗವಾನ್‌ಬ್ರಹ್ಮಾ ಯೋಗಿಧ್ಯೇಯೋ ನಿರಂಜನಃ ॥ ೪೭ ॥

ತಸ್ಮಿನ್ಕಲ್ಪೇ ತು ಯಾ ಲೀಲಾ ಬ್ರಹ್ಮಪೌರಾಣಿಕೈಃ ಸ್ಮೃತಾ ।
ಶತಕೋಟಿಪ್ರವಿಸ್ತಾರೋ ಬ್ರಹ್ಮಪೌರಾಣಿಕಸ್ಯ ವೈ ॥ ೪೮ ॥

ಪುರಾಣಪುರುಷಸ್ಯಾಂತೇ ಮಹಾಕಲ್ಪಃ ಸ್ಮೃತೋ ಬುಧೈಃ ।
ಬ್ರಹ್ಮಾಂಡಪ್ರಲಯೋ ಕಲ್ಪೋ ಯುಗದೈವಸಹಸ್ರಕೇಃ ॥ ೪೯ ॥

---

೪೬. ದೇವತೆಗಳ ಈ ಪ್ರಾರ್ಥನೆಯನ್ನು ಕೇಳಿ ಕಲ್ಕಿಸ್ವರೂಪನಾದ ಆ ಮಹಾವಿಷ್ಣುವು ಹೇಳುತ್ತಾನೆ—ಎಲೈ ದೇವತೆಗಳಿರಾ ! ಪ್ರಕೃತಿಯ ಶರೀರದಲ್ಲಿ ಹದಿನೆಂಟು ಮಹಾಕಲ್ಪಗಳಿರುವುವು. ಅವುಗಳಲ್ಲಿ ಬ್ರಹ್ಮಮಹಾಕಲ್ಪವೇ ಮೊದಲನೆಯದು. ಈ ಕಲ್ಪದಲ್ಲಿ ಬ್ರಹ್ಮನೇ ಪರಮಪುರುಷನೆನಿಸುವನು.

೪೭. ಈ ಬ್ರಹ್ಮನ ಪೂರ್ವಾರ್ಧದಿಂದ ಮೂವತ್ತಮೂರು ಜನ ದೇವತೆಗಳು ಜನಿಸಿದರು. ಪಶ್ಚಿಮಾರ್ಧದಿಂದ ನಿರ್ಲಿಪ್ತನೂ, ಯೋಗಿಗಳ ಧ್ಯಾನಕ್ಕೆ ಅರ್ಹನೂ, ಷಡ್ಗುಣೈಶ್ವರ್ಯ ಸಂಪನ್ನನೂ ಆದ ಬ್ರಹ್ಮನು ಆವಿರ್ಭವಿಸಿದನು.

೪೮. ಈ ಬ್ರಹ್ಮಕಲ್ಪದಲ್ಲಿ ಪರಮಪುರುಷನಾದ ಬ್ರಹ್ಮನ ಲೀಲಾವಿನೋದಗಳು ಬ್ರಹ್ಮಪುರಾಣಿಕದಿಂದ ನೂರುಕೋಟಿ ಗ್ರಂಥಗಳಾಗಿ ಅತ್ಯಂತ ವಿಸ್ತಾರವಾಗಿ ಹೇಳಲ್ಪಟ್ಟಿವೆ.

೪೯. ಪುರಾಣಪುರುಷನಾದ ಬ್ರಹ್ಮನು ತನ್ನ ಲೀಲೆಯನ್ನೆಲ್ಲಾ ಮುಗಿಸಿ ವಿಶ್ರಾಂತಿ ಹೊಂದುವ ಕಾಲಕ್ಕೆ ಮಹಾಕಲ್ಪವೆಂದು ಪಂಡಿತರು ಹೇಳುವರು. ಇದಕ್ಕೆ ಬ್ರಹ್ಮಾಂಡ ಪ್ರಲಯವೆಂದೂ ಹೆಸರು. (ಚತುರ್ಯುಗಗಳು ಸಾವಿರಸಲ ಬಂದರೆ ಒಂದು ಕಲ್ಪವೆನಿಸುವುದು.) ಈ ಕಲ್ಪದಲ್ಲಿ ಸಾವಿರದೇವತೆಗಳು ವರ್ಣಿತರಾಗುವರು.

ಕಲ್ಪಾಶ್ಚಾಷ್ಟಾದಶಾಖ್ಯಾತಾಸ್ತೇಷಾಂ ನಾಮಾನಿ ಮೇ ಶೃಣು ।
ಕೂರ್ಮಕಲ್ಪೋ ಮತ್ಸ್ಯಕಲ್ಪಃ ಶ್ವೇತವಾರಾಹಕಲ್ಪಕಃ ॥೫೦॥

ನೃಸಿಂಹಕಲ್ಪಶ್ಚ ತಥಾ ತಥಾ ವಾಮನಕಲ್ಪಕಃ ।
ಸ್ಕಂದಕಲ್ಪೋ ರಾಮಕಲ್ಪಃ ಕಲ್ಪೋ ಭಾಗವತಸ್ತಥಾ ॥ ೫೧ ॥

ತಥಾ ಮಾರ್ಕಂಡಕಲ್ಪಶ್ಚ ತಥಾ ಭಾವಿಷ್ಯಕಲ್ಪಕಃ ।
ಲಿಂಗಕಲ್ಪಸ್ತಥಾ ಜ್ಞೇಯಸ್ತಥಾ ಬ್ರಹ್ಮಾಂಡಕಲ್ಪಕಃ ॥ ೫೨ ॥

ಅಗ್ನಿಕಲ್ಪೋ ವಾಯುಕಲ್ಪಃ ಪದ್ಮಕಲ್ಪಸ್ತಥೈವ ಚ ।
ಶಿವಕಲ್ಪೋ ವಿಷ್ಣುಕಲ್ಪೋ ಬ್ರಹ್ಮಕಲ್ಪಸ್ತಥಾ ಕ್ರಮಾತ್ ॥ ೫೩ ॥

ದ್ವಿಸಹಸ್ರಮಿತಾವರ್ತೈರೇಷಾಂ ಕಲ್ಪೋ ಮಹಾನ್ ಸ್ಮೃತಃ ।
ಸಹಸ್ರಯುಗಪರ್ಯಂತಂ ಬ್ರಹ್ಮಾಂಡಾಯುಃ ಪ್ರಕೀರ್ತಿತಂ ॥ ೫೪ ॥

ಯನ್ನಾಮ್ನಾ ಚ ಸ್ಮೃತಃ ಕಲ್ಪಸ್ತಸ್ಮಾಜ್ಜಾತೋ ವಿರಾಡಯಂ ।
ಚತುರ್ದಶಮನೂನಾಂ ಚ ಮಧ್ಯೇ ಕಲ್ಪಃ ಸ ಕಾಲವಾನ್ ॥ ೫೫ ॥

---

೫೦-೫೧. ಇಂತಹ ಕಲ್ಪಗಳು ಹದಿನೆಂಟು ಇರುವುವು. ಅವುಗಳ ಹೆಸರನ್ನು ಹೇಳುವೆನು ಕೇಳು, ಕೂರ್ಮಕಲ್ಪ ಮತ್ಸ್ಯಕಲ್ಪ, ಶ್ವೇತವರಾಹಕಲ್ಪ, ನೃಸಿಂಹಕಲ್ಪ, ವಾಮನಕಲ್ಪ, ಸ್ಕಂದಕಲ್ಪ, ರಾಮಕಲ್ಪ, ಭಾಗವತಕಲ್ಪ

೫೨-೫೩. ಮಾರ್ಕಂಡೇಯಕಲ್ಪ, ಭವಿಷ್ಯಕಲ್ಪ, ಲಿಂಗಕಲ್ಪ, ಬ್ರಹ್ಮಾಂಡ ಕಲ್ಪ, ಅಗ್ನಿಕಲ್ಪ, ವಾಯುಕಲ್ಪ, ಪದ್ಮಕಲ್ಪ, ಶಿವಕಲ್ಪ, ವಿಷ್ಣುಕಲ್ಪ, ಬ್ರಹ್ಮಕಲ್ಪ, ಎಂಬದಾಗಿ ಕ್ರಮವಾಗಿ ಹದಿನೆಂಟು ಕಲ್ಪಗಳು ಇವೆ.

೫೪-೫೫. ಈ ಹದಿನೆಂಟು ಕಲ್ಪಗಳಲ್ಲಿ ಎರಡುಸಾವಿರಸಲ ಚತುರ್ಯುಗಗಳು ಒಂದಾವರ್ತಿ ಮುಗಿದು ಬಂದರೆ ಅದು ಮಹಾಕಲ್ಪವೆನಿಸುವುದು. ಬ್ರಹ್ಮಾಂಡದ ಆಯುಸ್ಸು ಒಂದುಸಾವಿರ ಯುಗಗಳು. ಬ್ರಹ್ಮನ ಹೆಸರಿನಿಂದಲೇ ಈ ಕಲ್ಪವು ಪ್ರಸಿದ್ಧವಾಯಿತು: ಈ ಬ್ರಹ್ಮಕಲ್ಪದಿಂದ ವಿರಾಟ್ಪುರುಷನು ಜನಿಸಿದನು. ಬ್ರಹ್ಮ ಕಲ್ಪವೇ ಹದಿನಾಲ್ಕು ಮನುಗಳ ಮಧ್ಯದ ಕಾಲಪರಿಮಾಣವನ್ನು ತಿಳಿಸತಕ್ಕದ್ದು.

ಸ್ವಾಯಂಭುವಾಂತರೇ ಯದ್ವೈ ಜಾತಂಜಾತಂ ಚತುರ್ಯುಗಂ ।
ತಸ್ಮಿಂಶ್ಚತುರ್ಯುಗೇ ಸರ್ವೇ ನೃಣಾಮಾಯುರ್ಹರೇ ಶೃಣು ॥ ೫೬ ॥

ಲಕ್ಷಾಬ್ದಂ ವೈ ಸತ್ಯಯುಗೇ ತ್ರೇತಾಯಾಮಯುತಾಬ್ದಕಂ ।
ದ್ವಾಪರೇ ಚ ಸಹಸ್ರಾಬ್ದಂ ಕಲೌ ಚಾಯುಶ್ಶತಾಬ್ದಕಂ ॥ ೫೭ ॥

ಸ್ವಾರೋಚಿಷೇಽಂತರೇ ದೇವ ಜಾತಂಜಾತಂ ಚತುರ್ಯುಗಂ ।
ಶೃಣು ತತ್ರ ನೃಣಾಮಾಯುಸ್ಸತ್ಯೇಽಶೀತಿಸಹಸ್ರಕಂ ॥ ೫೮ ॥

ತ್ರೇತಾಯಾಂ ಚ ತದರ್ದ್ಧಾಬ್ದಂ ದ್ವಾಪರೇ ತು ತದರ್ಧಕಂ ।
ಕಲೌ ದ್ವಿಕಸಹಸ್ರಾಬ್ದಂ ನೃಣಾಮಾಯುಃ ಪ್ರಕೀರ್ತಿತಂ ॥ ೫೯ ॥

---

೫೬. ಸ್ವಾಯಂಭುವ ಮನ್ವಂತರದಲ್ಲಿ ಮತ್ತೆ ಮತ್ತೆ ಬರುವ ಕೃತ, ತ್ರೇತಾ, ದ್ವಾಪರ, ಕಲಿ ಎಂಬ ನಾಲ್ಕು ಯುಗಗಳಲ್ಲಿಯೂ ಕ್ರಮವಾಗಿ ಮಾನವರ ಆಯುಸ್ಸಿನ ಪ್ರಮಾಣವನ್ನು ಹೇಳುವೆನು ಕೇಳು.

೫೭. ಆ ಮನ್ವಂತರದ ಕೃತಯುಗದಲ್ಲಿ ಒಂದುಲಕ್ಷ ವರ್ಷಗಳು, ತ್ರೇತಾಯುಗದಲ್ಲಿ ಹತ್ತುಸಾವಿರ ವರ್ಷಗಳು, ದ್ವಾಪರಯುಗದಲ್ಲಿ ಸಾವಿರ ವರ್ಷಗಳು, ಕಲಿಯುಗದಲ್ಲಿ ನೂರು ವರ್ಷಗಳು ಈರೀತಿ ಮಾನವನಿಗೆ ಆಯುಃಪ್ರಮಾಣವು ಇರುವುದು.

೫೮. ಸ್ವಾರೋಚಿಷ ಮನ್ವಂತರದಲ್ಲಿ ನಡೆಯುವ ನಾಲ್ಕುಯುಗಗಳಲ್ಲಿ ಕ್ರಮವಾಗಿ ಮಾನವನ ಆಯುಃಪ್ರಮಾಣವು, ಕೃತಯುಗದಲ್ಲಿ ಎಂಬತ್ತುಸಾವಿರ ವರ್ಷಗಳು.

೫೯. ತ್ರೇತಾಯುಗದಲ್ಲಿ ನಲವತ್ತುಸಾವಿರ ವರ್ಷಗಳು, ದ್ವಾಪರಯುಗದಲ್ಲಿ ಇಪ್ಪತ್ತುಸಾವಿರ ವರ್ಷಗಳು, ಕಲಿಯುಗದಲ್ಲಿ ಎರಡುಸಾವಿರ ವರ್ಷಗಳು ಎಂದು ತಿಳಿಯಬೇಕು.

ಔತ್ತಮಸ್ಯಾಂತರೇ ಚೈವ ಸತ್ಯೇ ಷಷ್ಟಿಸಹಸ್ರಕಂ ।
ತ್ರೇತಾಯಾಂ ಚ ತದರ್ಧಾಬ್ದಂ ದ್ವಾಪರೇ ತು ತದರ್ಧಕಂ ॥ ೬೦ ॥

ಕಲೌ ಸಾರ್ಧಸಹಸ್ರಾಬ್ದಂ ನೃಣಾಮಾಯುಃ ಪ್ರಕೀರ್ತಿತಂ ।
ತಾಮಸಾಂತರಕೇ ಚೈವ ಷಟ್ತ್ರಿಂಶಾಬ್ದಸಹಸ್ರಕಂ ॥ ೬೧ ॥

ನೃಣಾಮಾಯುಃ ಸತ್ಯಯುಗೇ ತ್ರೇತಾಯಾಂ ಚ ತದರ್ಧಕಂ ।
ದ್ವಾಪರೇ ಚ ತದರ್ಧಾಬ್ದಂ ಕಲೌ ವರ್ಷಸಹಸ್ರಕಂ ॥ ೬೨ ॥

ರೈವತಾಂತರಕೇ ಚೈವ ಸತ್ಯೇ ತ್ರಿಂಶತ್ಸಹಸ್ರಕಂ ।
ತ್ರೇತಾಯಾಂ ಚ ತದರ್ಧಾಬ್ದಂ ದ್ವಾಪರೇ ಚ ತದರ್ಧಕಂ ॥ ೬೩ ॥

ಕಲೌ ಚಾಷ್ಟಶತಾಬ್ದಾಯುರ್ನೃಣಾಂ ವೇದ್ಯೈಃ ಪ್ರಕೀರ್ತಿತಂ ।
ಚಾಕ್ಷುಷಾಂತರಕೇ ಚೈವ ಸತ್ಯೇ ತುರ್ಯಸಹಸ್ರಕಂ ॥ ೬೪ ॥

---

೬೦. ಉತ್ತಮ ಮನ್ವಂತರದಲ್ಲಿ ನಡೆಯುವ ಕೃತಯುಗದಲ್ಲಿ ಅರವತ್ತು ಸಾವಿರ ವರ್ಷಗಳು, ತ್ರೇತಾಯುಗದಲ್ಲಿ ಮೂವತ್ತುಸಾವಿರ ವರ್ಷಗಳು, ದ್ವಾಪರ ಯುಗದಲ್ಲಿ ಹದಿನೈದುಸಾವಿರ ವರ್ಷಗಳು.

೬೧. ಮತ್ತು ಕಲಿಯುಗದಲ್ಲಿ ಒಂದೂವರೆಸಾವಿರ ವರ್ಷಗಳೂ, ಮಾನವನ ಆಯುಃಪ್ರಮಾಣವೆಂದು ಹೇಳಿದೆ. ತಾಮಸ ಮನ್ವಂತರದಲ್ಲಿ ಬರುವ ಕೃತಯುಗ ದಲ್ಲಿ ಮೂವತ್ತಾರುಸಾವಿರ ವರ್ಷಗಳು.

೬೨. ತ್ರೇತಾಯುಗದಲ್ಲಿ ಹದಿನೆಂಟುಸಾವಿರ ವರ್ಷಗಳು, ದ್ವಾಪರಯುಗದಲ್ಲಿ ಒಂಬತ್ತುಸಾವಿರ ವರ್ಷಗಳು, ಮತ್ತು ಕಲಿಯುಗದಲ್ಲಿ ಒಂದುಸಾವಿರ ವರ್ಷಗಳು, ಮಾನವರ ಆಯುಃಪರಿಮಿತಿಯೆಂದು ತಿಳಿಯಬೇಕು.

೬೩. ರೈವತ ಮನ್ವಂತರದಲ್ಲಿ ಬರುವ ಸತ್ಯಯುಗದಲ್ಲಿ ಮೂವತ್ತುಸಾವಿರ ವರ್ಷ, ತ್ರೇತಾಯುಗದಲ್ಲಿ ಹದಿನೈದುಸಾವಿರ ವರ್ಷ, ದ್ವಾಪರಯುಗದಲ್ಲಿ ಏಳು ಸಾವಿರದೈನೂರು ವರ್ಷ.

೬೪. ಕಲಿಯುಗದಲ್ಲಿ ಎಂಟನೂರು ವರ್ಷಗಳು ಮಾನವರ ಪರಮಾಯುಸ್ಸು ಎಂದು ತಿಳಿಯಬೇಕು. ಚಾಕ್ಷುಷ ಮನ್ವಂತರದ ಕೃತಯುಗದಲ್ಲಿ ನಾಲ್ಕುಸಾವಿರ ವರ್ಷ, ತ್ರೇತಾಯುಗದಲ್ಲಿ ಮೂರುಸಾವಿರ ವರ್ಷ, ದ್ವಾಪರಯುಗದಲ್ಲಿ ಎರಡು ಸಾವಿರ ವರ್ಷ.

ತ್ರೇತಾಯಾಂ ತ್ರಿಸಹಸ್ರಾಬ್ದಂ ದ್ವಾಪರೇ ದ್ವಿಸಹಸ್ರಕಂ ।
ಕಲೌ ಸಹಸ್ರವರ್ಷಾಂತಂ ನೃಣಾಮಾಯುಃ ಪ್ರಕೀರ್ತಿತಂ ॥ ೬೫ ॥

ವೈವಸ್ವತೇಂತರೇ ಚೈವ ಸತ್ಯೇ ತುರ್ಯಸಹಸ್ರಕಂ ।
ತ್ರೇತಾಯಾಂ ತ್ರಿಶತಾಬ್ದಂ ಚ ದ್ವಾಪರೇ ದ್ವಿಶತಾಬ್ದಕಂ ॥ ೬೬ ॥

ಕಲೌ ಶತಾಬ್ದಕಂ ಪ್ರೋಕ್ತಮಾಯುರ್ವೇದ್ಯೈಸ್ತಥಾ ನೃಣಾಂ ।
ಸಾವರ್ಣಿಕೇಽಂತರೇ ದೇವ ನೃಣಾಂ ವಿಂಶತ್ಸಹಸ್ರಕಂ ॥ ೬೭ ॥

ಆಯುಃ ಸತ್ಯೇ ತದರ್ಧಂ ತು ತ್ರೇತಾಯಾಂ ಚ ಪ್ರಕೀರ್ತಿತಂ ।
ದ್ವಾಪರೇ ಚ ತದರ್ಧಾಬ್ದಂ ತದರ್ಧಾಬ್ದಂ ಸ ವೈ ಕಲೌ ॥ ೬೮ ॥

ಬ್ರಹ್ಮಸಾವರ್ಣಿಕೇ ಚೈವ ಸತ್ಯೇ ದಶಸಹಸ್ರಕಂ ।
ತ್ರೇತಾಯಾಂ ಚ ತದರ್ಧಾಬ್ದಂ ದ್ವಾಪರೇ ತು ತದರ್ಧಕಂ ॥ ೬೯ ॥

---

೬೫. ಮತ್ತು ಕಲಿಯುಗದಲ್ಲಿ ಒಂದುಸಾವಿರ ವರ್ಷಗಳು ಮಾನವನ ಆಯುಃ ಪ್ರಮಾಣವೆಂದು ಹೇಳಿದೆ.

೬೬. ವೈವಸ್ವತ ಮನ್ವಂತರದಲ್ಲಿ, ಕೃತಯುಗದಲ್ಲಿ ನಾಲ್ಕುಸಾವಿರ ವರ್ಷಗಳು, ತ್ರೇತಾಯುಗದಲ್ಲಿ ಮುನ್ನೂರು ವರ್ಷಗಳು, ದ್ವಾಪರಯುಗದಲ್ಲಿ ಇನ್ನೂರು ವರ್ಷಗಳು.

೬೭. ಕಲಿಯುಗದಲ್ಲಿ ನೂರು ವರ್ಷಗಳು ಈರೀತಿ ಮಾನವರ ಆಯುಃ ಪ್ರಮಾಣವು ನಿಯತವಾಗಿದೆ.

೬೮. ಎಲೈ ದೇವನೆ! ಸಾವರ್ಣೀಯ ಮನ್ವಂತರದಲ್ಲಿ, ಸತ್ಯಯುಗದಲ್ಲಿ ಇಪ್ಪತ್ತುಸಾವಿರ ವರ್ಷಗಳು, ತ್ರೇತಾಯುಗದಲ್ಲಿ ಹತ್ತುಸಾವಿರ ವರ್ಷಗಳು, ದ್ವಾಪರ ಯುಗದಲ್ಲಿ ಐದುಸಾವಿರ ವರ್ಷಗಳು, ಕಲಿಯುಗದಲ್ಲಿ ಎರಡೂವರೆಸಾವಿರ ವರ್ಷಗಳು ಎಂದು ತಿಳಿಯಬೇಕು.

೬೯. ಬ್ರಹ್ಮಸಾವರ್ಣಿ ಮನ್ವಂತರದಲ್ಲಿ, ಕೃತಯುಗದಲ್ಲಿ ಹತ್ತುಸಾವಿರ ವರ್ಷಗಳು, ತ್ರೇತಾಯುಗದಲ್ಲಿ ಐದುಸಾವಿರ ವರ್ಷಗಳು, ದ್ವಾಪರಯುಗದಲ್ಲಿ ಎರಡೂವರೆಸಾವಿರ ವರ್ಷಗಳು, ಕಲಿಯುಗದಲ್ಲಿ ಒಂದೂಕಾಲುಸಾವಿರ ವರ್ಷಗಳು, ಮಾನವರ ಆಯುಃ ಪ್ರಮಾಣವೆನಿಸಿದೆ.

ಕಲೌ ಚೈವ ತದರ್ಧಾಬ್ದಂ ನೃಣಾಮಾಯುಃ ಪ್ರಕೀರ್ತಿತಂ ।
ದಕ್ಷಸಾವರ್ಣಿಕೇ ಚೈವ ತಥಾಬ್ದಾಯುಶ್ಚತುರ್ಯುಗೇ ॥ ೭೦ ॥

ರುದ್ರಸಾವರ್ಣಿಕೇ ಚೈವ ಸತ್ಯೇ ಚಾಷ್ಟಸಹಸ್ರಕಂ ।
ತ್ರೇತಾಯಾಂ ಚ ತದರ್ಧಾಬ್ದಂ ದ್ವಾಪರೇ ಚ ತದರ್ಧಕಂ ॥ ೭೧ ॥

ಕಲೌ ತದರ್ಧಕಂ ಜ್ಞೇಯಂ ನೃಣಾಮಾಯುಃ ಪುರಾತನೇ ।
ಧರ್ಮಸಾವರ್ಣಿಕೇ ಚೈವ ತಥಾಬ್ಧಾಯುಶ್ಚತುರ್ಯುಗೇ ॥ ೭೨ ॥

ಭೌಮಮನ್ವಂತರೇ ಚೈವ ಸತ್ಯೇ ತುರ್ಯಸಹಸ್ರಕಂ ।
ತ್ರೇತಾಯಾಂ ತ್ರಿಸಹಸ್ರಾಬ್ದಂ ದ್ವಾಪರೇ ಚ ತದರ್ಧಕಂ ॥ ೭೩ ॥

ಕಲೌ ತದರ್ಧಕಂ ಜ್ಞೇಯಂ ನರಾಯುಶ್ಚಾರ್ಷಸಂಮತಂ ।
ಭೌತಮನ್ವಂತರೇ ಚೈವ ಸತ್ಯೇ ತುರ್ಯಶತಾಬ್ದಕಂ ॥ ೭೪ ॥

---

೭೦. ದಕ್ಷಸಾವರ್ಣಿ ಮನ್ವಂತರದಲ್ಲಿಯೂ ಇದೇ ರೀತಿ ಎಂದರೆ ಬ್ರಹ್ಮ ಸಾವರ್ಣಿ ಮನ್ವಂತರದ ಯುಗಗಳಲ್ಲಿದ್ದಂತೆಯೇ ಆಯುಃಪ್ರಮಾಣವು ನಾಲ್ಕು ಯುಗ ಗಳಲ್ಲಿಯೂ ಇರುವುದೆಂದು ತಿಳಿಯಬೇಕು.

೭೧. ರುದ್ರಸಾವರ್ಣಿ ಮನ್ವಂತರದಲ್ಲಿ, ಸತ್ಯಯುಗದಲ್ಲಿ ಎಂಟುಸಾವಿರ ವರ್ಷಗಳು, ತ್ರೇತಾಯುಗದಲ್ಲಿ ನಾಲ್ಕುಸಾವಿರ ವರ್ಷಗಳು, ದ್ವಾಪರಯುಗದಲ್ಲಿ ಎರಡುಸಾವಿರ ವರ್ಷಗಳು ಮತ್ತು ಕಲಿಯುಗದಲ್ಲಿ ಒಂದುಸಾವಿರ ವರ್ಷಗಳು ಮಾನವನ ಆಯುಸ್ಸೆಂದು ಹೇಳಿದೆ.

೭೨. ಪುರಾತನವಾದ ಧರ್ಮಸಾವರ್ಣಿ ಮನ್ವಂತರದ ನಾಲ್ಕುಯುಗಗಳ ಲ್ಲಿಯೂ ಇದೇ ರೀತಿ ಆಯುಃಪ್ರಮಾಣವನ್ನು ತಿಳಿಯಬೇಕು.

೭೩. ಭೌಮಮನ್ವಂತರದಲ್ಲಿ, ಸತ್ಯಯುಗದಲ್ಲಿ ನಾಲ್ಕುಸಾವಿರ ವರ್ಷ, ತ್ರೇತಾಯುಗದಲ್ಲಿ ಮೂರುಸಾವಿರ ವರ್ಷ, ದ್ವಾಪರಯುಗದಲ್ಲಿ ಸಾವಿರದೈನೂರು ವರ್ಷ.

೭೪. ಕಲಿಯುಗದಲ್ಲಿ ಏಳನೂರೈವತ್ತು ವರ್ಷಗಳು, ಈರೀತಿ ಆಯುಃಪರಿ ಮಿತಿಯೆಂದು ಋಷಿಗಳು ಹೇಳಿರುವರು. ಭೌತಮನ್ವಂತರದಲ್ಲಿ, ಸತ್ಯಯುಗದಲ್ಲಿ, ನಾನೂರು ವರ್ಷ.

**ತ್ರೇತಾಯಾಂ ತ್ರಿಶತಾಬ್ದಂ ಚ ದ್ವಾಪರೇ ತು ತದರ್ಧಕಂ ।**
**ತದರ್ಧಕಂ ಕಲೌ ಘೋರೇ ನೃಣಾಮಾಯುಃ ಪ್ರಕೀರ್ತಿತಂ ॥ ೭೫ ॥**

**ಮನ್ವಂತರೇ ತು ಯನ್ನಾಮ್ನಾ ಭೂಪಾಶ್ಚಾಸಂಶ್ಚತುರ್ಯುಗೇ ।**
**ತನ್ನಾಮ್ನಾ ಚ ನೃಪಾ ಜಾತಾಸ್ತೇಷಾಂ ಲೀಲಾಃ ಪೃಥಕ್ ಪೃಥಕ್ ॥೭೬॥**

**ಏವಮನ್ಯತ್ರ ವೈ ಜ್ಞೇಯಂ ಯುಗೇ ತುರ್ಯೇ ಮನೌ ಮನೌ ।**
**ಯೋ ಮನುಸ್ತಸ್ಯ ವಂಶಾಶ್ಚ ದಿವ್ಯೈಕಯುಗಸಪ್ತತೌ ॥ ೭೭ ॥**

**ಯುಗಾಂತೇ ಕರ್ಮಭೂಮೇಶ್ಚ ಲಯಃ ಕಲ್ಪಃ ಸ ವೈ ಸ್ಮೃತಃ ।**
**ಮನ್ವಂತೇ ಸರ್ವಭೂಮೇಶ್ಚ ಪ್ರಲಯಃ ಸ ಚ ಕಲ್ಪಕಃ ॥ ೭೮ ॥**

---

೭೫. ತ್ರೇತಾಯುಗದಲ್ಲಿ ಮುನ್ನೂರು ವರ್ಷ, ದ್ವಾಪರಯುಗದಲ್ಲಿ ನೂರೈವತ್ತು ವರ್ಷ, ಭಯಂಕರವಾದ ಕಲಿಯುಗದಲ್ಲಿ ಇದರರ್ಧ ಎಂದರೆ ಎಪ್ಪತ್ತೈದು ವರ್ಷಗಳು ಮನುಷ್ಯರ ಆಯುಸ್ಸೆಂದು ಹೇಳಿದೆ.

೭೬. ಸ್ವಾಯಂಭುವಾದಿ ಸಪ್ತಮನ್ವಂತರಗಳಲ್ಲಿ ನಾಲ್ಕು ಯುಗಗಳಲ್ಲೂ ಯಾವ ಯಾವ ಹೆಸರಿನ ರಾಜರು ಆಳಿದರೋ ಸಾವರ್ಣೀಯಾದಿ ಸಪ್ತಮನ್ವಂತರಗಳಲ್ಲಿಯೂ ಅದರಂತೆಯೇ ಅದೇ ಹೆಸರಿನಿಂದ ರಾಜರು ಆಳುವರು. ಆದರೆ ಅವರ ಲೀಲೆಗಳು ಮಾತ್ರ ಬೇರೆ ಬೇರೆಯಾಗಿರುವುವು.

೭೭. ಇದೇ ರೀತಿ ಪ್ರತಿಯೊಂದು ಯುಗದಲ್ಲಿಯೂ ಪ್ರತಿ ಮನ್ವಂತರದಲ್ಲಿಯೂ ನಡೆಯುವುದು. ಯಾವ ಮನ್ವಂತರವೋ ಆ ಮನುವಿನ ವಂಶವು ಎಪ್ಪತ್ತೊಂದು ದಿವ್ಯಯುಗಗಳವರೆಗೂ ಇರುವುದು.

೭೮ ಈ ಯುಗಗಳು ಮುಗಿದನಂತರ, ಎಂದರೆ ಯುಗದ ಕೊನೆಯಲ್ಲಿ ಈ ಕರ್ಮಭೂಮಿಯು ನಾಶಹೊಂದುವುದು. ಆಗ ಈ ಕಲ್ಪವೂ ಲಯವಾಗುವುದು. ಮನ್ವಂತರದ ಕೊನೆಯಲ್ಲಿ ಭೂಮಿಯೆಲ್ಲವೂ ನಾಶಹೊಂದುವುದು. ಇದಕ್ಕೆ ಕಲ್ಪಪ್ರಳಯವೆಂದು ಹೆಸರು.

ಪುರಾಣಪುರುಷಸ್ಯೈವ ದಿನಾಂತೇ ಪ್ರಲಯೋ ಹಿ ಯಃ ।
ಮುಖ್ಯಕಲ್ಪಃ ಸ ವೈ ಜ್ಞೇಯಃ ಸರ್ವಲೋಕವಿನಾಶಕಃ ॥ ೭೯ ॥

ಷಡ್ವಿಂಶತ್ಕಲ್ಪಸಾಹಸ್ರೈರ್ಮಹಾಕಲ್ಪೋ ಹಿ ಯಃ ಸ್ಮೃತಃ ।
ಯದಾ ಪುರಾಣಪುರುಷೋ ಮೇಷರಾಶೌ ಸಮಾಸ್ಥಿತಃ ॥ ೮೦ ॥

ತದಾ ಬ್ರಹ್ಮಾ ಸುರೈಃ ಸಾರ್ಧಂ ಭೂಪಂ ಸ್ವಾಯಂಭುವಂ ಗತಃ ।
ಯದಾ ಪುರಾಣಪುರುಷೋ ಮಕರೇ ಚ ಸಮಾಗತಃ ॥ ೮೧ ॥

ಸ್ವಾಯಂಭುವಮನೋರ್ಮಧ್ಯೇ ವಾರಾಹೋಽಭೂತ್ಸ ವೈ ಭುವಿ ।
ಯದಾ ಪುರಾಣಪುರುಷೋ ಗತಃ ಸಿಂಹೇ ಸ್ವಕೇಚ್ಛಯಾ ॥ ೮೨ ॥

ಸ್ವಾರೋಚಿಷಮನೋರಂತೇ ನೃಸಿಂಹೋಽಭೂತ್ಸ ವೈ ಭುವಿ ।
ಯದಾ ಪುರಾಣಪುರುಷೋ ವೃಷರಾಶೌ ಸಮಾಸ್ಥಿತಃ ॥ ೮೩ ॥

---

೭೯. ಪುರಾಣಪುರುಷನ ಒಂದುದಿವಸದ ಕೊನೆಯಲ್ಲಿ ಉಂಟಾಗುವ ಪ್ರಳಯವೇ, ಮುಖ್ಯಕಲ್ಪವೆಂದು ತಿಳಿಯಬೇಕು. ಈ ಪ್ರಳಯದಿಂದ ಸಕಲಲೋಕಗಳೂ ನಾಶಹೊಂದುವುವು. ಈ ನಾಲ್ಕುಯುಗಗಳೂ ಒಂದುಬಾರಿ ಕಳೆದರೆ ಆಗ ಬ್ರಹ್ಮನಿಗೆ ಒಂದುದಿನವು.

೮೦ ಇಂತಹ ಇಪ್ಪತ್ತಾರುಸಾವಿರ ಕಲ್ಪಗಳಿಗೆ ಒಂದು ಮಹಾಕಲ್ಪವಾಗುವುದು. ಪುರಾಣಪುರುಷನು ಮೇಷರಾಶಿಯಲ್ಲಿದ್ದಾಗ,

೮೧. ಆ ಸಂದರ್ಭದಲ್ಲಿ ಬ್ರಹ್ಮನು, ದೇವತೆಗಳೊಡನೆ, ಸ್ವಾಯಂಭುವ ಮನುವಾಗಿ ಜನಿಸಿದನು. ಪುರಾಣಪುರುಷನು ಮಕರರಾಶಿಗೆ ಸಾಗಿದನು.

೮೨. ಆಗ ಸ್ವಾಯಂಭುವ ಮನ್ವಂತರದ ಮಧ್ಯಕಾಲವು ನಡೆಯುತ್ತಿತ್ತು. ಆಗ ಸ್ವಾಮಿಯು ವರಾಹಾವತಾರವನ್ನು ಮಾಡಿ ಭೂಮಿಯಲ್ಲಿ ಜನಿಸಿದನು.

೮೩. ಪುರಾಣಪುರುಷನು ಸ್ವೇಚ್ಛೆಯಿಂದ ಸಿಂಹರಾಶಿಗೆ ಬಂದಾಗ ಸ್ವಾರೋಚಿಷ ಮನ್ವಂತರದ ಕೊನೆಯಭಾಗವು ನಡೆಯುತ್ತಿದ್ದಿತು. ಆಗ ಭಗವಂತನು ನೃಸಿಂಹನಾಗಿ ಭೂಮಿಯಲ್ಲಿ ಅವತರಿಸಿದನು

ತದೌತ್ತಮಮನೋರ್ಮಧ್ಯೇ ರುದ್ರೋಽಭೂತ್ಸಗಣೋ ಭುವಿ ।
ಯದಾ ಪುರಾಣಪುರುಷೋ ಮೀನರಾಶೌ ಸಮಾಸ್ಥಿತಃ ॥ ೮೪ ॥

ತಾಮಸಾಂತೇಽಭವನ್ಮತ್ಸ್ಯಃ ಸ ವೈ ಭುವಿ ಸನಾತನಃ ।
ಯದಾ ಪುರಾಣಪುರುಷೋ ಯುಗ್ಮರಾಶೌ ಸಮಾಸ್ಥಿತಃ ॥ ೮೫ ॥

ವೈವಸ್ವತಮನೋರ್ಮಧ್ಯೇ ಕೃಷ್ಣೋಽಭೂದ್ಭುವಿ ಸ ಪ್ರಭುಃ ।
ಯದಾ ಪುರಾಣಪುರುಷಃ ಕರ್ಕರಾಶೌ ಸಮಾಸ್ಥಿತಃ ॥ ೮೬ ॥

ರೈವತಾಂತೇಽಭವತ್ಕೂರ್ಮಃ ಸ ವೈ ಭುವಿ ಸನಾತನಃ ।
ಯದಾ ಪುರಾಣಪುರುಷಃ ಕನ್ಯಾರಾಶೌ ಸಮಾಸ್ಥಿತಃ ॥ ೮೭ ॥

ಚಾಕ್ಷುಷಾಂತೇ ಜಾಮದಗ್ನ್ಯೋಽಭವದ್ರಾಮಃ ಸ ವೈ ಭುವಿ ।
ಯದಾ ಪುರಾಣಪುರುಷಃ ಪ್ರಾಪ್ತೋಽಲೌ ಚ ಸ್ವಕೇಚ್ಛಯಾ ॥ ೮೮ ॥

---

೮೪. ಈ ಪುರಾಣಪುರುಷನು ವೃಷಭರಾಶಿಗೆ ಬಂದಾಗ ಉತ್ತಮ ಮನ್ವಂತರದ ಮಧ್ಯಭಾಗವು ನಡೆಯುತ್ತಿದ್ದಿತು. ಆಗ ಆ ಪುರಾಣಪುರುಷನು, ರುದ್ರನಾಗಿ ತನ್ನ ಗಣಗಳೊಡನೆ ಭೂಮಿಯಲ್ಲಿ ಜನಿಸಿದನು.

೮೫. ಈ ಪುರಾಣಪುರುಷನು ಮೀನರಾಶಿಗೆ ಬಂದಾಗ, ತಾಮಸ ಮನ್ವಂತರದ ಕೊನೆಯಲ್ಲಿ ಪರಮಾತ್ಮನು ಭೂಮಿಯಲ್ಲಿ ಮತ್ಸ್ಯಾವತಾರಮಾಡಿ ಸನಾತನವಾದ ಧರ್ಮವನ್ನು ಉದ್ಧಾರಮಾಡಿದನು.

೮೬. ಈ ಪುರಾಣಪುರುಷನು ಮಿಥುನರಾಶಿಗೆ ಬಂದಾಗ, ವೈವಸ್ವತಮನ್ವಂತರದ ಮಧ್ಯಭಾಗದಲ್ಲಿ ಪ್ರಭುವಾದ ಪರಮಾತ್ಮನು ಕೃಷ್ಣನಾಗಿ ಭೂಮಿಯಲ್ಲಿ ಜನಿಸಿದನು. ಅನಂತರ ಪುರಾಣಪುರುಷನು ಕರ್ಕಾಟಕರಾಶಿಗೆ ಬಂದನು.

೮೭. ಆಗಿನ ರೈವತಮನ್ವಂತರದ ಕೊನೆಯ ಭಾಗದಲ್ಲಿ ಪರಮಾತ್ಮನು ಸನಾತನವಾದ ಕೂರ್ಮಾವತಾರಮಾಡಿ ಭೂಮಿಯಲ್ಲಿ ಪ್ರಕಾಶಿಸಿದನು. ಅನಂತರ ಈ ಪುರಾಣಪುರುಷನು ಕನ್ಯಾರಾಶಿಗೆ ಬಂದನು.

೮೮. ಆಗಿನ ಚಾಕ್ಷುಷಮನ್ವಂತರದ ಕೊನೆಯಭಾಗದಲ್ಲಿ ಪರಮಾತ್ಮನ ಜಮದಗ್ನಿಮಹರ್ಷಿಯ ಪುತ್ರ ಪರಶುರಾಮನಾಗಿ ಭೂಮಿಯಲ್ಲಿ ಜನಿಸಿ, ಮೆರೆದನು. ಅನಂತರ ಪುರಾಣಪುರುಷನು ಸ್ವೇಚ್ಛೆಯಿಂದ ವೃಶ್ಚಿಕರಾಶಿಗೆ ಬಂದನು.

ವೈವಸ್ವತಮನೋರಾದೌ ವಾಮನೋऽಭೂತ್ಸ ವೈ ಭುವಿ ।
ಯದಾ ಪುರಾಣಪುರುಷಸ್ತುಲಾರಾಶೌ ಸಮಾಸ್ಥಿತಃ ॥ ೮೯ ॥

ವೈವಸ್ವತಮನೋರ್ಮಧ್ಯೇ ಕಲ್ಕೀ ನಾಮ್ನಾऽಹಮಾಗತಃ ।
ಯದಾ ಪುರಾಣಪುರುಷಃ ಕುಂಭರಾಶೌ ಸಮಾಸ್ಥಿತಃ ॥ ೯೦ ॥

ಸಾವರ್ಣಿಕಾದೌ ಭವಿತಾ ಬುದ್ಧೋ ನಾಮ್ನಾ ಸ ವೈ ಭುವಿ ।
ಯದಾ ಪುರಾಣಪುರುಷೋ ಧನೂರಾಶೌ ಸಮಾಸ್ಥಿತಃ ॥ ೯೧ ॥

ವೈವಸ್ವತಮನೋರ್ಮಧ್ಯೇ ರಾಮೋ ದಾಶರಥಿರ್ಭುವಿ ।
ಯದಾ ಪುರಾಣಪುರುಷೋ ನಕ್ರರಾಶೌ ಸಮಾಸ್ಥಿತಃ ॥ ೯೨ ॥

ಸರ್ವಪೂಜ್ಯಾವತಾರಶ್ಚ ನ ಭವೇದ್ವೈ ಕದಾಚನ ।
ಅಸ್ಮಿಂಶ್ಚತುರ್ಯುಗೇ ದೇವಾಃ ಪುರಾಣಪುರುಷಸ್ಯ ಹಿ ॥ ೯೩ ॥

---

೮೯. ಆ ವೈವಸ್ವತಮನ್ವಂತರದ ಮೊದಲು ಭಾಗದಲ್ಲಿ ವಾಮನನಾಗಿ ಭೂಮಿಯಲ್ಲಿ ಜನಿಸಿದನು. ಅನಂತರ ಈ ಪುರಾಣಪುರುಷನು ತುಲಾರಾಶಿಗೆ ಬಂದನು.

೯೦. ಆಗ ವೈವಸ್ವತಮನ್ವಂತರದ ಮಧ್ಯಭಾಗವು ನಡೆಯುತ್ತಿದ್ದಿತು. ಆಗ ಕಲ್ಕಿ ಎಂದು ಪ್ರಸಿದ್ಧನಾದ ನಾನು ಈ ಭೂಮಿಯಲ್ಲಿ ಅವತಾರಮಾಡಿರುವೆನು. ಆ ಪುರಾಣಪುರುಷನು ಕುಂಭರಾಶಿಗೆ ಬರಲು,

೯೧. ಆಗ ಸಾವರ್ಣಿಮನ್ವಂತರದ ಆದಿಯಲ್ಲಿ ಆ ಪರಮಾತ್ಮನೇ ಬುದ್ಧನೆಂಬ ಹೆಸರಿನಿಂದ ಭೂಮಿಯಲ್ಲಿ ಅವತರಿಸುವನು. ಪುರಾಣಪುರುಷನು ಧನೂರಾಶಿಯನ್ನು ಪ್ರವೇಶಿಸಲು,

೯೨. ಆಗ ವೈವಸ್ವತಮನ್ವಂತರದ ಮಧ್ಯಕಾಲದಲ್ಲಿ, ಪರಮಾತ್ಮನು ದಶರಥನ ಮಗನಾಗಿ ರಾಮನೆಂಬ ಹೆಸರಿನಿಂದ ಶೋಭಿಸಿದನು.

೯೩. ಪುರಾಣಪುರುಷನು ಮಕರರಾಶಿಯನ್ನು ಪ್ರವೇಶಿಸಿದಾಗ ಸರ್ವಪೂಜ್ಯನಾದ ಪರಮಪುರುಷನು ಯಾವ ಅವತಾರವನ್ನೂ ಮಾಡುವುದೇ ಇಲ್ಲ. ಎಲೈ ದೇವತೆಗಳಿರಾ ! ಈ ಕಲ್ಪದ ಚತುರ್ಯುಗದಲ್ಲಿ ಪುರಾಣಪುರುಷನಾದ ಮಹಾವಿಷ್ಣುವಿನ ಮೂರು ಅವತಾರಗಳು ನೆರವೇರಿದಂತಾಗುವುವು.

ತ್ರಯೋಽವತಾರಾಃ ಕಥಿತಾಸ್ತಥಾ ನಾನ್ಯಚ್ಚತುರ್ಯುಗೇ ।
ತ್ರೇತಾಯಾಃ ಪ್ರಥಮೇ ಪಾದೇ ರಾಮೋ ದಾಶರಥಿಃ ಪ್ರಭುಃ ॥ ೯೪ ॥

ದ್ವಾಪರಸ್ಯ ತಥಾ ಕೃಷ್ಣಃ ಶೇಷೇಣ ಸಹ ವೈ ಭುವಿ ।
ಕಲೇಸ್ತ್ರೈಷೇ ತಥಾಽಹಂ ವೈ ದ್ವಾತ್ರಿಂಶಾಬ್ದಸಹಸ್ರಕೇ ॥ ೯೫ ॥

ಅತಃ ಖಂಡಃ ಪವಿತ್ರೋಽಯಂ ನೃಣಾಂ ಪಾತಕನಾಶನಃ ।
ಇಮಂ ಚತುರ್ಯುಗಂ ಖಂಡಂ ಯಃ ಪಠೇಚ್ಛ್ರಾವಯೇಚ್ಚ ಯಃ ॥೯೬॥

ಜನ್ಮಪ್ರಭೃತಿ ಪಾಪಾನಿ ತಸ್ಯ ನಶ್ಯಂತಿ ನಾನ್ಯಥಾ ।
ಇತಿ ವಃ ಕಥಿತಂ ದೇವಾ ಮಹಾಕಲ್ಪಚರಿತ್ರಕಂ ॥ ೯೭ ॥

ದ್ವಿತೀಯೋ ಯೋ ಮಹಾಕಲ್ಪೋ ವಿಷ್ಣುಕಲ್ಪಃ ಸ ವೈ ಸ್ಮೃತಃ ।
ತತ್ಕಥಾ ಪಠಿತಾ ದೇವಾ ವಿಷ್ಣುಪೌರಾಣಿಕೈರ್ನರೈಃ ॥ ೯೮ ॥

---

೯೪-೯೫. ಇತರ ಕಲ್ಪದ ಚತುರ್ಯುಗಗಳಲ್ಲಿ ಈರೀತಿ ಅವತಾರಗಳಿಲ್ಲ. ಅದನ್ನು ವಿವರವಾಗಿ ತಿಳಿಸುವೆನು. ತ್ರೇತಾಯುಗದ ಮೊದಲನೆಯ ಪಾದದಲ್ಲಿ ದಶರಥ ಪುತ್ರನಾದ ಶ್ರೀ ರಾಮನು, ದ್ವಾಪರಯುಗದಲ್ಲಿ ಶೇಷಾಂಶನಾದ ಬಲರಾಮ ನೊಡಗೂಡಿದ ಕೃಷ್ಣನು, ಕಲಿಯುಗದಲ್ಲಿ ಮೂವತ್ತೆರಡುಸಾವಿರ ವರ್ಷಗಳು ಕಳೆ ದಿರುವಾಗ ಕಲ್ಕಿಯೆನಿಸಿದ ನಾನು ಈರೀತಿ ಮೂವರೂ ಪುರಾಣಪುರುಷನಾದ ಆ ಮಹಾವಿಷ್ಣುವ ಅವತಾರವೇ ಆಗಿರುವೆವು.

೯೬. ಹೀಗೆ ಮೂರು ಅವತಾರಗಳು ಜರುಗಿರುವುದರಿಂದ ಈ ಚತುರ್ಯುಗ ಖಂಡವು ಪರಮಪವಿತ್ರವೆನಿಸಿ, ಮಾನವರ ಪಾಪಗಳನ್ನು ನಾಶಮಾಡುವುದು. ಎಲೈ ದೇವತೆಗಳಿರಾ! ಈ ಚತುರ್ಯುಗ ಖಂಡವನ್ನು ಓದುವವರೂ ಮತ್ತು ಕೇಳು ವವರೂ ಧನ್ಯರು.

೯೭. ಅವರು ಹುಟ್ಟಿದಾರಭ್ಯ ತಮಗೆ ಉಂಟಾಗಿರುವ ಪಾಪಗಳೆಲ್ಲವನ್ನೂ ಕಳೆದುಕೊಳ್ಳುವರು, ಈರೀತಿಯಾಗಿ ಮಹಾಕಲ್ಪದ ಚರಿತ್ರೆಯನ್ನು ನಿಮಗೆ ತಿಳಿಸಿ ಆಯಿತು.

೯೮. ವಿಷ್ಣುಕಲ್ಪವು ಎರಡನೆಯ ಮಹಾಕಲ್ಪವೆನಿಸಿದೆ. ಆ ವಿಷ್ಣುಕಲ್ಪದ ಕಥೆಯು, ವಿಷ್ಣುಪೌರಾಣಿಕರಿಂದ ವಿವರವಾಗಿ ಹೇಳಲ್ಪಟ್ಟಿದೆ.

ಶತಕೋಟಿಪ್ರವಿಸ್ತಾರೋ ವಿಷ್ಣುಪೌರಾಣಿಕಸ್ಯ ವೈ ।
ತತ್ರೈವ ಸ ಮಹಾಕಲ್ಪೋ ವಿಷ್ಣೋರ್ನಾಭಿಸಮುದ್ಭವಃ ॥ ೯೯ ॥

ಪೂರ್ವಾರ್ಧಾದ್ಭಗವಾನ್ಬ್ರಹ್ಮಾ ಸರ್ವದೇವಸಮನ್ವಿತಃ ।
ಪರಾರ್ಧಾದ್ಭಗವಾನ್ವಿಷ್ಣುಃ ಪುರಾಣಪುರುಷಃ ಸ ವೈ ॥ ೧೦೦ ॥

ತೃತೀಯೋ ಯೋ ಮಹಾಕಲ್ಪಃ ಶಿವಕಲ್ಪಃ ಸ ವೈ ಸ್ಮೃತಃ ।
ಶಿವಪೂರ್ವಾರ್ಧತೋ ಜಾತೋ ವಿಷ್ಣುಸ್ತಸ್ಮಾದ್ವಿಧಿಃ ಸ್ವಯಂ ॥ ೧೦೧ ॥

ಶತಕೋಟಿಪ್ರವಿಸ್ತಾರಃ ಶಿವಪೌರಾಣಿಕೈಃ ಸ್ಮೃತಃ ।
ಚತುರ್ಥೋ ಯೋ ಮಹಾಕಲ್ಪಃ ಪದ್ಮಕಲ್ಪಃ ಸ ವೈ ಸ್ಮೃತಃ ॥ ೧೦೨ ॥

ಗಣೇಶಸ್ತತ್ರ ಭಗವಾನ್ ಪುರಾಣಪುರುಷಾಸನೇ ।
ಗಣೇಶಾದಭವದ್ರುದ್ರೋ ರುದ್ರಾದ್ವಿಷ್ಣುಃ ಸುರೋತ್ತಮಃ ॥ ೧೦೩ ॥

---

೯೯. ವಿಷ್ಣುಪುರಾಣವು ನೂರುಕೋಟಿ ಗ್ರಂಥವುಳ್ಳದ್ದಾಗಿ ಅತಿವಿಸ್ತಾರವಾಗಿರುವುದು. ಈ ವಿಷ್ಣುಮಹಾಕಲ್ಪವು ವಿಷ್ಣುವಿನ ನಾಭಿಯಿಂದ ಹುಟ್ಟಿತು.

೧೦೦. ಈ ವಿಷ್ಣುಕಲ್ಪದ ಪೂರ್ವಾರ್ಧದಿಂದ ಭಗವಂತನಾದ ಬ್ರಹ್ಮನು ಸಕಲದೇವಗಣಗಳೊಡನೆ ಜನಿಸಿದನು. ಪರಾರ್ಧದಿಂದ ಪುರಾಣಪುರುಷನೂ, ಭಗವಂತನೂ ಆದ ವಿಷ್ಣುವು ತಾನೊಬ್ಬನೇ ಅವತರಿಸಿದನು.

೧೦೧. ಶಿವಕಲ್ಪವು ಮೂರನೆಯ ಮಹಾಕಲ್ಪವೆನಿಸುವುದು. ಈ ಶಿವಕಲ್ಪದಲ್ಲಿ ಶಿವನ ಪೂರ್ವಾರ್ಧದಿಂದ ವಿಷ್ಣುವೂ, ವಿಷ್ಣುವಿನಿಂದ ಬ್ರಹ್ಮನೂ ಸಹ ಉಂಟಾದರು.

೧೦೨. ಈ ಶಿವಕಲ್ಪವು ಶಿವಪುರಾಣಾಭಿಜ್ಞರಾದ ಮುನಿಗಳಿಂದ ನೂರು ಕೋಟಿ ಗ್ರಂಥ ವಿಸ್ತಾರವುಳ್ಳದೆಂದು ಉಕ್ತವಾಗಿದೆ. ಪದ್ಮಕಲ್ಪವು ನಾಲ್ಕನೆಯ ಮಹಾಕಲ್ಪವೆಂದು ಪ್ರಸಿದ್ಧವಾಗಿರುವುದು.

೧೦೩. ಈ ಪದ್ಮಕಲ್ಪದಲ್ಲಿ ಷಡ್ಗುಣೈಶ್ವರ್ಯ ಸಂಪನ್ನನಾದ ಗಣೇಶನು ಪುರಾಣ ಪುರುಷನ ಸ್ಥಾನದಲ್ಲಿ ಪ್ರಧಾನ ದೇವತೆ. ಈ ಗಣೇಶನಿಂದ ರುದ್ರನೂ, ರುದ್ರನಿಂದ ದೇವೋತ್ತಮನಾದ ವಿಷ್ಣುವೂ ಉಂಟಾದರು.

ವಿಷ್ಣೋರ್ನಾಭಿಸಮುದ್ಭೂತಃ ಪರಮೇಷ್ಠೀ ಪಿತಾಮಹಃ ।
ಕಲ್ಪೇಕಲ್ಪೇ ಕ್ರಮಾದಾದೌ ದೇವಾಶ್ಚಾಸನ್ಸಮಂತತಃ ॥ ೧೦೪ ॥

ಪಂಚಮೋ ಯೋ ಮಹಾಕಲ್ಪೋ ವಾಯುಕಲ್ಪಃ ಸ ವೈ ಸ್ಮೃತಃ ।
ಮಹೇಂದ್ರಸ್ತತ್ರ ಭಗವಾನ್ಪುರಾಣಪುರುಷಾಸನೇ ॥ ೧೦೫ ॥

ಮಹೇಂದ್ರಾದಭವತ್ಪ್ರಾಪ್ತೋ ಮಹೇಂದ್ರಾದಿಂದ್ರಿಯಾಣಿ ಚ ।
ಇಂದ್ರಿಯೇಭ್ಯಶ್ಚ ತದ್ದೇವಾಸ್ತೇಷಾಂ ನಾಮಾನಿ ಮೇ ಶೃಣು ॥ ೧೦೬ ॥

ಶನಿರ್ಬುಧೋ ರವಿಃ ಶುಕ್ರೋ ವಿಶ್ವಕರ್ಮಾ ಬೃಹಸ್ಪತಿಃ ।
ಇಂದ್ರೋ ವಿಷ್ಣುಸ್ತಥಾ ಬ್ರಹ್ಮಾ ರುದ್ರಃ ಸೋಮಃ ಕ್ರಮಾತ್ಸ್ಮೃತಾಃ ॥

ಸೃಷ್ಟಿಕರ್ತಾ ಸ ವೈ ಬ್ರಹ್ಮಾ ಲಿಂಗೇಂದ್ರಿಯಸಮುದ್ಭವಃ ।
ಸೃಷ್ಟಿಪಾತಾ ಸ ವೈ ವಿಷ್ಣುರವತಾರಿಪದೋದ್ಭವಃ ॥ ೧೦೮ ॥

---

೧೦೪. ಈ ವಿಷ್ಣುವಿನ ನಾಭಿಕಮಲದಿಂದ ಪರಮೇಷ್ಠಿಯೂ ಪಿತಾಮಹನೂ ಎನಿಸಿದ ಬ್ರಹ್ಮನು ಜನಿಸಿದನು. ಕ್ರಮವಾಗಿ ಪ್ರತಿಯೊಂದು ಕಲ್ಪದಲ್ಲಿಯೂ ಆಯಾಯಾ ಕಲ್ಪದ ದೇವತೆಯಿಂದ ಇತರ ದೇವತೆಗಳೂ ಉಂಟಾದರೆಂದು ತಿಳಿಯಬೇಕು.

೧೦೫. ವಾಯುಕಲ್ಪವು ಐದನೆಯ ಮಹಾಕಲ್ಪವೆಂದು ತಿಳಿಯಬೇಕು. ಈ ಕಲ್ಪದಲ್ಲಿ ಮಹೇಂದ್ರನೇ ಪುರಾಣಪುರುಷನ ಸ್ಥಾನದಲ್ಲಿ ಪ್ರಧಾನ ದೇವತೆಯಾಗಿರುವನು.

೧೦೬-೧೦೭. ಈ ಮಹೇಂದ್ರನಿಂದ ಇಂದ್ರಿಯಗಳೂ, ಇಂದ್ರಿಯಗಳಿಂದ ಶನಿ, ಬುಧ, ಸೂರ್ಯ, ಶುಕ್ರ, ವಿಶ್ವಕರ್ಮ, ಬೃಹಸ್ಪತಿ, ಇಂದ್ರ, ವಿಷ್ಣು, ಬ್ರಹ್ಮ, ರುದ್ರ ಮತ್ತು ಚಂದ್ರ ಇವರು ಕ್ರಮವಾಗಿ ಜನಿಸಿದರು.

೧೦೮. ಸೃಷ್ಟಿಕರ್ತನಾದ ಬ್ರಹ್ಮನು ಅವನ ಲಿಂಗೇಂದ್ರಿಯದಿಂದ ಜನಿಸಿದನು. ರಕ್ಷಣೆಮಾಡುವವನೂ, ಅವತಾರಶೀಲನೂ ಆದ ವಿಷ್ಣುವು ಅವನ ಪಾದದಲ್ಲಿ ಜನಿಸಿದನು.

ಚತುರ್ವಿಂಶತಿತತ್ತ್ವೇಷು ಕಲ್ಪೇಕಲ್ಪೇ ಪ್ರಭುರ್ಗತಃ ।
ಸನತ್ಕುಮಾರೋ ಹಂಸಶ್ಚ ವಾರಾಹೋ ನಾರದಸ್ತಥಾ ॥ ೧೦೯ ॥

ನಾರಾಯಣೌ ಚ ಕಪಿಲಾತ್ರೇಯೌ ಯಜ್ಞಾಶ್ವಕಂಟಕೌ ।
ವೃಷಭಶ್ಚ ಪೃಥುರ್ಮತ್ಸ್ಯಂ ಕೂರ್ಮೋ ಧನ್ವಂತರಿಸ್ತಥಾ ॥ ೧೧೦ ॥

ಮೋಹಿನೀ ಚ ನೃಸಿಂಹಶ್ಚ ವಾಮನೋ ಭಾರ್ಗವಸ್ತಥಾ ।
ರಾಮೋ ವ್ಯಾಸೋ ಬಲಃ ಕೃಷ್ಣೋ ಬುದ್ಧಃ ಕಲ್ಕೀ ಸ್ವತತ್ತ್ವಗಃ ॥ ೧೧೧ ॥

ಗುಹ್ಯಜನ್ಮಾ ಮಹಾದೇವಃ ಸೃಷ್ಟಿದೈತ್ಯವಿನಾಶಕಃ ।
ಏವಂ ಜಾತಾಸ್ತ್ರಯೋ ದೇವಾ ಮಹಾಕಲ್ಪೇ ಚ ಪಂಚಮೇ ॥ ೧೧೨ ॥

ಷಷ್ಠೋ ಯಸ್ತು ಮಹಾಕಲ್ಪೋ ವಹ್ನಿಕಲ್ಪಃ ಸ ವೈ ಸ್ಮೃತಃ ।
ಸ್ಕಂದಸ್ತತ್ರೈವ ಭಗವಾನ್ ಪುರಾಣಪುರುಷಾಸನೇ ॥ ೧೧೩ ॥

---

೧೦೯. ಪ್ರತಿಯೊಂದು ಕಲ್ಪದಲ್ಲಿಯೂ ಇಪ್ಪತ್ತುನಾಲ್ಕು ತತ್ತ್ವಗಳಿಗೂ ಬೇರೆ ಬೇರೆ ಪ್ರಭುವು ನಿಯತವಾಗಿರುವನು.

೧೧೦-೧೧೧. ಆ ತತ್ತ್ವಗಳಿಗೆ ಕ್ರಮವಾಗಿ ಸನತ್ಕುಮಾರ, ಹಂಸ, ವಾರಾಹ, ನಾರದ, ನಾರಾಯಣ, ಕಪಿಲ, ಆತ್ರೇಯ, ಯಜ್ಞಾಶ್ವ, ಕಂಟಕ, ವೃಷಭ, ಪೃಥು, ಮತ್ಸ್ಯ, ಕೂರ್ಮ, ಧನ್ವಂತರಿ, ಮೋಹಿನೀ, ನೃಸಿಂಹ, ವಾಮನ, ಭಾರ್ಗವ, ರಾಮ, ವ್ಯಾಸ, ಬಲರಾಮ, ಕೃಷ್ಣ, ಬುದ್ಧ, ಕಲ್ಕಿ ಇವರು ಪ್ರಭುವಾಗಿ ಆ ತತ್ತ್ವಕ್ಕಾಶ್ರಯರಾದ ದೇವತೆಗಳಾಗಿರುವರು.

೧೧೨. ಅವನ ಗುಹ್ಯಸ್ಥಾನದಲ್ಲಿ ಮಹಾದೇವನು ಜನಿಸಿ, ಸೃಷ್ಟಿಯೆಂಬ ರಾಕ್ಷಸರನ್ನು ನಾಶಪಡಿಸಿದನು. ಈರೀತಿ ಬ್ರಹ್ಮ ವಿಷ್ಣು ಮಹೇಶ್ವರರೆಂಬ ಮೂರು ದೇವತೆಗಳೂ ಐದನೆಯ ಈ ಮಹಾಕಲ್ಪದಿಂದ ಜನಿಸಿದರು.

೧೧೩. ವಹ್ನಿಕಲ್ಪವೇ ಆರನೆಯ ಮಹಾಕಲ್ಪವಾಗಿರುವುದು. ಈ ಕಲ್ಪದಲ್ಲಿ ಷಣ್ಮುಖನೇ ಪುರಾಣಪುರುಷನ ಸ್ಥಾನದಲ್ಲಿ ಪ್ರಧಾನ ದೇವತೆಯಾಗಿರುವನು.

ಪುರುಷಾವ್ಯಯತಃ ಸ್ಕಂದಃ ಸ್ಕಂದಾತ್ತಸ್ಮಾನ್ಮಹಾರ್ಚಿಮಾನ್ ।
ಸೂರ್ಯರೂಪಾ ಮಹಾರ್ಚಿರ್ಯಾ ತಸ್ಯಾಂ ಜಾತೋ ಹರಿಃ ಸ್ವಯಂ ॥

ವಹ್ನಿರೂಪಾ ಮಹಾರ್ಚಿರ್ಯಾ ತಸ್ಯಾಂ ಜಾತಃ ಪಿತಾಮಹಃ ।
ಚಂದ್ರರೂಪಾ ಮಹಾರ್ಚಿರ್ಯಾ ತಸ್ಯಾಂ ಜಾತಃ ಸ ವೈ ಹರಃ ॥ ೧೧೫ ॥

ಋಷಯೋ ಮುನಯೋ ವರ್ಣಾ ಲೋಕಾ ಜಾತಾಃ ಪಿತಾಮಹಾತ್ ।
ಆದಿತ್ಯಾ ವಿಶ್ವವಸವಸ್ತುಷಿತಾ ಭಾಸ್ವರಾನಿಲಾಃ ॥ ೧೧೬ ॥

ಮಹಾರಾಜಿಕಸಾಧ್ಯಾಶ್ಚ ದೇವಾ ವಿಷ್ಣುಸಮುದ್ಭವಾಃ ।
ಯಕ್ಷರಾಕ್ಷಸಗಂಧರ್ವಾಃ ಪಿಶಾಚಾಃ ಕಿನ್ನರಾದಯಃ ॥ ೧೧೭ ॥

ದೈತ್ಯಾಶ್ಚ ದಾನವಾ ಭೂತಾಸ್ತಾಮಸಾ ರುದ್ರಸಂಭವಾಃ ।
ಕಲ್ಪೇಕಲ್ಪೇ ಸಮುದ್ಭೂತಮೇವಂ ಬ್ರಹ್ಮಾಂಡಗೋಚರೇ ॥ ೧೧೮ ॥

---

೧೧೪. ಈ ಕಲ್ಪದಲ್ಲಿ ನಾಶರಹಿತನಾದ ಪರಮಪುರುಷನಿಂದ ಸ್ಕಂದನು ಜನಿಸಿದನು. ಈ ಸ್ಕಂದ (ಷಣ್ಮುಖ)ನಿಂದ ಮಹಾತೇಜೋರೂಪವು ಜನಿಸಿತು. (ಈ ತೇಜೋರೂಪವು, ಸೂರ್ಯ, ಅಗ್ನಿ ಮತ್ತು ಚಂದ್ರ ಎಂಬ ಮೂರು ರೂಪಿನಿಂದ ಕೂಡಿರುವುದು.) ಇದರಲ್ಲಿ ಸೂರ್ಯರೂಪಿನ ತೇಜಸ್ಸಿನಿಂದ ಮಹಾವಿಷ್ಣುವು ಜನಿಸಿದನು.

೧೧೫. ಅಗ್ನಿರೂಪವಾದ ತೇಜಸ್ಸಿನಿಂದ ಪಿತಾಮಹನಾದ ಬ್ರಹ್ಮನು ಜನಿಸಿದನು. ಚಂದ್ರರೂಪವಾದ ತೇಜಸ್ಸಿನಿಂದ ಪರಮೇಶ್ವರನು ಜನಿಸಿದನು.

೧೧೬-೧೧೭. ಋಷಿಗಳೂ ಮುನಿಗಳೂ ಬ್ರಹ್ಮ ಕ್ಷತ್ರಿಯ ವೈಶ್ಯ ಶೂದ್ರರೆಂಬ ನಾಲ್ಕು ವರ್ಣಗಳೂ ಪಿತಾಮಹ (ಬ್ರಹ್ಮ) ನಿಂದ ಉಂಟಾದರು. ದ್ವಾದಶಾದಿತ್ಯರೂ, ವಿಶ್ವೇದೇವತೆಗಳೂ- ಅಷ್ಟವಸುಗಳೂ. ತುಷಿತಾ, ಭಾಸ್ವರಾ, ಅನಿಲ- ಮಹಾರಾಜಕ, ಸಾಧ್ಯರು ಎಂಬ ದೇವತೆಗಳೆಲ್ಲರೂ ವಿಷ್ಣುವಿನಿಂದ ಜನಿಸಿದರು. ಯಕ್ಷರು, ರಾಕ್ಷಸರು, ಗಂಧರ್ವರು, ಪಿಶಾಚರು, ಕಿನ್ನರರೇ ಮೊದಲಾದವರು.

೧೧೮. ದೈತ್ಯರು (ದಿತಿಪುತ್ರರೂ) ದಾನವರು (ದನುಪುತ್ರರು) ಭೂತಗಳು ಮತ್ತು ತಾಮಸರು ಇವರೆಲ್ಲ ರುದ್ರನಿಂದ ಜನಿಸಿದರು. ಇದೇ ರೀತಿ ಬ್ರಹ್ಮಾಂಡದಲ್ಲಿ ಗೋಚರವಾಗುವ ಪ್ರತಿಯೊಂದು ಕಲ್ಪದಲ್ಲಿಯೂ ಮೊದಲು ದೇವಸೃಷ್ಟಿ ಅವರಿಂದ ಪ್ರಜಾಸೃಷ್ಟಿ ಈ ಪ್ರಕಾರ ಜರುಗುವುದು.

ಸಪ್ತಮೋ ಯೋ ಮಹಾಕಲ್ಪಃ ಸ ವೈ ಬ್ರಹ್ಮಾಂಡಕಲ್ಪಕಃ ।
ಪಾವಕಸ್ತತ್ರ ಭಗವಾನ್ ಪುರಾಣಪುರುಷಾಸನೇ ॥ ೧೧೯ ॥

ಅಚಿಂತ್ಯತೇಜಸಸ್ತಸ್ಮಾತ್‌ಪುರುಷಾದ್ವಹ್ನಿರುದ್ಭವಃ ।
ತತೋ ಜಾತೋ ಮಹಾಬ್ಧಿಶ್ಚ ತಸ್ಮಾಜ್ಜಾತಂ ವಿರಾಣ್ಮಯಂ ॥ ೧೨೦ ॥

ರೋಮ್ಣಿರೋಮ್ಣಿ ತತಸ್ತಸ್ಯ ಬ್ರಹ್ಮಾಂಡಾಃ ಕೋಟಿಶೋಽಭವನ್ ।
ಬ್ರಹ್ಮಾಂಡಾದಭವದ್ಬ್ರಹ್ಮಾ ಸರ್ವಲೋಕಪಿತಾಮಹಃ ॥ ೧೨೧ ॥

ತಸ್ಮಾಜ್ಜಾತೋ ವಿಭುರ್ವಿಷ್ಣುಸ್ತಸ್ಮಾಜ್ಜಾತೋ ಹರಃ ಸ್ವಯಂ ।
ಶತಕೋಟಿಪ್ರವಿಸ್ತಾರೋ ಬ್ರಹ್ಮಾಂಡಾಖ್ಯಪುರಾಣಕೇ ॥ ೧೨೨ ॥

ತ್ರಿನೇತ್ರಂ ಪಂಚವಕ್ತ್ರಂ ಚ ದಶಬಾಹುರ್ಭವಸ್ಯ ಚ ।
ಅಷ್ಟಾದಶಾನಾಂ ಕಲ್ಪಾನಾಂ ವಾಯುರ್ಶ್ರೇಷ್ಠೋ ವೈದಿಕೈಃ ಸ್ಮೃತಃ ॥ ೧೨೩ ॥

---

೧೧೯. ಏಳನೆಯದು ಬ್ರಹ್ಮಾಂಡ ಮಹಾಕಲ್ಪವು, ಈ ಕಲ್ಪದಲ್ಲಿ ಪುರಾಣ ಪುರುಷನ ಸ್ಥಾನದಲ್ಲಿ ಭಗವಂತನಾದ ಅಗ್ನಿಯೇ ಪ್ರಧಾನ ದೇವನಾಗಿರುವನು.

೧೨೦. ಯೋಚಿಸಲು ಅಸಾಧ್ಯವಾದ ತೇಜಸ್ಸುಳ್ಳ ಪರಮಪುರುಷನಿಂದ ಈ ಅಗ್ನಿಯು ಜನಿಸಿದನು. ಅನಂತರ ಈ ಅಗ್ನಿಯಿಂದ ಮಹಾಸಮುದ್ರ ಉತ್ಪತ್ತಿಯಾಗುವುದು. ಈ ಮಹಾಸಮುದ್ರದಲ್ಲಿ ವಿರಾಟ್ಪುರುಷನು ಜನಿಸುವನು

೧೨೧ ಈ ವಿರಾಟ್ಪುರುಷನ ರೋಮರೋಮದಲ್ಲಿಯೂ ಕೋಟ್ಯಂತರ ಬ್ರಹ್ಮಾಂಡಗಳು ಉತ್ಪನ್ನವಾದುವು. ತರುವಾಯ ಈ ಬ್ರಹ್ಮಾಂಡದಿಂದ ಸರ್ವಲೋಕ ಪಿತಾಮಹನೆನಿಸಿದ ಬ್ರಹ್ಮನು ಹುಟ್ಟಿದನು.

೧೨೨. ಈ ಬ್ರಹ್ಮನಿಂದ ಪ್ರಭುವಾದ ವಿಷ್ಣುವೂ, ವಿಷ್ಣುವಿನಿಂದ ಪರಮೇಶ್ವರನೂ ಸಹ ಉಂಟಾದರು. ಈ ಬ್ರಹ್ಮಾಂಡ ಪುರಾಣವು ನೂರುಕೋಟಿ ಗ್ರಂಥಗಳಿಂದ ಕೂಡಿ ಅತಿ ವಿಸ್ತಾರವಾಗಿದೆ.

೧೨೩. ಈ ಕಲ್ಪದಲ್ಲಿ ಈಶ್ವರನಿಗೆ ಮೂರು ಕಣ್ಣುಗಳೂ, ಐದುಮುಖಗಳೂ ಮತ್ತು ಹತ್ತುಭುಜಗಳೂ ಇರುವುವು. ಹದಿನೆಂಟು ಕಲ್ಪಗಳಲ್ಲಿ ವಾಯುಕಲ್ಪವೇ ಶ್ರೇಷ್ಠವೆಂದು ವೈದಿಕರು ಹೇಳುವರು.

ಮಹಾಕಲ್ಪೇಽಭವತ್ಸರ್ವೇ ದ್ವಿಸಹಸ್ರಾಃ ಕ್ಷಯಂ ಗತಾಃ ।
ಅಷ್ಟಮೋ ಯೋ ಮಹಾಕಲ್ಪೋ ಲಿಂಗಕಲ್ಪಃ ಸ ವೈ ಸ್ಮೃತಃ ॥ ೧೨೪ ॥

ತತ್ರೈವ ಭಗವಾನ್‌ಧರ್ಮಃ ಪುರಾಣಪುರುಷಾಸನೇ ।
ಅಚಿಂತ್ಯಾವ್ಯಕ್ತರೂಪಶ್ಚ ಜಾತೋ ಧರ್ಮಃ ಸನಾತನಃ ॥ ೧೨೫ ॥

ಧರ್ಮಾತ್ಕಾಮಃ ಸಮುದ್ಭೂತಃ ಕಾಮಾಲ್ಲಿಂಗಸ್ತ್ರಿಧಾಽಭವತ್ ।
ಪುಲ್ಲಿಂಗಃ ಕ್ಲೀಬಲಿಂಗಶ್ಚ ಸ್ತ್ರೀಲಿಂಗಶ್ಚ ಸುರೋತ್ತಮ ॥ ೧೨೬ ॥

ಪುಲ್ಲಿಂಗಾದಭವದ್ವಿಷ್ಣುಃ ಸ್ತ್ರೀಲಿಂಗಾಚ್ಚ ಮಹೇಂದಿರಾ ।
ಕ್ಲೀಬಲಿಂಗಾತ್ಸ ವೈ ಶೇಷಸ್ತತಸ್ಯೋಪರಿ ಸ ಚ ಸ್ಥಿತಃ ॥ ೧೨೭ ॥

ತ್ರಿಭ್ಯಸ್ತಮೋಮಯೇಭ್ಯಶ್ಚ ಜಾತಮೇಕಾರ್ಣವಂ ಜಗತ್ ।
ಸುಪ್ತೇ ನಾರಾಯಣೇ ದೇವೇ ನಾಭೇಃ ಪಂಕಜಮುತ್ತಮಂ ॥ ೧೨೮ ॥

---

೧೨೪. ವಾಯುಮಹಾಕಲ್ಪದಲ್ಲಿ ಎರಡುಸಾವಿರ ದೇವತೆಗಳು ಜನಿಸಿ ಕೊನೆಗೆ ಎಲ್ಲರೂ ನಾಶವಾಗುತ್ತಾರೆ. ಎಂಟನೆಯದಾದ ಲಿಂಗ ಮಹಾಕಲ್ಪದಲ್ಲಿ ಪುರಾಣಪುರುಷನ ಸ್ಥಾನದಲ್ಲಿ ಧರ್ಮಪುರುಷನು ಅಧಿದೇವತೆ, ಎಲೈ ದೇವತೋತ್ತ ಮನೆ! ಕೇಳು,

೧೨೫-೧೨೬. ಅಚಿಂತ್ಯಾವ್ಯಕ್ತಸ್ವರೂಪನಾದ ಧರ್ಮಪುರುಷನು ಸನಾತನನು. ಈ ಧರ್ಮಪುರುಷನಿಂದ ಮನ್ಮಥನು ಹುಟ್ಟಿದನು. ಈ ಮನ್ಮಥನಿಂದ ಪುಲ್ಲಿಂಗ, ಸ್ತ್ರೀಲಿಂಗ ಮತ್ತು ನಪುಂಸಕಲಿಂಗವೆಂಬ ಮೂರು ಲಿಂಗಗಳೂ ಜನಿಸಿದವು.

೧೨೭. ಪುಲ್ಲಿಂಗದಿಂದ ವಿಷ್ಣುವೂ, ಸ್ತ್ರೀಲಿಂಗದಿಂದ ಮಹಾಲಕ್ಷ್ಮಿಯೂ ಮತ್ತು ನಪುಂಸಕಲಿಂಗದಿಂದ ಆದಿಶೇಷನೂ ಸಹ ಜನಿಸಿದರು. ಅನಂತರ ಆ ಮಹಾ ವಿಷ್ಣುವು ಆದಿಶೇಷನನ್ನು ವಾಹನವನ್ನಾಗಿಮಾಡಿ ಅದರ ಮೇಲೆ ಕುಳಿತುಕೊಂಡನು.

೧೨೮-೧೨೯. ಈ ಮೂರು ಜನಗಳೂ ತಮೋಗುಣಸ್ವರೂಪರು. ಈ ಮೂವರಿಂದ ಮಹಾರ್ಣವವು ಜನಿಸಿತು. ನಾರಾಯಣನು ಆ ಸಮುದ್ರದ ಮೇಲೆ ಶೇಷಶಾಯಿಯಾಗಿ ಮಲಗಿಕೊಂಡಾಗ ಈ ನಾರಾಯಣನ ನಾಭಿಯಿಂದ ಉತ್ತಮ

ಜಾತಂ ತಸ್ಮಾತ್ಸ ವೈ ಬ್ರಹ್ಮಾ ತಸ್ಮಾಜ್ಜಾತೋ ವಿರಾಡಯಂ ।
ಶತಕೋಟಿಪ್ರವಿಸ್ತಾರೈರ್ಲಿಂಗಪೌರಾಣಿಕೈಃ ಕಥಾ ॥ ೧೨೯ ॥

ಗೀತಾ ಚೈವ ವಿಧೇರಗ್ರೇ ತಸ್ಯ ಸಾರೋಽಯಮುತ್ತಮಃ ।
ನವಮೋ ಯೋ ಮಹಾಕಲ್ಪೋ ಮತ್ಸ್ಯಕಲ್ಪಃ ಸ ವೈ ಸ್ಮೃತಃ ॥ ೧೩೦ ॥

ಕುಬೇರಸ್ತತ್ರ ಭಗವಾನ್ ಪುರಾಣಪುರುಷಾಸನೇ ।
ಅವ್ಯಯಾಚ್ಚ ಸಮುದ್ಭೂತೋ ಧೂಲಿವೃಂದೋ ಮಹಾಂಸ್ತಥಾ ॥ ೧೩೧ ॥

ರಜೋಭೂತಾಚ್ಚ ತಸ್ಮಾಚ್ಚ ಕುಬೇರಸ್ಯ ಸಮುದ್ಭವಃ ।
ಕುಬೇರಾದುದ್ಭವನ್ಮತ್ಸ್ಯೋ ವೇದಮೂರ್ತಿಶ್ಚ ಸದ್ಗುಣಃ ॥ ೧೩೨ ॥

ಮತ್ಸ್ಯೋದರಾತ್ಸಮುದ್ಭೂತೋ ವಿಷ್ಣುರ್ನಾರಾಯಣೋ ಹರಿಃ ।
ವಿಷ್ಣೋರ್ನಾಭೇಃ ಸಮುದ್ಭೂತೋ ಬ್ರಹ್ಮಾ ಲೋಕಪಿತಾಮಹಃ ॥೧೩೩॥

---

ವಾದ ಒಂದು ಕಮಲವು ಹುಟ್ಟಿತು. ಆ ಕಮಲದಿಂದ ಬ್ರಹ್ಮನೂ ಬ್ರಹ್ಮನಿಂದ ವಿರಾಟ್ಪುರುಷನೂ ಜನಿಸಿದರು.

೧೩೦. ಈ ಲಿಂಗಪುರಾಣವು ನೂರುಕೋಟಿ ಗ್ರಂಥಸಂಖ್ಯೆಯುಳ್ಳದ್ದಾಗಿ ವಿಸ್ತಾರವಾಗಿದೆಯೆಂದು ಆ ಪುರಾಣವನ್ನು ತಿಳಿದ ಪುರಾಣಿಕರು ಬ್ರಹ್ಮನ ಮುಂದೆ ಹೇಳಿರುವರು. ಅದರ ಸಾರವೇ ಈಗ ನಾನು ಹೇಳಿದುದು. ಮತ್ಸ್ಯಕಲ್ಪವು ಒಂಭತ್ತನೆಯ ಮಹಾಕಲ್ಪವೆನಿಸುವುದು.

೧೩೧. ಈ ಮತ್ಸ್ಯಕಲ್ಪದಲ್ಲಿ ಪುರಾಣಪುರುಷನ ಸ್ಥಾನದಲ್ಲಿ ಕುಬೇರನೇ ಅಧಿದೇವನು. ಈ ಕಲ್ಪದಲ್ಲಿ ನಾಶರಹಿತನಾದ ಪರಮಾತ್ಮನಿಂದ ಒಂದು ದೊಡ್ಡ ಧೂಳಿನ ಸಮೂಹವುಂಟಾಯಿತು.

೧೩೨. ರಜೋ ಮಯವಾದ ಆ ಧೂಳಿನಿಂದ ಕುಬೇರನು ಹುಟ್ಟಿದನು. ಈ ಕುಬೇರನಿಂದ ವೇದಸ್ವರೂಪವೂ ಸದ್ಗುಣಶಾಲಿಯೂ ಆದ ಮತ್ಸ್ಯವು ಉಂಟಾಯಿತು.

೧೩೩ ಈ ಮತ್ಸ್ಯದ ಹೊಟ್ಟೆಯಲ್ಲಿ ನಾರಾಯಣ ಹರಿ ಎಂಬ ನಾಮಾಂತರವುಳ್ಳ ಮಹಾವಿಷ್ಣುವು ಜನಿಸಿದನು. ಈ ವಿಷ್ಣುವಿನ ನಾಭಿಯಿಂದ ಲೋಕಪಿತಾಮಹನಾದ ಬ್ರಹ್ಮನು ಜನಿಸಿದನು.

ಬ್ರಹ್ಮಣಶ್ಚೋದ್ಭವಂ ದೈವಂ ದೈವಾದ್ದೇವಾ ಬಭೂವಿರೇ ।
ಚತುರ್ವಿಂಶತಿತತ್ವಾನಿ ತೈರ್ದೇವೈರ್ಜನಿತಾನಿ ವೈ ॥ ೧೩೪ ॥

ಕಲ್ಪೇಕಲ್ಪೇ ಕ್ರಮಾದೇವಂ ಕಲ್ಪನಾಮಾನ್ಯಕಾರಯತ್ ।
ಮತ್ಸ್ಯಕಲ್ಪೇ ತು ಮತ್ಸ್ಯಶ್ಚ ಮಹಾಮತ್ಸ್ಯಾತ್ಸಮುದ್ಭವಃ ॥ ೧೩೫ ॥

ತನ್ಮತ್ಸ್ಯಾದ್ಭಗವಾನ್ವಿಷ್ಣುಸ್ತತೋ ಬ್ರಹ್ಮಣ ಉದ್ಭವಃ ।
ಕೂರ್ಮಕಲ್ಪೇ ಮಹಾಮತ್ಸ್ಯಾತ್ಕೂರ್ಮೋ ಜಾತಃ ಸ ಕಚ್ಛಪಃ॥೧೩೬॥

ಕೂರ್ಮಾಚ್ಚ ಭಗವಾನ್ವಿಷ್ಣುಸ್ತತೋ ಬ್ರಹ್ಮಾ ತತೋ ವಿರಾಟ್ ।
ಶ್ವೇತವಾರಾಹಕಲ್ಪೇ ಚ ವರಾಹಾದ್ವಿಷ್ಣುರುದ್ಭವಃ ॥ ೧೩೭ ॥

ವಿಷ್ಣೋರ್ನಾಭೇಶ್ಚ ಸ ಬ್ರಹ್ಮಾ ತತೋ ಜಾತೋ ವಿರಾಡಯಂ ।
ಏವಂ ಸರ್ವೇ ಚ ವೈ ಕಲ್ಪಾ ಜ್ಞೇಯಾಃ ಸರ್ವತ್ರ ವೈ ಬುಧೈಃ ॥ ೧೩೮ ॥

---

೧೩೪. ಈ ಬ್ರಹ್ಮನಿಂದ ದೈವವು ಜನಿಸಿತು. ಆ ದೈವದಿಂದ ದೇವತೆಗಳು ಉಂಟಾದರು. ಈ ದೇವತೆಗಳಿಂದ ಇಪ್ಪತ್ತುನಾಲ್ಕು ತತ್ವಗಳು ಉಂಟಾದುವು.

೧೩೫. ಹೀಗೆ ಪ್ರತಿಯೊಂದು ಕಲ್ಪದಲ್ಲಿಯೂ ಕ್ರಮವಾಗಿ ಕಲ್ಪಗಳ ಹೆಸರಿನಿಂದ ದೇವತೆಗಳ ಹೆಸರುಗಳನ್ನು ತಿಳಿಯಬೇಕು. ಮತ್ಸ್ಯಕಲ್ಪದಲ್ಲಿ ಮತ್ಸ್ಯವು ಮಹಾಮತ್ಸ್ಯದಿಂದ ಜನಿಸಿತು.

೧೩೬. ಈ ಮತ್ಸ್ಯದಿಂದ ಭಗವಂತನಾದ ವಿಷ್ಣುವೂ, ವಿಷ್ಣುವಿನಿಂದ ಬ್ರಹ್ಮನೂ ಸಹ ಉಂಟಾದರು. ಕೂರ್ಮಕಲ್ಪದಲ್ಲಿ ಮಹಾಮತ್ಸ್ಯದಿಂದ ಕಚ್ಛಪ ಸಹಿತವಾದ ಕೂರ್ಮವು ಜನಿಸಿತು.

೧೩೭. ಈ ಕೂರ್ಮದಿಂದ ಭಗವಂತನಾದ ವಿಷ್ಣುವೂ, ವಿಷ್ಣುವಿನಿಂದ ಬ್ರಹ್ಮನೂ, ಬ್ರಹ್ಮನಿಂದ ವಿರಾಟ್ಪುರುಷನೂ ಸಹ ಉಂಟಾದರು. ಶ್ವೇತವಾರಾಹ ಕಲ್ಪದಲ್ಲಿ ವರಾಹನಿಂದ ವಿಷ್ಣುವು ಜನಿಸಿದನು.

೧೩೮. ವಿಷ್ಣುವಿನ ನಾಭಿಯಿಂದ ಬ್ರಹ್ಮನೂ ಅನಂತರ ಬ್ರಹ್ಮನಿಂದ ವಿರಾಟ್ಪುರುಷನೂ ಸಹ ಜನಿಸಿದರು. ಇದೇ ರೀತಿ ಎಲ್ಲಾ ಕಲ್ಪಗಳಲ್ಲಿಯೂ ದೇವತೆಗಳು ಉತ್ಪತ್ತಿಯಾದರೆಂದು ಪಂಡಿತರು ತಿಳಿದುಕೊಳ್ಳಬೇಕು

ದಶಮೋ ಯೋ ಮಹಾಕಲ್ಪಃ ಕೂರ್ಮಕಲ್ಪಃ ಸ ವೈ ಸ್ಮೃತಃ ।
ಅಚೇತಾಸ್ತತ್ರ ಭಗವಾನ್ ಪುರಾಣಪುರುಷಾಸನೇ ॥ ೧೩೯ ॥

ಪ್ರಕೃತೇಶ್ಚ ಪರೋ ಯೋ ವೈ ತುರೀಯೋಽವ್ಯಯ ಏವ ಚ ।
ಶೂನ್ಯಭೂತಾತ್ತತೋ ಜಾತಃ ಪ್ರಚೇತಾ ಭಗವಾನ್ ಸ್ವಯಂ ॥ ೧೪೦ ॥

ತಸ್ಮಾಜ್ಜಾತೋ ಮಹಾನಬ್ಧಿಸ್ತತ್ರ ಸುಷ್ವಾಪ ಸ ಪ್ರಭುಃ ।
ನಾರಾಯಣ ಇತಿ ಖ್ಯಾತಃ ಸ ವೈ ಜಲಪತಿಃ ಸ್ವಯಂ ॥ ೧೪೧ ॥

ತದರ್ಧಾಚ್ಚ ಮಹಾಕೂರ್ಮಸ್ತತಃ ಶೇಷೋ ಮಹಾನಭೂತ್ ।
ತ್ರಿಧಾಽಭವತ್ಸ ವೈ ಶೇಷೋ ಭೂಮಾ ಶೇಷಶ್ಚ ಭೌಮನೀ ॥ ೧೪೨ ॥

ಭೂಮಾ ಸ ವೈ ವಿರಾಡ್ ಜ್ಞೇಯಃ ಶೇಷೋಪರಿ ಸ ಚಾಸ್ಥಿತಃ ।
ಭೌಮನೀ ಚ ಮಹಾಲಕ್ಷ್ಮೀಃ ಸಾ ಭೂಮ್ನೋ ಹೃದಿ ಸಂಸ್ಥಿತಾ ॥ ೧೪೩ ॥

---

೧೩೯. ಹತ್ತನೆಯದು ಕೂರ್ಮಮಹಾಕಲ್ಪ, ಈ ಕಲ್ಪದಲ್ಲಿ ಪುರಾಣಪುರುಷನ ಸ್ಥಾನದಲ್ಲಿ ಭಗವಂತನಾದ ವರುಣನು ಅಧಿದೇವತೆ.

೧೪೦. ಪ್ರಕೃತಿಗಿಂತಲೂ ಉತ್ಕೃಷ್ಟನೂ ನಾಶರಹಿತನೂ ತ್ರಿಗುಣಾತೀತನೂ ಶೂನ್ಯಸ್ವರೂಪನೂ ಆದ ಪುರುಷನಿಂದ ಪೂಜ್ಯನಾದ ವರುಣನು ಜನಿಸಿದನು.

೧೪೧. ಈ ವರುಣನಿಂದ ಮಹಾಸಮುದ್ರವು ಹುಟ್ಟಿತು. ಅನಂತರ ಈ ವರುಣನು ಅದರಲ್ಲಿ (ಸಮುದ್ರದಲ್ಲಿ) ಮಲಗಿ ನಿದ್ರಿಸಿದನು. ಜಲಾಧಿಪತಿಯಾದ, ಈ ವರುಣನು ಹೀಗೆ ನೀರನ್ನು ಆಶ್ರಯಿಸಿ ಮಲಗಿದುದರಿಂದ ಇವನಿಗೆ ನಾರಾಯಣ ನೆಂಬ ಹೆಸರು ಪ್ರಸಿದ್ಧವಾಯಿತು.

೧೪೨. ಈ ನಾರಾಯಣನ ಅರ್ಧಭಾಗದಿಂದ ಮಹಾಕೂರ್ಮವೂ, ಆ ಕೂರ್ಮದಿಂದ ಆದಿಶೇಷನೂ ಉಂಟಾದರು. ಅನಂತರ ಈ ಆದಿಶೇಷನು, ಭೂಮಾ, ಶೇಷ, ಭೌಮನೀ ಎಂದು ಮೂರು ರೂಪವನ್ನು ತಾಳಿದನು.

೧೪೩. ಈ ಮೂವರಲ್ಲಿ ಭೂಮಾ ಎಂಬವನೇ ವಿರಾಟ್ಪುರುಷನು. ಇವನು ಆ ಶೇಷನಮೇಲೆ ಕುಳಿತುಕೊಂಡನು. ಭೌಮನೀ ಎಂಬುವಳೇ ಮಹಾಲಕ್ಷ್ಮಿಯು, ಈ ಮಹಾಲಕ್ಷ್ಮಿಯು ಆ (ಭೂಮ) ವಿರಾಟ್ಪುರುಷನ ಹೃದಯದಲ್ಲಿ ನೆಲಸಿದಳು.

ಭೂಮ್ನೋ ಜಾತಃ ಸ ವೈ ಬ್ರಹ್ಮಾ ಸೃಷ್ಟಿಸ್ಥಿತಿವಿನಾಶಕಃ ।
ತ್ರಿಧಾ ಮೂರ್ತಿಃ ಸ ವೈ ಬ್ರಹ್ಮಾ ಕಲ್ಪೇಕಲ್ಪೇ ಕ್ರಮಾದಯಂ ॥ ೧೪೪ ॥

ವಟಂ ಸುಷುಪ್ತಭೂತಂ ಯತ್ಪುರಾಣಪುರುಷಾಸನಂ ।
ಯತ್ರ ಗತ್ವೇಂದ್ರಿಯಾಣ್ಯೇವ ತೃಪ್ತಿಂ ಪ್ರಾಪ್ಯ ಕ್ಷಯಂತಿ ವೈ ॥ ೧೪೫ ॥

ಅಹಂಕಾರಸ್ತದಾಗತ್ಯ ಚೈತನ್ಯಂ ಮನಸಿ ಸ್ಥಿತಂ ।
ವಂಚಯಿತ್ವಾ ಪುನರ್ಲೋಕಂ ಕರೋತಿ ಸ್ವಕಲೀಲಯಾ ॥ ೧೪೬ ॥

ತುರೀಯಶಕ್ತಿರ್ಯಾ ಜ್ಞೇಯಾ ಮಹಾಕಾಲೀ ಸನಾತನೀ ।
ಮಹಾಕಲ್ಪೈಶ್ಚ ತೈಃ ಸರ್ವೈಸ್ತದಂಗಂ ಶ್ರುತಿಭಿಃ ಸ್ಮೃತಂ ॥ ೧೪೭ ॥

---

೧೪೪. ಈ ಭೂಮ (ವಿರಾಟ್ಪುರುಷ) ನಿಂದ ಬ್ರಹ್ಮನು ಜನಿಸಿದನು. ಈ ಬ್ರಹ್ಮನೇ ಸೃಷ್ಟಿ, ಸ್ಥಿತಿ, ಲಯ ಈ ಮೂರು ಕಾರ್ಯಗಳನ್ನೆಸಗುವನಾಗಿ ಬ್ರಹ್ಮ ವಿಷ್ಣು ಮಹೇಶ್ವರ ಎಂಬ ಹೆಸರಿನಿಂದ ಪ್ರತಿಯೊಂದು ಕಲ್ಪದಲ್ಲಿಯೂ ಕ್ರಮವಾಗಿ ತ್ರಿಮೂರ್ತಿ ಸ್ವರೂಪವನ್ನು ತಾಳುವನು.

೧೪೫. ಪುರಾಣಪುರುಷನ ಸುಷುಪ್ತ್ಯವಸ್ಥೆಯಲ್ಲಿ ಅವನ ಆಸನವಾಗಿರುವ ವಟಪತ್ರವು ಅವನಲ್ಲಿ ಪ್ರವೇಶಿಸಿ ಆ ಇಂದ್ರಿಯಗಳೆಲ್ಲವೂ ತೃಪ್ತಿಹೊಂದಿ ಎಲ್ಲವೂ ನಾಶ ವಾಗುವುವು.

೧೪೬. ಆಗ ಅಹಂಕಾರವು ಬಂದು ವಿರಾಟ್ಪುರುಷನ ಮನಸ್ಸಿನಲ್ಲಿರುವ ಚೈತನ್ಯವನ್ನು ಮೋಸಗೊಳಿಸಿ, ತನ್ನ ಲೀಲೆಯಿಂದ ಪುನಃ ಲೋಕಸೃಷ್ಟಿಯನ್ನು ಮಾಡುವುದು.

೧೪೭. ನಾಶರಹಿತಳೂ ಸನಾತನಿಯೂ ಆದ ಮಹಾಕಾಲಿಯು ಅನಾದಿಶಕ್ತಿ ಸ್ವರೂಪಿಣಿಯೂ ಆಗಿರುವಳು ಈ ಮಹಾಕಾಲಿಯ ಅಂಗಗಳೆಲ್ಲವೂ ಮಹಾಕಲ್ಪ ಗಳಿಂದಲೂ ಮತ್ತು ವೇದಗಳಿಂದಲೂ ತುಂಬಿರುವುವು.

ನಮಸ್ತಸ್ಯೈ ಮಹಾಕಾಲ್ಯೈ ಮಮ ಮಾತ್ರೇ ನಮೋನಮಃ ।
ಯತಃ ಪುರಾಣಪುರುಷಾ ಭವಂತಿ ಚ ಲಯಂತಿ ಚ ॥ ೧೪೮ ॥

ದಶೈವ ಚ ಮಹಾಕಲ್ಪಾ ವ್ಯತೀತಾ ಇಹ ಭೋಃ ಸುರಾಃ ।
ಸಾಂಪ್ರತಂ ವರ್ತತೇ ಯೋ ವೈ ಮಹಾಕಲ್ಪೋ ಭವಿಷ್ಯಕಃ ॥ ೧೪೯ ॥

ತದುತ್ಪತ್ತಿಂ ಶೃಣುಧ್ವಂ ಭೋ ದೇವಾಃ ಸರ್ಷಿಗಣಾ ಮಮ ।
ಅಚಿಂತ್ಯಮಕ್ಷರಂ ಯತ್ತು ತುರೀಯಂ ಚ ಸದಾ ಸ್ಥಿತಂ ॥ ೧೫೦ ॥

ಯದ್ಗತ್ವಾ ನ ನಿವರ್ತಂತೇ ನರಾಸ್ತತ್ರೈವ ತತ್ಪದಂ ।
ಅನೇಕಸೃಷ್ಟಿರಚನಾಃ ಸಂತಿ ತಸ್ಯೈವ ಲೀಲಯಾ ॥ ೧೫೧ ॥

ತಸ್ಯಾಂತಂ ನ ವಿದುರ್ದೇವಾಃ ಕಥಂ ಜಾನಂತಿ ವೈ ನರಾಃ ।
ಭೂತೋಭೂತೋ ಮಹಾಕಲ್ಪೋ ದೃಷ್ಟೋ ವೇದೈಸ್ತದೀರಿತಃ ॥ ೧೫೨ ॥

---

೧೪೮. ಮಹಾಮಹಿಮಳಾದ ಕಾಳಿಕಾದೇವಿಯೆ! ನಿನ್ನಿಂದಲೇ ಪುರಾಣ ಪುರುಷರಾದ ದೇವತೆಗಳೆಲ್ಲರೂ ಉತ್ಪನ್ನರಾಗಿ, ನಿನ್ನಿಂದಲೇ ಲಯ ಹೊಂದುವರು. ಆದುದರಿಂದ ನಮ್ಮಮ್ಮಾ, ನಿನಗೆ ನಮಸ್ಕಾರ.

೧೪೯. ಎಲೈ ದೇವತೆಗಳಿರಾ! ಈವರೆಗೆ ಹತ್ತುಮಹಾಕಲ್ಪಗಳ ವಿಷಯ ಹೇಳಿ ಆಯಿತು. ಇನ್ನು ಭವಿಷ್ಯಮಹಾಕಲ್ಪ ವಿಚಾರ ಹೇಳಬೇಕಾಗಿರುವುದು.

೧೫೦-೧೫೧. ಋಷಿಗಣಗಳೊಡಗೂಡಿದ ದೇವತೆಗಳಿರಾ! ಈ ಭವಿಷ್ಯಕಲ್ಪದ ಉತ್ಪತ್ತಿಯನ್ನು ಹೇಳುವೆನು ಕೇಳಿರಿ. ಅಚಿಂತ್ಯನೂ, ಅಕ್ಷರನೂ (ನಾಶರಹಿತನೂ) ತುರೀಯನೂ (ಅನಾದ್ಯನಂತನೂ) ಆದ ಪರಮಾತ್ಮನ ಪಾದವನ್ನು ಭಜಿಸಿ ಮಾನವರು ಪುನರ್ಜನ್ಮವನ್ನು ಪಡೆಯದೆ ಇರುವಂಥ ಅನೇಕ ಸೃಷ್ಟಿರಚನೆಗಳುಳ್ಳ ಪರಮಾತ್ಮನ ಲೀಲೆಗಳು ಈ ಭವಿಷ್ಯಕಲ್ಪದಲ್ಲಿ ಉಕ್ತವಾಗಿರುವುವು.

೧೫೨. ಈ ಭವಿಷ್ಯಕಲ್ಪದ ಅಂತವು ದೇವತೆಗಳಿಗೇ ಗೊತ್ತಿಲ್ಲ. ಹೀಗಿರುವಾಗ ಮಾನವರು ಹೇಗೆ ತಾನೇ ತಿಳಿಯಬಲ್ಲರು. ಕಳೆದುಹೋದ ಮಹಾಕಲ್ಪಗಳೆಲ್ಲವೂ ವೇದಗಳಲ್ಲಿ ಉಕ್ತವಾಗಿವೆ.

ಭಾವ್ಯಾ ಯೇ ತು ಮಹಾಕಲ್ಪಾ ನ ವೈ ಜಾನಂತಿ ತೇ ಸುರಾ ।
ತ್ರಯಸ್ತ್ರಿಂಶನ್ಮಹಾಕಲ್ಪಾಃ ಕೈಶ್ಚಿದ್ವೇದೈರುದೀರಿತಾಃ ॥ ೧೫೩ ॥

ಅಷ್ಟಾದಶ ಮಹಾಕಲ್ಪಾಃ ಪೃಥಙ್ನಾಮ್ನೋಪವರ್ಣಿತಾಃ ।
ಏಕಾದಶ ಮಹಾಕಲ್ಪಾಃ ಕೈಶ್ಚಿತ್ಪ್ರೋಕ್ತಾಃ ಪುರಾತನೈಃ ॥ ೧೫೪ ॥

ಅತೋಽಹಂ ನಿಶ್ಚಯೇನಾದ್ಯ ಭಾವ್ಯಕಲ್ಪೇಷು ಭೋಃ ಸುರಾಃ ।
ವೇದಾನಾಂ ವಚನಂ ಸತ್ಯಂ ನಾನ್ಯಥಾ ಚ ಭವೇತ್ಕ್ವಚಿತ್ ॥ ೧೫೫ ॥

ತದವ್ಯಯಾತ್ಸಮುದ್ಭೂತೋ ರಾಧಾಕೃಷ್ಣಃ ಸನಾತನಃ ।
ಏಕೀಭೂತಂ ದ್ವಯೋರಂಗಂ ರಾಧಾಕೃಷ್ಣೋ ಬುಧೈಃ ಸ್ಮೃತಃ ॥ ೧೫೬ ॥

ಸಹಸ್ರಯುಗಪರ್ಯಂತಂ ಯತ್ತೇಪೇ ಪರಮಂ ತಪಃ ।
ತದಾ ಸ ಚ ದ್ವಿಧಾ ಜಾತೋ ರಾಧಾಕೃಷ್ಣಃ ಪೃಥಕ್ಪೃಥಕ್ ॥ ೧೫೭ ॥

---

೧೫೩. ಮುಂದೆ ನಡೆಯುವ ಮಹಾಕಲ್ಪಗಳ ವಿಷಯಗಳನ್ನು ದೇವತೆಗಳೇ ಅರಿಯರು. ವೇದಗಳಲ್ಲಿ ಉಕ್ತವಾಗಿರುವುದನ್ನು ನೋಡಿದರೆ ಮೂವತ್ತುಮೂರು ಮಹಾಕಲ್ಪಗಳು ಇರುವುವೆಂದು ತಿಳಿಯುವುದು.

೧೫೪. ಆದರೆ ಹದಿನೆಂಟು ಮಹಾಕಲ್ಪಗಳ ಹೆಸರು ಮಾತ್ರ ಪ್ರತ್ಯೇಕ ಪ್ರತ್ಯೇಕವಾಗಿ ವರ್ಣಿತವಾಗಿದೆ. ಕೆಲವರು ಪ್ರಾಚೀನರು ಹನ್ನೊಂದೇ ಮಹಾಕಲ್ಪಗಳೆಂದು ಹೇಳಿರುವರು.

೧೫೫. ಆದುದರಿಂದ ಎಲೈ ದೇವತೆಗಳಿರಾ! ಭವಿಷ್ಯಕಲ್ಪಗಳ ವಿಷಯದಲ್ಲಿ ಇಷ್ಟೇ ಎಂದು ಸರಿ ಎಂದು ಹೇಳಲು ಸಾಧ್ಯವಿಲ್ಲ. ವೇದಗಳ ವಚನವು ಸತ್ಯವೇ ಹೊರತು ಎಂದಿಗೂ ಸುಳ್ಳಾಗಲಾರದು.

೧೫೬. ನಾಶರಹಿತನಾದ ಆ ಪರಮಾತ್ಮನಿಂದ ಸನಾತನನಾದ ರಾಧಾಕೃಷ್ಣನೆಂಬುವನು ಜನಿಸಿದನು. ರಾಧೆ, ಮತ್ತು ಕೃಷ್ಣ ಇವರಿಬ್ಬರ ಶರೀರವೂ ಒಟ್ಟಾಗಿ ರಾಧಾಕೃಷ್ಣನೆಂದು ಪರಮಾತ್ಮನು ಅವತಾರ ಮಾಡಿದನೆಂದು ಪಂಡಿತರು ಹೇಳುವರು.

೧೫೭. ಈ ರಾಧಾಕೃಷ್ಣನು ಒಂದುಸಾವಿರ ಯುಗಗಳಕಾಲ ಉತ್ಕೃಷ್ಟವಾದ ತಪಸ್ಸನ್ನು ಮಾಡಿದನು. ಹೀಗೆ ತಪಸ್ಸನ್ನಾಚರಿಸಿದನಂತರ ಈ ಪರಮಾತ್ಮನು ರಾಧೆ ಮತ್ತು ಕೃಷ್ಣ ಎಂದು ಪ್ರತ್ಯೇಕವಾಗಿ ಪರಿಣಮಿಸಿದರು.

ಸಹಸ್ರಯುಗಪರ್ಯಂತಂ ತೇಪತುಸ್ತೌ ಪರಂ ತಪಃ ।
ತಯೋರಂಗಾತ್ಸಮುದ್ಭೂತಾ ಜ್ಯೋತ್ಸ್ನಾ ತತ್ತಮನಾಶಿನೀ ॥ ೧೫೮ ॥

ತಜ್ಜ್ಯೋತ್ಸ್ನಾಭಿಃ ಸಮುದ್ಭೂತಂ ದಿವ್ಯಂ ವೃಂದಾವನಂ ಶುಭಂ ।
ಏಕವಿಂಶತ್ಪ್ರಕೃತಯೋ ಯೋಜನೇಯೋಜನೇ ಸ್ಮೃತಾಃ ॥ ೧೫೯ ॥

ದಿವ್ಯಂ ವೃಂದಾವನಂ ಜಾತಂ ಚತುರಾಶೀತಿಸಂಮಿತೇ ।
ಕ್ರೋಶಾಯಾಮಂ ಮಹಾರಮ್ಯಂ ತಲ್ಲಿಂಗಂ ಶೃಣು ಮೇ ಪ್ರಭೋ॥೧೬೦॥

ಇಂದ್ರಿಯಪ್ರಕೃತೀನಾಂ ಚ ದಶಾನಾಂ ಗ್ರಾಮತದ್ದಶ ।
ಗೋಕುಲಂ ವಾರ್ಷಭಂ ನಾಂದಂ ಭಾಂಡೀರಂ ಮಾಥುರಂ ತಥಾ ॥೧೬೧॥

ವ್ರಜಂ ಚ ಯಾಮುನಂ ಮಾನ್ಯಂ ಶ್ರೇಯಸ್ಕಂ ಗೋಪಿಕಂ ಕ್ರಮಾತ್ ।
ಮಾತ್ರಾಭೂತದಶಭ್ಯಶ್ಚ ಪ್ರಕೃತಿಭ್ಯಃ ಸಮುದ್ಭವಂ ॥ ೧೬೨ ॥

---

೧೫೮. ಅನಂತರ ಈ ರಾಧಾ ಮತ್ತು ಕೃಷ್ಣ ಇವರಿಬ್ಬರೂ ಪುನಃ ಒಂದು ಸಾವಿರ ಯುಗಗಳಕಾಲ ಶ್ರೇಷ್ಠವಾದ ತಪಸ್ಸನ್ನಾಚರಿಸಿದರು. ಆಗ ಈ ರಾಧಾ ಮತ್ತು ಕೃಷ್ಣರ ಅವಯವಗಳಿಂದ ಅಂಧಕಾರವನ್ನು ನಾಶಮಾಡುವ ಚಂದ್ರಿಕೆ ಉಂಟಾಯಿತು.

೧೫೯. ಈ ಚಂದ್ರಿಕಾ ಸಮೂಹದಿಂದ ಶುಭಕರವಾದ ಬೃಂದಾವನವು ಉಂಟಾಯಿತು. ಈ ಬೃಂದಾವನದ ಪ್ರತಿಯೊಂದು ಯೋಜನದಲ್ಲಿಯೂ ಇಪ್ಪತ್ತೊಂದು ಪ್ರಕೃತಿಗಳು ಇರುವುವು.

೧೬೦. ಈ ಬೃಂದಾವನವು ಎಂಬತ್ತುನಾಲ್ಕು (ಕ್ರೋಶ) ಗಾವುದ ವಿಸ್ತಾರವಾಗಿದೆ. ಅಲ್ಲದೆ ಇದು ತುಂಬಾ ಸುಂದರವಾಗಿರುವುದು. ಇದರ ಉತ್ಪತ್ತಿವಿಧಾನವನ್ನು ಹೇಳುವೆನು ಕೇಳು ;

೧೬೧. ಇಂದ್ರಿಯ ಮತ್ತು ಪ್ರಕೃತಿಗಳು ಸೇರಿ ಒಟ್ಟು ಹತ್ತಕ್ಕೂ ಹತ್ತುಗ್ರಾಮಗಳು ಇರುವುವು. ಅವಾವುವೆಂದರೆ ಗೋಕುಲ, ವಾರ್ಷಭ, ನಾಂದ, ಭಾಂಡೀರ, ಮಾಥುರ,

೧೬೨. ವ್ರಜ, ಯಾಮುನ, ಮಾನ್ಯ, ಶ್ರೇಯಸ್ಕ, ಗೋಪಿಕ; ಈ ಹತ್ತೂ ಕ್ರಮವಾಗಿ ಇಂದ್ರಿಯ ಪ್ರಕೃತಿ ಇವುಗಳಿಂದ ಜನಿಸಿರುವುವು.

ತಥಾ ದಶವನಂ ರಮ್ಯಂ ತೇಷಾಂ ನಾಮಾನಿ ಮೇ ಶೃಣು ।
ವೃಂದಾವನಂ ಗೋಪವನಂ ಬಹುಲಾವನಮೇವ ಚ ॥ ೧೬೩ ॥

ಮಧುಶೃಂಗಂ ಕುಂಜವನಂ ವನಂ ದಧಿವನಂ ತಥಾ ।
ರಹಃಕ್ರೀಡಾವನಂ ರಮ್ಯಂ ವೇಣುಪದ್ಮವನಂ ಕ್ರಮಾತ್ ॥ ೧೬೪ ॥

ಮನಸಃ ಪ್ರಕೃತೇರ್ಜಾತೋ ಗಿರಿಗೋರ್ವರ್ಧನೋ ಮಹಾನ್ ।
ದಿವ್ಯಂ ವೃಂದಾವನಂ ದೃಷ್ಟ್ವಾ ಪರಮಾನಂದಮಾಪ ಸಃ ॥ ೧೬೫ ॥

ಕೃಷ್ಣಾದುದಭವನ್ಗೋಪಾಸ್ತಿಸ್ರಃ ಕೋಟ್ಯೋ ಗುಣಾತ್ಮಕಾಃ ।
ಶ್ರೀದಾಮಾದ್ಯಾಃ ಸಾತ್ವಿಕಾಶ್ಚ ರಾಜಸಾ ಅರ್ಜುನಾದಯಃ ॥ ೧೬೬ ॥

ಕಂಸಾದ್ಯಾಸ್ತಾಮಸಾ ಜಾತಾ ದಿವ್ಯಲೀಲಾಪ್ರಕಾರಿಣಃ ।
ರಾಧಾಂಗಾದುದ್ಭವಾ ಗೋಪ್ಯಸ್ತಿಸ್ರಃ ಕೋಟ್ಯಸ್ತಥಾ ಕ್ರಮಾತ್ ॥ ೧೬೭ ॥

---

೧೬೩-೧೬೪. ಸೂಕ್ಷ್ಮಭೂತವಾದ ಹತ್ತು ಪ್ರಕೃತಿಗಳಿಂದ ಇದೇರೀತಿ ಸುಂದರವಾದ ಹತ್ತು ವನಗಳು ಏರ್ಪಟ್ಟಿರುವುವು. ಅವುಗಳ ಹೆಸರನ್ನು ಹೇಳುವೆನು ಕೇಳು; ವೃಂದಾವನ, ಗೋಪವನ, ಮಧುಶೃಂಗವನ, ಬಹುಲಾವನ, ಕುಂಜವನ, ದಧಿವನ, ರಹಃಕ್ರೀಡಾವನ, ರಮ್ಯವನ, ವೇಣುವನ ಮತ್ತು ಪದ್ಮವನ ಎಂಬಿವೇ ಕ್ರಮವಾಗಿ ಆ ಹತ್ತು ವನಗಳು.

೧೬೫. ಮನಸ್ಸೆಂಬ ಪ್ರಕೃತಿಯಿಂದ ; ದಿವ್ಯವೂ ದೊಡ್ಡದೂ ಆದ ಗೋವರ್ಧನಗಿರಿಯುಂಟಾಯಿತು. ಈ ಗೋವರ್ಧನಗಿರಿಯು, ತನ್ನ ಬಳಿ ಸುಂದರವಾದ ಬೃಂದಾವನವನ್ನು ನೋಡಿ ತುಂಬಾ ಸಂತೋಷಹೊಂದಿತು.

೧೬೬. ಶ್ರೀ ಕೃಷ್ಣನಿಂದ ಗುಣಾತ್ಮಕರಾದ ಗೋಪಾಲಕರು ಮೂರುಕೋಟಿ ಮಂದಿ ಜನಿಸಿದರು. ( ಇಲ್ಲಿ ಶ್ರೀರಾಮ ಎಂದರೆ ಬಲರಾಮನೆಂದು ತಿಳಿಯಬೇಕು.) ಇವರಲ್ಲಿ ಶ್ರೀ ರಾಮನೇ ಮೊದಲಾದವರು ಸತ್ವಗುಣಗಳಿಂದ ಕೂಡಿದವರು ಅರ್ಜುನಾದಿಗಳು ರಜೋಗುಣದಿಂದ ಕೂಡಿದವರು.

೧೬೭. ಕಂಸನೇ ಮೊದಲಾದವರು ತಮೋಗುಣವಿಶಿಷ್ಟರು. ಇವರೆಲ್ಲರೂ ತಮ್ಮತಮ್ಮ ದಿವ್ಯಲೀಲೆಯನ್ನು ಪ್ರಕಟಪಡಿಸಿದರು. ಹೀಗೆಯೇ ರಾಧಾದೇವಿಯ ಅವಯವಗಳಿಂದ ಇದೇ ರೀತಿಯಲ್ಲಿ ಮೂರುಕೋಟಿ ಗೋಪಿಕಾಸ್ತ್ರೀಯರುಂಟಾದರು.

ಲಲಿತಾದ್ಯಾಃ ಸಾತ್ವಿಕಾಶ್ಚ ಕುಬ್ಜಾದ್ಯಾ ರಾಜಸಾಸ್ತಥಾ ।
ತಾಮಸಾಃ ಪೂತನಾದ್ಯಾಶ್ಚ ನಾನಾಹೇಲಾಚರಿತ್ರಕಾಃ ॥ ೧೬೮ ॥

ಸಹಸ್ರಯುಗಪರ್ಯಂತಂ ತೇಷಾಂ ಲೀಲಾ ಬಭೂವ ಹ ।
ತತಸ್ತೌ ತಾನ್ಸಮಾಹೃತ್ಯ ತೇಪತುಶ್ಚ ಪುನಸ್ತಪಃ ॥ ೧೬೯ ॥

ದ್ವಿಧಾ ಜಾತಃ ಸ ವೈ ಕೃಷ್ಣೋ ರಾಧಾ ದೇವೀ ತಥಾ ದ್ವಿಧಾ ।
ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್ ॥ ೧೭೦ ॥

ಪೂರ್ವಾರ್ಧಾತ್ಸ ಚ ವೈ ಜಾತಃ ಪರಾರ್ಧಾತ್ಕೃಷ್ಣ ಏವ ಹಿ ।
ಏಕಶೀರ್ಷಾ ತ್ರಿನೇತ್ರಾ ಚ ದ್ವಿಪದೀ ದ್ವಿಸಹಸ್ರಿಕಾ ॥ ೧೭೧ ॥

---

೧೬೮. ಇವರಲ್ಲಿಯೂ ಲಲಿತಾ ಮುಂತಾದವರು ಸಾತ್ವಿಕೆಯರು. ಕುಬ್ಜೆ ಮೊದಲಾದವರು ರಾಜಸೆಯರು. ಪೂತನಿಯೇ ಮೊದಲಾದವರು ತಮೋಗುಣ ಶಾಲಿನಿಯರು. ಇವರೂ ಸಹ ಅನೇಕ ಲೀಲಾವ್ಯಾಪಾರಗಳನ್ನು ತೋರಿಸಿದರು.

೧೬೯. ಹೀಗೆ ರಾಧೆ ಕೃಷ್ಣ ಇವರಿಂದ ಜನಿಸಿದ ಆರುಕೋಟಿ ಗೋಪಗೋಪಿಯರೆಲ್ಲರೂ ಒಂದುಸಾವಿರ ಯುಗಗಳವರೆಗೆ ತಮ್ಮ ಲೀಲೆಯನ್ನು ಪ್ರಕಟಪಡಿಸಿ ಸಂತೋಷದಿಂದ ವಿಹಾರಮಾಡಿದರು. ಅನಂತರ ಈ ರಾಧಾ, ಕೃಷ್ಣ ಇಬ್ಬರೂ ಅವರನ್ನೆಲ್ಲಾ ಉಪಸಂಹರಿಸಿ, ಪುನಃ ತಪಸ್ಸುಮಾಡತೊಡಗಿದರು.

೧೭೦. ಅನಂತರ ಕೃಷ್ಣನು ತಾನೊಬ್ಬನೇ ಎರಡು ವ್ಯಕ್ತಿಯಾದನು. ರಾಧೆಯೂ ಸಹ ಅದೇರೀತಿ ಎರಡು ವ್ಯಕ್ತಿಯಾಗಿ ಪರಿಣಮಿಸಿದಳು. ಅವರಲ್ಲಿ ಕೃಷ್ಣನು ತನ್ನ ಶರೀರದ ಪೂರ್ವಾರ್ಧದಿಂದ, ಸಾವಿರತಲೆ, ಸಾವಿರಕಣ್ಣುಗಳು, ಸಾವಿರಕಾಲುಗಳು ಇವುಗಳಿಂದ ಕೂಡಿ ಪುರುಷನೆಂದೂ,

೧೭೧. ಉಳಿದ ಅರ್ಧದಿಂದ ಕೃಷ್ಣನೆಂದೂ, ಎರಡು ಬಗೆಯಾದನು. ರಾಧಾದೇವಿಯು ತನ್ನ ಪೂರ್ವಾರ್ಧದಿಂದ, ಒಂದುತಲೆ, ಮೂರುಕಣ್ಣುಗಳು, ಎರಡುಕಾಲು, ಮತ್ತು ಎರಡುಸಾವಿರ ಬಾಹುಗಳು ಇವುಗಳಿಂದ ಕೂಡಿದವಳಾಗಿ ಪ್ರಕೃತಿಯೆಂದೂ,

ಪೂರ್ವಾರ್ಧಾತ್ಸಾ ತು ವೈ ಜಾತಾ ರಾಧಾ ದೇವೀ ಪರಾರ್ಧತಃ ।
ಪುರುಷಃ ಪ್ರಕೃತಿಶ್ಚೋಭೌ ತೇಪತುಃ ಪರಮಂ ತಪಃ ॥ ೧೭೨ ॥

ಸಹಸ್ರಯುಗಪರ್ಯಂತಂ ದಿವ್ಯೇ ವೃಂದಾವನೇ ಶುಭೇ ।
ತಪಸಾ ವವೃಧಾತೇ ತೌ ನಾಮ್ನಾನಂತೋ ಹ್ಯನಂತಕಾ ॥ ೧೭೩ ॥

ಏಕೀಭೂತೌ ತು ತತ್ಪಶ್ಚಾತ್ಸಂಸ್ಥಿತೌ ಮೈಥುನೇಚ್ಛಯಾ ।
ತದಂಗರೋಮಕೂಪೇಷು ಬ್ರಹ್ಮಾಂಡಾಃ ಕೋಟಿಶೋಽಭವನ್ ॥೧೭೪॥

ಕೋಟ್ಯರ್ಧಯೋಜನಾಯಾಮಾಸ್ತೇ ತು ಸರ್ವೇ ಪೃಥಕ್ಪೃಥಕ್ ।
ಹೃದಿ ರೋಮಸಮುದ್ಭೂತೋ ಬ್ರಹ್ಮಾಂಡೋಽಯಂ ಚ ಭೋಃ ಸುರಾಃ॥

ಬ್ರಹ್ಮಾಂಡಾದುದ್ಭವೋ ಬ್ರಹ್ಮಾ ಪದ್ಮಪುಷ್ಪೇ ಸಮಾಸ್ಥಿತಃ ।
ಸ ಪದ್ಮೋ ಯೋಜನಾಯಾಮೋ ಭೂಮಿಮಂಡಲಸಂಸ್ಥಿತಃ ॥ ೧೭೬ ॥

---

೧೭೨-೧೭೩. ಉಳಿದ ಅರ್ಧದೇಹದಿಂದ ರಾಧಾದೇವಿಯೆಂದೂ ಎರಡು ಬಗೆಯಾದಳು. ಈರೀತಿ ರಾಧಾ ಮತ್ತು ಕೃಷ್ಣರ ದೇಹಾರ್ಧಸಂಜಾತರಾದ ಪ್ರಕೃತಿ ಮತ್ತು ಪುರುಷ ಇವರಿಬ್ಬರೂ, ದಿವ್ಯವೂ ಶುಭಕರವೂ ಆದ ಬೃಂದಾವನದಲ್ಲಿ ಸಾವಿರ ಯುಗಗಳವರೆಗೆ ಪುನಃ ತಪಸ್ಸುಮಾಡಿದರು. ಈ ತಪಸ್ಸಿನಿಂದ ಇವರಿಬ್ಬರೂ ಅನಂತ ಮತ್ತು ಅನಂತಿಕಾ ಎಂಬ ಹೆಸರುಳ್ಳವರಾಗಿ ಪರಿಣಮಿಸಿ ಅಭಿವೃದ್ಧಿಹೊಂದಿದರು.

೧೭೪. ಅನಂತರ (ಪ್ರಕೃತಿ ಮತ್ತು ಪುರುಷ, ರಾಧಾಕೃಷ್ಣ) ; ಅನಂತಿಕಾ ಅನಂತ ; ಜೋಡಿಗಳು ಮೈಥುನಾಪೇಕ್ಷೆಯಿಂದ ಪುನಃ ಒಂದಾದರು. ಆಗ ಇವರ ಅಂಗದ ರೋಮಕೂಪಗಳಲ್ಲಿ ಕೋಟ್ಯಂತರ ಬ್ರಹ್ಮಾಂಡಗಳುಂಟಾದುವು.

೧೭೫. ಈ ಎಲ್ಲ ಬ್ರಹ್ಮಾಂಡಗಳೂ ಪ್ರತ್ಯೇಕಪ್ರತ್ಯೇಕವಾಗಿ ಅರ್ಧಕೋಟಿ ಯೋಜನವಿಸ್ತಾರವಾಗಿದ್ದುವು. ಈ ವಿಶಾಲ ಬ್ರಹ್ಮಾಂಡವು ಹೃದಯದ ರೋಮದಲ್ಲಿ ಉಂಟಾಯಿತು.

೧೭೬. ಎಲೈ ದೇವತೆಗಳಿರಾ ! ಈ ಬ್ರಹ್ಮಾಂಡದಿಂದ ಬ್ರಹ್ಮನು ಜನಿಸಿ ಪದ್ಮ ಪುಷ್ಪದಲ್ಲಿ ಕುಳಿತುಕೊಂಡನು. ಈ ಪದ್ಮವು ಭೂಮಂಡಲದಲ್ಲಿ ಒಂದುಯೋಜನ ವಿಶಾಲವಾಗಿರುವುದು.

ಯತೋ ಜಾತಂ ವಿಧೇಃ ಪದ್ಮಂ ತದ್ವೈ ಪದ್ಮಸರೋವರಂ ।
ಪ್ರಸಿದ್ಧಂ ಪುಷ್ಕರಕ್ಷೇತ್ರಂ ತತ್ಪದ್ಮಸರಸಂ ಸುರಾಃ ॥ ೧೭೭ ॥

ವಿಸ್ಮಿತಃ ಸ ತದಾ ಬ್ರಹ್ಮಾ ನರರೂಪಶ್ಚತುರ್ಮುಖಃ ।
ನಾಲೇ ನಾಲೇ ಗತೋಽಸೌ ವೈ ದಿವ್ಯಂ ಜಾತಂ ಶತಂ ಸಮಾಃ ॥ ೧೭೮ ॥

ನಾಂತಂ ಜಗಾಮ ಪದ್ಮಸ್ಯ ಪುನರ್ಬ್ರಹ್ಮಾ ಸ ಚಾಗತಃ ।
ಮಾಯಯಾ ಮೋಹಿತಸ್ತತ್ರ ರುರೋದ ಬಹುಧಾ ತದಾ ॥ ೧೭೯ ॥

ರೋದನಾದ್ರುದ್ರ ಉತ್ಪನ್ನಃ ಸ ಚ ತತ್ಕ್ಷೇಮಕಾರಕಃ ।
ಕಿಂ ರೋದಿಷಿ ಮಹಾಭಾಗ ತ್ವದೀಶೋ ಹೃದಯೇ ತವ ॥ ೧೮೦ ॥

---

೧೭೭. ಬ್ರಹ್ಮನಿಗೆ ಆಶ್ರಯವಾದ ಈ ಪದ್ಮವು ಹುಟ್ಟಿದಸ್ಥಾನವು ಪದ್ಮ ಸರೋವರವೆನಿಸಿತು. ಈ ಪದ್ಮಸರಸ್ಸನ್ನೇ ಪುಷ್ಕರಕ್ಷೇತ್ರವೆಂದು ದೇವತೆಗಳು ವ್ಯವಹರಿಸಿದರು.

೧೭೮. ಈ ಪದ್ಮವು ಯೋಜನ ವಿಸ್ತಾರವಾಗಿದ್ದುದರಿಂದ ಮನುಷ್ಯರೂಪನ್ನು ಧರಿಸಿರುವ, ಚತುರ್ಮುಖಬ್ರಹ್ಮನು ಒಂದುದಿನ ಆಶ್ಚರ್ಯದಿಂದ, ಆ ಕಮಲದ ಒಂದೊಂದು ನಾಳದಲ್ಲಿಯೂ ಪ್ರವೇಶಮಾಡಿದನು. ಹೀಗೆ ಅವನು ಪ್ರವೇಶಮಾಡಿ ದೇವಮಾನದ ನೂರುವರ್ಷಗಳು ಕಳೆದುವು;

೧೭೯. ಆದರೂ ಆ ಪದ್ಮದಕೊನೆಯು ಸಿಕ್ಕಲೇಇಲ್ಲ. ಆಗ ಬ್ರಹ್ಮನು ಪುನಃ ಅಲ್ಲಿಂದ ಹಿಂದಿರುಗಿದನು. ಹೀಗೆ ಬ್ರಹ್ಮನು ನಿರಾಶನಾಗಿ ಮಾಯೆಯಿಂದ ಮೋಹ ಗೊಂಡು ರೋದನಮಾಡತೊಡಗಿದನು.

೧೮೦. ಈ ರೋದನ ಧ್ವನಿ ಕೇಳಿ ರುದ್ರನು ಬಂದು ಆ ಬ್ರಹ್ಮನ ಕ್ಷೇಮವನ್ನು ವಿಚಾರಿಸುವವನಾಗಿ ಬ್ರಹ್ಮನನ್ನು ಕುರಿತು "ಎಲೈ ಮಹಾಭಾಗನೇ! ಏಕೆ ರೋದಿಸುತ್ತಿರುವೆ; ನಿನ್ನ ಸ್ವಾಮಿಯು ನಿನ್ನ ಹೃದಯದಲ್ಲಿಯೇ ಅಡಗಿರುವನು ಅವನನ್ನು ಧ್ಯಾನಿಸು" ಎಂದನು.

ಇತಿ ಶ್ರುತ್ವಾ ವಚಸ್ತಸ್ಯ ಬ್ರಹ್ಮಾ ಲೋಕಪಿತಾಮಹಃ ।
ಸಮಾಧಿಭೂತೋ ಹೃದಯೇ ಚಿರಂ ತೇಪೇ ಸ್ವಕೇಚ್ಛಯಾ ॥ ೧೮೧ ॥

ದಿವ್ಯವರ್ಷಶತಾಬ್ದೇ ತು ಪ್ರಾದುರ್ಭೂತೋ ಹರಿಃ ಸ್ವಯಂ ।
ವಚನಂ ಪ್ರಾಹ ಭಗವಾನ್ಮೇಘಗಂಭೀರಯಾ ಗಿರಾ ॥ ೧೮೨ ॥

ಕರ್ಮಭೂಮಿರಿಯಂ ಬ್ರಹ್ಮಞ್ಜೀವಾಂತಾ ಜೀವಕಾರಿಣೀ ।
ಸಹಸ್ರಯೋಜನಾಯಾಮಾ ವಿಶ್ವಸ್ಮಿನ್ಭೂಮಿಮಂಡಲೇ ॥ ೧೮೩ ॥

ಹಿಮಾದ್ರಿರುತ್ತರೇ ತಸ್ಯಾಃ ಪೂರ್ವೇಽಬ್ಧಿಶ್ಚ ಮಹೋದಧಿಃ ।
ರತ್ನಾಕರಃ ಪಶ್ಚಿಮೇಽಬ್ಧಿರ್ದಕ್ಷಿಣೇ ವಡವಾಬ್ಧಿಕಃ ॥ ೧೮೪ ॥

ಅತಃ ಸರ್ವೇ ಭವಿಷ್ಯಂತಿ ಲೋಕಾಶ್ಚೋರ್ಧ್ವಂ ತಥಾ ಹ್ಯಧಃ ।
ಕರ್ಮಭೂಮೇರ್ಮಧ್ಯಭೂತಃ ಪುಷ್ಕರೋಽಯಂ ಸನಾತನಃ ॥ ೧೮೫ ॥

---

೧೮೧ ಆಗ ಲೋಕಪಿತಾಮಹನಾದ ಬ್ರಹ್ಮನು ಆ ಮಾತನ್ನು ಕೇಳಿ ತನ್ನ ಹೃದಯದಲ್ಲಿ ಸಮಾಧಿಯೋಗವನ್ನವಲಂಬಿಸಿ ಬಹಳಕಾಲ ಸ್ವಂತ ಇಚ್ಛೆಯಿಂದ ತಪಸ್ಸುಮಾಡಿದನು.

೧೮೨. ಹೀಗೆ ಬ್ರಹ್ಮನು ದೇವಮಾನದ ನೂರುವರ್ಷಗಳಕಾಲ ತಪಸ್ಸು ಮಾಡಿದಮೇಲೆ, ಭಗವಂತನಾದ ಮಹಾವಿಷ್ಣುವು ತಾನೇ ಪ್ರತ್ಯಕ್ಷನಾಗಿ, ಆ ಬ್ರಹ್ಮನನ್ನು ಕುರಿತು, ಮೇಘದಂತೆ ಗಂಭೀರವಾದ ಧ್ವನಿಯಿಂದ ಹೀಗೆಂದನು.

೧೮೩. "ಎಲೈ ಬ್ರಹ್ಮನೇ! ಇದು ಕರ್ಮಭೂಮಿ; ಇಲ್ಲಿ ಜೀವರಾಶಿಗಳು ಜನಿಸಿ ಹಲವುಕಾಲ ಬದುಕಿ, ಕೊನೆಗೆ ಸಾಯುವುವು. ವಿಶ್ವತೋಮುಖವಾದ ಭೂಮಂಡಲದಲ್ಲಿ ಈ ಕರ್ಮಭೂಮಿಯು ಸಾವಿರಯೋಜನ ವಿಸ್ತಾರವಾಗಿದೆ.

೧೮೪. ಈ ಕರ್ಮಭೂಮಿಯ ಉತ್ತರದಿಕ್ಕಿನಲ್ಲಿ ಹಿಮಾಚಲಪರ್ವತವೂ, ಪೂರ್ವದಲ್ಲಿ ಮಹೋದಧಿ ಎಂಬ ಸಮುದ್ರವೂ, ಪಶ್ಚಿಮದಲ್ಲಿ ರತ್ನಾಕರವೆಂಬ ಸಮುದ್ರವೂ, ದಕ್ಷಿಣದಲ್ಲಿ ಬಡಬಾಬ್ಧಿ ಎಂಬ ಸಮುದ್ರವೂ ಇರುವುವು.

೧೮೫. ಈ ಕರ್ಮಭೂಮಿಯ ಮೇಲ್ಗಡೆಗೆ ಊರ್ಧ್ವಲೋಕಗಳೂ, ಮತ್ತು ಕೆಳಗಡೆಗೆ ಅಧೋಲೋಕಗಳೂ ಇರುವುವು. ಸನಾತನವಾದ ಈ ಪುಷ್ಕರಕ್ಷೇತ್ರವು ಕರ್ಮಭೂಮಿಯ ಮಧ್ಯದಲ್ಲಿರುವುದು.

ಮತ್ತೋ ವೇದಾನ್ಸಮಾಪ್ಯ ಕರಿಷ್ಯತಿ ಮಖಂ ಶುಭಂ ।
ಯಜ್ಞಾದ್ದೇವಾ ಭವಿಷ್ಯಂತಿ ತ್ರಿಧಾಭೂತಾ ಗುಣತ್ರಯಾತ್ ॥ ೧೮೬ ॥

ಸಿದ್ಧಾ ವಿದ್ಯಾಧರಾಶ್ಚೈವ ಚಾರಣಾಃ ಸಾತ್ವಿಕಾಸ್ತ್ರಿಧಾ ।
ಗಂಧರ್ವಯಕ್ಷರಕ್ಷಾಂಸಿ ರಾಜಸಾ ಗಿರಿಸಂಸ್ಥಿತಾಃ ॥ ೧೮೭ ॥

ಪಿಶಾಚಗುಹ್ಯಕಾ ಭೂತಾಸ್ತಾಮಸಾ ಗಾಮಿನೋಽಹ್ಯಧಃ ।
ತಥಾ ಸ್ವಧಾಮಯಾ ಯಜ್ಞಾಸ್ತ್ರಿಧಾ ಪಿತೃಗಣಾ ವಿಧೇ ॥ ೧೮೮ ॥

ಭವಿಷ್ಯಂತಿ ಸುರೈ ರಮ್ಯಾ ವಿಮಾನಸದೃಶಾಶ್ಚ ಖೇ ।
ಖೇಚರಾ ಗೌರವರ್ಣಾಶ್ಚ ಶ್ಯಾಮಾಸ್ತೇ ಸಾತ್ವಿಕಾಃ ಸ್ಮೃತಾಃ ॥ ೧೮೯ ॥

---

೧೮೬. ನೀನು ನನ್ನಮೂಲಕ ವೇದಗಳನ್ನು ಸಂಪಾದಿಸಿ ಆ ವೇದಗಳ ಸಹಾಯದಿಂದ ವೇದೋಕ್ತವಾದ ಶುಭಕರ ಯಾಗಗಳನ್ನು ಮಾಡುತ್ತೀ. ಈ ಯಜ್ಞದಿಂದ ದೇವತೆಗಳುಂಟಾಗುವರು. ಅನಂತರ ಈ ದೇವತೆಗಳು ಸತ್ವ, ರಜಸ್ಸು, ತಮಸ್ಸು ಎಂಬ ಮೂರುಗುಣಗಳನ್ನಾಶ್ರಯಿಸಿ, ಸಾತ್ವಿಕರು, ರಾಜಸರು, ಮತ್ತು ತಾಮಸರು ಎಂದು ಮೂರುವಿಧವಾಗುತ್ತಾರೆ.

೧೮೭ ದೇವಗಣಗಳಲ್ಲಿ ಸಿದ್ಧರು, ವಿಧ್ಯಾಧರರು, ಮತ್ತು ಚಾರಣರು ಎಂಬ ಮೂರುವರ್ಗದವರು ಸಾತ್ವಿಕರು. ಗಂಧರ್ವರು, ಯಕ್ಷರು, ಮತ್ತು ರಾಕ್ಷಸರೆಂಬ ಮೂರು ವಿಧದವರು ರಜೋಗುಣ ಪ್ರಧಾನರಾದ ದೇವತೆಗಳು. ಇವರು ಬೆಟ್ಟ ಗುಡ್ಡಗಳಲ್ಲಿ ವಾಸಿಸುವರು.

೧೮೮. ಪಿಶಾಚರು, ಗುಹ್ಯಕರು, ಭೂತಗಳು ಎಂಬ ಮೂರುಗುಂಪು ತಮೋಗುಣಪ್ರಧಾನರಾದ ದೇವತೆಗಳು. ಇವರು ಅಧೋಲೋಕದಲ್ಲಿ ವಾಸಿಸುವರು. ಇದೇ ರೀತಿ, ಸ್ವಧಾಕಾರಮಯವಾದ ಯಜ್ಞಗಳಿಂದ ಮೂರು ವಿಧವಾದ ಪಿತೃಗಣ ಗಳುಂಟಾಗುವರು.

೧೮೯. ಎಲೈ ಬ್ರಹ್ಮನೇ! ಈ ಪಿತೃಗಣಗಳು, ದೇವತೆಗಳಿಗಿಂತ ಅತ್ಯಂತ ಮನೋಹರರಾಗಿ ಕಾಣುವರು. ಇವರು ಅಂತರಿಕ್ಷದಲ್ಲಿ ವಿಮಾನಸ್ವರೂಪರಾಗಿ ಇರುವರು. ಈ ಅಂತರಿಕ್ಷ ಸಂಚಾರಿಗಳಲ್ಲಿ ಶುಭ್ರ ವರ್ಣವುಳ್ಳವರೂ ಕಪ್ಪುಬಣ್ಣ ವುಳ್ಳವರೂ ಸಹ ಸಾತ್ವಿಕರಾದ ಪಿತೃ, ಗಣಗಳೆನಿಸುವರು.

ಗಿರಿದ್ವೀಪಮಯಾ ರಮ್ಯಾಃ ಸರೋರೂಪಾಶ್ಚ ರಾಜಸಾಃ ।
ಭೂಚರಾಸ್ತೇ ಭವಿಷ್ಯಂತಿ ತ್ರಿಧಾ ಪಿತೃಗಣಾ ವಿಧೇ ॥ ೧೯೦ ॥

ಬಿಲೇತಲಮಯಾ ಯೇ ತು ನಾರಕಾ ಯಾತನಾಮಯಾಃ ।
ತಾಮಸಾಸ್ತೇ ಭವಿಷ್ಯಂತಿ ಪಿತರೋಽಧೋಮಹೀತಲೇ ॥ ೧೯೧ ॥

ವ್ಯಯಭೂತಾಶ್ಚ ತೇ ಲೋಕಾ ವೃದ್ಧಾ ಮಧ್ಯಾಃ ಕ್ಷಯಾಃ ಕ್ರಮಾತ್ ।
ಇಯಂ ಭೂಮಿರ್ಮಹಾಭಾಗಾ ಸರ್ವದಾ ಚ ಸನಾತನೀ ॥ ೧೯೨ ॥

ಮೇರುರ್ವೈ ಚ ಸಮೇರುಶ್ಚ ದ್ವೀಪಾಶ್ಚಾಸಂಸ್ತಥಾ ನ ಹಿ ।
ಇಲಾವರ್ತಾದಿಖಂಡಾಶ್ಚ ಸಂತಿ ನೈವ ಕ್ವಚಿತ್ ಕ್ವಚಿತ್ ॥ ೧೯೩ ॥

---

೧೯೦. ಮೂರು ಪಿತೃಗಣಗಳೂ ಬೆಟ್ಟ, ದ್ವೀಪ, ಸರೋವರ ಮುಂತಾದುವುಗಳ ರೂಪದಿಂದ ಮನೋಹರರಾಗಿರುವರು. ರಜೋಗುಣವಿಶಿಷ್ಟರಾದ ಇವರು ಭೂಮಿಯ ಮೇಲೆ ನಿವಾಸಮಾಡುವರು.

೧೯೧. ಎಲೈ ಬ್ರಹ್ಮನೇ! ಬಿಲೇತಳ (ಪಾತಾಳ) ಮಯರಾಗಿ, ಘೋರ ಯಾತನೆಗಳನ್ನುಂಟುಮಾಡುವ ನರಕಗಳು, ತಮೋಗುಣವಿಷ್ಟರಾದ ಪಿತೃಗಣಗಳು ಇವರು ಭೂಲೋಕದ ಕೆಳಭಾಗದಲ್ಲಿ ಪಾತಾಳಲೋಕದಲ್ಲಿ ವಾಸಿಸುವರು.

೧೯೨. ಎಲೈ ಮಹಾತ್ಮನೇ! ಈ ದೇವ, ರಾಕ್ಷಸ, ಪಿತೃರೂಪರಾದ ಈ ಜನಗಳೆಲ್ಲರೂ ನಾಶಹೊಂದುವರು. ಇವರು ಕ್ರಮವಾಗಿ ವೃದ್ಧರು, ಮಧ್ಯರು, ಮತ್ತು ಕ್ಷಯಿಷ್ಣುಗಳು ಎಂದು ಮೂರುವಿಧ. ಕಾಲಕ್ರಮದಲ್ಲಿ ದೇವ, ರಾಕ್ಷಸ, ಪಿತೃಗಣಗಳೂ ವ್ಯಯಹೊಂದುವರು. ಆದರೆ ಪೂಜ್ಯವಾದ ಭೂಮಿಯು ಮಾತ್ರ ಶಾಶ್ವತವಾದುದು. ಮತ್ತು ಸನಾತನ ಕಾಲದಿಂದಲೂ ಇರುವುದು.

೧೯೩. ಮೇರು ಮತ್ತು ಸಮೇರು ಮೊದಲಾದ ಪರ್ವತಗಳೂ, ಜಂಬೂ ಪ್ಲಕ್ಷಾದಿ ದ್ವೀಪಗಳೂ, ಇಲಾವರ್ತಾದಿ ಖಂಡಗಳೂ ಸಹ ಶಾಶ್ವತವಾಗಿರಲಾರವು. ಎಲ್ಲೋ ಕೆಲಕೆಲವು ಕಾಲಮಾತ್ರ ಇರುವುವು.

ಯೇ ತು ತಾರಾಮಯಾ ಲೋಕಾ ವಿಮಾನಸದೃಶಾ ವಿಧೇ ।
ಸ್ವೇಚ್ಛಯಾ ಚ ಚರಿಷ್ಯಂತಿ ರಕ್ಷಿತಾ ಯಜ್ಞಕರ್ಮಣಾ ॥ ೧೯೪ ॥

ಯಜ್ಞೋ ನಾಸ್ತಿ ಯದಾ ಭೂಮೌ ತದಾ ತೇ ಭಗಣಾ ವಿಧೇ ।
ವಿಘ್ನಭೂತಾಶ್ಚರಿಷ್ಯಂತಿ ನಿತ್ಯವಕ್ರಾತಿಚಾರಿಣಃ ॥ ೧೯೫ ॥

ಕರ್ಮಭೂಮಿಶ್ಚ ಗೌರ್ಜ್ಞೇಯಾ ಶ್ರುತಿರೂಪಾ ಜಗನ್ಮಯೀ ।
ಯಸ್ತಾಂ ಪಾತಿ ಚ ಭೋ ಬ್ರಹ್ಮನ್ಸ ಗೋಪ ಇತಿ ವಿಶ್ರುತಃ ॥ ೧೯೬ ॥

ಗೋಪಶಕ್ತಿಃ ಸ ವೈ ಗೋಪೋ ಗೋಪೀನಾಮರ್ಚಕೋ ಹರಿಃ ।
ಕೋಟಿಕೋಟಿಸಹಸ್ರಾಶ್ಚ ಸರ್ವೇ ಗೋಪಾ ಹರೇಃ ಕಲಾಃ ॥ ೧೯೭ ॥

---

೧೯೪-೧೯೫. ಎಲೈ ಬ್ರಹ್ಮನೇ ! ನಕ್ಷತ್ರಮಯವಾದ ಲೋಕಗಳೂ, ವಿಮಾನದಂತಿರುವ ಲೋಕಗಳೂ, ಯಜ್ಞಕರ್ಮಗಳಿಂದ ರಕ್ಷಣೆಯನ್ನು ಹೊಂದಿ ಅಂತರಿಕ್ಷದಲ್ಲಿ ಸ್ವೇಚ್ಛೆಯಾಗಿ ಕಾರ್ಯಮಾಡುತ್ತಾ ಸಂಚರಿಸುವುವು. ಕರ್ಮಭೂಮಿಯಲ್ಲಿ ಯಾಗಗಳಿಲ್ಲದೆ ಹೋದಾಗ, ಈ ನಕ್ಷತ್ರ ಸಮೂಹಗಳೆಲ್ಲವೂ, ಜನಗಳಿಗೆ ವಿಘ್ನವನ್ನುಂಟುಮಾಡುತ್ತಾ ಸದಾ ವಕ್ರವಾಗಿಯೋ ಅತಿಚಾರವಾಗಿಯೋ ಸಂಚರಿಸುವುವು (ಗ್ರಹಗಳಿಗೆ ವಕ್ರಗತಿ ಉಂಟಾದಂತೆಯೇ ನಕ್ಷತ್ರಗಳಿಗೂ ವಕ್ರತೆಯುಂಟಾದಾಗ ಲೋಕಕ್ಕೆ ಅಡಚಣೆಗಳೇ ಹೊರತು ಶುಭ ಫಲಗಳಿಲ್ಲವೆಂದು ತಿಳಿಯಬೇಕು.)

೧೯೬. ಈ ಕರ್ಮಭೂಮಿಯೇ ಒಂದು ಗೋವು ಎಂದು ತಿಳಿಯಬೇಕು. ಇವಳೇ ಶ್ರುತಿರೂಪಿಣಿಯೂ ಪ್ರಪಂಚರೂಪಿಣಿಯೂ ಆಗಿರುವಳು. ಗೋನಾಮಕವಾದ ಭೂಮಿಯನ್ನು ರಕ್ಷಣೆಮಾಡುವುದರಿಂದ ಪರಮಾತ್ಮನಿಗೆ ಗೋಪನೆಂದು ಹೆಸರು ಬಂದಿದೆ.

೧೯೭ ಗೋಪಪುರುಷನ ಶಕ್ತಿಯೇ ಗೋಪನೆಂದು ವ್ಯವಹರಿಸಲ್ಪಡುವುದು. (ಪ್ರಕೃತಿಯೇ ರಾಧೆಯೇ, ಪುರುಷನೆಂದೂ ಕೃಷ್ಣನೆಂದೂ ; ಪುರುಷನೇ ಪ್ರಕೃತಿಯೆಂದೂ ಭಾವನೆ. ಶಕ್ತಿರಹಿತನಾದ ಪುರುಷನಿಗಾಗಲೀ, ಪುರುಷರಹಿತೆಯಾದ ಪ್ರಕೃತಿಗಾಗಲಿ, ಯಾವ ಕಾರ್ಯಗಳನ್ನೂ ಮಾಡುವ ಶಕ್ತಿಯಿಲ್ಲವೆಂದು ತಿಳಿಯಬೇಕು.) ಗೋಪನು (ಮಹಾವಿಷ್ಣುವು) ಅನೇಕಕೋಟಿ ಗೋಪಿಯರನ್ನು ಪೂಜಿಸುವನು. ಅನೇಕ ಕೋಟಿ ಸಹಸ್ರಗೋಪರೆಲ್ಲರೂ ಮಹಾವಿಷ್ಣುವಿನ ಅಂಶವಾಗಿದ್ದಾರೆ.

ತಾವಂತಶ್ಚೈವ ಬ್ರಹ್ಮಾಂಡಾ ಗೋಪನಾಮ್ನಾ ಪ್ರಕೀರ್ತಿತಾಃ ।
ಕರ್ಮಭೂಮೇಸ್ತಥೋರ್ಧ್ವಂ ಚ ರವಿರ್ಯೋಜನಲಕ್ಷಕಃ ॥ ೧೯೮ ॥

ತತಶ್ಶಶೀ ತಥಾವಾನಸ್ತತಶ್ಚೋರ್ಧ್ವಂ ಭಮಂಡಲಂ ।
ದ್ವಿಲಕ್ಷಯೋಜನಗತಸ್ತತೋ ಭೌಮಸ್ತಥಾವಿಧಃ ॥ ೧೯೯ ॥

ಭೌಮಾದ್ಬುಧಸ್ತಥಾ ಜ್ಞೇಯೋ ಬುಧಾಚ್ಚ ಬೃಹತಾಂಪತಿಃ ।
ಗುರೋಃ ಶುಕ್ರಸ್ತಥಾವಾನಃ ಶುಕ್ರಾತ್ಸೌರಿಸ್ತಥಾಗತಃ ॥ ೨೦೦ ॥

ಶನೇರಾಹುಸ್ತಥಾ ಜ್ಞೇಯೋ ರಾಹೋಃ ಕೇತುಸ್ತಥೋರ್ಧ್ವಗಃ ।
ಸಪ್ತಲಕ್ಷಮಿತಂ ಜ್ಞೇಯಂ ಕೇತೋಃ ಸಪ್ತರ್ಷಿಮಂಡಲಂ ॥ ೨೦೧ ॥

---

೧೯೮. ಈ ಗೋಪರ ಸಂಖ್ಯೆಗೆ ಸಮನಾದ ಸಂಖ್ಯೆಯ ಬ್ರಹ್ಮಾಂಡಗಳು ಗೋಪನ ಹೆಸರಿನಿಂದಲೇ ಪ್ರಸಿದ್ಧವಾಗಿವೆ. ಕರ್ಮಭೂಮಿಯಿಂದ ಮೇಲೆ, ಲಕ್ಷ ಯೋಜನ ದೂರದಲ್ಲಿ ಸೂರ್ಯನಿರುವನು.

೧೯೯. ಈ ಸೂರ್ಯಮಂಡಲದ ಮೇಲು ಭಾಗದಲ್ಲಿ ಅಷ್ಟೇ ಅಂತರದಲ್ಲಿ ಚಂದ್ರನಿರುವನು. ಸೂರ್ಯಮಂಡಲದಿಂದ ಒಂದುಲಕ್ಷ ಯೋಜನದಲ್ಲಿ ಚಂದ್ರಮಂಡಲವಿರುವುದು. ಈ ಚಂದ್ರಮಂಡಲಕ್ಕಿಂತಲೂ ಮೇಲೆ ನಕ್ಷತ್ರಮಂಡಲವಿರುವುದು. ನಕ್ಷತ್ರಮಂಡಲಕ್ಕಿಂತ ಎರಡುಲಕ್ಷ ಯೋಜನದ ದೂರದಲ್ಲಿ ಕುಜ (ಭೌಮ) ನಿರುವನು.

೨೦೦. ಈ ಭೌಮನಿಗಿಂತ ಆಚೆ ಅದೇ ಅಂತರದಲ್ಲಿ ಬುಧನೂ, ಬುಧನಿಗಿಂತ ಆಚೆ ಅದೇ ರೀತಿ ಬೃಹಸ್ಪತಿಯೂ ಇವನಿಗಿಂತ ಮೇಲೆ ಅದೇ ಅಳತೆಯಲ್ಲಿ ಶುಕ್ರನೂ, ಇರುವರು. ಶುಕ್ರನಿಗಿಂತ ಮೇಲೆ ಶನಿಯು ಅಷ್ಟೇ ಅಂತರದಲ್ಲಿರುವನು.

೨೦೧ ಶನಿಗಿಂತ ಮೇಲೆ ಅದೇ ಅಂತರದಲ್ಲಿ ರಾಹುವೂ, ರಾಹುವಿಗಿಂತ ಮೇಲೆ ಅದೇ ಪ್ರಕಾರ ದೂರದಲ್ಲಿ ಕೇತುವೂ ಮೇಲುಭಾಗದಲ್ಲಿ ಸಂಚರಿಸುವರು. ಕೇತುವಿಗಿಂತ ಆಚೆ ಏಳುಲಕ್ಷಯೋಜನದ ದೂರದಲ್ಲಿ ಸಪ್ತರ್ಷಿಮಂಡಲವಿರುವುದು.

ಲಕ್ಷೈಕಾದಶಗಾಃ ಸರ್ವೇ ತತಶ್ಚೋರ್ಧ್ವಂ ಧ್ರುವಾಸ್ಪದಂ ।
ಲಕ್ಷಯೋಜನಗಂ ಚೈವ ತತಶ್ಚೋರ್ಧ್ವಂ ಮಹತ್ಪದಂ ॥ ೨೦೨ ॥

ಲಕ್ಷಯೋಜನಗಂ ಜ್ಞೇಯಂ ತತಶ್ಚೋರ್ಧ್ವಂ ಜನಾಸ್ಪದಂ ।
ಲಕ್ಷಯೋಜನಗಂ ಜ್ಞೇಯಂ ತದೂರ್ಧ್ವಂ ತಪಸಃ ಸ್ಥಲಂ ॥ ೨೦೩ ॥

ಏವಂ ಚ ಕರ್ಮಭೂಮೇಶ್ಚ ತಪಃ ಕೋಟ್ಯರ್ಧಯೋಜನಂ ।
ಕರ್ಮಭೂಮೇರಧಶ್ಚೈವ ಪಾತಾಲಾಃ ಸಪ್ತ ಚಾಂತರಾಃ ॥ ೨೦೪ ॥

ಲಕ್ಷಯೋಜನಗಾ ಜ್ಞೇಯಾಸ್ತತಶ್ಚಾಧೋಗತಾಶ್ಚ ಯೇ ।
ನರಕಾಶ್ಚ ಕ್ರಮಾಜ್ಜ್ಞೇಯಾ ಭೂಮೇಃ ಕೋಟ್ಯರ್ಧಯೋಜನಾಃ ॥೨೦೫॥

---

೨೦೨. ನಕ್ಷತ್ರಗಳು, ಗ್ರಹಗಳು ಎಲ್ಲವೂ ಹನ್ನೊಂದುಲಕ್ಷಯೋಜನ ಪರಿಮಿತಿಯೊಳಗೇ ಸಂಚರಿಸುವುವು. ಇದಕ್ಕಿಂತಲೂ ಮೇಲೆ ಧ್ರುವಮಂಡಲ ವಿರುವುದು. ಇದು ಒಂದುಲಕ್ಷಯೋಜನದ ಮೇಲಿದೆ. ಇದಕ್ಕಿಂತಲೂ ಒಂದುಲಕ್ಷ ಯೋಜನ ಮೇಲೆ ಮಹರ್ಲೋಕವಿರುವುದು.

೨೦೩. ಮಹರ್ಲೋಕಕ್ಕಿಂತಲೂ ಒಂದುಲಕ್ಷಯೋಜನದಮೇಲೆ ಜನಲೋಕ ವಿರುವುದು. ಇದಕ್ಕಿಂತಲೂ ಒಂದುಲಕ್ಷಯೋಜನದ ಮೇಲೆ ತಪೋಲೋಕ ವಿರುವುದು.

೨೦೪. ಒಟ್ಟಿನಲ್ಲಿ ಕರ್ಮಭೂಮಿಯಿಂದ ತಪೋಲೋಕವು ಅರ್ಧಕೋಟಿ ಯೋಜನ (ಐವತ್ತುಲಕ್ಷಯೋಜನ) ದೂರದಲ್ಲಿರುವುದು. ಕರ್ಮಭೂಮಿಯ ಕೆಳಗಡೆ ಸಪ್ತಪಾತಾಳ ಲೋಕಗಳಿರುವುವು.

೨೦೫. ಈ ಏಳು ಪಾತಾಳಲೋಕಗಳೂ ಕ್ರಮವಾಗಿ ಒಂದೊಂದಕ್ಕೆ ಮಧ್ಯೆ ಒಂದುಲಕ್ಷಯೋಜನಗಳ ಅಂತರವುಳ್ಳದ್ದಾಗಿರುವುವು. ಈ ಏಳು ಪಾತಾಳಲೋಕ ಗಳಿಗಿಂತ ಕೆಳಗಡೆ ಎಂದರೆ ಭೂಲೋಕದಿಂದ ಅರ್ಧಲಕ್ಷಯೋಜನದ ಕೆಳಗೆ ಕ್ರಮ ವಾಗಿ ನರಕಗಳಿರುವುವು.

ಕರ್ಮಭೂಮೇರುತ್ತರೇ ಚ ಖಂಡಾನ್ಯಷ್ಟೌ ತತಃ ಪರಂ ।
ಲವಣಾಬ್ಧಿಸ್ತತೋ ದ್ವೀಪಸ್ತತಃ ಕ್ಷೀರಾಬ್ಧಿರೇವ ಹಿ ॥ ೨೦೬ ॥

ತತೋ ದ್ವೀಪಸ್ತತಸ್ಸಿಂಧುಸ್ತತೋ ದ್ವೀಪಸ್ತತೋಽಬ್ಧಿಕಃ ।
ಕೋಟ್ಯರ್ಧಲಕ್ಷವ್ಯಾನೇನ ಯೋಜನೇನ ವಿಧೇ ಸ್ವಯಂ ॥ ೨೦೭ ॥

ಕರ್ಮಭೂಮೇಃ ಸ ವೈ ಜ್ಞೇಯೋ ಲೋಕಾಲೋಕೋ ಮಹಾಚಲಃ ।
ಲೋಕಾಲೋಕೋ ದಕ್ಷಿಣೇ ಚ ಪಶ್ಚಿಮೇ ಚ ಸ ವೈ ಗಿರಿಃ ॥ ೨೦೮ ॥

ಪೂರ್ವೇ ಚ ಕರ್ಮಭೂಮೇಶ್ಚ ಲೋಕಾಲೋಕಸ್ತಥಾವಿಧಃ ।
ಏತೇಷಾಂ ಸಮುದಾಯಾನಾಂ ಬ್ರಹ್ಮಾಂಡೋಽಯಂ ಪ್ರಕೀರ್ತಿತಃ ॥

ತ್ವತ್ತೋ ಭವಿಷ್ಯತಿ ವಿಧೇ ಕಲ್ಪಪರ್ಯಂತಮೇವ ಹಿ ।
ಓಮಿತ್ಯೇಕಾಕ್ಷರಂ ಬ್ರಹ್ಮ ತತೋ ವಿಷ್ಣುಸ್ತ್ರಿಧಾಭವತ್ ॥ ೨೧೦ ॥

---

೨೦೬-೨೦೭. ಕರ್ಮಭೂಮಿಯ ಉತ್ತರಭಾಗದಲ್ಲಿ ಎಂಟು ಖಂಡಗಳಿರುವುವು. ಅದರಿಂದ ಆಚೆಗೆ ಲವಣಸಮುದ್ರ ಅನಂತರ ದ್ವೀಪ, ಆಮೇಲೆ ಕ್ಷೀರ ಸಮುದ್ರ, ಅನಂತರ ದ್ವೀಪ, ಮತ್ತೆ ಸಮುದ್ರ ಅನಂತರ ದ್ವೀಪ ಆಮೇಲೆ ಪುನಃ ಸಮುದ್ರ, ಹೀಗೆ ಐವತ್ತುಲಕ್ಷಯೋಜನ ವಿಸ್ತಾರದಲ್ಲಿರುವುವು.

೨೦೮-೨೦೯. ಎಲೈ ಬ್ರಹ್ಮನೇ ! ಕರ್ಮಭೂಮಿಯ ಎಲ್ಲಾಕಡೆಯಲ್ಲಿಯೂ ಅಂದರೆ ಪೂರ್ವ, ಪಶ್ಚಿಮ ದಕ್ಷಿಣೋತ್ತರ ದಿಕ್ಕುಗಳಲ್ಲಿ ಲೋಕಾಲೋಕಪರ್ವತ ವಿರುವುದು. ಈ ಹಿಂದೆ ಹೇಳಿದ ಊರ್ಧ್ವಲೋಕಗಳೂ, ಅಧೋಲೋಕಗಳೂ, ನರಕಗಳೂ ಮತ್ತು ಪರ್ವತಗಳೂ ಇವೆಲ್ಲವೂ ಒಂದುಗೂಡಿ ಬ್ರಹ್ಮಾಂಡವೆಂದು ಪ್ರಸಿದ್ಧವಾಗಿದೆ.

೨೧೦. ಎಲೈ ಬ್ರಹ್ಮನೇ ! ಇಂತಹ ಬ್ರಹ್ಮಾಂಡವೆಲ್ಲವೂ, ಕಲ್ಪವುಮುಗಿಯುವ ವರೆಗೂ ನಿನ್ನಿಂದಲೇ ರಚಿತವಾಗಿ ಪಾಲಿಸಲ್ಪಡುತ್ತವೆ. ಬ್ರಹ್ಮನು ಓಮ್ ಎಂಬ ಒಂದು ಅಕ್ಷರವುಳ್ಳವನು. ಅಂದರೆ ಓಂಕಾರದಿಂದ ವ್ಯವಹರಿಸಲ್ಪಡತಕ್ಕವನು. ಈ ಓಂಕಾರರೂಪನಾದ ಬ್ರಹ್ಮನಿಂದ ವಿಷ್ಣುವು ಮೂರುವಿಧವಾಗಿ ಆವಿರ್ಭವಿಸಿದನು.

ಆದ್ಯ ವಿಷ್ಣುಃ ಸ ವೈ ಕೃಷ್ಣೋ ವಿಷ್ಣುಃ ಸ ಇಹ ವೈ ವಿರಾಟ್ ।
ಇತಿ ವಿಷ್ಣುಃ ಸ ವೈ ಜ್ಞೇಯಂ ಪುರಾಣಪುರುಷೋತ್ತಮಃ ॥ ೨೧೧ ॥

ಪುರಾಣಪುರುಷೋ ಜ್ಞೇಯ ಆದಿಬ್ರಹ್ಮಾ ಚಿರಾಯುಗಃ ।
ದ್ವೇವೇ ಯುಗಸಹಸ್ರೇ ದ್ವೇऽಹೋರಾತ್ರೇ ತಸ್ಯ ಕೀರ್ತಿತಂ ॥ ೨೧೨ ॥

ವಿಷ್ಣೋಸ್ತು ರೋಮಕೂಪೇಷು ಬ್ರಹ್ಮಾಂಡಾಃ ಕೋಟಿಶೋऽಭವನ್ ।
ಅದ್ಯ ವಿಷ್ಣುರಹಂ ಬ್ರಹ್ಮನ್ ವಿಘ್ನಹಾ ತವ ಭೂತಲೇ ॥ ೨೧೩ ॥

ಇತ್ಯುಕ್ತ್ವಾಂತರ್ದಧೇ ವಿಷ್ಣುರ್ಬ್ರಹ್ಮಾ ಸೃಷ್ಟಿಮಚೀಕರತ್ ।
ತೇನ ಪ್ರೋಕ್ತಂ ಯತೋ ಭಾವ್ಯಂ ಮಹಾಕಲ್ಪೋ ಹಿ ಸ ಸ್ಮೃತಃ॥೨೧೪॥

---

೨೧೧. ಸನಾತನ ಮಹಾವಿಷ್ಣುವಾದ ಕೃಷ್ಣಪರಮಾತ್ಮ ವಿರಾಟ್ಸ್ವರೂಪ ಪುರಾಣಪುರುಷೋತ್ತಮ ಎಂದು ಮೂರು ಪ್ರಕಾರವಾಗಿ ಎನಿಸುವನು.

೨೧೨. ಪುರಾಣಪುರುಷನೂ ಆದಿಬ್ರಹ್ಮಸ್ವರೂಪನೂ ಆದ ಮಹಾವಿಷ್ಣುವು ದೀರ್ಘಾಯುಃ ಪ್ರಮಾಣವುಳ್ಳವನು ಈ ಮಹಾಪುರುಷನಿಗೆ ದೇವಮಾನದ ಎರಡುಸಾವಿರ ಯುಗಗಳಿಗೆ ಒಂದು ಹಗಲು ಒಂದು ರಾತ್ರಿ (ಒಂದುದಿನ) ಆಗುವುದು. (ಅಂದರೆ ಬ್ರಹ್ಮನಿಗೆ ಒಂದುಸಾವಿರ ದಿವ್ಯಯುಗಗಳಕಾಲಕ್ಕೆ ಒಂದು ಹಗಲೆಂದೂ, ಅಷ್ಟೇ ಪ್ರಮಾಣದ ಯುಗಸಹಸ್ರಕಾಲಕ್ಕೆ ರಾತ್ರಿಯೆಂದೂ ತಿಳಿಯಬೇಕು.)

೨೧೩. ಈ ವಿಷ್ಣುವಿನ ರೋಮಕೂಪಗಳಲ್ಲಿ ಕೋಟ್ಯಾಂತರ ಬ್ರಹ್ಮಾಂಡಗಳಾದವು. " ಎಲೈ ಬ್ರಹ್ಮನೇ ! ನಾನೇ ಮಹಾವಿಷ್ಣುವು. ನಾನು ನಿನಗೆ ಭೂಮಂಡಲದಲ್ಲೊದಗುವ ವಿಘ್ನಗಳನ್ನೆಲ್ಲಾ ನಿವಾರಣೆಮಾಡುವೆನು."

೨೧೪. ಹೀಗೆಂದು ಹೇಳಿ, ಮಹಾವಿಷ್ಣುವು ಅಂತರ್ಧಾನನಾದನು. ಅನಂತರ ಬ್ರಹ್ಮನು ತನ್ನ ಸೃಷ್ಟಿಕಾರ್ಯವನ್ನು ಪ್ರಾರಂಭಮಾಡಿದನು. ಆ ಮಹಾವಿಷ್ಣುವು ಮುಂದೆ ಆಗುವ ವಿಷಯವನ್ನೆಲ್ಲಾ ಹೀಗೆ ಬ್ರಹ್ಮನಿಗೆ ಹೇಳಿದುದರಿಂದ ಈ ಕಲ್ಪವು ಮಹಾಕಲ್ಪವೆನಿಸಿತು.

ಭವಿಷ್ಯೋ ನಾಮ ವಿಖ್ಯಾತೋ ದ್ವಿಸಹಸ್ರಭವಾಯುಷಾ ।
ಪೂರ್ವಾರ್ಧಶ್ಚ ಪರಾರ್ಧಶ್ಚ ಪುರಾಣಪುರುಷಸ್ಯ ಹಿ ॥ ೨೧೫ ॥

ಅಷ್ಟಾದಶಸಹಸ್ರಾಣಿ ಕಲ್ಪಾಃ ಪೂರ್ವಾರ್ಧಕೇ ಗತಾಃ ।
ಪರಾರ್ಧಃ ಸಾಂಪ್ರತಂ ಜ್ಞೇಯೋ ಜಾತಂ ತಸ್ಯ ದಿನದ್ವಯಂ ॥ ೨೧೬ ॥

ಆದ್ಯಾಹಂ ಕೂರ್ಮಕಶ್ಚೈವ ವಾಹ್ನೇ ಮತ್ಸ್ಯಃ ಪ್ರಕೀರ್ತಿತಃ ।
ತೃತೀಯಃ ಶ್ವೇತವಾರಾಹೋ ದಿವಸಸ್ತಸ್ಯ ಕಲ್ಪವಾನ್ ॥ ೨೧೭ ॥

ತಥಾ ಮಧ್ಯಾಹ್ನಕಾಲೋ ಹಿ ಸಾಂಪ್ರತಂ ವರ್ತತೇ ಸುರಾಃ ।
ಭಾವಿಷ್ಯಾಖ್ಯೇ ಮಹಾಕಲ್ಪೇ ಕಥಾ ಭಾವಿಷ್ಯಕೈರ್ಜನೈಃ ॥ ೨೧೮ ॥

---

೨೧೫-೨೧೬. ಎರಡುಸಾವಿರವರ್ಷ ವಯಃಪ್ರಮಾಣವುಳ್ಳ ಈ ಕಲ್ಪಕ್ಕೆ ಬ್ರಹ್ಮನು ಭವಿಷ್ಯಮಹಾಕಲ್ಪವೆಂದು ಹೆಸರಿಟ್ಟನು. ಪುರಾಣಪುರುಷನಾದ ಮಹಾವಿಷ್ಣುವಿನ ಪೂರ್ವಾರ್ಧದಿಂದ ಹದಿನೆಂಟುಸಾವಿರಕಲ್ಪಗಳು ಕಳೆದುಹೋದವು. ಪರಾರ್ಧದಲ್ಲಿ ಈಗ ಕೇವಲ ಎರಡುದಿನಗಳುಮಾತ್ರ ಕಳೆದಿರುವುವು.

೨೧೭. ನಾನು ಆದಿಕೂರ್ಮನಾಗಿಯೂ, ಅನಂತರ ಮತ್ಸ್ಯನಾಗಿಯೂ, ಆಮೇಲೆ ಶ್ವೇತವರಾಹನಾಗಿಯೂ ಅವತರಿಸಿದೆನು. ಆಗ ಬ್ರಹ್ಮನಿಗೆ ಪ್ರಾತಃಕಾಲ ನಡೆಯುತ್ತಿತ್ತಿದ್ದಿತು. (ಅಂದರೆ ಬ್ರಹ್ಮನಿಗೆ ಹಗಲಿನಲ್ಲಿ ಆಗಲೇ ಕೂರ್ಮಕಲ್ಪ, ಮತ್ಸ್ಯಕಲ್ಪ ಮತ್ತು ಶ್ವೇತವರಾಹಕಲ್ಪ ಈ ಮೂರೂ ಕಳೆದಿರುವುವೆಂದು ತಿಳಿಯಬೇಕು.)

೨೧೮-೨೨೦. ಈಗ ಬ್ರಹ್ಮನಿಗೆ ಮಧ್ಯಾಹ್ನಕಾಲವಾಗಿದೆ. ಎಲೈ ದೇವತೆಗಳಿರಾ! ಈ ಭವಿಷ್ಯಮಹಾಕಲ್ಪದ ಕಥೆ ನೂರುಕೋಟಿ ಗ್ರಂಥಶ್ಲೋಕಗಳಿರುವುವೆಂದು ಪುರಾಣ ತಿಳಿದ ಜನರಿಂದ ಬ್ರಹ್ಮನ ಸಮ್ಮುಖದಲ್ಲಿಯೇ ಹೇಳಲಾಗಿದೆ. ಈ ಮಹಾಕಲ್ಪವು ಹತ್ತು ಲಕ್ಷಣಗಳಿಂದ ಕೂಡಿ ನೂರುಕೋಟಿ ಗ್ರಂಥವುಳ್ಳದಾಗಿ ವಿಸ್ತಾರ

ಕಥಿತಾ ಬ್ರಹ್ಮಣಶ್ಚಾಗ್ರೇ ಶತಕೋಟಿಪ್ರವಿಸ್ತರೈಃ ।
ದಶಲಕ್ಷಣಸಂಯುಕ್ತಂ ಶತಕೋಟಿಪ್ರವಿಸ್ತರಂ ॥ ೨೧೯ ॥

ಮಹಾಪುರಾಣಂ ಕಥಿತಂ ಪುರಾಣಂ ಪಂಚಲಕ್ಷಣಂ ।
ಪದ್ಯತ್ರಿಂಶತ್ಸಹಸ್ರಂ ಚ ಕಲ್ಪೇಕಲ್ಪೇ ಪ್ರಕೀರ್ತಿತಂ ॥ ೨೨೦ ॥

ಕಲ್ಪನಾಮ್ನಾ ಪುರಾಣಂ ಚ ಮಹಾದೇವೇನ ನಿರ್ಮಿತಂ ।
ಅಷ್ಟಾದಶಪುರಾಣಾನಿ ನಿರ್ಮಿತಾನಿ ಶಿವಾತ್ಮನಾ ॥ ೨೨೧ ॥

ದ್ವಾಪರಾಂತೇ ಚ ಭಗವಾನ್‌ವ್ಯಾಸಃ ಸತ್ಯವತೀಸುತಃ ।
ತಾನ್ಯೇವ ಜನಯಾಮಾಸ ಲೋಕಮಂಗಲಹೇತವೇ ॥ ೨೨೨ ॥

---

ವಾಗಿರುವುದು. "ಸರ್ಗಶ್ಚ ಪ್ರತಿಸರ್ಗಶ್ಚ ವಂಶೋ ಮನ್ವಂತರಾಣಿಚ ವಂಶಾನು ಚರಿತಂಚೇತಿಪುರಾಣಂ ಪಂಚಲಕ್ಷಣಂ" ಎಂಬ ರೀತಿಯಿಂದ ಐದುಲಕ್ಷಣಗಳಿಂದ ಕೂಡಿದ ಈ ಪುರಾಣವು ಮಹಾಪುರಾಣವೆಂದು ಹೇಳಲ್ಪಡುವುದು. ಪ್ರತಿಯೊಂದು ಕಲ್ಪದಲ್ಲಿಯೂ ಮೂವತ್ತುಸಾವಿರ ಪದ್ಯಗಳು ಇರುವುವೆಂದು ಹೇಳಿದೆ.

೨೨೧. ಮಹಾದೇವನು, ಕಲ್ಪದ ನಾಮಾಂಕಿತವಾದ ಈ ಹದಿನೆಂಟಕ್ಕೂ ಹದಿನೆಂಟು ಪುರಾಣಗಳೆಂದು, ಪುರಾಣದ ಹೆಸರಿನಿಂದ ಇದನ್ನೇ ನಿರ್ಮಿಸಿದನು. ಇವನಿಂದ ನಿರ್ಮಿತವಾದ ಈ ಕಲ್ಪಗಳೇ ಅಷ್ಟಾದಶ ಪುರಾಣಗಳೆನಿಸಿದುವು.

೨೨೨. ಪರಮೇಶ್ವರನಿಂದ ನಿರ್ಮಿತವಾಗಿದ್ದ, ಈ ಹದಿನೆಂಟುಪುರಾಣಗಳನ್ನೇ ದ್ವಾಪರಯುಗದ ಕೊನೆಯಲ್ಲಿ ಸತ್ಯವತೀಕುಮಾರನೂ ಭಗವಂತನೂ ಆದ ವ್ಯಾಸನು, ಪುನಃ ಲೋಕಕಲ್ಯಾಣಕ್ಕೋಸ್ಕರ ನಿರ್ಮಿಸಿದನು." ಎಂದು ಕಲ್ಕಿಯರೂಪಿಯಾದ ಮಹಾವಿಷ್ಣುವು ದೇವತೆಗಳಿಗೆ ಹೇಳಿದನು.

॥ ವ್ಯಾಸ ಉವಾಚ ॥

ಇತಿ ಕಲ್ಕಿವಚಃ ಶ್ರುತ್ವಾ ತೇ ದೇವಾ ವಿಸ್ಮಯಾನ್ವಿತಾಃ ।
ನಮಸ್ಕೃತ್ಯ ಗಮಿಷ್ಯಂತಿ ಸ್ವಂಸ್ವಂ ಧಾಮ ಪ್ರಹರ್ಷಿತಾಃ ॥ ೨೨೩ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ಚತುರ್ಥಖಂಡೇ ಕಲಿಯುಗೀಯೇತಿಹಾಸ ಸಮುಚ್ಚಯೇ ಪಂಚವಿಂಶೋऽಧ್ಯಾಯಃ.



---

೨೨೩. ವ್ಯಾಸರು ಮನುವಿಗೆ ಹೇಳುತ್ತಾರೆ—ಎಲೈ ಮನುವೇ! ಈರೀತಿ ಕಲ್ಕಿಯ ಮಾತನ್ನು ಕೇಳಿ ಆ ದೇವತೆಗಳೆಲ್ಲರೂ ತುಂಬಾ ಆಶ್ಚರ್ಯಗೊಂಡು, ಆ ಕಲ್ಕಿ ಪುರುಷನಿಗೆ ನಮಸ್ಕಾರಮಾಡಿ ಸಂತೋಷದಿಂದ ತಮ್ಮತಮ್ಮ ಸ್ಥಳಗಳಿಗೆ ಹೋಗುವರು, ಎಂದು ವ್ಯಾಸರು ಮನುವಿಗೆ ಹೇಳಿದರು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ನಾಲ್ಕನೆಯ ಖಂಡದಲ್ಲಿ ಇಪ್ಪತ್ತೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಪ್ರತಿಸರ್ಗಪರ್ವಣಿ ಚತುರ್ಥಖಂಡೇ
## ಷಷ್ಠವಿಂಶೋಽಧ್ಯಾಯಃ

॥ ವ್ಯಾಸ ಉವಾಚ ॥

ತದಾ ಸ ಭಗವಾನ್‌ಕಲ್ಕಿಃ ಪುರಾಣಪುರುಷೋದ್ಭವಃ ।
ದಿವ್ಯಂ ವಾಜಿನಮಾರುಹ್ಯ ಖಡ್ಗೀ ವರ್ಮೀ ಚ ಚರ್ಮಧೃಕ್
ಮ್ಲೇಚ್ಛಾಂಸ್ತಾನ್ದೈತ್ಯಭೂತಾಂಶ್ಚ ಹತ್ವಾ ಯೋಗಂ ಗಮಿಷ್ಯತಿ । ॥ ೧ ॥

ಷೋಡಶಾಬ್ದಸಹಸ್ರಾಣಿ ತದ್ಯೋಗಾಗ್ನಿಪ್ರತಾಪಿತಾ ।
ಭಸ್ಮಭೂತಾ ಕರ್ಮಭೂಮಿರ್ನಿರ್ಜೀವಾ ಭವಿತಾ ತದಾ ॥ ೨ ॥

---

## ಇಪ್ಪತ್ತೈದನೆಯ ಅಧ್ಯಾಯ

೧. ಪುನಃ ವ್ಯಾಸರು ಮನುವನ್ನು ಕುರಿತು ಹೇಳುತ್ತಾರೆ—ಪುರಾಣಪುರುಷನ ಅವತಾರನೂ, ಭಗವಂತನೂ ಆದ ಕಲ್ಕಿಯು ಹೀಗೆ ಮೃದುವಾದ ನುಡಿಗಳಿಂದ ದೇವತೆಗಳನ್ನೆಲ್ಲಾ ಸಂತೋಷಪಡಿಸಿ ಕಳುಹಿಸಿದನಂತರ, ದಿವ್ಯವಾದ ಕುದುರೆಯನ್ನು ಏರಿ, ಖಡ್ಗ, ಕವಚ ಮೊದಲಾದವುಗಳನ್ನು ಧರಿಸಿ, ಕರ್ಮಭೂಮಿಯಲ್ಲಿದ್ದ ದೈತ್ಯಸ್ವರೂಪರಾದ ಮ್ಲೇಚ್ಛರನ್ನೆಲ್ಲಾ ಧ್ವಂಸಮಾಡಿ, ಯೋಗಾರೂಢನಾಗುವನು.

೨. ಅನಂತರ ಈ ಮಹಾಪುರುಷನ ಯೋಗಾಗ್ನಿಯಿಂದ ಕರ್ಮಭೂಮಿಯೆಲ್ಲವೂ ಹದಿನಾರುಸಾವಿರ ವರ್ಷಗಳಕಾಲ ತಾಪಹೊಂದಿ, ಭಸ್ಮವಾಗಿ ನಿರ್ಜೀವವಾಗುವುದು.

**ತತೋಽನುಯೋಗಂ ಜನಿತೋ ಮೇಘೋ ಭೂತ್ವಾ ಲಯಂಕರಃ ।**
**ಪ್ರಲಯಾಗ್ರೇಣ ಸಾ ಭೂಮಿರ್ಜಲಮಧ್ಯೇ ಗಮಿಷ್ಯತಿ ॥ ೩ ॥**

**ತದಾ ಕಲಿಯುಗೋ ಘೋರೋ ಬಲಿಪಾರ್ಶ್ವಂ ಗಮಿಷ್ಯತಿ ।**
**ಗತೇ ಕಲಿಯುಗೇ ಘೋರೇ ಕರ್ಮಭೂಮಿಂ ಪುನರ್ಹರಿಃ ॥**
**ಕೃತ್ವಾ ಸ್ಥಲಮಯೀಂ ರಮ್ಯಾಂ ಯಜ್ಞೈರ್ದೇವಾನ್ಯಜಿಷ್ಯತಿ ॥ ೪ ॥**

**ಯಜ್ಞಭಾಗಮುಪಾದಾಯ ದೇವಾಸ್ತೇ ಬಲಸಂಯುತಾಃ ।**
**ವೈವಸ್ವತಂ ಮನುಂ ಗತ್ವಾ ಕಥಯಿಷ್ಯಂತಿ ಕಾರಣಂ ॥ ೫ ॥**

**ಕಲ್ಕಿನೋ ವದನಾಜ್ಜಾತೋ ಬ್ರಾಹ್ಮಣೋ ವರ್ಣ ಏ ಹಿ ।**
**ಬಾಹ್ವೋ ಕ್ಷತ್ರಂ ವಿಶೋ ಜಾನ್ವೋಃ ಶೂದ್ರೋ ವರ್ಣಸ್ತದಂಘ್ರಯೋಃ ॥**

---

೩. ಅನಂತರ ಈ ಕಲ್ಕಿಯು ಯೋಗದಿಂದೆಚ್ಚರಗೊಳ್ಳುವನು. ಆಗ ಇವನೇ ಪ್ರಪಂಚ ನಾಶಕವಾದ ಮೇಘದ ರೂಪವನ್ನು ಹೊಂದಿ, ಸಮೃದ್ಧಿಯಾಗಿ ಮಳೆಸುರಿಸಿ ಈ ಕರ್ಮಭೂಮಿಯನ್ನು ಜಲಮಯವನ್ನಾಗಿ ಮಾಡುವನು. ಈ ಜಲಪ್ರಳಯದಲ್ಲಿ ಭೂಮಿಯು ನೀರಿನಲ್ಲಿ ಮುಳುಗಿ ಹೋಗುವುದು.

೪. ಆಗ ಭಯಂಕರವಾದ ಕಲಿಯುಗವು ತನಗೆ ಆಶ್ರಯವಿಲ್ಲದೆ ಬಲಿಯ ಸಮೀಪಕ್ಕೆ ಹೋಗುವುದು. ಹೀಗೆ ಈ ಕರ್ಮಭೂಮಿಯಿಂದ ಕಲಿಯುಗವು ತೊಲಗಿದನಂತರ, ಪುನಃ ಮಹಾವಿಷ್ಣುವು ಈ ಕರ್ಮಭೂಮಿಯನ್ನು ಸ್ಥಲ(ಭೂಮ) ಯುವನ್ನಾಗಿ ಮಾಡಿ ಮನೋಹರವಾದ ಈ ಕರ್ಮಭೂಮಿಯಲ್ಲಿ ಅನೇಕ ಯಜ್ಞಗಳನ್ನು ಮಾಡುತ್ತಾ ದೇವತೆಗಳನ್ನು ಸಂತೋಷಪಡಿಸುವನು

೫. ಆಗ ದೇವತೆಗಳೆಲ್ಲರೂ ತಮ್ಮ ತಮ್ಮ ಯಜ್ಞಭಾಗಗಳನ್ನು ಸ್ವೀಕರಿಸಿ ಬಲಶಾಲಿಗಳಾಗಿ ವೈವಸ್ವತಮನುವಿನ ಸಮೀಪಕ್ಕೆ ಹೋಗಿ ನಡೆದ ವೃತ್ತಾಂತವನ್ನೆಲ್ಲಾ ಅವನಿಗೆ ತಿಳಿಸುವರು.

೬. ಅನಂತರ ಕಲ್ಕಿದೇವನ ಮುಖದಿಂದ ಬ್ರಾಹ್ಮಣ ವರ್ಣವೂ, ಬಾಹುವಿನಿಂದ ಕ್ಷತ್ರಿಯ ವರ್ಣವೂ, ತೊಡೆ ಮಂಡಿಗಳಿಂದ ವೈಶ್ಯವರ್ಣವೂ, ಕಾಲುಗಳಿಂದ ಶೂದ್ರವರ್ಣವೂ ಸಹ ಉಂಟಾದುವು.

ಗೌರೋ ರಕ್ತಸ್ತಥಾ ಪೀತಃ ಶ್ಯಾಮಸ್ತೇ ಬ್ರಾಹ್ಮಣಾದಯಃ ।
ದೇವ್ಯಾಃ ಶಕ್ತಿಂ ಸಮಾದಾಯ ಜನಿಷ್ಯಂತಿ ಸುತಾನ್ ಬಹೂನ್ ॥ ೭ ॥

ಏಕವಿಂಶತ್ ಕಿಷ್ಕುಮಿತಾ ಮನುಜಾ ಧರ್ಮರೂಪಿಣಃ ।
ಜಾತಿಧರ್ಮಮುಪಾದಾಯ ಯಜಿಷ್ಯಂತಿ ಸುರಾನ್ಮುದಾ ॥ ೮ ॥

ತದಾ ವೈವಸ್ವತೋ ಧೀಮಾನ್ನತ್ವಾ ತಂ ಕಲ್ಕಿನಂ ಹರಿಂ ।
ಅಯೋಧ್ಯಾಯಾಂ ರಾಜಪದಂ ಕರಿಷ್ಯತಿ ತದಾಜ್ಞಯಾ ॥ ೯ ॥

ತಚ್ಛಿಕ್ಷಾತೋ ಭವೇತ್ಪುತ್ರೋ ಯಃ ಸ ಇಕ್ಷ್ವಾಕುರೇವ ಹಿ ।
ಪಿತೂ ರಾಜ್ಯಂ ಪುರಸ್ಕೃತ್ಯ ಭೂಮೌ ದಿವ್ಯಂ ಶತಂ ಸಮಾಃ ।
ದಿವ್ಯವರ್ಷಶತಾಯುಶ್ಚ ತ್ಯಕ್ತ್ವಾ ದೇಹಂ ಗಮಿಷ್ಯತಿ ॥ ೧೦ ॥

---

೭. ಈ ಬ್ರಾಹ್ಮಣಾದಿ ನಾಲ್ಕುವರ್ಣಗಳವರೂ ಕ್ರಮವಾಗಿ ಬಿಳುಪು, ಕೆಂಪು, ಹಳದಿ ಮತ್ತು ಕಪ್ಪು ಈ ಬಣ್ಣಗಳಿಂದ ಕೂಡಿರುವರು. ಈ ಚಾತುರ್ವಣ್ಯದವರೆಲ್ಲ ದೇವೀಶಕ್ತಿಯನ್ನು ಪಡೆದು ಸಂತಾನಾಭಿವೃದ್ಧಿ ಮಾಡುವರು.

೮. ಇಪ್ಪತ್ತೊಂದು ಕಿಷ್ಕು ಪ್ರಮಾಣವುಳ್ಳವರೂ ಧರ್ಮರೂಪಿಗಳೂ ಆದ ಈ ಮಾನವರು, ತಮ್ಮ ಜಾತಿ ಧರ್ಮವನ್ನು ಪಾಲಿಸುತ್ತಾ ಸಂತೋಷದಿಂದ ದೇವತೆಗಳನ್ನು ಪೂಜಿಸುವರು.

೯. ಆಗ ಮೇಧಾವಿಯಾದ ಆ ವೈವಸ್ವತಮನುವು ಆ ಕಲ್ಕಿ ಸ್ವರೂಪನಾದ ಮಹಾವಿಷ್ಣುವನ್ನು ನಮಸ್ಕರಿಸಿ, ಆ ದೇವನ ಅಪ್ಪಣೆಯಂತೆ ಅಯೋಧ್ಯಾಪಟ್ಟಣದಲ್ಲಿ ರಾಜ್ಯಭಾರಮಾಡುವನು.

೧೦. ಹೀಗೆ ವೈವಸ್ವತಮನುವು ರಾಜ್ಯಭಾರ ಮಾಡುತ್ತಿದ್ದಾಗ ಇವನಿಗೆ ಇಕ್ಷ್ವಾಕುವೆಂಬ ಪುತ್ರನು ಹುಟ್ಟುವನು. ಇವನು (ಇಕ್ಷ್ವಾಕುವು) ತಂದೆಯಿಂದ ರಾಜ್ಯವನ್ನು ಪಡೆದು ದೇವಮಾನದ ನೂರು ವರ್ಷಗಳಕಾಲ ಭೂಮಿಯಲ್ಲಿ ಜೀವಿಸಿ ರಾಜ್ಯಭಾರಮಾಡಿ, ನೂರುವರ್ಷದ ಕೊನೆಯಲ್ಲಿ ಶರೀರತ್ಯಾಗಮಾಡಿ ಲೋಕಾಂತರವನ್ನು ಹೊಂದುವನು.

ಯದಾ ತು ಭಗವಾನ್‌ಕಲ್ಕೀ ಬ್ರಹ್ಮಸತ್ರಂ ಕರಿಷ್ಯತಿ ।
ತದಾ ವೇದಾಶ್ಚ ಚತ್ವಾರೋ ಮೂರ್ತಿಮಂತಶ್ಚ ಸಾಂಗಕಾಃ ।
ಅಷ್ಟಾದಶಪುರಾಣೈಶ್ಚ ತತ್ರಯಾಸ್ಯಂತಿ ಹರ್ಷಿತಾಃ ॥ ೧೧ ॥

ಸ್ತೋಷ್ಯಂತಿ ಕಲ್ಕಿನಂ ದೇವಂ ಪುರಾಣಪುರುಷಾಂಶಕಂ ।
ಕಾರ್ತಿಕೇ ಶುಕ್ಲಪಕ್ಷೇ ಚ ನವಮ್ಯಾಂ ಗುರುವಾಸರೇ ॥ ೧೨ ॥

ಯಜ್ಞಕುಂಡಾಚ್ಚ ಪುರುಷೋ ಭವಿಷ್ಯತಿ ಮಹೋತ್ತಮಃ ।
ನಾಮ್ನಾ ಸತ್ಯಯುಗೋ ಜ್ಞೇಯಃ ಸತ್ಯಮಾರ್ಗಪ್ರದರ್ಶಕಃ ॥ ೧೩ ॥

ದೃಷ್ಟ್ವಾ ತಂ ಪುರುಷಂ ರಮ್ಯಂ ತದಾ ಬ್ರಹ್ಮಾದಯಃ ಸುರಾಃ ।
ತಾಂ ತಿಥಿಂ ವರ್ಣಯಿಷ್ಯಂತಿ ಕರ್ಮಕ್ಷಯಕರೀಂ ಮನೋಃ ॥ ೧೪ ॥

---

೧೧. ಕಲ್ಕಿಪುರುಷನು ಈ ಕರ್ಮಭೂಮಿಯಲ್ಲಿ ಬ್ರಾಹ್ಮಣರಿಗೆ ಆಶ್ರಯ ಮಾಡಿಕೊಟ್ಟಮೇಲೆ ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ, ಕಲ್ಪ ಎಂಬ ಷಡಂಗ ಸಹಿತವಾದ ಋಗ್ಯಜುಃ ಸಾಮಾಥರ್ವಣವೆಂಬ ನಾಲ್ಕುವೇದಗಳೂ ಮೂರ್ತಿಮತ್ತಾಗಿ ಹದಿನೆಂಟು ಪುರಾಣಗಳೊಡನೆ ಸಂತೋಷದಿಂದ ಕರ್ಮಭೂಮಿಗೆ ಬಂದು ಸೇರುವುವು.

೧೨. ಅನಂತರ ಈದೇವತೆಗಳೆಲ್ಲರೂ ಸಂತೋಷದಿಂದ ಪುರಾಣಪುರುಷನ ಅಂಶಸ್ವರೂಪನಾದ ಈ ಕಲ್ಕಿಯನ್ನು ಕಾರ್ತೀಕ ಶುಕ್ಲ ನವಮೀ ಗುರುವಾರದ ದಿವಸ ಸ್ತೋತ್ರಮಾಡುವರು.

೧೩. ಆಗ ಯಜ್ಞಕುಂಡದಿಂದ ಮಹಾಶ್ರೇಷ್ಠನಾದ ಪುರುಷನೊಬ್ಬನು ಜನಿಸಿ ಸತ್ಯಯುಗನೆಂಬ ಹೆಸರಿನಿಂದ ಪ್ರಸಿದ್ಧನಾಗಿ ಸತ್ಯಮಾರ್ಗ ಪ್ರದರ್ಶಕನಾಗುವನು.

೧೪. ಆಗ ಬ್ರಹ್ಮಾದಿ ದೇವತೆಗಳೆಲ್ಲರೂ ಸುಂದರನಾದ ಆ ಪುರುಷನನ್ನು ನೋಡಿ ಆ ಕಾರ್ತೀಕಮಾಸ ಶುಕ್ಲಪಕ್ಷದ ನವಮೀ ತಿಥಿಯು ಮನುವಿನ ಪಾಪ ಕರ್ಮವನ್ನು ನಾಶಮಾಡುವ ತಿಥಿಯೆಂದು ವರ್ಣಿಸುವರು.

ಅಸ್ಯಾಂ ತಿಥೌ ಚ ಮನುಜೋ ಧಾತ್ರೃವೃಕ್ಷತಟೇ ಮುದಾ ।
ಯೋಽರ್ಚಯಿಷ್ಯತಿ ಯಾನ್ದೇವಾನ್ದೇವಾಸ್ತೇ ತಸ್ಯ ವಶ್ಯಗಾಃ ॥ ೧೫ ॥

ಅಕ್ಷಯಾ ನವಮೀ ನಾಮ ಯುಗಾದಿನವಮೀ ಹಿ ಸಾ ।
ಲೋಕಮಂಗಲದಾತ್ರೀ ಚ ಸರ್ವಕಿಲ್ಬಿಷನಾಶಿನೀ ॥ ೧೬ ॥

ಧಾತ್ರೃಮೂಲತಲೇ ಚೈವ ಮಾಲತೀಂ ತುಲಸೀಂ ಮುದಾ ।
ಸಂಸ್ಥಾಪ್ಯ ವೇದವಿಧಿನಾ ಶಾಲಗ್ರಾಮಂ ಯಜಂತಿ ಯೇ ।
ಜೀವನ್ಮುಕ್ತಾಶ್ಚ ತೇ ಜ್ಞೇಯಾ ಪಿತೄಣಾಂ ತೃಪ್ತಿಕಾರಕಾಃ ॥ ೧೭ ॥

ಧಾತ್ರೃವೃಕ್ಷತಲೇ ಗತ್ವಾ ಯೋ ವೈ ಶ್ರಾದ್ಧಂ ಕರಿಷ್ಯತಿ ।
ಗಯಾಶ್ರಾದ್ಧಸಹಸ್ರಸ್ಯ ಲಪ್ಸ್ಯತೇ ಚ ಫಲಂ ಪರಂ ॥ ೧೮ ॥

---

೧೫. ಈ ಕಾರ್ತೀಕ ಶುಕ್ಲ ನವಮಿಯ ದಿವಸ ಯಾವ ಮನುಜನು ಸಂತೋಷದಿಂದ ನೆಲ್ಲಿಯಮರದ ಬುಡದಲ್ಲಿ ಯಾವ ದೇವತೆಯನ್ನು ಪೂಜಿಸುವನೋ ಆ ದೇವತೆಗಳು ತಪ್ಪದೆ ಆವನಿಗೆ ಪ್ರಸನ್ನರಾಗುವರು.

೧೬. ಈ ನವಮಿಯು ಅಕ್ಷಯನವಮೀ ಎಂಬ ಹೆಸರಿನಿಂದ ಪ್ರಸಿದ್ಧವಾಗುವುದು. ಇದನ್ನು ಯುಗಾದಿ ನವಮೀ ಎಂದೂ ಕರೆಯುವರು. ಈ ನವಮಿಯು ಜನಗಳ ಸಕಲ ಪಾಪಗಳನ್ನೂ ನಾಶಪಡಿಸಿ ಲೋಕಕಲ್ಯಾಣವನ್ನುಂಟು ಮಾಡುತ್ತದೆ.

೧೭. ಇದೇ ನವಮಿಯದಿನ, ನೆಲ್ಲಿಯಗಿಡದ ಕೆಳಗೆ ವಿಧಿಗನುಸಾರವಾಗಿ ಸಾಲಗ್ರಾಮವನ್ನಿಟ್ಟು ಅದನ್ನು ಮಾಲತೀಹೂ, ಮತ್ತು ತುಲಸೀದಳ ಇವುಗಳಿಂದ ಸಂತೋಷವಾಗಿ ಪೂಜೆಮಾಡುವವರು, ತಮ್ಮ ಪಿತೃಗಳಿಗೂ ತೃಪ್ತಿಯನ್ನುಂಟು ಮಾಡುವರಲ್ಲದೆ ತಾವು ಜೀವನ್ಮುಕ್ತರೆನಿಸುವರು.

೧೮. ಧಾತ್ರೃವೃಕ್ಷದ (ನೆಲ್ಲಿಯಮರದ) ಬುಡದಲ್ಲಿ ಪಿತೃಶ್ರಾದ್ಧವನ್ನು ಮಾಡಿದರೆ ಸಾವಿರ ಗಯಾಶ್ರಾದ್ಧಗಳನ್ನು ಮಾಡಿದಷ್ಟು ಉತ್ಕೃಷ್ಟಫಲವು ಲಭಿಸುವುದು.

**ಯಃ ಕರೋತಿ ತಥಾ ಹೋಮಂ ಸಹಸ್ರಮಖಸನ್ನಿಭಂ ।**
**ಮೃತಃ ಸನ್ ಸ್ವರ್ಗಮಾಪ್ನೋತಿ ಸಕುಲಃ ಸಪರಿಚ್ಛದಃ ॥ ೧೯ ॥**

**ಇತ್ಯುಕ್ತೇ ವಚನೇ ತೇಷಾಂ ಕಲ್ಕೀ ದೇವೋ ಮುದಾನ್ವಿತಃ ।**
**ತಥಾಸ್ತ್ವಿತ್ಯೇವ ವಚನಂ ವದಿಷ್ಯತಿ ಸುರಾನ್ಪ್ರತಿ ॥ ೨೦ ॥**

**ಇತ್ಯುಕ್ತ್ವಾ ಭಗವಾನ್ ಕಲ್ಕೀ ಪಶ್ಯತಾಂ ದೇಹರೂಪಿಣಾಂ ।**
**ತತ್ರೈವಾಂತರ್ಗತೋ ಭೂತ್ವಾ ಸುಷುಪ್ತಶ್ಚ ಭವಿಷ್ಯತಿ ॥ ೨೧ ॥**

**ಗತೇ ತಸ್ಮಿನ್ಭಗವತಿ ಕರ್ಮಭೂಮಿಃ ಸುದುಃಖಿತಾ ।**
**ವಿರಹಾಗ್ನಿಮತೀ ಭೂತ್ವಾ ಬೀಜಾಂಸ್ತಾನ್ ಸಂಕ್ಷಯಿಷ್ಯತಿ ॥ ೨೨ ॥**

---

೧೯. ಇದೇ ರೀತಿ, ನೆಲ್ಲಿಯಮರದ ಬುಡದಲ್ಲಿ ಹೋಮ ಕಾರ್ಯವನ್ನು ಆಚರಿಸುವವನು ಸಾವಿರ ಯಾಗಮಾಡಿದ ಫಲವನ್ನೈದುವನು. ಮತ್ತು ಮೃತನಾದ ಮೇಲೆ ತನ್ನ ಕುಲದವರೆಲ್ಲರೊಡಗೂಡಿ ಉತ್ತಮವಾದ ವಸ್ತ್ರಾಲಂಕಾರಗಳ ಸಮೇತನಾಗಿ ಸ್ವರ್ಗಕ್ಕೆ ಹೋಗುವನು.

೨೦. ಈರೀತಿ ದೇವತೆಗಳು ಹೇಳಲು, ದೇವೇಶನಾದ ಆ ಕಲ್ಕಿಯು ಸಂತೋಷದಿಂದ ಹಾಗೆಯೇ ಆಗಲಿ ಎಂದು ದೇವತೆಗಳನ್ನು ಕುರಿತು ಹೇಳುವನು.

೨೧. ಕಲ್ಕಿರೂಪವನ್ನು ಧರಿಸಿರುವ ಭಗವಂತನು ಹೀಗೆ ಹೇಳಿ ದೇಹಿಗಳಾದ ದೇವತೆಗಳು ನೋಡುತ್ತಿರುವಂತೆಯೇ ಅಲ್ಲಿಯೇ ಅಂತರ್ಧಾನಹೊಂದಿ ಸುಖವಾಗಿ ಕ್ಷೀರಸಮುದ್ರದಲ್ಲಿ ನಿದ್ರಿಸುವನು.

೨೨. ಭಗವಂತನು ಹೊರಟು ಹೋದಮೇಲೆ ಈ ಕರ್ಮಭೂಮಿಯು ಪುನಃ ತುಂಬಾ ದುಃಖದಿಂದಲೂ, ವಿರಹಾಗ್ನಿಯಿಂದಲೂ ಸಂತಪ್ತಳಾಗಿ, (ಭೂದೇವಿಯು ವಿಷ್ಣುವಿನ ಪತ್ನಿಯಾದುದರಿಂದ ಪತಿವಿರಹಿತಳಾದ ಪತ್ನಿಯಂತೆ ಇಲ್ಲಿ ಕರ್ಮಭೂಮಿಯೂ ತನ್ನ ಪತಿಯಾದ ವಿಷ್ಣುವು, ಈ ಕರ್ಮಭೂಮಿಯಿಂದ ಹೊರಟು ಕ್ಷೀರಸಮುದ್ರಕ್ಕೆ ಹೋಗಿರಲು ತುಂಬಾ ವಿರಹಹೊಂದಿದ್ದಳು ಎಂದು ಭಾವ) ತನ್ನಲ್ಲಿದ್ದ ಪ್ರಜೆಗಳನ್ನೆಲ್ಲಾ ಕ್ಷಯವಾಗುವಂತೆ ಮಾಡುವಳು.

ತಸ್ಮಿನ್ಕಾಲೇ ಮಹಾದೈತ್ಯಾಃ ಪಾತಾಲತಲವಾಸಿನಃ ।
ಪ್ರಹ್ಲಾದಂ ಚ ಪುರಸ್ಕೃತ್ಯ ಗಮಿಷ್ಯಂತಿ ಸುರಾನ್ಪ್ರತಿ ॥ ೨೩ ॥

ಖರೋಷ್ಟ್ರಗೃಧ್ರಮಹಿಷಕಾಕಕರ್ಕಸಮಾಸ್ಥಿತಾಃ ।
ಸಿಂಹವ್ಯಾಘ್ರವೃಕಾರೂಢಾಃ ಶೃಗಾಲಶ್ಯೇನವಾಹನಾಃ ॥ ೨೪ ॥

ಪ್ರಾಸಪಟ್ಟಿಶಖಡ್ಗಾಂಶ್ಚ ಭುಶುಂಡೀಪರಿಘಾದಿಕಾನ್ ।
ಗೃಹೀತ್ವಾ ವೇಗವಂತಸ್ತೇ ಗರ್ಜಿಷ್ಯಂತಿ ಪುನಃಪುನಃ ॥ ೨೫ ॥

ತದಾ ಶಕ್ರಾದಯೋ ದೇವಾಸ್ತ್ರಯಸ್ತ್ರಿಂಶದ್ಗಣಾ ಮುದಾ ।
ಸ್ವಾಯುಧಾನಿ ಗೃಹೀತ್ವಾಶು ಕರಿಷ್ಯಂತಿ ರಣಂ ಮಹತ್ ॥ ೨೬ ॥

ದಿವ್ಯವರ್ಷಮಯಂ ಘೋರಂ ಯುದ್ಧಂ ತೇಷಾಂ ಭವಿಷ್ಯತಿ ।
ಮೃತಾನ್ಮೃತಾನ್ರಣೇ ದೈತ್ಯಾನ್ ಭಾರ್ಗವೋ ಜೀವಯಿಷ್ಯತಿ ॥ ೨೭ ॥

---

೨೩. ಆ ಕಾಲದಲ್ಲಿ ಪಾತಾಳದಲ್ಲಿ ವಾಸಮಾಡುತ್ತಿದ್ದ ಮಹಾದೈತ್ಯರೆಲ್ಲರೂ, ಪ್ರಹ್ಲಾದನನ್ನು ಮುಂದುಮಾಡಿಕೊಂಡು ದೇವತೆಗಳಮೇಲೆ ಯುದ್ಧಕ್ಕೆಹೋಗುವರು.

೨೪-೨೫. ಕತ್ತೆ, ಒಂಟೆ, ಹದ್ದು, ಕೋಣ, ಕಾಗೆ, ನಳ್ಳಿ ಇವುಗಳ ವಾಹನವುಳ್ಳವರು ಕೆಲವರು, ಸಿಂಹ, ಹುಲಿ, ತೋಳ ಇವುಗಳಮೇಲೆ ಕುಳಿತವರು ಕೆಲವರು, ನರಿ, ಗಿಡಗ ಇವುಗಳನ್ನೇ ವಾಹನವನ್ನಾಗಿ ಮಾಡಿಕೊಂಡವರು ಕೆಲವರು, ಇಂಥ ರಾಕ್ಷಸರು ತಮ್ಮ ಕೈಗಳಲ್ಲಿ ಪ್ರಾಸ, ಪಟ್ಟಿಸ, ಕತ್ತಿ, ಭುಶುಂಡಿ, ಪರಿಘ ಇವೇ ಮೊದಲಾದ ಆಯುಧಗಳನ್ನು ಹಿಡಿದು, ವೇಗದಿಂದ ಗರ್ಜನೆಮಾಡುತ್ತಾ ಮುನ್ನುಗ್ಗುವರು.

೨೬. ಆಗ ಇಂದ್ರನೇ ಮೊದಲಾದ ಮೂವತ್ತಮೂರುಕೋಟಿ ದೇವಗಣಗಳೂ ಸಹ ಸಂತೋಷದಿಂದ ತಾವೂ ತಮ್ಮ ತಮ್ಮ ಆಯುಧಗಳನ್ನು ಹಿಡಿದು ಆ ರಾಕ್ಷಸರೊಡನೆ ದೊಡ್ಡ ಯುದ್ಧವನ್ನು ಮಾಡುವರು.

೨೭. ಹೀಗೆ ದೇವತೆಗಳಿಗೂ ರಾಕ್ಷಸರಿಗೂ ಒಂದು ದಿವ್ಯವರ್ಷಕಾಲ ಯುದ್ಧವಾಗುವುದು. ರಾಕ್ಷಸರಕಡೆ ಮೃತರಾದ ಸೈನಿಕರನ್ನೆಲ್ಲಾ ಶುಕ್ರಾಚಾರ್ಯರು ಪುನಃ ಬದುಕಿಸುವರು.

ಶ್ರಮಭೂತಾಸ್ತಥಾ ದೇವಾಸ್ತ್ಯಕ್ತ್ವಾ ಯುದ್ಧಂ ಸಮಂತತಃ ।
ಕ್ಷೀರಾಬ್ಧಿಂ ಚ ಗಮಿಷ್ಯಂತಿ ಯತ್ರ ಸಾಕ್ಷಾದ್ಧರಿಃ ಸ್ವಯಂ ॥ ೨೮ ॥

ತೇಷಾಂ ಸ್ತುತ್ಯಾ ಸ ಭಗವಾನ್‌ದೇವಮಂಗಲಹೇತವೇ ।
ಸ್ವಪೂರ್ವಾರ್ಧಂ ಸರೂಪಂ ಚ ಕರಿಷ್ಯತಿ ಸನಾತನಃ ॥ ೨೯ ॥

ಸ ಚ ಹಂಸೋ ಹರಿಃ ಸಾಕ್ಷಾಚ್ಛತಸೂರ್ಯಸಮಪ್ರಭಃ ।
ಶುಕ್ರಂ ಪ್ರಹ್ಲಾದಪ್ರಮುಖಾಂಸ್ತೇಜಸಾ ತಾಪಯಿಷ್ಯತಿ ॥ ೩೦ ॥

ತದಾ ಪರಾಜಿತಾ ದೈತ್ಯಾಸ್ತ್ಯಕ್ತ್ವಾ ಗಾಂ ದುಃಖಿತಾ ಭೃಶಂ ।
ವಿತಲೇ ಚ ಗಮಿಷ್ಯಂತಿ ಮಹಾದೇವೇನ ರಕ್ಷಿತಾಃ ॥ ೩೧ ॥

ಪುನಸ್ತೇ ಸಕಲಾ ದೇವಾ ನಿರ್ಭಯಾ ನಿರುಪದ್ರವಾಃ ।
ವೈವಸ್ವತಸ್ಯ ತನಯಂ ಚಾಭಿಷೇಕ್ಷ್ಯಂತಿ ಭೂಪದೇ ॥ ೩೨ ॥

---

೨೮. ಆಗ ದೇವತೆಗಳು ತುಂಬಾ ಬಳಲಿ ಖೇದಹೊಂದಿ, ಯುದ್ಧವನ್ನು ಬಿಟ್ಟು ಎಲ್ಲ ಕಡೆಯಲ್ಲಿಯೂ ಓಡುತ್ತಾ ಸಾಕ್ಷಾದ್ವಿಷ್ಣುವಿರುವ ಕ್ಷೀರಸಮುದ್ರಕ್ಕೆ ಬಂದು ಆ ಪರಮಾತ್ಮನನ್ನು ಸ್ತೋತ್ರಮಾಡುವರು.

೨೯. ಆಗ ಸನಾತನನಾದ ಆ ಮಹಾವಿಷ್ಣುವು ಆ ದೇವತೆಗಳ ಸ್ತೋತ್ರದಿಂದ ಸಂತುಷ್ಟನಾಗಿ ದೇವತೆಗಳಿಗೆ ಮಂಗಳವಾಗುವುದಕ್ಕೋಸ್ಕರ ತನ್ನ ಶರೀರದ ಪೂರ್ವಾರ್ಧದಿಂದ ಹಂಸನೆಂಬ ಹೆಸರಿನಿಂದ ರೂಪಾಂತರ ಹೊಂದಿದನು.

೩೦. ನೂರುಸೂರ್ಯರಿಗೆ ಸಮಾನವಾದ ಕಾಂತಿಯುಳ್ಳ ಸಾಕ್ಷಾನ್ಮಹಾವಿಷ್ಣು ಸ್ವರೂಪನಾದ ಈ ಹಂಸನು ರಾಕ್ಷಸರ ಗುರುವಾದ ಶುಕ್ರಾಚಾರ್ಯನನ್ನೂ ಮತ್ತು ಪ್ರಹ್ಲಾದನೇ ಮೊದಲಾದ ದೈತ್ಯರನ್ನೂ ತನ್ನ ತೇಜಸ್ಸಿನಿಂದ ತಾಪಗೊಳಿಸುವನು.

೩೧. ಆಗ ದೈತ್ಯರೆಲ್ಲರೂ ಆ ತಾಪವನ್ನು ಸಹಿಸಲಾರದೆ ಸೋತು ಕರ್ಮಭೂಮಿಯನ್ನು ಬಿಟ್ಟು ದುಃಖದಿಂದ ಹಿಂತಿರುಗಿ ವಿತಲಲೋಕಕ್ಕೆ ಹೋಗಿ ಅಲ್ಲಿ ಮಹಾದೇವನಿಂದ ರಕ್ಷಣೆ ಹೊಂದುತ್ತಾ ಸುಖವಾಗಿರುವರು.

೩೨. ಆಗ ಪುನಃ ದೇವತೆಗಳೆಲ್ಲರೂ ನಿರ್ಭಯರಾಗಿ ಯಾವ ತೊಂದರೆಯೂ ಇಲ್ಲದೆ ವೈವಸ್ವತಮನುವಿನ ಮಗನಾದ ಇಕ್ಷ್ವಾಕುವನ್ನು ಈ ಭೂಲೋಕಾಧಿಪತಿಯನ್ನಾಗಿ ಪಟ್ಟಾಭಿಷೇಕಮಾಡುವರು.

ದಿವ್ಯವರ್ಷಶತಾಯುಶ್ಚ ಸ ಇಕ್ಷ್ವಾಕುರ್ಭವಿಷ್ಯತಿ ।
ವರ್ಷಾಣಾಂಚ ಪ್ರಮಾಣೇನ ನೃಣಾಮಾಯುಶ್ಚತುಶ್ಶತಂ ॥ ೩೩ ॥
ಇತಿ ತೇ ಕಥಿತಂ ಸರ್ವಂ ಯತ್ಪೃಷ್ಟೋಽಹಂ ಮನೋ ತ್ವಯಾ ।

ಚತುರ್ಯುಗಾನಾಂ ಚರಿತಂ ನೃಪಾಣಾಂ ಚ ಪೃಥಕ್‌ಪೃಥಕ್ ॥ ೩೪ ॥
ಚತುಷ್ಪಾದಾ ಹಿ ಧರ್ಮಸ್ಯ ಜ್ಞಾನಂ ಧ್ಯಾನಂ ಶಮೋ ದಮಃ ।

ಆತ್ಮಜ್ಞಾನಂ ಸ ವೈ ಜ್ಞಾನಂ ಧ್ಯಾನಮಧ್ಯಾತ್ಮಚಿಂತನಂ ।
ಮನಃಸ್ಥಿರತ್ವಂ ಚ ಶಮೋ ದಮಸ್ತ್ವಿಂದ್ರಿಯನಿಗ್ರಹಃ ॥ ೩೫ ॥

ಚತುರ್ಲಕ್ಷಾಬ್ದಕಾನ್ಯೇವ ದ್ವಾತ್ರಿಂಶಚ್ಚ ಸಹಸ್ರಕಂ ।
ತತ್ಸಂಖ್ಯಯಾ ಹಿ ಧರ್ಮಸ್ಯ ಪಾದಶ್ಚೈಕಃ ಪ್ರಕೀರ್ತಿತಃ ॥ ೩೬ ॥

---

೩೩. ಈ ಇಕ್ಷ್ವಾಕುವು ದೇವಮಾನದ ನೂರುವರ್ಷಗಳು ಭೂಮಿಯಲ್ಲಿ ರಾಜ್ಯಭಾರಮಾಡುವನು ಆಗ ಮನುಷ್ಯರ ಆಯುಃ ಪ್ರಮಾಣವು ನಾನೂರು ವರ್ಷಗಳು.

೩೪. ಎಲೈ ಮನುವೆ! ನೀನು ಕೇಳಿದ ಚತುರ್ಯುಗಗಳ (ಕೃತ, ತ್ರೇತಾ, ದ್ವಾಪರ ಮತ್ತು ಕಲಿ ಈ ಯುಗದ) ಚರಿತ್ರೆಯನ್ನೂ ಮತ್ತು ಆ ಕಾಲದ ರಾಜರ ಚರಿತ್ರೆಯನ್ನೂ ಸಹ ನಿನಗೆ ತಿಳಿಸಿದೆನು.

೩೫. ಎಲೈ ಮನುವೆ! ಧರ್ಮಕ್ಕೆ ಜ್ಞಾನ, ಧ್ಯಾನ, ಶಮ, ಮತ್ತು ದಮ ಎಂಬದಾಗಿ ನಾಲ್ಕು ಕಾಲುಗಳಿವೆ. ಅದರಲ್ಲಿ ಆತ್ಮಜ್ಞಾನವೇ ನಿಜವಾದ ಜ್ಞಾನ. ನಾನು ಯಾರು? ನಾನು ಜನಿಸಿರುವುದೇಕೆ? ನನ್ನಿಂದೇನಾಗಬೇಕು? ಇತರ ಪ್ರಾಣಿಗಳಿಗೂ ನನಗೂ ಭೇದವೇನು? ಇವೆಲ್ಲವನ್ನೂ ತಿಳಿದು ಜ್ಞಾನಮಾರ್ಗದಿಂದ ನಡೆಯುವುದೇ ಆತ್ಮಜ್ಞಾನ. ಧ್ಯಾನವೆಂದರೆ ಅಧ್ಯಾತ್ಮಚಿಂತನೆ. ಅಥವಾ ವೇದಾಂತಾಧ್ಯಯನವು ಮನಸ್ಸು ಚಂಚಲವಾಗದೇ ಸ್ಥಿರವಾಗಿ ಇರುವುದೇ ಶಮವು.

೩೬. ಧರ್ಮದ ಒಂದು ಪಾದವು ನಾಲ್ಕುಲಕ್ಷದ ಮೂವತ್ತೆರಡುಸಾವಿರ ವರ್ಷಗಳಕಾಲ ಪರಿಣಾಮವುಳ್ಳದು.

ಪ್ರಾಹ್ಣಮಧ್ಯಾಹ್ನಸಾಯಾಹ್ನಂ ತ್ರಿಸಂಧ್ಯಂ ಚ ಭವೇತ್ಸದಾ ।
ಏಕೈಕೇನ ಪದಾ ತಸ್ಯ ವಿರಾಜೋ ಭುವಿ ವರ್ತತೇ ॥ ೩೭ ॥

ಯದಾ ಧರ್ಮೋ ಭವೇದ್ವೃದ್ಧಸ್ತದಾಯುಶ್ಚೈವ ವರ್ಧತೇ ।
ಸಪ್ತಶ್ಲೋಕಸಹಸ್ರಾಣಿ ಖಂಡೇಽಸ್ಮಿನ್ಕಥಿತಾನಿ ಹಿ ।
ಅತಶ್ಚೋತ್ತರಖಂಡಂ ಹಿ ವರ್ಣಯಾಮಿ ಮನೋ ಶೃಣು ॥ ೩೮ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ಚತುರ್ಥ
ಖಂಡೇ ಕಲಿಯುಗೀಯೇತಿಹಾಸಸಮುಚ್ಚಯೇ
ಷಡ್ವಿಂಶೋಽಧ್ಯಾಯಃ.

ಇತಿ ಚತುರ್ಥಃ ಖಂಡಃ.

## ತೃತೀಯಂ ಪ್ರತಿಸರ್ಗಪರ್ವ ಸಮಾಪ್ತಮ್.



---

೩೭. ಈ ಒಂದೊಂದು ಪಾದದಲ್ಲಿಯೂ, ಪ್ರಾತಃಕಾಲ, ಮಧ್ಯಾಹ್ನಕಾಲ ಮತ್ತು ಸಾಯಂಕಾಲ ಈ ರೀತಿಯಾಗಿ ಮೂರು ಸಂಧ್ಯಾಕಾಲಗಳಿರುವುವು. ಈ ರೀತಿ ಧರ್ಮವು ಭೂಮಿಯಲ್ಲಿ ಮೂರು ಸಂಧ್ಯಾಕಾಲಗಳಿಂದ ಪ್ರಕಾಶಿಸುತ್ತದೆ.

೩೮. ಧರ್ಮವು ಅಭಿವೃದ್ಧಿಹೊಂದಿದ ಹಾಗೆಲ್ಲಾ ಜನಗಳ ಆಯುಸ್ಸೂ ಅಭಿವೃದ್ಧಿ ಹೊಂದುತ್ತದೆ. ಎಲೈ ಮನುವೆ! ಇದರ ಮುಂದಿನ ಉತ್ತರ ಖಂಡವನ್ನು ನಿನಗೆ ಹೇಳುವೆನು ಕೇಳು ಎಂದು ವ್ಯಾಸರು ಮನುವಿಗೆ ಹೇಳಿದರು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಪ್ರತಿಸರ್ಗಪರ್ವದ ನಾಲ್ಕನೆಯ ಖಂಡದಲ್ಲಿ
ಇಪ್ಪತ್ತಾರನೆಯ ಅಧ್ಯಾಯವು ಮುಗಿಯಿತು.

ಚತುರ್ಥಖಂಡವು ಸಂಪೂರ್ಣವಾಯಿತು.

## ಪ್ರತಿಸರ್ಗಪರ್ವ ಸಮಾಪ್ತಿ.

